ಒಂದು ಕೋಟಿ ರೂಪಾಯಿಗಳಿಗಿಂತ ಕಡಿಮೆ ಇಲ್ಲದ ಒಟ್ಟು ವಾರ್ಷಿಕ ಆದಾಯವುಳ್ಳ ಮತ್ತು ಎರಡು ಲಕ್ಷಕ್ಕಿಂತ ಕಡಿಮೆ ಇಲ್ಲದ ಜನಸಂಖ್ಯೆ ಇರುವ ಒಂದಕ್ಕಿಂತ ಹೆಚ್ಚು ಸ್ಥಳೀಯ ಪ್ರಾಧಿಕಾರಗಳನ್ನು ಹೊಂದಿರುವ ಸ್ಥಳೀಯ ಪ್ರದೇಶವನ್ನು ನಗರವೆಂದು ಘೋಷಿಸಲು ಈ ಅಧಿನಿಯಮದಲ್ಲಿ ಯಾವುದೇ ಉಪಬಂಧ ಇರಲಿಲ್ಲ. ಆದ್ದರಿಂದ ಈ ಅಧಿನಿಯಮದ ಮೇರೆಗೆ ಈ ಹಿಂದಿನ ಬೆಳಗಾವಿ ನಗರವನ್ನು ಮತ್ತು ಮಂಗಳೂರು ನಗರವನ್ನು ಮತ್ತು ಹಲವು ಇತರ ಸ್ಥಳೀಯ ಪ್ರಾಧಿಕಾರಗಳನ್ನು ಹೊಂದಿರುವ ಅವುಗಳ ಸುತ್ತಮುತ್ತಲಿನ ಪ್ರದೇಶಗಳನ್ನು ನಗರಗಳೆಂದು ಘೋಷಿಸುವಾಗ ತೊಂದರೆ ಉದ್ಭವಿಸಿತ್ತು. ಈ ಅಧಿನಿಯಮದ 3ನೇ ಪ್ರಕರಣವನ್ನು ತಿದ್ದುಪಡಿ ಮಾಡುವ ಮೂಲಕ ಆ ತೊಂದರೆಯನ್ನು ನಿವಾರಿಸುವುದಕ್ಕೆ ಈ ವಿಧೇಯಕವು ಉಪಬಂಧ ಕಲ್ಪಿಸುತ್ತದೆ.

4ನೇ ಖಂಡವು, ಹೊಸದಾಗಿ ರಚಿತವಾದ ನಗರ ಪಾಲಿಕೆಯಲ್ಲಿ ಸದರಿ ಸ್ಥಳೀಯ ಪ್ರಾಧಿಕಾರಗಳ ಸ್ವತ್ತುಗಳನ್ನು ನಿಹಿತಗೊಳಿಸಿಕೊಳ್ಳುವುದಕ್ಕೆ, ಸಿಬ್ಬಂದಿಯನ್ನು ವಿಲೀನಗೊಳಿಸುವುದಕ್ಕೆ, ತೆರಿಗೆಗಳು ಇತ್ಯಾದಿಗಳನ್ನು ವಸೂಲಿ ಮಾಡುವುದಕ್ಕೆ ಆನುಷಂಗಿಕ ಉಪಬಂಧಗಳನ್ನು ಸೇರಿಸುತ್ತದೆ.

ಅನುಸೂಚಿತ ಜಾತಿಗಳಿಗೆ, ಅನುಸೂಚಿತ ಪಂಗಡಗಳಿಗೆ ಮತ್ತು ಸಮಾಜದ ಇತರ ದುರ್ಬಲ ವರ್ಗಗಳಿಗೆ ಸಾಮಾಜಿಕ ನ್ಯಾಯ ಒದಗಿಸಲು ಸಾಮಾಜಿಕ ನ್ಯಾಯ ಸಮಿತಿಯನ್ನು ರಚಿಸಲು ಸಹ ಉಪಬಂಧ ಕಲ್ಪಿಸಲಾಗಿದೆ.

ಈ ಉಪಬಂಧಗಳನ್ನು ಕಾರ್ಯಗತಗೊಳಿಸುವಾಗ ಉದ್ಭವಿಸಬಹುದಾದ ಯಾವುದೇ ತೊಂದರೆಗಳನ್ನು ನಿವಾರಿಸಲು ಒಂದು ಉಪಬಂಧವನ್ನು ಮತ್ತು ಸಿಂಧುಗೊಳಿಸುವ ಒಂದು ಉಪಬಂಧವನ್ನು ಸಹ ಈ ವಿಧೇಯಕದಲ್ಲಿ ಸೇರಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV, ದಿನಾಂಕ: 23–7–1980ರಲ್ಲಿ ಸಂಖ್ಯೆ. 574 ಆಗಿ ಪುಟ ಸಂಖ್ಯೆ 10ರಲ್ಲಿ ಪ್ರಕಟಿಸಲಾಗಿದೆ)

(1980ರ ವಿಧಾನಸಭಾ ವಿಧೇಯಕ ಸಂಖ್ಯೆ 29ರಿಂದ ತೆಗೆದುಕೊಳ್ಳಲಾಗಿದೆ)

## VI

**ತಿದ್ದುಪಡಿ ಮಾಡುವ ಅಧಿನಿಯಮ 1981ರ 40.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ 320ನೇ ಪ್ರಕರಣದ ಮೇರೆಗೆ, ಒಂದು ಪೌರಸಭೆಯ ಯಾರೇ ಅಧಿಕಾರಿಯನ್ನು ಅಥವಾ ನೌಕರನನ್ನು ಯಾವುದೇ ಇತರ ಪೌರಸಭೆಯ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದ ಅಥವಾ ಯಾವುದೇ ಸರ್ಕಾರಿ ಇಲಾಖೆಯ ಸೇವೆಗೆ ವರ್ಗಾವಣೆ ಮಾಡುವ ಅಧಿಕಾರ ಸರ್ಕಾರಕ್ಕೆ ಇದೆ. ಒಂದು ನಗರ ಪಾಲಿಕೆಯಿಂದ ಮತ್ತೊಂದು ನಗರಪಾಲಿಕೆಗೆ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ಅಥವಾ ಸರ್ಕಾರದ ಇಲಾಖೆಗೆ ನಗರಪಾಲಿಕೆಗಳ ಅಧಿಕಾರಿಗಳನ್ನು ಅಥವಾ ನೌಕರರನ್ನು ವರ್ಗಾವಣೆ ಮಾಡಲು ಸರ್ಕಾರಕ್ಕೆ ಅಂತಹುದೇ ಅಧಿಕಾರಗಳನ್ನು ನೀಡುವ ಯಾವುವೇ ಉಪಬಂಧಗಳು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮದಲ್ಲಿ ಇಲ್ಲ.

ರಾಜ್ಯದಲ್ಲಿ ಆಕ್ಟ್ರಾಯ್‌ಅನ್ನು ರದ್ದು ಮಾಡಲಾಗಿದೆ. ಅದರ ಪರಿಣಾಮವಾಗಿ, ನಗರಪಾಲಿಕೆಯ ಹೆಚ್ಚುವರಿ ಆಕ್ಟ್ರಾಯ್ ಸಿಬ್ಬಂದಿಯನ್ನು ಬೇರೆಕಡೆ ನಿಯುಕ್ತಿ ಮಾಡಬೇಕಾಗಿದೆ.

ಆದ್ದರಿಂದ, ನಗರ ಪಾಲಿಕೆಗಳ ಹೆಚ್ಚುವರಿ ಆಕ್ಟ್ರಾಯ್ ಸಿಬ್ಬಂದಿಯನ್ನು ವಿಲೀನಗೊಳಿಸಲು ಸಾಧ್ಯವಾಗುವಂತೆ ಮತ್ತು ನಗರ ಪಾಲಿಕೆಗಳಲ್ಲಿ ಉತ್ತಮ ಶಿಸ್ತನ್ನು ಮತ್ತು ಪರಿಣಾಮಕಾರಿ ಆಡಳಿತವನ್ನು ತರುವ ದೃಷ್ಟಿಯಿಂದ, ನಗರ ಪಾಲಿಕೆಯ ಯಾರೇ ಅಧಿಕಾರಿಯನ್ನು ಅಥವಾ ನೌಕರನನ್ನು ಯಾವುದೇ ಇತರ ನಗರಪಾಲಿಕೆಯಲ್ಲಿನ ಸ್ಥಳೀಯ ಸಂಸ್ಥೆಯಲ್ಲಿನ ಅಥವಾ ಸರ್ಕಾರದಲ್ಲಿನ ಸಂವಾದಿ ಹುದ್ದೆಗೆ ವರ್ಗಾವಣೆ ಮಾಡಲು ಸರ್ಕಾರಕ್ಕೆ ಅಧಿಕಾರ ನೀಡುವುದು ಅವಶ್ಯವೆಂದು ಭಾವಿಸಲಾಗಿದೆ.

ಈ ಹಿಂದಿನ ಮೈಸೂರು ಪೌರಸಭೆಯನ್ನು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ ಮೇರೆಗೆ 10ನೇ ಜೂನ್ 1977ರಿಂದ ಜಾರಿಗೆ ಬರುವಂತೆ ಒಂದು ನಗರಸಭೆ ಎಂದು ಘೋಷಿಸಲಾಗಿದೆ. ಸದರಿ ಅಧಿನಿಯಮದ 503ನೇ ಪ್ರಕರಣದ (3)ನೇ ಉಪ–ಪ್ರಕರಣದ (ಸಿಸಿ) ಖಂಡದ ಬಲದಿಂದ ಮೈಸೂರು ಪೌರಸಭೆಯ ಆಗಿನ ಆಡಳಿತಗಾರರು ತದನಂತರ ಒಂದು ವರ್ಷದ ಅವಧಿಯವರೆಗೆ ಅಧಿಕಾರದಲ್ಲಿ ಮುಂದುವರೆದಿದ್ದರು. ಆದಾಗ್ಯೂ, ಆಡಳಿತಗಾರರು ಸದರಿ ಅವಧಿಯ ತರುವಾಯವೂ ತಮ್ಮ ಪ್ರಕಾರ್ಯಗಳನ್ನು ಮುಂದುವರೆಸಿದ್ದರು. ಸದರಿ ಅವಧಿಯು ಮುಕ್ತಾಯಗೊಂಡ ತರುವಾಯ ಅವರು ಕೈಗೊಂಡ ಕ್ರಮಗಳನ್ನು ಸಿಂಧುಗೊಳಿಸುವುದು ಅವಶ್ಯವಾಯಿತು. ಇಂಥವೇ ಪರಿಸ್ಥಿತಿಗಳು ಇನ್ನಿತರ ಪ್ರಕರಣಗಳಲ್ಲಿಯೂ ಉದ್ಭವಿಸಬಹುದಾದ್ದರಿಂದ ಆಡಳಿತಗಾರರ ಅಧಿಕಾರ ಅವಧಿಯನ್ನು ಉತ್ತರಾನ್ವಯವಾಗಿ ಆಗಲಿ ಅಥವಾ ಪೂರ್ವಾನ್ವಯವಾಗಿ ಆಗಲಿ ವಿಸ್ತರಿಸುವುದಕ್ಕೆ ಉಪಬಂಧ ಕಲ್ಪಿಸಲು ಪ್ರಸ್ತಾವಿಸಲಾಗಿದೆ. 99ನೇ, 100ನೇ ಮತ್ತು 101ನೇ ಪ್ರಕರಣಗಳಿಗೆ ಇಂಥವೇ ತಿದ್ದುಪಡಿಗಳನ್ನು ಮಾಡಲು ಸಹ ಪ್ರಸ್ತಾವಿಸಲಾಗಿದೆ.

ಕರ್ನಾಟಕ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ 829/78ರಲ್ಲಿ, ಕರಡು ನಿಯಮಗಳಿಗೆ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಸಲ್ಲಿಸಲು ನೀಡಲಾಗಿದ್ದ ಕಾಲಾವಕಾಶ ಸಾಕಾಗಿರಲಿಲ್ಲ ಎಂಬ ಕಾರಣದ ಮೇಲೆ ಕರ್ನಾಟಕ ನಗರ ಪಾಲಿಕೆಗಳ ನಿಯಮಗಳು, 1977ನ್ನು ರದ್ದುಪಡಿಸಿದೆ. ಆದ್ದರಿಂದ, ಸದರಿ 1977ರ ನಿಯಮಗಳ ಮೇರೆಗೆ ಮಾಡಲಾದ ನೇಮಕಾತಿಗಳು ಅಸಿಂಧುವಾಗಿದ್ದು, ಆಡಳಿತಾತ್ಮಕ ಸಮಸ್ಯೆಗಳನ್ನು ಸೃಷ್ಟಿಸಿವೆ. ಈಗಾಗಿ ಸದರಿ ಅಧಿನಿಯಮದ 421ನೇ ಪ್ರಕರಣವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಯುಕ್ತವಾಗಿ ತಿದ್ದುಪಡಿ ಮಾಡಿ ಅದರಲ್ಲಿ, ಅಧಿನಿಯಮವು ಪ್ರಾರಂಭವಾದ ತರುವಾಯ ಮೊದಲ ಬಾರಿಗೆ ಮಾಡಲಾದ ಯಾವುದೇ ನಿಯಮಕ್ಕೆ ಪೂರ್ವ ಪ್ರಕಟಣೆ ಅವಶ್ಯ ಇಲ್ಲವೆಂದು ಉಪಬಂಧ ಕಲ್ಪಿಸಿ ಮತ್ತು ಸದರಿ ನಿಯಮಗಳ ಮೇರೆಗೆ ಇದುವರೆಗೆ ಕೈಗೊಂಡ ಕ್ರಮವನ್ನು ಸಿಂಧುಗೊಳಿಸಲು ಉಪಬಂಧ ಕಲ್ಪಿಸಿ, ನೇಮಕಾತಿಗಳನ್ನು ಸಿಂಧುಗೊಳಿಸುವುದು ಅವಶ್ಯಕವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1981ರ ವಿಧಾನಸಭಾ ವಿಧೇಯಕ ಸಂಖ್ಯೆ 48ರಿಂದ ತೆಗೆದುಕೊಳ್ಳಾಗಿದೆ)

## VII

**ತಿದ್ದುಪಡಿ ಮಾಡುವ ಅಧಿನಿಯಮ 1982ರ 8.–** ಹೊಸದಾಗಿ ನಗರ ಪಾಲಿಕೆಗಳನ್ನು ರಚಿಸಿದ ತರುವಾಯ, ಪ್ರಾರಂಭಿಕ ಹಂತಗಳಲ್ಲಿ ಅವುಗಳನ್ನು ಸದೃಢವಾಗಿ ನೆಲೆಗೊಳ್ಳುವಂತೆ ಮಾಡಲು ಸಾಧ್ಯವಾಗುವ ಹಾಗೆ ಹೊಸದಾಗಿ ರಚಿಸಿದ ನಗರ ಪಾಲಿಕೆಗಳಿಗೆ ಪ್ರಥಮ ಕೌನ್ಸಿಲರ್‌ಗಳನ್ನು, ಮೇಯರ್‌ರವರನ್ನು ಮತ್ತು ಉಪಮೇಯರ್‌ರವರನ್ನು ನಾಮನಿರ್ದೇಶನ ಮಾಡುವ ಅಧಿಕಾರ ಸರ್ಕಾರಕ್ಕೆ ಇರಬೇಕಾದುದು ಅವಶ್ಯವೆಂದು ಭಾವಿಸಲಾಗಿದೆ. ತದನುಸಾರವಾಗಿ ಪ್ರಥಮ ಕೌನ್ಸಿಲರುಗಳನ್ನು, ಮೇಯರ್‌ರವರನ್ನು ಮತ್ತು ಉಪಮೇಯರ್‌ರವರನ್ನು ನಾಮನಿರ್ದೇಶನ ಮಾಡಲು ಮತ್ತು ಮೂರು ವರ್ಷಗಳಿಗೆ ಮೀರದ ಅವಧಿಗೆ ಮಧ್ಯಕಾಲೀನ ನಗರಪಾಲಿಕೆಯನ್ನು ಮತ್ತು ಸ್ಥಾಯೀ ಸಮಿತಿಗಳನ್ನು ರಚಿಸಲು ಅಧಿಕಾರ ಪಡೆದುಕೊಳ್ಳಲಾಗುತ್ತಿದೆ. ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನಿಯಮಗಳನ್ನು ರಚಿಸುವುದಕ್ಕೆ ಸಾಧ್ಯಮಾಡಿಕೊಡುವ ಒಂದು ಉಪಬಂಧವನ್ನು ಸಹ ಸೇರಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 11–2–1982ರಲ್ಲಿ ಸಂಖ್ಯೆ 102 ಆಗಿ ಪ್ರಕಟಿಸಲಾಗಿದೆ)

(1982ರ ವಿಧಾನಸಭಾ ವಿಧೇಯಕ ಸಂಖ್ಯೆ 10ರಿಂದ ತೆಗೆದುಕೊಳ್ಳಲಾಗಿದೆ)

## VIII

**ತಿದ್ದುಪಡಿ ಮಾಡುವ ಅಧಿನಿಯಮ 1983ರ 13.–** ಕಾಲಕ್ರಮೇಣ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರು ಪಾಲ್ಗೊಳ್ಳುವಿಕೆ ಪ್ರಮಾಣ ಒಂದೇ ಸಮನೆ ಹೆಚ್ಚಾಗುತ್ತಿದೆ. ನಗರ ಪಾಲಿಕೆಗಳ ವ್ಯವಹಾರಗಳಲ್ಲಿ ಮಹಿಳೆಯರು ಹೆಚ್ಚು ಹೆಚ್ಚಾಗಿ ತೊಡಗುವಂತೆ ಮಾಡುವ ಸಲುವಾಗಿ, ಕೌನ್ಸಿಲರ್‌ಗಳ ಒಟ್ಟು ಸಂಖ್ಯೆಯ ಪೈಕಿ ಸರಿಸುಮಾರು ಶೇಕಡಾ 20ರಷ್ಟಕ್ಕೆ ಮಹಿಳೆಯರಿಗೆ ಮೀಸಲಾತಿಯನ್ನು ಹೆಚ್ಚಿಸಿ ಮಹಿಳೆಯರಿಗೆ ಸಾಕಷ್ಟು ಪ್ರಾತಿನಿಧ್ಯ ಕಲ್ಪಿಸಲು ಉದ್ದೇಶಿಸಲಾಗಿದೆ.

1981ರ ಜನಗಣತಿಗೆ ಸಂಬಂಧಪಟ್ಟ ಜನಸಂಖ್ಯಾ ಅಂಕಿ–ಅಂಶಗಳನ್ನು ಅಧಿಕೃತವಾಗಿ ಪ್ರಕಟಿಸದಿರುವುದರಿಂದ, ವಿಭಾಗವನ್ನು ನಿರ್ಧರಿಸುವುದಕ್ಕಾಗಿ 1971ರ ಜನಗಣತಿಯ ಅಂಕಿ–ಅಂಶಗಳನ್ನು ಆಧಾರವಾಗಿ ತೆಗೆದುಕೊಳ್ಳಲು ಪ್ರಸ್ತಾವಿಸಲಾಗಿದೆ.

ನಗರ ಪಾಲಿಕೆಗಳಿಗೆ ನಡೆಯುವ ಚುನಾವಣೆಗಳಲ್ಲಿ 18 ವರ್ಷ ವಯಸ್ಸು ತುಂಬಿರುವ ಎಲ್ಲಾ ವ್ಯಕ್ತಿಗಳನ್ನು ಮತ ಚಲಾಯಿಸುವುದಕ್ಕೆ ಅರ್ಹರನ್ನಾಗಿಸಲು ಪ್ರಸ್ತಾವಿಸಲಾಗಿದೆ.

ಈ ಸಂಬಂಧದಲ್ಲಿ ಕೆಲವು ಸಣ್ಣಪುಟ್ಟ ತಿದ್ದುಪಡಿಗಳನ್ನು ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(1983ರ ವಿಧಾನ ಸಭಾ ವಿಧೇಯಕ ಸಂಖ್ಯೆ 4ರಿಂದ ತೆಗೆದುಕೊಳ್ಳಲಾಗಿದೆ)

## IX

**ತಿದ್ದುಪಡಿ ಮಾಡುವ ಅಧಿನಿಯಮ 1984ರ 34.– ಪೌರಸಭೆಗಳಿಗೆ**, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ, ಅಭಿವೃದ್ಧಿ ಮಂಡಳಿಗಳಿಗೆ ಮತ್ತು ಇತರ ಸ್ಥಳೀಯ ಸಂಸ್ಥೆಗಳಿಗೆ ಸೇರಿದ ಭೂಮಿಗಳನ್ನು ಒತ್ತುವರಿ ಮಾಡುವ ಸಮಸ್ಯೆಯು ತೀವ್ರ ರೂಪ ತಾಳಿದೆ. ಹಾಗೆ ಭೂ ಒತ್ತುವರಿಗಳನ್ನು ಮಾಡಿದವರಿಗೆ ಕಠಿಣ ಶಿಕ್ಷೆ ವಿಧಿಸುವುದು ಅವಶ್ಯಕ.

2. ಆದ್ದರಿಂದ, ಮೈಸೂರು ನಗರಾಭಿವೃದ್ಧಿ ವಿಶ್ವಸ್ಥ ಮಂಡಳಿಗೆ, ಗ್ರಾಮ ಪಂಚಾಯಿತಿಗಳಿಗೆ, ತಾಲ್ಲೂಕು ಬೋರ್ಡುಗಳಿಗೆ, ಪೌರ ಸಭೆಗಳಿಗೆ, ನಗರ ಸಭೆಗಳಿಗೆ, ಅಭಿವೃದ್ಧಿ ಮಂಡಳಿಗಳಿಗೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿದ ಭೂಮಿಗಳ ಒತ್ತುವರಿಯನ್ನು ಮಾಡಿಕೊಂಡಿರುವುದಕ್ಕೆ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿಸಬಹುದಾಂಥ ಒಂದು ಅಪರಾಧವೆಂದು ಪರಿಗಣಿಸುವ ಉಪಬಂಧವನ್ನು ಕಲ್ಪಿಸಲು ಪ್ರಸ್ತಾವಿಸಲಾಗಿದೆ. ಅಲ್ಲದೆ, ಯಾರೇ ವ್ಯಕ್ತಿಯು ಸದರಿ ಸಂಸ್ಥೆಗಳಿಗೆ ಸೇರಿದ ಯಾವುದೇ ಭೂಮಿಯನ್ನು ಅನಧಿಕೃತವಾಗಿ ಅಧಿಭೋಗಿಸುತ್ತಿದ್ದಲ್ಲಿ ಮತ್ತು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ 5(1)ನೇ ಪ್ರಕರಣದ ಮೇರೆಗೆ ಮಾಡಿದ ಆದೇಶಕ್ಕೆ ಅನುಸಾರವಾಗಿ ಅಂಥ ಭೂಮಿಯನ್ನು ತೆರವು ಮಾಡಲು ತಪ್ಪಿದಲ್ಲಿ, ಅವನು ಅಪರಾಧ ನಿರ್ಣಯವಾದ ಮೇಲೆ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಮೊದಲ ಅಪರಾಧ ನಿರ್ಣಯದ ದಿನಾಂಕದ ತರುವಾಯವೂ ಅಧಿಭೋಗವು ಮುಂದುವರೆದಲ್ಲಿ, ಅಂಥ ಪ್ರತಿಯೊಂದು ದಿನಕ್ಕೆ ಪ್ರತಿ ಒಂದು ಎಕರೆ ಭೂಮಿಗೆ ಅಥವಾ ಅದರ ಭಾಗಕ್ಕೆ 50 ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದೆಂದು ಸಹ ಪ್ರಸ್ತಾವಿಸಲಾಗಿದೆ. ಈ ಅಪರಾಧಗಳನ್ನು ಮಾಡಲು ಉದ್ದೇಶಪೂರ್ವಕವಾಗಿ ನೆರವು ನೀಡುವ ಅಥವಾ ದುಷ್ಪ್ರೇರಣೆ ನೀಡುವ ಯಾರೇ ವ್ಯಕ್ತಿಯು ಅದೇ ದಂಡನೆಗೆ ಗುರಿಯಾಗಲು ಸಹ ಹೊಣೆಗಾರನಾಗಿರತಕ್ಕದ್ದು. ಈ ಕೆಳಕಂಡ ಅಧಿನಿಯಮಗಳಲ್ಲಿ ಈ ಉಪಬಂಧವನ್ನು ಸೇರಿಸಲು ಪ್ರಸ್ತಾವಿಸಲಾಗಿದೆ,–

(1) ಮೈಸೂರು ನಗರಾಭಿವೃದ್ಧಿ ಅಧಿನಿಯಮ, 1903

(2) ಕರ್ನಾಟಕ ಗ್ರಾಮ ಪಂಚಾಯಿತಿಗಳು ಮತ್ತು ಸ್ಥಳೀಯ ಮಂಡಳಿಗಳ ಅಧಿನಿಯಮ, 1959

(3) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964

(4) ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976

(5) ಕರ್ನಾಟಕ ಅಭಿವೃದ್ಧಿ ಮಂಡಳಿಗಳ ಅಧಿನಿಯಮ, 1976

(6) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1976

3. ಕರ್ನಾಟಕ ಕೊಳಗೇರಿಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ, 1974ರ III-ಎ ಅಧ್ಯಾಯದ ಅನ್ವಯವನ್ನು ಇಡೀ ರಾಜ್ಯಕ್ಕೆ ವಿಸ್ತರಿಸಲು ಮತ್ತು ಯಾವ ತಾಲ್ಲೂಕಿನಲ್ಲಿ, ಪ್ರಸ್ತುತ ಲೈಸೆನ್ಸು ನೀಡಿಕೆ ಪ್ರಾಧಿಕಾರಿಯು ಇಲ್ಲವೋ ಅಂಥ ತಾಲ್ಲೂಕಿನ ತಹಶೀಲ್ದಾರರನ್ನು ಲೈಸೆನ್ಸ್ ನೀಡಿಕೆ ಪ್ರಾಧಿಕಾರಿಯನ್ನಾಗಿ ಮಾಡಲು ಸಹ ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ 06–02–1984ರಲ್ಲಿ ಸಂಖ್ಯೆ 104 ಆಗಿ ಪ್ರಕಟಿಸಲಾಗಿದೆ)

## X

**ತಿದ್ದುಪಡಿ ಮಾಡುವ ಅಧಿನಿಯಮ 1986ರ 21.–** ನೀರು ಸರಬರಾಜು ಯೋಜನೆಗಳ ಸೂಕ್ತ ನಿರ್ವಹಣೆಗೆ ಮತ್ತು ಅವುಗಳ ಸುಧಾರಣೆಗೆ ನಗರ ಪಾಲಿಕೆಗಳಲ್ಲಿ ಸಾಕಷ್ಟು ಹಣವಿಲ್ಲ. ನೀರು ಸರಬರಾಜು ಯೋಜನೆಯ ನಿರ್ವಹಣೆಯನ್ನು ಬೆಂಗಳೂರು ನಗರಪಾಲಿಕೆಯ ಸಂದರ್ಭದಲ್ಲಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಮತ್ತು ರಾಜ್ಯದಲ್ಲಿನ ಇತರ ನಗರ ಸಭೆಗಳ ಸಂದರ್ಭದಲ್ಲಿ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಂತಹಂತವಾಗಿ ವಹಿಸಿಕೊಡಲು ಸಹ ಪ್ರಸ್ತಾವಿಸಲಾಗಿದೆ, ನಿರ್ವಹಣೆಗಾಗಿ ಮಂಡಳಿಗೆ ಹಣ ಬೇಕಾಗುತ್ತದೆ. ನೀರು ಸರಬರಾಜು

ಯೋಜನೆಗಳ ನಿರ್ವಹಣೆಗಾಗಿ ಸಂಪನ್ಮೂಲಗಳನ್ನು ಸಂಗ್ರಹಿಸಲು ಸ್ವತ್ತು ತೆರಿಗೆಯ ಮೇಲೆ ಶೇಕಡಾ 10ರಷ್ಟು ನೀರು ಸರಬರಾಜು ಉಪಕರವನ್ನು ವಿಧಿಸಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1986ರ ವಿಧಾನಸಭಾ ವಿಧೇಯಕ ಸಂಖ್ಯೆ 7ರಿಂದ ತೆಗೆದುಕೊಳ್ಳಲಾಗಿದೆ)

**XI**

**ತಿದ್ದುಪಡಿ ಮಾಡುವ ಅಧಿನಿಯಮ 1986ರ 32.–** ನಗರದ ಒಂದು ಭಾಗವನ್ನು ಅಥವಾ ಇಡೀ ನಗರವನ್ನು ಪ್ರತಿನಿಧಿಸುವ ರಾಜ್ಯ ವಿಧಾನಸಭೆಯ ಒಬ್ಬ ಸದಸ್ಯನ ಜೊತೆಗೆ ನಗರದಲ್ಲಿ ಸಾಮಾನ್ಯ ನಿವಾಸಿಯಾಗಿರುವ ವಿಧಾನ ಸಭೆಯ ಒಬ್ಬ ನಾಮನಿರ್ದೇಶಿತ ಸದಸ್ಯನೂ ಸಹ ನಗರ ಪಾಲಿಕೆಯ ಅಥವಾ ಸ್ಥಾಯೀ ಸಮಿತಿಗಳ ಸಭೆಗಳಲ್ಲಿ ಭಾಗವಹಿಸಲು ಹಕ್ಕುಳ್ಳವನಾಗಿರಬೇಕೆಂಬ ಉಪಬಂಧಗಳನ್ನು ಮಾಡಲಾಗಿದೆ.

2. ಅಧಿನಿಯಮವು ನಗರ ಪಾಲಿಕೆಯಲ್ಲಿ ಮೂರು ಸ್ಥಾಯೀ ಸಮಿತಿಗಳನ್ನು ರಚಿಸಲು ಉಪಬಂಧ ಕಲ್ಪಿಸುತ್ತದೆ. ಬೆಂಗಳೂರು ನಗರ ಪಾಲಿಕೆಯ ಗಾತ್ರವನ್ನು ಗಮನದಲ್ಲಿಟ್ಟುಕೊಂಡು ಸ್ಥಾಯೀ ಸಮಿತಿಗಳ ಸಂಖ್ಯೆಯನ್ನು ಆರಕ್ಕೆ ಹೆಚ್ಚಿಸಲು ಪ್ರಸ್ತಾವಿಸಲಾಗಿದೆ.

3. ಬೆಲೆಯಲ್ಲಿ ತೀವ್ರ ಏರಿಕೆ ಆಗುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು, ಪ್ರತಿಯೊಬ್ಬ ಮೇಯರ್‌ಗೆ ಪ್ರಸ್ತುತ ನೀಡಲಾಗುತ್ತಿರುವ ವಾರ್ಷಿಕ 10,000ರೂಪಾಯಿಗಳ ಆತಿಥ್ಯ ಭತ್ಯೆಯು ಸಾಕಾಗುವುದಿಲ್ಲವೆಂದು ಪರಿಗಣಿಸಲಾಗಿದೆ. ಆದ್ದರಿಂದ, ವಾರ್ಷಿಕ ಗರಿಷ್ಠ 25,000 ರೂಪಾಯಿಗಳಿಗೆ ಒಳಪಟ್ಟು, ಬೇರೆ ಬೇರೆ ನಗರ ಪಾಲಿಕೆಗಳಿಗೆ ಸಂಬಂಧಪಟ್ಟಂತೆ ಬೇರೆ ಬೇರೆ ಮೊಬಲಗುಗಳನ್ನು ಗೊತ್ತುಪಡಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಲು ಪ್ರಸ್ತಾವಿಸಲಾಗಿದೆ.

4. ಟೆಂಡರುಗಳನ್ನು ಆಹ್ವಾನಿಸದೆ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಅಥವಾ ಯಾವುದೇ ಸಾಮಗ್ರಿಯ ಸರಬರಾಜು ಪಡೆಯುವುದಕ್ಕೆ ಸಂಬಂಧಿಸಿದಂತೆ ಕರಾರು ಮಾಡಿಕೊಳ್ಳಲು ಆಯುಕ್ತರಿಗೆ ಇರುವ ಅಧಿಕಾರವು ಪ್ರಸ್ತುತ 5,000/– ರೂಪಾಯಿಗಳನ್ನು ಮೀರದ ವೆಚ್ಚವನ್ನು ಒಳಗೊಂಡಿರುವಂಥ ಪ್ರಕರಣಗಳಿಗೆ ಸೀಮಿತವಾಗಿದೆ. ಈ ಗರಿಷ್ಠ ಮಿತಿಯನ್ನು 10,000/– ರೂಪಾಯಿಗಳಿಗೆ ಹೆಚ್ಚಿಸಲು ಪ್ರಸ್ತಾವಿಸಲಾಗಿದೆ.

5. ಸಾರ್ವಜನಿಕ ಬೀದಿಯಲ್ಲಿ ಯಾವುದೇ ಕಟ್ಟಡಗಳನ್ನು ನಿರ್ಮಿಸುವುದನ್ನು ಅಥವಾ ಜೋಡಣೆಗಳನ್ನು ಅಳವಡಿಸುವುದನ್ನು ಹಾಗೂ ವಸ್ತುಗಳು, ಇತ್ಯಾದಿಗಳನ್ನು ರಾಶಿ ಹಾಕುವುದನ್ನು ಮತ್ತು ಬೀದಿ ವ್ಯಾಪಾರ ಮಾಡುವುದನ್ನು ನಿಷೇಧಿಸಲು ಮತ್ತು ನೋಟೀಸು ನೀಡದೆ ಅಂಥ ಒತ್ತುವರಿಯನ್ನು ತೆರವುಗೊಳಿಸುವ ಅಧಿಕಾರವನ್ನು ಆಯುಕ್ತರಿಗೆ ನೀಡಲು ಉಪಬಂಧಗಳನ್ನು ಕಲ್ಪಿಸಲಾಗಿದೆ.

6. ನಗರ ಪಾಲಿಕೆಗೆ ಅಹವಾಲು ಹೇಳಿಕೊಳ್ಳುವ ಅವಕಾಶ ಕೊಡದೆ ನಗರ ಪಾಲಿಕೆಯ ವಿರುದ್ಧ ಮಧ್ಯಕಾಲೀನ ಪರಿಹಾರವನ್ನು ಮಂಜೂರು ಮಾಡದಂತೆ ನ್ಯಾಯಾಲಯಗಳನ್ನು ಪ್ರತಿಷೇಧಿಸಲು ಸಹ ಉಪಬಂಧ ಕಲ್ಪಿಸಲಾಗಿದೆ.

7. ತತ್ಪರಿಣಾಮವಾದ ಕೆಲವು ತಿದ್ದುಪಡಿಗಳನ್ನು ಮಾಡಲು ಸಹ ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಮತ್ತು ವಿಷಯವು ತುರ್ತು ಸ್ವರೂಪದಾಗಿದ್ದುದರಿಂದ 1986ರ ಆಧ್ಯಾದೇಶ ಸಂಖ್ಯೆ 9ನ್ನು ಹೊರಡಿಸಲಾಗಿತ್ತು. ಈ ವಿಧೇಯಕವನ್ನು ಆ ಅಧ್ಯಾದೇಶದ ಬದಲಿಗೆ ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1986ರ ವಿಧಾನಸಭಾ ವಿಧೇಯಕ ಸಂಖ್ಯೆ. 33ರಿಂದ ತೆಗೆದುಕೊಳ್ಳಲಾಗಿದೆ)

**XII**

**ತಿದ್ದುಪಡಿ ಮಾಡುವ ಅಧಿನಿಯಮ 1987ರ 20.–** ಜಿಲ್ಲಾ ಪರಿಷತ್ತುಗಳ, ಮಂಡಲ ಪಂಚಾಯಿತಿಗಳ ಸದಸ್ಯರು ಮತ್ತು ನಗರ ಪಾಲಿಕೆಗಳ ಕೌನ್ಸಿಲರ್‌ಗಳು ಮತ್ತು ನಗರ ಸಭೆಗಳ ಮತ್ತು ಪೌರಸಭೆಗಳ ಕೌನ್ಸಿಲರ್‌ಗಳು ಯಾವ ರಾಜಕೀಯ ಪಕ್ಷಗಳಿಂದ ಅಭ್ಯರ್ಥಿಗಳಾಗಿ ಸ್ಪರ್ಧಿಸಿದ್ದರೋ ಆ ರಾಜಕೀಯ ಪಕ್ಷಗಳಿಂದ ಪಕ್ಷಾಂತರ ಮಾಡುವುದನ್ನು ನಿಷೇಧಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಆರೋಗ್ಯಕರ ರಾಜಕೀಯ ವ್ಯವಸ್ಥೆಗೆ ಅವಕಾಶ ಕಲ್ಪಿಸುವ ದೃಷ್ಟಿಯಿಂದ, ರಾಜಕೀಯ ಪಕ್ಷಗಳ ವಿಲೀನ ಅಥವಾ ವಿಭಜನೆ ಸಂದರ್ಭದಲ್ಲಿ, ಕೆಲವು ಷರತ್ತುಗಳಿಗೆ ಒಳಪಟ್ಟು, ಅಂಥ ಕೌನ್ಸಿಲರ್‌ಗಳನ್ನು ಅನರ್ಹಗೊಳಿಸುವುದು ಅವಶ್ಯಕವೆಂದು ಭಾವಿಸಲಾಗಿದೆ.

ಕರ್ನಾಟಕ ಜಿಲ್ಲಾ ಪರಿಷತ್ತುಗಳ, ತಾಲ್ಲೂಕು ಪಂಚಾಯಿತಿ ಸಮಿತಿಗಳ, ಮಂಡಲ ಪಂಚಾಯಿತಿ ಮತ್ತು ನ್ಯಾಯ ಪಂಚಾಯತಿ ಅಧಿನಿಯಮ, 1983 (1985ರ ಕರ್ನಾಟಕ ಅಧಿನಿಯಮ 20)ನ್ನು, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ನ್ನು (1964ರ ಕರ್ನಾಟಕ ಅಧಿನಿಯಮ 22) ತಿದ್ದುಪಡಿ ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಕರ್ನಾಟಕ ವಿಧಾನ ಸಭೆಯು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಮತ್ತು ವಿಷಯವು ಅತಿ ತುರ್ತು ಸ್ವರೂಪದ್ದಾಗಿದ್ದುದರಿಂದ, ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಆಧ್ಯಾದೇಶ, 1986ನ್ನು (1986 ರ ಕರ್ನಾಟಕ ಆಧ್ಯಾದೇಶ ಸಂಖ್ಯೆ 18) ಪ್ರಖ್ಯಾಪಿಸಲಾಗಿತ್ತು.

ಈ ವಿಧೇಯಕವನ್ನು ಆ ಆಧ್ಯಾದೇಶದ ಬದಲಿಗೆ ತರಲಾಗಿದೆ.

ಆದ್ದರಿಂದ ಈ ವಿಧೇಯಕ.

(1987ರ ವಿಧಾನಸಭಾ ವಿಧೇಯಕ ಸಂಖ್ಯೆ 3 ರಿಂದ ತೆಗೆದುಕೊಳ್ಳಲಾಗಿದೆ)

**XIII**

**ತಿದ್ದುಪಡಿ ಮಾಡುವ ಅಧಿನಿಯಮ 1990ರ 2.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 ಮತ್ತು ಕರ್ನಾಟಕ ಜಿಲ್ಲಾ ಪರಿಷತ್ತುಗಳ, ತಾಲ್ಲೂಕು ಪಂಚಾಯಿತಿ ಸಮಿತಿಗಳ, ಮಂಡಲ ಪಂಚಾಯಿತಿಗಳ ಮತ್ತು ನ್ಯಾಯ ಪಂಚಾಯಿತಿಗಳ ಅಧಿನಿಯಮ, 1983 – 18 ವರ್ಷ ವಯಸ್ಸು ತುಂಬಿರುವಂಥ ವ್ಯಕ್ತಿಗಳಿಗೆ ಮತದಾನದ ಹಕ್ಕನ್ನು ನೀಡುವ ಉದ್ದೇಶಕ್ಕಾಗಿ ಹೆಚ್ಚುವರಿ ಮತದಾರರ ಪಟ್ಟಿಗಳನ್ನು ಸಿದ್ಧಪಡಿಸುವುದಕ್ಕೆ ಸಂಬಂಧಿಸಿದ ಉಪಬಂಧಗಳನ್ನು ಒಳಗೊಂಡಿದೆ.

ಜನತಾ ಪ್ರಾತಿನಿಧ್ಯ ಅಧಿನಿಯಮಕ್ಕೆ ಮಾಡಿರುವ ತಿದ್ದುಪಡಿಗಳಿಗೆ ಅನುಸಾರವಾಗಿ ವಿಧಾನಸಭೆ ಮತ್ತು ಸಂಸದೀಯ ಚುನಾವಣಾ ಕ್ಷೇತ್ರಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿ ಸಿದ್ಧಪಡಿಸಿರುವ ಮತದಾರರ ಪಟ್ಟಿಗಳು 18 ವರ್ಷಗಳ ಮತದಾನದ ವಯಸ್ಸು ತುಂಬಿರುವ ವ್ಯಕ್ತಿಗಳನ್ನು ಈಗ ಒಳಗೊಂಡಿವೆ.

ಈ ಸಂದರ್ಭಗಳಲ್ಲಿ, ಸೂಕ್ತ ಮತ್ತು ಆನುಷಂಗಿಕ ತಿದ್ದುಪಡಿಗಳನ್ನು ಮಾಡುವ ಮೂಲಕ ಹೆಚ್ಚುವರಿ ಮತದಾರರ ಪಟ್ಟಿಯನ್ನು ಸಿದ್ಧಪಡಿಸಲು ಅಗತ್ಯಪಡಿಸುವ ಉಪಬಂಧಗಳನ್ನು ತೆಗೆದುಹಾಕಲು ತೀರ್ಮಾನಿಸಲಾಗಿದೆ.

ಕೌನ್ಸಿಲರ್‌ಗಳಿಗೆ, ಕಾರ್ಪೋರೇಟರ್‌ಗಳಿಗೆ ಮತ್ತು ಜಿಲ್ಲಾ ಪರಿಷತ್ತುಗಳ ಸದಸ್ಯರಿಗೆ ಐದು ವರ್ಷಗಳ ಏಕರೂಪದ ಪದಾವಧಿಯನ್ನು ನಿಗದಿಪಡಿಸಲು ಪ್ರಸ್ತಾವಿಸಲಾಗಿದೆ. ತತ್ಪರಿಣಾಮವಾಗಿ, ಕೌನ್ಸಿಲರುಗಳ ನಾಲ್ಕು ವರ್ಷಗಳ ಶಾಸನಬದ್ಧ ಅವಧಿಯನ್ನು ಕಾರ್ಪೋರೇಟರ್‌ಗಳ ಮತ್ತು ಜಿಲ್ಲಾ ಪರಿಷತ್ತುಗಳ ಸದಸ್ಯರ ಪದಾವಧಿಗೆ ಸಮಾನವಾಗಿರುವಂತೆ ಮಾಡಲು, ಆ ಅವಧಿಯನ್ನು ಐದು ವರ್ಷಗಳಿಗೆ ಹೆಚ್ಚಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ದಿನಾಂಕ 21–12–1989ರಲ್ಲಿ ಪುಟ ಸಂಖ್ಯೆ 5ರಲ್ಲಿ ಸಂಖ್ಯೆ 616 ಆಗಿ ಪ್ರಕಟಿಸಲಾಗಿದೆ)

## XIV

**ತಿದ್ದುಪಡಿ ಮಾಡುವ ಅಧಿನಿಯಮ 1990ರ 14.**– ಭಾರತ ಸಂವಿಧಾನದ 309, 187(2) ಮತ್ತು 229(2)ನೇ ಅನುಚ್ಛೇದಗಳು, ಸಿವಿಲ್ ನೌಕರರ ನೇಮಕಾತಿಯನ್ನು ಮತ್ತು ಸೇವಾ ಷರತ್ತುಗಳನ್ನು ರಾಜ್ಯ ವಿಧಾನಮಂಡಲದ ಕಾನೂನಿನ ಮೂಲಕ ವಿನಿಯಮಿಸುವುದಕ್ಕೆ ಉಪಬಂಧ ಕಲ್ಪಿಸುತ್ತವೆ. ಆದ್ದರಿಂದ ಈ ಉದ್ದೇಶಕ್ಕಾಗಿ ಒಂದು ಕಾನೂನನ್ನು ರಚಿಸುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ.

ಸಿವಿಲ್ ನೌಕರರಿಗೆ, ಕರ್ನಾಟಕ ರಾಜ್ಯ ವಿಧಾನಮಂಡಲದ ಸಚಿವಾಲಯದ ಸಿಬ್ಬಂದಿಗೆ ಸಂಬಂಧಪಟ್ಟಂತೆ ಅಧಿನಿಯಮದ ಮೇರೆಗೆ ನೇಮಕಾತಿಯನ್ನು ಮತ್ತು ಸೇವಾ ಷರತ್ತುಗಳನ್ನು ಮತ್ತು ಉಚ್ಚ ನ್ಯಾಯಾಲಯದ ಸಿಬ್ಬಂದಿ ವರ್ಗದ ಸದಸ್ಯರ ಸೇವಾ ಷರತ್ತುಗಳನ್ನು ವಿನಿಯಮಿಸುವ ನಿಯಮಗಳನ್ನು ರಚಿಸಿರುವುದರಿಂದ, ನಿಯಮಗಳ ಪೂರ್ವ ಪ್ರಕಟಣೆಗೆ ಮತ್ತು ನಿಯಮಗಳನ್ನು ರಚಿಸುವ ಮುನ್ನ ವಿಧಾನ ಮಂಡಲದ ಮತ್ತು ಉಚ್ಚ ನ್ಯಾಯಾಲಯದ ಪೀಠಾಸೀನ ಅಧಿಕಾರಿಗಳ ಅಭಿಪ್ರಾಯಗಳನ್ನು ಖಚಿತಪಡಿಸಿಕೊಳ್ಳುವುದಕ್ಕೆ 3 (2)ನೇ ಖಂಡದಲ್ಲಿ ಉಪಬಂಧಗಳನ್ನು ಕಲ್ಪಿಸಲಾಗಿದೆ.

ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ರಚಿಸಿದ್ದ ನಿಯಮಗಳನ್ನು ಮುಂದುವರಿಸಲು 3ನೇ ಖಂಡದಲ್ಲಿ ಉಪಬಂಧ ಕಲ್ಪಿಸಲಾಗಿದೆ. ಸಿವಿಲ್ ನೌಕರರ ನಡತೆ ಬಗ್ಗೆ ಜಾಗೃತ ಆಯುಕ್ತರು, ಜಾಗೃತ ಅಧಿಕಾರಿಗಳು ವಿಚಾರಣೆಗಳನ್ನು ನಡೆಸುತ್ತಾರೆ ಮತ್ತು ಅವರು ಅಂಥ ವಿಚಾರಣೆಗಳನ್ನು ಸರಿಯಾದ ರೀತಿಯಲ್ಲಿ ನಡೆಸುತ್ತಾರೆ. ಈ ಉದ್ದೇಶಕ್ಕಾಗಿ, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಮೇರೆಗೆ ದಾವೆಯನ್ನು ಅಧಿವಿಚಾರಣೆ ಮಾಡುವಾಗ ಸಿವಿಲ್ ನ್ಯಾಯಾಲಯವು ಹೊಂದಿರುವ ಅಧಿಕಾರಗಳನ್ನೇ ಅವರೂ ಹೊಂದಿರುತ್ತಾರೆ. ತಮ್ಮ ಆಸ್ತಿಗಳ ಬಗ್ಗೆ ತೃಪ್ತಿಕರವಾದ ಲೆಕ್ಕವನ್ನು ನೀಡಲು ಸಾಧ್ಯವಿಲ್ಲದಂಥ, ಅವರ ಬಲ್ಲ ಆದಾಯ ಮೂಲಗಳಿಗಿಂತ ಹೆಚ್ಚಾಗಿ ಆಸ್ತಿಗಳನ್ನು ಹೊಂದಿರುವ ಭ್ರಷ್ಟ ಸಿವಿಲ್ ನೌಕರರ ಬಗ್ಗೆ ವ್ಯವಹರಿಸುವ ಸಲುವಾಗಿ, ಸಿವಿಲ್ ನೌಕರನು ಬಲ್ಲ ಆದಾಯ ಮೂಲಗಳಿಗಿಂತ ಹೆಚ್ಚು ಆಸ್ತಿಗಳನ್ನು ಹೊಂದಿರುವನೆಂದು ರುಜುವಾತಾದಾಗ ಅದು ದುರ್ನಡತೆಯಾಗುವುದೆಂದು ಪೂರ್ವಭಾವನೆ ಮಾಡುವುದಕ್ಕಾಗಿ ಉಪಬಂಧವನ್ನು ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಸದರಿ ವಿಷಯಗಳಿಗಾಗಿ ಈ ವಿಧೇಯಕದ 5ನೇ ಖಂಡದಲ್ಲಿ ಉಪಬಂಧಗಳನ್ನು ಕಲ್ಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2 ಎ ದಿನಾಂಕ 10–8–1978ರಲ್ಲಿ ಸಂಖ್ಯೆ 1135 ಆಗಿ ಪ್ರಕಟಿಸಲಾಗಿದೆ)

## XV

**ತಿದ್ದುಪಡಿ ಮಾಡುವ ಅಧಿನಿಯಮ 1991ರ 19.**–ರಾಜ್ಯದಲ್ಲಿನ ನಗರಪಾಲಿಕೆಗಳಿಗೆ 1990ರ ಫೆಬ್ರವರಿ 25ರಂದು ನಡೆಸಲು ನಿಗದಿಪಡಿಸಲಾಗಿದ್ದ ಮತದಾನವನ್ನು, ಸರ್ಕಾರದ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದಾಗಿ ಮುಂದೂಡುವುದು ಅವಶ್ಯಕವಾಯಿತು.

ಮೇಲಿನ ಉದ್ದೇಶವನ್ನು ಸಾಧಿಸುವುದಕ್ಕಾಗಿ ನಿರ್ದಿಷ್ಟಪಡಿಸಿದ ಅಧಿಕಾರಗಳನ್ನು ಪಡೆಯುವ ಸಲುವಾಗಿ, ಕರ್ನಾಟಕ ನಗರಪಾಲಿಕೆಗಳ (ತಿದ್ದುಪಡಿ) ಆಧ್ಯಾದೇಶ, 1990ನ್ನು ಪ್ರಖ್ಯಾಪಿಸಲಾಗಿತ್ತು.

ಈ ವಿಧೇಯಕವನ್ನು ಆ ಆಧ್ಯಾದೇಶದ ಬದಲಾಗಿ ತರಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 02–04–1990 ರಲ್ಲಿ ಸಂಖ್ಯೆ 185 ಆಗಿ ಪುಟಸಂಖ್ಯೆ 4ರಲ್ಲಿ ಪ್ರಕಟಿಸಲಾಗಿದೆ.)

## XVI

**ತಿದ್ದುಪಡಿ ಮಾಡುವ ಅಧಿನಿಯಮ 1991 ರ 22.**– ನಗರಪಾಲಿಕೆಗಳ ಮತ್ತು ನಗರ ಸಭೆಗಳ ಅಥವಾ ಪೌರಸಭೆಗಳ ಕಚೇರಿಗಳ ಮೇಲೆ ರಾಷ್ಟ್ರಧ್ವಜವನ್ನು ಅಥವಾ ರಾಜ್ಯಸರ್ಕಾರವು ಅನುಮೋದಿಸಿದ ಧ್ವಜವನ್ನು ಹೊರತುಪಡಿಸಿ ಯಾವುದೇ ಇತರ ಧ್ವಜಗಳನ್ನು ಹಾರಿಸುವುದನ್ನು ನಿಷೇಧಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1991ರ ವಿಧಾನಸಭಾ ವಿಧೇಯಕ ಸಂಖ್ಯೆ 3ರಿಂದ ತೆಗೆದುಕೊಳ್ಳಲಾಗಿದೆ)

## XVII

**ತಿದ್ದುಪಡಿ ಮಾಡುವ ಅಧಿನಿಯಮ 1991 ರ 32.**– ರಾಜ್ಯದಲ್ಲಿನ ನಗರಪಾಲಿಕೆಗಳಿಗೆ 1990ರ ಫೆಬ್ರವರಿ 25ರಂದು ನಡೆಸಲು ನಿಗದಿಪಡಿಸಲಾಗಿದ್ದ ಮತದಾನವನ್ನು, ಸರ್ಕಾರದ ನಿಯಂತ್ರಣಕ್ಕೆ ಮೀರಿದ ಕಾರಣಗಳಿಂದಾಗಿ ಮುಂದೂಡುವುದು ಅವಶ್ಯಕವಾಯಿತು.

ಮೇಲಿನ ಉದ್ದೇಶವನ್ನು ಸಾಧಿಸುವುದಕ್ಕಾಗಿ ನಿರ್ದಿಷ್ಟಪಡಿಸಿದ ಅಧಿಕಾರಗಳನ್ನು ಪಡೆಯುವ ಸಲುವಾಗಿ, ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಆಧ್ಯಾದೇಶ, 1990ನ್ನು ಪ್ರಖ್ಯಾಪಿಸಲಾಗಿತ್ತು.

ಈ ವಿಧೇಯಕವನ್ನು ಆ ಆಧ್ಯಾದೇಶದ ಬದಲಾಗಿ ತರಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV –2ಎ, ದಿನಾಂಕ 02–04–1990ರಲ್ಲಿ ಸಂಖ್ಯೆ 185 ಆಗಿ ಪುಟ ಸಂಖ್ಯೆ 4ರಲ್ಲಿ ಪ್ರಕಟಿಸಲಾಗಿದೆ.)

## XVIII

**ತಿದ್ದುಪಡಿ ಮಾಡುವ ಅಧಿನಿಯಮ 1994ರ 35.–** 1992ರ ಸಂವಿಧಾನದ (ಎಪ್ಪತ್ತನಾಲ್ಕನೇ ತಿದ್ದುಪಡಿ) ಅಧಿನಿಯಮದ ಉಪಬಂಧಗಳಿಗೆ ಅನುಗುಣವಾಗಿರುವಂತೆ ಮಾಡಲು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ 1976ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಭಾವಿಸಲಾಗಿದೆ.

ಈ ವಿಧೇಯಕವು ಇತರ ವಿಷಯಗಳೊಂದಿಗೆ,–

(1) ಪ್ರದೇಶದ ಜನಸಂಖ್ಯೆ, ಅಂಥ ಪ್ರದೇಶದಲ್ಲಿ ಬಂದ ಆದಾಯ, ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡ ಪ್ರಮಾಣ ಮತ್ತು 3ನೇ ಪ್ರಕರಣದಲ್ಲಿ ತಿಳಿಸಿರುವ ಕೆಲವು ಇತರ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ದೊಡ್ಡ ನಗರ ಪ್ರದೇಶವನ್ನು ನಿರ್ದಿಷ್ಟಪಡಿಸುವುದಕ್ಕೆ;

(2) ನಗರ ಪಾಲಿಕೆಗಳ ರಚನೆಗೆ;

(3) ಅನುಸೂಚಿತ ಜಾತಿಗಳವರಿಗೆ, ಅನುಸೂಚಿತ ಪಂಗಡಗಳವರಿಗೆ, ಹಿಂದುಳಿದ ವರ್ಗಗಳವರಿಗೆ ಮತ್ತು ಮಹಿಳೆಯರಿಗೆ ನಗರ ಪಾಲಿಕೆಯಲ್ಲಿ ಸ್ಥಾನಗಳನ್ನು ಮತ್ತು ಅಧ್ಯಕ್ಷರುಗಳ ಪದವನ್ನು ಮೀಸಲಿರಿಸುವುದಕ್ಕೆ;

(4) ಪ್ರತಿಯೊಂದು ನಗರಪಾಲಿಕೆಗೆ ಸಂಬಂಧಪಟ್ಟಂತೆ ನಾಲ್ಕು ಸ್ಥಾಯೀ ಸಮಿತಿಗಳ ರಚನೆಗೆ;

(5) ಮೂರು ಲಕ್ಷ ಅಥವಾ ಅದಕ್ಕಿಂತ ಹೆಚ್ಚು ಜನಸಂಖ್ಯೆಯಿರುವ ನಗರದ ಸಂಬಂಧದಲ್ಲಿ ವಾರ್ಡ್ ಸಮಿತಿಗಳ ರಚನೆಗೆ;

(6) ರಾಜ್ಯ ಚುನಾವಣಾ ಆಯೋಗವು ಮತದಾರರ ಪಟ್ಟಿ ಸಿದ್ಧಪಡಿಸುವುದಕ್ಕೆ ಮತ್ತು ಚುನಾವಣೆಯನ್ನು ನಡೆಸುವುದಕ್ಕೆ ಸಂಬಂಧಪಟ್ಟಂತೆ ರಾಜ್ಯ ಚುನಾವಣಾ ಆಯೋಗದ ಅಧೀಕ್ಷಣೆಗೆ, ನಿರ್ದೇಶನಕ್ಕೆ ಹಾಗೂ ನಿಯಂತ್ರಣಕ್ಕೆ;

(7) ಬೆಂಗಳೂರು ಮಹಾನಗರ ಪ್ರದೇಶದ ಸಂಬಂಧದಲ್ಲಿ ಮಹಾನಗರ ಯೋಜನಾ ಸಮಿತಿಗಳ ರಚನೆಗೆ;

(8) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಮೇರೆಗೆ ರಚಿತವಾದ ಹಣಕಾಸು ಆಯೋಗವು ನಗರ ಪಾಲಿಕೆಗಳ ಹಣಕಾಸು ಪರಿಸ್ಥಿತಿಯನ್ನು ಪರಿಶೀಲಿಸುವುದಕ್ಕೆ ಹಾಗೂ ರಾಜ್ಯಪಾಲರಿಗೆ ಶಿಫಾರಸ್ಸುಗಳನ್ನು ಮಾಡುವುದಕ್ಕೆ;

(9) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಅಧಿನಿಯಮ 1985ನ್ನು ನಿರಸನಗೊಳಿಸುವುದಕ್ಕೆ ಹಾಗೂ ಬೆಂಗಳೂರು ಮಹಾನಗರ ಯೋಜನಾ ಸಮಿತಿಯನ್ನು ರಚಿಸಿದ ಮೇಲೆ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ವಿಸರ್ಜಿಸುವುದಕ್ಕೆ

– ಉಪಬಂಧ ಕಲ್ಪಿಸುತ್ತದೆ. ತತ್ಪರಿಣಾಮವಾದ ಕೆಲವು ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಹಾಗೂ ಕರ್ನಾಟಕ ವಿಧಾನ ಸಭೆಯು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಅಧ್ಯಾದೇಶ 1994ನ್ನು ಪ್ರಖ್ಯಾಪಿಸಲಾಗಿತ್ತು.

ಆದ್ದರಿಂದ ಈ ವಿಧೇಯಕ.

(1994ರ ವಿಧಾನಸಭಾ ವಿಧೇಯಕ ಸಂಖ್ಯೆ 2ರಿಂದ ತೆಗೆದುಕೊಳ್ಳಲಾಗಿದೆ)

## XIX

**ತಿದ್ದುಪಡಿ ಮಾಡುವ ಅಧಿನಿಯಮ, 1995 ರ 14.–** ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು ,–

(i) ಅಧಿನಿಯಮದ 114ನೇ ಪ್ರಕರಣದ ಮೇರೆಗೆ ದಾಖಲು ಮಾಡಿದ ಸ್ವಾಮ್ಯದ ಯಾವುದೇ ವರ್ಗಾವಣೆಯನ್ನು ಆಯುಕ್ತರು ಪುನರ್ ಪರಿಶೀಲಿಸುವುದಕ್ಕಾಗಿ;

(ii) ಸ್ವತ್ತಿಗೆ ಸಂಬಂಧಿಸಿದಂತೆ ನಗರ ಪಾಲಿಕೆಯು ಮಾಡಿದ ಅಥವಾ ನಗರಪಾಲಿಕೆಯ ವಿರುದ್ಧವಾಗಿ ಮಾಡಿದ ಕ್ಲೇಮುಗಳನ್ನು ವಿಭಾಗೀಯ ಆಯುಕ್ತರು ತೀರ್ಮಾನಿಸುವುದಕ್ಕಾಗಿ

– ಉಪಬಂಧ ಕಲ್ಪಿಸಲು ತಿದ್ದುಪಡಿ ಮಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1995ರ ವಿಧಾನಸಭಾ ವಿಧೇಯಕ, 18ರಿಂದ ತೆಗೆದುಕೊಳ್ಳಲಾಗಿದೆ)

## XX

**ತಿದ್ದುಪಡಿ ಮಾಡುವ ಅಧಿನಿಯಮ 1995ರ 25.–** ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು,–

(i) "ಹಿಂದುಳಿದ ವರ್ಗಗಳು" ಪದಾವಳಿಯ ಈಗಿರುವ ಪರಿಭಾಷೆಯನ್ನು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರಲ್ಲಿರುವ ಹಿಂದುಳಿದ ವರ್ಗಗಳು ಪದಾವಳಿಯ ಪರಿಭಾಷೆಯ ರೀತಿಯಲ್ಲಿಯೆ ಪುನಃ ಪರಿಭಾಷಿಸುವ ಸಲುವಾಗಿ ಆ ಪದಾವಳಿಯನ್ನು ಪ್ರತ್ಯಾಯೋಜಿಸುವುದಕ್ಕಾಗಿ;

(ii) ಹಿಂದುಳಿದ ವರ್ಗಗಳಿಗೆ ಮೀಸಲಿರಿಸಿದ ಮೇಯರ್ ಮತ್ತು ಉಪ–ಮೇಯರ್ ಹುದ್ದೆಗಳ ಪೈಕಿ ಶೇಕಡ ಎಂಟರಷ್ಟನ್ನು "ಎ" ಪ್ರವರ್ಗಕ್ಕೆ ಮತ್ತು ಉಳಿದ ಶೇಕಡ ಇಪ್ಪತ್ತರಷ್ಟನ್ನು "ಬಿ" ಪ್ರವರ್ಗಕ್ಕೆ ಮೀಸಲಿರಿಸುವುದಕ್ಕಾಗಿ;

(iii) ಹಿಂದುಳಿದ ವರ್ಗಗಳಿಗೆ ಮೀಸಲಿರಿಸಿದ ಸ್ಥಾನಗಳ ಪೈಕಿ ಶೇಕಡಾ ಎಂಬತ್ತರಷ್ಟನ್ನು "ಎ" ಪ್ರವರ್ಗಕ್ಕೆ ಮತ್ತು ಉಳಿದ ಶೇಕಡ ಇಪ್ಪತ್ತರಷ್ಟನ್ನು "ಬಿ" ಪ್ರವರ್ಗಕ್ಕೆ ಮೀಸಲಿರಿಸುವುದಕ್ಕಾಗಿ;

(iv) ರಿಟರ್ನಿಂಗ್ ಆಫೀಸರ್, ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್, ಪ್ರಿಸೈಡಿಂಗ್ ಆಫೀಸರ್, ಮುಂತಾದವರು ರಾಜ್ಯ ಚುನಾವಣಾ ಆಯೋಗದ ನಿಯಂತ್ರಣ, ಮೇಲ್ವಿಚಾರಣೆ ಮತ್ತು ಶಿಸ್ತಿಗೆ ಒಳಪಡುವಂತೆ ಮಾಡುವ ಸಲುವಾಗಿ, ಅಂಥ ಅಧಿಕಾರಿಗಳು ಚುನಾವಣೆಯ ದಿನಾಂಕದಿಂದ ಪ್ರಾರಂಭವಾಗಿ ಚುನಾವಣೆಯ ಫಲಿತಾಂಶ ಘೋಷಿಸುವ ದಿನಾಂಕದೊಂದಿಗೆ ಮುಕ್ತಾಯವಾಗುವ ಅವಧಿಗೆ ರಾಜ್ಯ ಚುನಾವಣಾ ಆಯೋಗದಲ್ಲಿ ಪ್ರತಿನಿಯೋಜನೆ ಮೇಲೆ ಇದ್ದಾರೆಂದು ಭಾವಿಸಲು ಉಪಬಂಧ ಕಲ್ಪಿಸುವುದಕ್ಕಾಗಿ;

(v) ಚುನಾವಣಾ ಉದ್ದೇಶಗಳಿಗಾಗಿ ಆವರಣಗಳನ್ನು ಮತ್ತು ವಾಹನಗಳನ್ನು ಕಡ್ಡಾಯವಾಗಿ ಕೋರುವುದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ;

(vi) ಹಾಗೆ ಪಡೆದ ಆವರಣಗಳಿಗೆ ಮತ್ತು ವಾಹನಗಳಿಗೆ ಪರಿಹಾರ ಸಂದಾಯ ಮಾಡುವುದಕ್ಕೆ ಮತ್ತು ಆವರಣಗಳನ್ನು ಮತ್ತು ವಾಹನಗಳನ್ನು ಕಡ್ಡಾಯವಾಗಿ ಕೋರುವುದಕ್ಕೆ ಪ್ರಾಸಂಗಿಕವಾದ ಕೆಲವು ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ

– ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1995ರ ವಿಧಾನಸಭಾ ವಿಧೇಯಕ ಸಂಖ್ಯೆ 25ರಿಂದ ತೆಗೆದುಕೊಳ್ಳಲಾಗಿದೆ)

## XXI

**ತಿದ್ದುಪಡಿ ಮಾಡುವ ಅಧಿನಿಯಮ 1998ರ 24.–** ಲೋಕಸಭಾ ಸದಸ್ಯರು ಮತ್ತು ವಿಧಾನಸಭಾ ಸದಸ್ಯರು ಸಂದರ್ಭಾನುಸಾರ, ಪೌರಸಭಾ ಪ್ರದೇಶದೊಳಗೆ ಅಥವಾ ನಗರದೊಳಗೆ ಮತದಾರರಾಗಿ ನೋಂದಾಯಿಸಿಕೊಳ್ಳಬೇಕೆಂಬ ಅಗತ್ಯತೆಯನ್ನು ರದ್ದುಪಡಿಸುವ ಸಲುವಾಗಿ, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ 11ನೇ ಪ್ರಕರಣದ ಮತ್ತು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ 7ನೇ ಪ್ರಕರಣದ ಉಪಬಂಧಗಳನ್ನು ಭಾರತ ಸಂವಿಧಾನದ 243 ಆರ್ ಅನುಚ್ಛೇದಕ್ಕೆ ಅನುಗುಣವಾಗಿರುವಂತೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1998ರ ವಿಧಾನಸಭಾ ವಿಧೇಯಕ ಸಂಖ್ಯೆ 2ರಿಂದ ತೆಗೆದುಕೊಳ್ಳಲಾಗಿದೆ).

## XXII

**ತಿದ್ದುಪಡಿ ಮಾಡುವ ಅಧಿನಿಯಮ 1998ರ 27.–** ಬೆಂಗಳೂರು ನಗರ ಪಾಲಿಕೆಯಲ್ಲಿ ಎಂಟು ಸ್ಥಾಯೀ ಸಮಿತಿಗಳನ್ನು ಹಾಗೂ ಇತರ ನಗರ ಪಾಲಿಕೆಗಳಲ್ಲಿ ನಾಲ್ಕು ಸ್ಥಾಯೀ ಸಮಿತಿಗಳನ್ನು ರಚಿಸುವುದಕ್ಕೆ ಅವಕಾಶ ಕಲ್ಪಿಸುವುದಕ್ಕಾಗಿ, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ಕ್ಕೆ ತಿದ್ದುಪಡಿ ತರುವುದು ಅವಶ್ಯಕವೆಂದು ಭಾವಿಸಲಾಗಿದೆ.

ತತ್ಪರಿಣಾಮವಾದ ಇತರ ಕೆಲವು ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(1998ರ ವಿಧಾನಸಭಾ ವಿಧೇಯಕ ಸಂಖ್ಯೆ 11ರಿಂದ ತೆಗೆದುಕೊಳ್ಳಲಾಗಿದೆ)

## XXIII

**ತಿದ್ದುಪಡಿ ಮಾಡುವ ಅಧಿನಿಯಮ 2001ರ 9.–** ಮತದಾನ ಪ್ರಾರಂಭವಾಗುವ ದಿನಾಂಕದ ಇಪ್ಪತ್ನಾಲ್ಕು ಗಂಟೆಗಳ ಮುಂಚೆ ಯಾವುದೇ ಸಾರ್ವಜನಿಕ ಸಭೆ ಸೇರಿಸುವುದನ್ನು, ನಡೆಸುವುದನ್ನು ಅಥವಾ ಅದರಲ್ಲಿ ಭಾಗಿಯಾಗುವುದನ್ನು, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ 41ನೇ ಪ್ರಕರಣದಲ್ಲಿ ನಿಷೇಧಿಸಲಾಗಿದೆ. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ 35ನೇ ಪ್ರಕರಣದ ಉಪಬಂಧಗಳಲ್ಲಿ ಉಪಬಂಧಿಸಿರುವಂತೆಯೇ ಆ ಅವಧಿಯನ್ನು ನಲವತ್ತೆಂಟು ಗಂಟೆಗಳಿಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2001 ವಿಧಾನಸಭಾ ವಿಧೇಯಕ ಸಂಖ್ಯೆ 39, ಕಡತ ಸಂಖ್ಯೆ ಸಂವ್ಯಶಾಇ 43 ಶಾಸನ 2000ನ್ನು ನೋಡಿ)

## XXIV

**ತಿದ್ದುಪಡಿ ಮಾಡುವ ಅಧಿನಿಯಮ 2001ರ 31.–** ಸ್ವತ್ತು ತೆರಿಗೆ ನಿರ್ಧರಣೆಯ ಕಾರ್ಯವಿಧಾನವನ್ನು ಸರಳಗೊಳಿಸಲು ಸ್ವತ್ತು ತೆರಿಗೆಯ ಸ್ವಯಂ ನಿರ್ಧರಣಾ ಪದ್ಧತಿಯನ್ನು ಪ್ರಾರಂಭಿಸುವುದಕ್ಕಾಗಿ ಮತ್ತು,–

(1) ಸ್ವತ್ತು ತೆರಿಗೆಯ ನಿರ್ಧರಣೆಯ ಉದ್ದೇಶಕ್ಕಾಗಿ ತಿಂಗಳಿನಿಂದ ತಿಂಗಳಿಗೆ ಅಥವಾ ವರ್ಷದಿಂದ ವರ್ಷಕ್ಕೆ, ಬಾಡಿಗೆಗೆ ಕೊಡಲಾದ ಒಂದು ಕಟ್ಟಡದಿಂದ ಎಷ್ಟು ವಾರ್ಷಿಕ ಒಟ್ಟು ಬಾಡಿಗೆಯನ್ನು ಸಮಂಜಸವಾಗಿ ನಿರೀಕ್ಷಿಸಬಹುದೋ ಆ ವಾರ್ಷಿಕ ಒಟ್ಟು ಬಾಡಿಗೆಯ ಆಧಾರದ ಮೇಲೆ ಸ್ವತ್ತಿನ ತೆರಿಗೆಗೆ ಗುರಿಯಾಗುವ ಮೌಲ್ಯವನ್ನು ನಿರ್ಧರಿಸುವ ಪದ್ಧತಿಯನ್ನು ರದ್ದುಪಡಿಸುವುದಕ್ಕಾಗಿ;

(2) ಭೂಮಿಯ ಅಂದಾಜು ಮಾರುಕಟ್ಟೆ ಮೌಲ್ಯವನ್ನು ಮತ್ತು ಕಟ್ಟಡ ನಿರ್ಮಾಣದ ಅಂದಾಜು ವೆಚ್ಚವನ್ನು ಗಮನದಲ್ಲಿರಿಸಿಕೊಂಡು, ತೆರಿಗೆಗೆ ಗುರಿಯಾಗಬಹುದಾದ ಮೂಲ ಬಂಡವಾಳ ಮೌಲ್ಯದ ಆಧಾರದ ಮೇಲೆ ಸ್ವತ್ತು ತೆರಿಗೆ ನಿರ್ಧರಣೆಯ ಪದ್ಧತಿಯನ್ನು ಪ್ರಾರಂಭಿಸುವುದಕ್ಕಾಗಿ;

(3) ಸ್ಥಳ, ಕಟ್ಟಡ ನಿರ್ಮಾಣದ ಮಾದರಿ, ಸ್ವತ್ತಿನ ಬಳಕೆಯ ಸ್ವರೂಪ, ಭೂಮಿಯ ವಿಸ್ತೀರ್ಣ, ಕಟ್ಟಡದ ಮೇಲು ಪಾಯದ ವಿಸ್ತೀರ್ಣ ಮತ್ತು ಕಟ್ಟಡ ಎಷ್ಟು ಹಳೆಯದು ಎಂಬ ಅಂಶಗಳನ್ನು ಆಧರಿಸಿ ನಗರ ಪಾಲಿಕೆಯು ನಿಗದಿಪಡಿಸಿದ ತೆರಿಗೆಗೆ ಗುರಿಯಾಗತಕ್ಕ ಸ್ವತ್ತಿನ ಬಂಡವಾಳ ಮೌಲ್ಯದ ಅಂಥ ಶೇಕಡಾವಾರು ದರದಲ್ಲಿ ಸ್ವತ್ತು ತೆರಿಗೆಯನ್ನು ವಿಧಿಸುವುದಕ್ಕಾಗಿ;

(4) ಮಾಲೀಕರು ಅಥವಾ ಅಧಿಭೋಗದಾರರು ಸ್ವತ್ತು ತೆರಿಗೆಯನ್ನು ಸಂದಾಯಮಾಡುವುದಕ್ಕಾಗಿ ಮತ್ತು ವಿವರಣ ಪಟ್ಟಿಗಳನ್ನು ಸಲ್ಲಿಸುವುದಕ್ಕಾಗಿ;

(5) ನಿರ್ದಿಷ್ಟಪಡಿಸಿದ ಕಾಲದೊಳಗೆ ವಿವರಣ ಪಟ್ಟಿಗಳನ್ನು ಸಲ್ಲಿಸಿದ್ದಕ್ಕಾಗಿ ಮಾಲೀಕರಿಗೆ ತೆರಿಗೆಯ ಶೇಕಡಾ ಐದರಷ್ಟು ದರದಲ್ಲಿ ಪ್ರೋತ್ಸಾಹ ಧನವನ್ನು ನೀಡುವುದಕ್ಕಾಗಿ;

(6) ವಿವರಣ ಪಟ್ಟಿಗಳನ್ನು ಸಲ್ಲಿಸಲು ತಪ್ಪಿದ ಸಂದರ್ಭಗಳಲ್ಲಿ ತೆರಿಗೆಯ ಶೇಕಡಾ ಐವತ್ತರಷ್ಟು ದರದಲ್ಲಿ ದಂಡವನ್ನು ವಿಧಿಸುವುದಕ್ಕಾಗಿ;

(7) ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡಲಾದ ಸ್ವತ್ತುಗಳ ಸಂಬಂಧದಲ್ಲಿ ಸೇವಾ ಶುಲ್ಕಗಳನ್ನು ಸಂಗ್ರಹಿಸುವುದಕ್ಕಾಗಿ;

(8) ಕಾನೂನು ಬಾಹಿರ ಕಟ್ಟಡ ನಿರ್ಮಾಣಕ್ಕಾಗಿ ಕೈಗೊಳ್ಳಬೇಕಾದ ಯಾವುವೇ ವ್ಯವಹರಣೆಗಳಿಗೆ ಅಥವಾ ಕ್ರಮಕ್ಕೆ ಬಾಧಕವಾಗದಂತೆ, ಕಾನೂನು ಬಾಹಿರ ಕಟ್ಟಡಗಳ ಸಂಬಂಧದಲ್ಲಿ, ವಿಧಿಸಬಹುದಾದ ಸ್ವತ್ತು ತೆರಿಗೆಯ ಎರಡರಷ್ಟಕ್ಕೆ ಸಮನಾದ ದಂಡವನ್ನು ಸಂಗ್ರಹಿಸುವುದಕ್ಕಾಗಿ;

(9) ಸಾರ್ವಜನಿಕ ಮಾಹಿತಿಗಾಗಿ ಸ್ವತ್ತು ತೆರಿಗೆ ರಿಜಿಸ್ಟರನ್ನು ಪ್ರಕಟಿಸುವುದಕ್ಕಾಗಿ;

(10) ಭೂಮಿಗಳ ಮತ್ತು ಕಟ್ಟಡಗಳ ಮೋಜಣಿ ಮಾಡಿಸುವುದಕ್ಕಾಗಿ ಮತ್ತು ಸ್ವತ್ತು ರಿಜಿಸ್ಟರನ್ನು ಸಿದ್ಧಪಡಿಸುವುದಕ್ಕಾಗಿ;

(11) ಮೂಲ ಸೌಕರ್ಯ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಗಳನ್ನು ವಿಧಿಸುವುದಕ್ಕಾಗಿ

– ಉಪಬಂಧ ಕಲ್ಪಿಸಲು ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ 1976 ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ತತ್ಪರಿಣಾಮವಾದ ಕೆಲವು ಇತರ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## XXV

**ತಿದ್ದುಪಡಿ ಮಾಡುವ ಅಧಿನಿಯಮ 2003ರ 5.–** ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 ರ 7ನೇ ಪ್ರಕರಣವು ಪೌರಾಡಳಿತ, ಆರೋಗ್ಯ, ನಗರ ಯೋಜನೆ, ಶಿಕ್ಷಣ, ಮೊದಲಾದ ಕ್ಷೇತ್ರಗಳಲ್ಲಿ ವಿಶೇಷ ಜ್ಞಾನವುಳ್ಳ ಐವರಿಗಿಂತ ಕಡಿಮೆಯಿಲ್ಲದಷ್ಟು ವ್ಯಕ್ತಿಗಳನ್ನು ನಗರ ಪಾಲಿಕೆಗಳ ಕೌನ್ಸಿಲರ್‌ಗಳಾಗಿ ನಾಮ ನಿರ್ದೇಶನ ಮಾಡಲು ಉಪಬಂಧ ಕಲ್ಪಿಸುತ್ತದೆ.

ಬೆಂಗಳೂರು ನಗರ ಪಾಲಿಕೆಯ ವಿಸ್ತೀರ್ಣ, ಗಾತ್ರ ಮತ್ತು ಬೃಹತ್ ಪ್ರಮಾಣದ ನಾಗರಿಕ ಜವಾಬ್ದಾರಿಗಳನ್ನು ಗಮನದಲ್ಲಿಟ್ಟುಕೊಂಡರೆ ಅದಕ್ಕೆ ಒಂದು ಪ್ರತ್ಯೇಕ ವ್ಯವಸ್ಥೆ ಬೇಕಾಗುತ್ತದೆ. ಆದ್ದರಿಂದ, ಬೆಂಗಳೂರು ನಗರ ಪಾಲಿಕೆಗೆ 7ನೇ ಪ್ರಕರಣದ ಮೇರೆಗೆ ಕೌನ್ಸಿಲರುಗಳಾಗಿ ಹತ್ತು ಜನರನ್ನು ನಾಮನಿರ್ದೇಶಿಸುವುದಕ್ಕೆ ಉಪಬಂಧ ಕಲ್ಪಿಸುವುದು ಮತ್ತು ರಾಜ್ಯದಲ್ಲಿನ ಇತರ ನಗರ ಪಾಲಿಕೆಗಳ ಸಂಬಂಧದಲ್ಲಿ ಈಗಿರುವ ಉಪಬಂಧವನ್ನೇ ಉಳಿಸಿಕೊಳ್ಳುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## XXVI

**ತಿದ್ದುಪಡಿ ಮಾಡುವ ಅಧಿನಿಯಮ 2003ರ 8.–** 2003–04ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಲಾದ ಪ್ರಸ್ತಾವಗಳನ್ನು ಜಾರಿಗೆ ತರಲು, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957 ನ್ನು, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ನ್ನು, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 ಮತ್ತು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993 ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## XXVII

**ತಿದ್ದುಪಡಿ ಮಾಡುವ ಅಧಿನಿಯಮ 2003ರ 32.–** ನಗರ ಪಾಲಿಕೆಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14),–

(i) ಪರಿಶೀಲನೆಗಳಿಗೆ ಸಂಬಂಧಪಟ್ಟ ಉಪಬಂಧಗಳನ್ನು ಏಕರೂಪಗೊಳಿಸುವುದಕ್ಕಾಗಿ;

(ii) ತೆರಿಗೆ ವಿಧಿಸುವುದಕ್ಕೆ ಮೊದಲು ಸರ್ಕಾರದ ಮಂಜೂರಾತಿ ಪಡೆಯಬೇಕಾದ ಅಗತ್ಯತೆಯನ್ನು ಬಿಟ್ಟುಬಿಡುವುದಕ್ಕಾಗಿ;

(iii) ಸಾರ್ವಜನಿಕರಿಂದ ಅನೇಕ ಆಕ್ಷೇಪಣೆಗಳು ಬಂದ ಹಿನ್ನೆಲೆಯಲ್ಲಿ ಖಾಲಿ ಭೂಮಿಯ ಮೇಲಿನ ಸ್ವತ್ತು ತೆರಿಗೆ ದರವನ್ನು ಈಗಿರುವ ಕನಿಷ್ಠ ಶೇಕಡಾ 0.3 ಹಾಗೂ ಗರಿಷ್ಠ ಶೇಕಡಾ 0.6 ಕ್ಕಿಂತ ಕಡಿಮೆ ಮಾಡುವುದಕ್ಕಾಗಿ;

(iv) ಸಣ್ಣ ವ್ಯಾಪಾರಿಗಳಿಗೆ ಆಗುತ್ತಿರುವ ತೊಂದರೆಯನ್ನು ನಿವಾರಿಸಲು, ವ್ಯಾಪಾರ ಲೈಸೆನ್ಸ್‌ಗಳ ಚಾಲ್ತಿ ಅವಧಿಯನ್ನು ಒಂದು ವರ್ಷದಿಂದ ಐದು ವರ್ಷಗಳಿಗೆ ಹೆಚ್ಚಿಸುವುದಕ್ಕಾಗಿ;

(v) ಬಾಕಿ ಇರುವ ಸ್ವತ್ತು ತೆರಿಗೆಯನ್ನು ವಿಳಂಬವಾಗಿ ಸಂದಾಯಮಾಡಿದ್ದಕ್ಕೆ ತಿಂಗಳಿಗೆ ಶೇಕಡಾ 2ರ ದರದಲ್ಲಿ ದಂಡ ವಿಧಿಸುವುದಕ್ಕಾಗಿ;

(vi) ತೆರಿಗೆ ಭಾರವನ್ನು ಕಡಿಮೆಮಾಡಲು ನೀರಿನ ಉಪಕರವನ್ನು ವಿಧಿಸುವುದಕ್ಕೆ ಸಂಬಂಧಿಸಿದಂತೆ ಇರುವ ಉಪಬಂಧಗಳನ್ನು ಬಿಟ್ಟುಬಿಡುವುದಕ್ಕಾಗಿ;

(vii) ವಾಣಿಜ್ಯ ಕಟ್ಟಡಗಳ ಮೇಲಿನ ತೆರಿಗೆಯನ್ನು ಸ್ವತ್ತಿನ ಬಂಡವಾಳ ಮೌಲ್ಯದ ಶೇಕಡಾ 0.3 ರಿಂದ ಶೇಕಡಾ 0.5ಕ್ಕೆ, ಶೇಕಡಾ 0.6 ರಿಂದ ಶೇಕಡಾ 1.5ಕ್ಕೆ ಹೆಚ್ಚಿಸುವುದಕ್ಕಾಗಿ;

(viii) 225 ಚದರ ಮೀಟರುಗಳವರೆಗಿನ ಅಳತೆಯ ನಿವೇಶನಗಳಲ್ಲಿ ಕಟ್ಟಿದ ವಾಸದ ಕಟ್ಟಡಗಳ ಸುತ್ತಲಿನ ಗರಿಷ್ಠ 50 ಚದರ ಮೀಟರುಗಳ ಖಾಲಿ ಭೂಮಿಗೆ ಸ್ವತ್ತು ತೆರಿಗೆ ವಿಧಿಸುವುದರಿಂದ ವಿನಾಯಿತಿ ನೀಡುವುದಕ್ಕಾಗಿ;

(ix) ಈಗಾಗಲೇ ಮಾಡಿರುವ ತೆರಿಗೆ ನಿರ್ಧಾರಣೆ, ಮುಂತಾದವುಗಳನ್ನು ಸಿಂಧುಗೊಳಿಸುವುದಕ್ಕಾಗಿ

– ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

– ಇತರೆ ಕೆಲವು ಪ್ರಾಸಂಗಿಕ ಮತ್ತು ಆನುಷಂಗಿಕ ಉಪಬಂಧಗಳನ್ನು ಸಹ ಮಾಡಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಅಧ್ಯಾದೇಶ, 2003ನ್ನು ಪ್ರಖ್ಯಾಪಿಸಲಾಗಿತ್ತು.

ಆದ್ದರಿಂದ ಈ ವಿಧೇಯಕ.

## XXVIII

**ತಿದ್ದುಪಡಿ ಮಾಡುವ ಅಧಿನಿಯಮ 2003ರ 39.**– ನಗರ ಸ್ಥಳೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು ಚುನಾವಣಾ ಪ್ರಚಾರಕ್ಕೆ ಮತ್ತು ಪ್ರಚಾರಕ್ಕೆ ಸಂಬಂಧಪಟ್ಟ ಇತರ ಚಟುವಟಿಕೆಗಳಿಗಾಗಿ ಭಾರಿ ಪ್ರಮಾಣದ ಹಣವನ್ನು ಖರ್ಚು ಮಾಡುತ್ತಿದ್ದು ಅದು ಭ್ರಷ್ಟಾಚಾರ ಎಂದು ಸಾರ್ವಜನಿಕರಿಂದ ಬಂದ ದೂರುಗಳನ್ನು ಪರಿಗಣಿಸಿ, ರಾಜ್ಯ ಚುನಾವಣಾ ಆಯೋಗವು, ಚುನಾವಣಾ ವೆಚ್ಚಗಳ ಲೆಕ್ಕವನ್ನು ಸಲ್ಲಿಸಲು ತಪ್ಪಿದ್ದಕ್ಕಾಗಿ ಸದಸ್ಯತ್ವವನ್ನು ಅನರ್ಹಗೊಳಿಸುವುದಕ್ಕೆ ಅವಕಾಶ ಕಲ್ಪಿಸುವ ಒಂದು ಹೊಸ ಉಪಬಂಧವನ್ನು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ಕ್ಕೆ ಸೇರಿಸಿ ಸೂಕ್ತ ತಿದ್ದುಪಡಿ ಮಾಡಲು ಉದ್ದೇಶಿಸಿದೆ.

ಆದ್ದರಿಂದ ಈ ವಿಧೇಯಕ.

## XXIX

**ತಿದ್ದುಪಡಿ ಮಾಡುವ ಅಧಿನಿಯಮ 2005ರ 5.**– ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ನ್ನು (1964ರ ಕರ್ನಾಟಕ ಅಧಿನಿಯಮ 22) ಮತ್ತು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ನ್ನು,–

(1) 2002–2003, 2003–04 ಮತ್ತು 2004–2005ನೇ ಸಾಲುಗಳಲ್ಲಿ ವಿಧಿಸಿದ ಸ್ವತ್ತು ತೆರಿಗೆಯನ್ನು 2001–2002ನೇ ಸಾಲಿನಲ್ಲಿ ವಿಧಿಸಿದ್ದ ತೆರಿಗೆಯ ಎರಡೂವರೆಯಷ್ಟರಿಂದ ಎರಡರಷ್ಟಕ್ಕೆ ಇಳಿಸುವುದಕ್ಕಾಗಿ;

(2) ಪೌರಸಭೆಗಳ ಮತ್ತು ನಗರ ಪಾಲಿಕೆಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ವರ್ಗದ ಕಟ್ಟಡಗಳ ಸುತ್ತಲಿನ ಖಾಲಿ ಭೂಮಿಗೆ ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡುವುದಕ್ಕಾಗಿ;

(3) ಒಂದು ಲಕ್ಷಕ್ಕೂ ಕಡಿಮೆ ಜನಸಂಖ್ಯೆಯನ್ನುಳ್ಳ ಪೌರಸಭೆಗಳಲ್ಲಿ ಇರುವ ಖಾಲಿ ಭೂಮಿಯ ಮೇಲೆ ಸಂಪೂರ್ಣ ತೆರಿಗೆ ವಿನಾಯಿತಿ ನೀಡುವುದಕ್ಕಾಗಿ;

(4) 2005–2006ನೇ ಸಾಲಿನಿಂದ ಪ್ರಾರಂಭಿಸಿ ಮೂರುವರ್ಷಗಳಿಗೊಮ್ಮೆ ಸ್ವತ್ತು ತೆರಿಗೆಯನ್ನು ಹೆಚ್ಚಿಸುವುದಕ್ಕಾಗಿ ಮತ್ತು ಹಾಗೆ ಹೆಚ್ಚಿಸುವುದಕ್ಕೆ ಮಾರ್ಗದರ್ಶಿ ಸೂತ್ರಗಳನ್ನು ನೀಡುವುದಕ್ಕಾಗಿ;

(5) ಒಂದು ಲಕ್ಷಕ್ಕೂ ಕಡಿಮೆ ಜನಸಂಖ್ಯೆಯನ್ನುಳ್ಳ ಪೌರಸಭೆಗಳಲ್ಲಿ ಇರುವಂಥ ವಾಣಿಜ್ಯ ಕಟ್ಟಡಗಳ ಮೇಲೆ ತೆರಿಗೆಯ ಗರಿಷ್ಠ ಮಿತಿಯನ್ನು ಶೇ. 1.5 ರಿಂದ ಶೇ. 0.9ಕ್ಕೆ ಹಾಗೂ ವಾಸದ ಕಟ್ಟಡಗಳ ಸಂಬಂಧದಲ್ಲಿ ಶೇ.1.0 ಯಿಂದ ಶೇ. 0.6ಕ್ಕೆ ಇಳಿಸುವುದಕ್ಕಾಗಿ

– ಉಪಬಂಧ ಕಲ್ಪಿಸುವುದಕ್ಕಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

(6) ತತ್ಪರಿಣಾಮದ ಇತರ ಕೆಲವು ತಿದ್ದುಪಡಿಗಳನ್ನೂ ಮಾಡಲಾಗಿದೆ.

ಕರ್ನಾಟಕ ಪೌರಸಭೆಗಳ (ತಿದ್ದುಪಡಿ) ಅಧ್ಯಾದೇಶ, 2004 ಕ್ಕೆ (2004ರ ಕರ್ನಾಟಕ ಅಧ್ಯಾದೇಶ 3) ಮತ್ತು ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಅಧ್ಯಾದೇಶ, 2004 ಕ್ಕೆ (2004ರ ಕರ್ನಾಟಕ ಅಧ್ಯಾದೇಶ 2) ಬದಲಾಗಿ ಈ ವಿಧೇಯಕವನ್ನು ಕೆಲವೊಂದು ಮಾರ್ಪಾಡುಗಳೊಡನೆ ತರಲು ಸಹ ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## XXX

**ತಿದ್ದುಪಡಿ ಮಾಡುವ ಅಧಿನಿಯಮ 2007ರ 1.**– ಕೆಲವು ಅನಧಿಕೃತ ನಿರ್ಮಾಣಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ರಮಗೊಳಿಸಲು ಮತ್ತು ಸಕ್ರಮೀಕರಣದ ಇತಿಮಿತಿಗಳನ್ನು ಪರಿಭಾಷಿಸಲು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ನ್ನು ತಿದ್ದುಪಡಿ ಮಾಡುವ ಮೂಲಕ, ಸಾರ್ವಜನಿಕ ಹಿತಾಸಕ್ತಿಯಿಂದ ಈ ಮುಂದಿನಂತೆ ತಿದ್ದುಪಡಿ ಮಾಡುವುದು, ಎಂದರೆ:–

(i) ವರ್ತುಲ ರಸ್ತೆಯ, ಹೆದ್ದಾರಿಗಳ ಪಂಕ್ತಿಕರಣಕ್ಕೆ;

(ii) ಸರ್ಕಾರಕ್ಕೆ, ಸ್ಥಳೀಯ ಪ್ರಾಧಿಕಾರಗಳಿಗೆ ಮತ್ತು ಅಭಿವೃದ್ಧಿ ಪ್ರಾಧಿಕಾರಗಳಿಗೆ ಸೇರಿದ ಭೂಮಿಗಳಿಗೆ ಮತ್ತು ಉದ್ಯಾನವನಗಳಿಗೆ ಹಾಗೂ ಬಯಲು ಜಾಗಗಳಿಗೆ;

(iii) ವಾಹನ ನಿಲುಗಡೆ ಜಾಗ ಎಂಬುದಾಗಿ ಗುರುತಿಸಿದ ತಳ ಅಂತಸ್ಥಿಗೆ

– ಸಂಬಂಧಿಸಿದ ಅಭಿವೃದ್ಧಿಗಳನ್ನು ಹೊರತುಪಡಿಸಿ,–

(1) ನಿಯಮಿಸಲಾದ ಶುಲ್ಕವನ್ನು ಸಂದಾಯ ಮಾಡುವುದಕ್ಕೆ ಒಳಪಟ್ಟು,–

(ಎ) ತಿದ್ದುಪಡಿ ಅಧಿನಿಯಮವನ್ನು ಅಂಗೀಕರಿಸಿದ ದಿನಾಂಕದಂದು ಇದ್ದಂಥ ಎಲ್ಲಾ ಅನಧಿಕೃತ ನಿರ್ಮಾಣಗಳನ್ನು;

(ಬಿ) ಭೂ–ಬಳಕೆಯಲ್ಲಿ ಬದಲಾವಣೆ ಮಾಡಿದ ಎಲ್ಲಾ ಉಲ್ಲಂಘನೆಗಳನ್ನು;

(ಸಿ) ರೆವಿನ್ಯೂ ನಿವೇಶನದಲ್ಲಿ ಕಟ್ಟಿದ ಎಲ್ಲಾ ನಿರ್ಮಾಣಗಳನ್ನು

– ಸಕ್ರಮಗೊಳಿಸಲು,

(2) ಉಲ್ಲಂಘನೆ ಪೈಕಿ ಅನುಮತಿಸಿದ ವಿವಿಧ ಬಗೆಯ ಅಕ್ರಮ ನಿರ್ಮಾಣಗಳಿಗೆ ಶುಲ್ಕವನ್ನು ಗೊತ್ತುಪಡಿಸಲು; ಮತ್ತು

(3) ಇತರೆ ಪ್ರಾಸಂಗಿಕವಾದ ಮತ್ತು ಆನುಷಂಗಿಕವಾದ ವಿಷಯಗಳಿಗೆ ಸಹ ಉಪಬಂಧ ಕಲ್ಪಿಸಲು

– ತಿದ್ದುಪಡಿ ಮಾಡುವುದು ಅವಶ್ಯವೆಂದು ಮತ್ತು ವಿಹಿತವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2004ರ ವಿಧಾನಪರಿಷತ್ ವಿಧೇಯಕ ಸಂಖ್ಯೆ 11)

ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ II ರ ನಮೂದುಗಳು 5 ಮತ್ತು 18 ಮತ್ತು ಪಟ್ಟಿ III ರ ನಮೂದು 20).

**XXXI**

**ತಿದ್ದುಪಡಿ ಮಾಡುವ ಅಧಿನಿಯಮ 2007ರ 14.–** ಬೃಹತ್ ಬೆಂಗಳೂರು ಪೌರ ನಿಕಾಯವನ್ನು ರಚಿಸುವ ದೃಷ್ಟಿಯಿಂದ ಕೌನ್ಸಿಲರುಗಳ ಗರಿಷ್ಠ ಸಂಖ್ಯೆಯನ್ನು ಒಂದು ನೂರರಿಂದ ಒಂದು ನೂರ ಐವತ್ತಕ್ಕೆ ಹೆಚ್ಚಿಸುವ ಸಲುವಾಗಿ ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976 ರ 7ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2006ರ ವಿಧಾನಸಭಾ ವಿಧೇಯಕ ಸಂಖ್ಯೆ 23)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 5)

**XXXII**

**ತಿದ್ದುಪಡಿ ಮಾಡುವ ಅಧಿನಿಯಮ 2007ರ 17.–** ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 9 ಬಿಎಂಎಂ 2003, ದಿನಾಂಕ 8–9–2005 ರಲ್ಲಿ, ಬೆಂಗಳೂರು, ಮೈಸೂರು, ಗುಲ್ಬರ್ಗ ಮತ್ತು ಬೆಳಗಾವಿಗಳಲ್ಲಿ ಪ್ರಾದೇಶಿಕ ಆಯುಕ್ತರ ಹುದ್ದೆಗಳನ್ನು ಮತ್ತು ಅದರೊಂದಿಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

ಸಂಬಂಧಪಟ್ಟ ಅಧಿನಿಯಮಗಳಿಗೆ ಅವಶ್ಯ ತಿದ್ದುಪಡಿಗಳನ್ನು ಮಾಡುವ ಮೂಲಕ ಪ್ರಾದೇಶಿಕ ಆಯುಕ್ತರಿಗೆ ಶಾಸನಬದ್ಧ ಅಧಿಕಾರಗಳನ್ನು ಪ್ರದಾನ ಮಾಡಬೇಕಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನಮಂಡಲವು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಮೇಲ್ಕಂಡ ಉದ್ದೇಶವನ್ನು ಈಡೇರಿಸುವುದಕ್ಕಾಗಿ, ಕರ್ನಾಟಕ ಭೂ ಕಂದಾಯ ಮತ್ತು ಇತರ ಕೆಲವು ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2006ನ್ನು (ಕರ್ನಾಟಕ ಅಧ್ಯಾದೇಶ 2006 ರ 5) ಪ್ರಖ್ಯಾಪಿಸಲಾಯಿತು.

ಆದ್ದರಿಂದ ಈ ವಿಧೇಯಕ.

(2007ರ ವಿಧಾನಸಭಾ ವಿಧೇಯಕ ಸಂಖ್ಯೆ 7)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 5 ಮತ್ತು 18)

**XXXIII**

**ತಿದ್ದುಪಡಿ ಮಾಡುವ ಅಧಿನಿಯಮ 2009ರ 2.–** ದಿನಾಂಕ 16–01–2007ರಂದು ರಾಜ್ಯ ಸರ್ಕಾರವು ಏಳು ನಗರ ಸಭೆಗಳನ್ನು ಮತ್ತು ಒಂದು ಪುರಸಭೆಯನ್ನು ಹಾಗೂ ಕೆಲವು ಹಳ್ಳಿಗಳನ್ನು ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ವಿಲೀನಗೊಳಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ರಚಿಸಿದೆ. ವಿಲೀನದ ಕಾಲದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯು ಸ್ವಯಂ ಸ್ವತ್ತು ತೆರಿಗೆ ನಿರ್ಧರಣೆ ಪದ್ಧತಿ ಪ್ರಕಾರ ವಾರ್ಷಿಕ ಬಾಡಿಗೆ ಮೌಲ್ಯದ ಆಧಾರದ ಮೇಲೆ ಸ್ವತ್ತು ತೆರಿಗೆಯನ್ನು ಸಂಗ್ರಹಿಸುತ್ತಿತ್ತು. ಏಳು ನಗರ ಸಭೆಗಳು ಮತ್ತು ಒಂದು ಪುರಸಭೆಯು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಮೇರೆಗೆ ಬಂಡವಾಳ ಮೌಲ್ಯ ಪದ್ದತಿಯ ಪ್ರಕಾರ ಸ್ವತ್ತು ತೆರಿಗೆಯನ್ನು ಸಂಗ್ರಹಿಸುತ್ತಿದ್ದವು ಹಾಗೂ ಕೆಲವು ಹಳ್ಳಿಗಳಲ್ಲಿ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ ಮೇರೆಗೆ ಸ್ವತ್ತು ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಮೇಲೆ ಹೇಳಿರುವಂತೆ ವಿಲೀನ ಆಗಿರುವ ದೃಷ್ಟಿಯಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಇಡೀ ಪ್ರದೇಶದಲ್ಲಿ ಏಕರೂಪದ ಸ್ವತ್ತು ತೆರಿಗೆ ನೀತಿಯನ್ನು ತರುವುದು ಅವಶ್ಯವೆಂದು ಭಾವಿಸಲಾಗಿದೆ.

ಆದ್ದರಿಂದ ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976 ರಲ್ಲಿ 108ಎ ಹೊಸ ಪ್ರಕರಣವನ್ನು ಸೇರಿಸಿ, ಸ್ವತ್ತು ತೆರಿಗೆಯನ್ನು, ಯುನಿಟ್ ವಿಸ್ತೀರ್ಣ ಮೌಲ್ಯದ ಆಧಾರದ ಮೇಲೆ ಸಂಗ್ರಹಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಅಧ್ಯಾದೇಶ, 2008ನ್ನು (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಪ್ರಖ್ಯಾಪಿಸಿದ್ದಾರೆ.

ಈ ವಿಧೇಯಕವನ್ನು ಆ ಅಧ್ಯಾದೇಶದ ಬದಲಿಗೆ ತರಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2009ರ ವಿಧಾನಸಭಾ ವಿಧೇಯಕ ಸಂಖ್ಯೆ 7)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದುಗಳು 5 ಮತ್ತು 49)

**XXX1V**

**ತಿದ್ದುಪಡಿ ಮಾಡುವ ಅಧಿನಿಯಮ 2009ರ 17.–** ರಾಜ್ಯ ಚುನಾವಣಾ ಆಯೋಗವು ನಗರ ಸ್ಥಳೀಯ ಸಂಸ್ಥೆಗಳಿಗೆ ನಡೆಸುವ ಚುನಾವಣೆಗಳಲ್ಲಿ ವಿದ್ಯುನ್ಮಾನ ಮತಯಂತ್ರಗಳನ್ನು ಬಳಸಲು ತೀರ್ಮಾನಿಸಿದೆ. ವಿದ್ಯುನ್ಮಾನ ಮತಯಂತ್ರಗಳನ್ನು ಬಳಸುವುದರಿಂದ ವೆಚ್ಚವು ಕಡಿಮೆಯಾಗುವುದಲ್ಲದೆ ಮತ ಎಣಿಕೆಯ ಕಾರ್ಯವೂ ಸುಲಭವಾಗುತ್ತದೆ. ರಾಜ್ಯ ಚುನಾವಣಾ ಆಯೋಗವು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ಮತ್ತು ಕರ್ನಾಟಕ ನಗರ

ಪಾಲಿಕೆಗಳ ಅಧಿನಿಯಮ, 1976 ನ್ನು ಆ ಬಗ್ಗೆ ತಿದ್ದುಪಡಿ ಮಾಡುವಂತೆ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ವಿದ್ಯುನ್ಮಾನ ಯಂತ್ರಗಳನ್ನು ಬಳಸುವುದಕ್ಕೆ ಅನುವು ಮಾಡಿಕೊಡುವ ಎಲ್ಲ ಅವಶ್ಯ ಉಪಬಂಧಗಳನ್ನು ಸೇರಿಸುವಂತೆ ರಾಜ್ಯಸರ್ಕಾರವನ್ನು ಕೋರಿಕೊಂಡಿದೆ.

ಆದ್ದರಿಂದ, ರಾಜ್ಯ ಚುನಾವಣಾ ಆಯೋಗವು ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ವಿದ್ಯುನ್ಮಾನ ಮತ ಯಂತ್ರಗಳನ್ನು ಬಳಸಲು ಆಸ್ಪದವಾಗುವಂತೆ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ಮತ್ತು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳು ಅಧೀವೇಶನದಲ್ಲಿ ಇಲ್ಲದಿದ್ದುದರಿಂದ ಕರ್ನಾಟಕ ರಾಜ್ಯಪಾಲರು ಕರ್ನಾಟಕ ಪೌರಸಭೆಗಳ ಕಾನೂನು ಹಾಗೂ ಕೆಲವು ಇತರ ಕಾನೂನಿನ (ತಿದ್ದುಪಡಿ) ಅಧ್ಯಾದೇಶ, 2009ನ್ನು (2009 ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಪ್ರಖ್ಯಾಪಿಸಿದ್ದಾರೆ.

ಈ ವಿಧೇಯಕವನ್ನು ಆ ಅಧ್ಯಾದೇಶದ ಬದಲಿಗೆ ತರಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2009 ರ ವಿಧಾನಸಭಾ ವಿಧೇಯಕ ಸಂಖ್ಯೆ 30, ಕಡತ ಸಂಖ್ಯೆ ಡಿಪಿಎಎಲ್ 25 ಶಾಸನ 2009)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 5)

## XXXV

**ತಿದ್ದುಪಡಿ ಮಾಡುವ ಅಧಿನಿಯಮ 2009ರ 22.–** ಸುಗಮ ಆಡಳಿತದ ದೃಷ್ಟಿಯಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶದಲ್ಲಿ ಸರಾಸರಿ 30,000 ಜನಸಂಖ್ಯೆಯುಳ್ಳ ಸಣ್ಣ ಸಣ್ಣ ಹಾಗೂ ಸಂಘಟಿತ ವಾರ್ಡ್‌ನ್ನು ರಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14),–

(i) ನಗರ ಪಾಲಿಕೆಯ ವಾರ್ಡ್‌ಗಳ ಗರಿಷ್ಠ ಸಂಖ್ಯೆಯನ್ನು 200ಕ್ಕೆ ಹೆಚ್ಚಿಸುವುದಕ್ಕಾಗಿ;

(ii) ನಗರ ನಿವಾಸಿಗಳ ಪೈಕಿಯಿಂದ 10 ಸದಸ್ಯರನ್ನು ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಗೆ ನಾಮನಿರ್ದೇಶಿಸುವುದಕ್ಕೆ ಬದಲಾಗಿ ಪಾಲಿಕೆ ಕೌನ್ಸಿಲ್‌ನ ಒಟ್ಟು ಸದಸ್ಯರ ಶೇಕಡಾ 10ಕ್ಕೆ ಸಮನಾದ ಸಂಖ್ಯೆಯಷ್ಟು ಸದಸ್ಯರನ್ನು ನಾಮನಿರ್ದೇಶಿಸುವುದಕ್ಕಾಗಿ;

(iii) "ಬೆಂಗಳೂರು ನಗರ ಪಾಲಿಕೆ" ಅಥವಾ "ಬೆಂಗಳೂರು ಮಹಾ ನಗರ ಪಾಲಿಕೆ" ಎಂಬ ಪದಗಳು ಬರುವ ಕಡೆಗಳಲೆಲ್ಲಾ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳನ್ನು ಪ್ರತ್ಯಾಯೋಜಿಸುವುದಕ್ಕಾಗಿ

– ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ನಗರ ಪಾಲಿಕೆಗಳ (ತಿದ್ದುಪಡಿ) ಆದ್ಯಾದೇಶ, 2009ನ್ನು (2009ರ ಕರ್ನಾಟಕ ಆಧ್ಯಾದೇಶ ಸಂಖ್ಯೆ 4) ಪ್ರಖ್ಯಾಪಿಸಿದ್ದಾರೆ.

ಈ ವಿಧೇಯಕವನ್ನು ಆ ಆಧ್ಯಾದೇಶದ ಬದಲಿಗೆ ತರಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2009ರ ವಿಧಾನಸಭಾ ವಿಧೇಯಕ ಸಂಖ್ಯೆ 31, ಕಡತ ಸಂಖ್ಯೆ ಡಿಪಿಎಎಲ್ 24 ಶಾಸನ 2009)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 5)

## XXXVI

**ತಿದ್ದುಪಡಿ ಮಾಡುವ ಅಧಿನಿಯಮ 2010ರ 15.–** ಮುಖ್ಯ ಇಂಜಿನಿಯರ್ (ನಿವೃತ್ತ) ಅವರ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯು ಮಂಡಲಿಗೆ ಉಪಯುಕ್ತವಾದ ಅತ್ಯುತ್ತಮ ಪದ್ಧತಿಗಳನ್ನು ಅಳವಡಿಸಿಕೊಳ್ಳುವ ದೃಷ್ಟಿಯಿಂದ ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ವ್ಯವಸ್ಥೆ ಅಧಿನಿಯಮ, 1964ರ ಉಪಬಂಧಗಳನ್ನು ಮತ್ತು ಹಲವು ನಗರಗಳ ಎಂದರೆ, ಚೆನ್ನೈ, ಹೈದರಾಬಾದ್ ಮತ್ತು ದೆಹಲಿ ನಗರಗಳ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಅಧಿನಿಯಮಗಳ ಉಪಬಂಧಗಳನ್ನು ಅವಲೋಕಿಸಿತು ಹಾಗೂ ಕೆಲವು ಶಿಫಾರಸುಗಳನ್ನು ಮಾಡಿತು. ಈ ಶಿಫಾರಸುಗಳನ್ನು ಪರಿಗಣಿಸಿ,–

(ಎ) ಅಧಿನಿಯಮದ ಉಪಬಂಧಗಳನ್ನು ಇಡೀ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶಕ್ಕೆ ವಿಸ್ತರಿಸುವುದಕ್ಕಾಗಿ;

(ಬಿ) ಮಂಡಲಿಯ ಸದಸ್ಯರ ಗರಿಷ್ಠ ಸಂಖ್ಯೆಯನ್ನು ಒಂಬತ್ತಕ್ಕೆ ಹೆಚ್ಚಿಸುವುದಕ್ಕಾಗಿ;

(ಸಿ) ಕುಡಿಯುವುದಕ್ಕಲ್ಲದ ಅಥವಾ ಕುಡಿಯುವ ಉದ್ದೇಶಕ್ಕಾಗಿ ಮಳೆ ನೀರು ಕೊಯ್ಲು ಮತ್ತು ವ್ಯರ್ಥ ನೀರನ್ನು ಶುದ್ಧೀಕರಿಸಿ ಪುನರ್ಬಳಕೆ ಮಾಡುವಂಥ ನೀರು ಸಂರಕ್ಷಣಾ ವಿಧಾನವನ್ನು ಅಳವಡಿಸಿಕೊಳ್ಳಲು ಮಾಲೀಕರನ್ನು ಅಥವಾ ಅಧಿಭೋಗದಾರರನ್ನು ಒತ್ತಾಯಿಸಲು ಮಂಡಲಿಗೆ ಅಧಿಕಾರ ನೀಡುವುದಕ್ಕಾಗಿ;

(ಡಿ) ಈ ಅಧಿನಿಯಮದ ಮೇರೆಗೆ ದಂಡನೀಯವಾದ ವಿವಿಧ ಅಪರಾಧಗಳಿಗೆ ವಿಧಿಸಲಾಗುವ ದಂಡನೆಗಳನ್ನು ಹೆಚ್ಚಿಸುವುದಕ್ಕಾಗಿ;

(ಇ) ಮಂಡಲಿಯ ಉದ್ದೇಶಗಳಿಗಾಗಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ; ಮತ್ತು

(ಎಫ್) ತತ್ಪರಿಣಾಮವಾದ ಕೆಲವು ತಿದ್ದುಪಡಿಗಳನ್ನು ಮಾಡುವುದಕ್ಕಾಗಿ;

– ಉಪಬಂಧ ಕಲ್ಪಿಸಲು ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ವ್ಯವಸ್ಥೆ ಅಧಿನಿಯಮ, 1964ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಅಲ್ಲದೆ,–

(i) ಮಂಡಲಿಯ ಕಟ್ಟಡಗಳ ಮೇಲಿನ ಆಸ್ತಿ ತೆರಿಗೆಯ ವಿನಾಯಿತಿಗೆ ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು; ಮತ್ತು

(ii) ಈ ಅಧಿನಿಯಮದ ಮೇರೆಗೆ ಸಮುಚಿತ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಲು, ಬೆಂಗಳೂರಿಗೆ ಸಂಬಂಧಪಟ್ಟಂತೆ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯ ಸಹಾಯಕ ಆಯುಕ್ತರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಮತ್ತು ಇತರ ನಗರ ಪಾಲಿಕೆಗಳ ಮತ್ತು ಪೌರಸಭೆಗಳ ವ್ಯಾಪ್ತಿಯೊಳಗೆ ಬರುವ ಪ್ರದೇಶಗಳಿಗೆ ಸಂಬಂಧಪಟ್ಟಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ವ್ಯವಸ್ಥೆ ಮಂಡಲಿಯ ಅಧಿಕಾರಿಯನ್ನು ನೇಮಕ ಮಾಡಲು ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ವಿನಿಯಮ) ಅಧಿನಿಯಮ, 1999ನ್ನು

– ತಿದ್ದುಪಡಿ ಮಾಡಲು ಸಹ ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(2009ರ ವಿಧಾನಸಭಾ ವಿಧೇಯಕ ಸಂಖ್ಯೆ 42, ಕಡತ ಸಂಖ್ಯೆ ಡಿಪಿಎಎಲ್ 32 ಶಾಸನ 2009)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 32).

## XXXVII

**ತಿದ್ದುಪಡಿ ಮಾಡುವ ಅಧಿನಿಯಮ 2010ರ 36.–** ವಾರ್ಡ್ ಸಂಖ್ಯೆಯನ್ನು ಎರಡು ನೂರಕ್ಕೆ ಹೆಚ್ಚಿಸಿ ಬೆಂಗಳೂರು ಮಹಾನಗರ ಪಾಲಿಕೆಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಾಗಿ ಪುನರ್ ರಚಿಸಿರುವುದನ್ನು ದೃಷ್ಟಿಯಲ್ಲಿಟ್ಟುಕೊಂಡು, ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರ 11ನೇ ಪ್ರಕರಣವನ್ನು ತಿದ್ದುಪಡಿ ಮಾಡಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸ್ಥಾಯೀ ಸಮಿತಿಗಳ ಸಂಖ್ಯೆಯನ್ನು ಹನ್ನೆರಡಕ್ಕೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2010ರ ವಿಧಾನಸಭಾ ವಿಧೇಯಕ 21 ಕಡತ ಸಂಖ್ಯೆ ಡಿಪಿಎಎಲ್ 26 ಶಾಸನ 2010)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದು 5)

## XXXVIII

**ತಿದ್ದುಪಡಿ ಮಾಡುವ ಅಧಿನಿಯಮ, 2011ರ 3.–** ಜವಾಹರಲಾಲ್ ನೆಹರು ರಾಷ್ಟ್ರೀಯ ನಗರ ನವೀಕರಣ ಮಿಷನ್ನಿನ ಮೇರೆಗೆ, ಮೂರು ಲಕ್ಷ ಮೀರಿದ ಜನಸಂಖ್ಯೆಯನ್ನು ಹೊಂದಿರುವ ನಗರ ಪಾಲಿಕೆಗಳಲ್ಲಿ ಸಮುದಾಯವು ಪಾಲ್ಗೊಳ್ಳುವುದಕ್ಕಾಗಿ ಅವಕಾಶ ಕಲ್ಪಿಸಿರುವ ಕಾನೂನನ್ನು ಅಧಿನಿಯಮಿಸುವುದು ರಾಜ್ಯ ಸರ್ಕಾರವು ಕೈಗೊಳ್ಳಬೇಕಾಗಿರುವ ಆಜ್ಞಾಪಕ ಸುಧಾರಣೆಗಳಲ್ಲಿ ಈ ಸುಧಾರಣೆಯು ಒಂದು. ಇದಕ್ಕೆ ಪೌರಸಭೆ, ವಾರ್ಡ್ ಸಮಿತಿ ಹಾಗೂ ಪ್ರದೇಶ ಸಭಾದ ಮಟ್ಟದಲ್ಲಿ ಆಡಳಿತ ನಡೆಸುವ ಮೂರು ಹಂತಗಳ ಸಿಬ್ಬಂದಿಯ ಅವಶ್ಯಕತೆ ಇದೆ.

ರಾಜ್ಯ ಸರ್ಕಾರವು, ಭಾರತ ಸರ್ಕಾರದೊಂದಿಗೆ ಮಾಡಿಕೊಂಡ ಒಪ್ಪಂದಪತ್ರದಲ್ಲಿ, ಈ ಸುಧಾರಣೆಯನ್ನು ತರಲು ಈಗಾಗಲೇ ಬದ್ಧವಾಗಿದೆ ಮತ್ತು ಆ ಬದ್ಧತೆಯನ್ನು ದೃಢೀಕರಿಸುವ ದಿನಾಂಕ 05–10–2007 ರ ಆದೇಶಗಳನ್ನು ಹೊರಡಿಸಲಾಗಿದೆ.

ಆದ್ದರಿಂದ, ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14),–

(i) ಪ್ರದೇಶ ಸಭಾಗಳು ಹಾಗೂ ವಾರ್ಡ್ ಸಮಿತಿಗಳ ರಚನೆಗಾಗಿ;

(ii) ಪ್ರದೇಶ ಸಭಾ ಹಾಗೂ ವಾರ್ಡ್ ಸಮಿತಿಗಳಿಗೆ ಪ್ರಕಾರ್ಯಗಳನ್ನು ಹಾಗೂ ಕರ್ತವ್ಯಗಳನ್ನು ವಹಿಸುವುದಕ್ಕಾಗಿ; ಹಾಗೂ

(iii) ನಾಗರೀಕರು ಭಾಗವಹಿಸುವಂತೆ ಅದಕ್ಕೆ ಸಾಂಸ್ಥಿಕ ರೂಪ ಕೊಡುವುದಕ್ಕಾಗಿ

– ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976**

**(1977ರ ಕರ್ನಾಟಕ ಅಧಿನಿಯಮ ಸಂಖ್ಯೆ 14)**

(1977ರ ಮೇ ಮೂವತ್ತೊಂದನೇ ದಿನದಂದು ರಾಷ್ಟ್ರಪತಿಯವರ ಅನುಮತಿಯನ್ನು ಪಡೆಯಿತು) (1977ರ ಜೂನ್ ಮೊದಲ ದಿನದಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಯಿತು).

(1978ರ 24, 1979ರ 11, 1979ರ 21, 1980ರ 28, 1981ರ 40, 1982ರ 8, 1983ರ 13, 1984ರ 34, 1986ರ 21, 1986ರ 32, 1987ರ 20, 1990ರ 2, 1990ರ 14, 1991ರ 19, 1991ರ 22, 1991ರ 32, 1994ರ 35, 1995ರ 14, 1995ರ 25, 1998ರ 24, 1998ರ 27, 2001ರ 9, 2001ರ 31, 2003ರ 5, 2003ರ 8, 2003ರ 32 (ಈ ತಿದ್ದುಪಡಿ ಅಧಿನಿಯಮವನ್ನು 2004ರ 17ನೇ ಅಧಿನಿಯಮದ ಮೂಲಕ ಮತ್ತಷ್ಟು ತಿದ್ದುಪಡಿ ಮಾಡಲಾಗಿದೆ) 2003ರ 39, 2005ರ 5, 2007ರ 1, 2007ರ 14, 2007ರ 17, 2009ರ 2, 2009ರ 17, 2009ರ 22, 2010ರ 36 ಮತ್ತು 2011ರ 3ನೇ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ).

**ಕರ್ನಾಟಕ ರಾಜ್ಯದಲ್ಲಿ ನಗರಪಾಲಿಕೆಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಪಟ್ಟ ಕಾನೂನುಗಳನ್ನು ಕ್ರೋಡೀಕರಿಸಲು ಮತ್ತು ತಿದ್ದುಪಡಿ ಮಾಡಲು ಅಧಿನಿಯಮ.**

ಕರ್ನಾಟಕ ರಾಜ್ಯದಲ್ಲಿ ನಗರಪಾಲಿಕೆಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಪಟ್ಟ ಕಾನೂನುಗಳನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಇಪ್ಪತ್ತೆಂಟನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಕೆಳಗಿನಂತೆ ಅಧಿನಿಯಮಿತವಾಗತಕ್ಕದ್ದು.

## ಅಧ್ಯಾಯ – I

### ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976 ಎಂದು ಕರೆಯತಕ್ಕದ್ದು.

2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗುತ್ತದೆ.

3) ಇದು ಬೆಂಗಳೂರು ಮತ್ತು ಹುಬ್ಬಳ್ಳಿ–ಧಾರವಾಡ ನಗರಗಳಲ್ಲಿ ಕೂಡಲೇ ಮತ್ತು ಇತರ ಪ್ರದೇಶಗಳಲ್ಲಿ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1]ದಂದು ಜಾರಿಗೆ ಬರತಕ್ಕದ್ದು ಮತ್ತು ಬೇರೆ ಬೇರೆ ಪ್ರದೇಶಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

1. ಈ ಅಧಿನಿಯಮವು, ಬೆಳಗಾಂ ನಗರ ಮತ್ತು ಮೈಸೂರು ನಗರಗಳಲ್ಲಿ 10.6.1977 ರಂದು ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಠ್ಯವು ಅಧಿನಿಯಮದ ಅಂತ್ಯದಲ್ಲಿದೆ. ಮಂಗಳೂರು ಮತ್ತು ಗುಲ್ಬರ್ಗಾಕ್ಕೆ ಸಂಬಂಧಿಸಿದ ಅಧಿಸೂಚನೆಗಳು ಲಭ್ಯವಾಗಿಲ್ಲ.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

[1][(1) "ಹಿಂದುಳಿದ ವರ್ಗಗಳು" ಎಂದರೆ, ನಗರಪಾಲಿಕೆಯಲ್ಲಿ ಮೇಯರ್ ಮತ್ತು ಉಪ ಮೇಯರ್ ಸ್ಥಾನಗಳ ಮತ್ತು ಪದಗಳ ಮೀಸಲಾತಿ ಉದ್ದೇಶಗಳಿಗಾಗಿ ಸರ್ಕಾರವು ಕಾಲಕಾಲಕ್ಕೆ "ಎ" ಮತ್ತು "ಬಿ" ವರ್ಗಗಳಾಗಿ ವರ್ಗೀಕರಿಸಬಹುದಾದ ಮತ್ತು ಅಧಿಸೂಚಿಸಬಹುದಾದ ನಾಗರಿಕರ ಅಂಥ ವರ್ಗ ಅಥವಾ ವರ್ಗಗಳು;][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಮತ್ತು 1995ರ ಅಧಿನಿಯಮ ಸಂಖ್ಯೆ 25 ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(1ಎ)][1] **"ಕಟ್ಟಡ"** ಎಂಬುದು,–

(ಎ) ಮನೆ, ಹೊರಮನೆ, ಲಾಯ, ಕಕ್ಕಸು, ಶೆಡ್ಡು, ಗುಡಿಸಲು, ಗೋಡೆ, ವರಾಂಡ, ಖಾಯಂ ಆಗಿ ನಿರ್ಮಿಸಿದ ಜಗಲಿ, ಮೇಲು ಪಾಯ, ಬಾಗಿಲ ಮೆಟ್ಟಿಲನ್ನು ಮತ್ತು ಕಲ್ಲು ಇಟ್ಟಿಗೆ, ಮರ, ಮಣ್ಣು, ಲೋಹದಿಂದ ಅಥವಾ ಯಾವುದೇ ಇತರ ಸಾಮಗ್ರಿಯಿಂದ ನಿರ್ಮಿಸಿದಂಥ ಯಾವುದೇ ಇತರ ರಚನೆಯನ್ನು;

(ಬಿ) ಅಡಿಪಾಯಗಳಿಲ್ಲದೆ ನೆಲದಲ್ಲಿ ಸಹಜವಾಗಿ ನಿಂತಿರುವ ಗಾಲಿಗಳ ಮೇಲಿನ ರಚನೆಯನ್ನು;

(ಸಿ) ಹಡಗು, ನೌಕೆ, ದೋಣಿ, ಗುಡಾರವನ್ನು ಮತ್ತು ಮಾನವ ವಾಸಕ್ಕಾಗಿ ಉಪಯೋಗಿಸುವ ಅಥವಾ ಯಾವುದೇ ವಸ್ತು ಅಥವಾ ಸರಕುಗಳನ್ನು ಇಡಲು ಅಥವಾ ದಾಸ್ತಾನು ಮಾಡಲು ಉಪಯೋಗಿಸುವ ಯಾವುದೇ ಇತರ ರಚನೆಯನ್ನು

– ಒಳಗೊಳ್ಳುತ್ತದೆ;

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.

(2) "ಉಪ–ವಿಧಿ"ಎಂದರೆ, ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯು ರಚಿಸಿದ ಉಪ–ವಿಧಿ;

(3) "ಆಕಸ್ಮಿಕ ಖಾಲಿ ಸ್ಥಾನ" ಎಂದರೆ, ಕೌನ್ಸಿಲರ್‌ನ ಪದದಲ್ಲಿ ಅಥವಾ ಯಾವುದೇ ಇತರೆ ಚುನಾಯಿತ ಪದದಲ್ಲಿ ಕಾಲ ಮುಗಿದುಹೋಗುವುದರಿಂದ ಅಲ್ಲದೆ ಅನ್ಯಥಾ ಉಂಟಾದ ಖಾಲಿಸ್ಥಾನ ಮತ್ತು **"ಸಾಂದರ್ಭಿಕ ಚುನಾವಣೆ"** ಎಂದರೆ, ಆಕಸ್ಮಿಕ ಖಾಲಿಸ್ಥಾನವನ್ನು ತುಂಬಲು ನಡೆಸಿದ ಚುನಾವಣೆ;

[1][(4) "ನಗರ" ಎಂದರೆ, ಈ ಅಧಿನಿಯಮದ ಮೇರೆಗೆ ದೊಡ್ಡದಾದ ನಗರ ಪ್ರದೇಶವೆಂಬುದಾಗಿ ನಿರ್ದಿಷ್ಟಪಡಿಸಿದ ಮತ್ತು ಅಂಥ ಪ್ರದೇಶದ ಪರಿಮಿತಿಗಳ ಯಾವುದೇ ವಿಸ್ತರಣೆ, ಕುಗ್ಗಿಸುವಿಕೆ ಅಥವಾ ಬದಲಾವಣೆಗೆ ಒಳಪಟ್ಟು 3ನೇ ಪ್ರಕರಣದ ಮೇರೆಗೆ ನಗರವೆಂದು ಭಾವಿಸಲಾದಂಥ ಯಾವುದೇ ಸ್ಥಳೀಯ ಪ್ರದೇಶ;][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(5) "ಆಯುಕ್ತರು" ಎಂದರೆ, 14ನೇ ಪ್ರಕರಣದ ಮೇರೆಗೆ ನೇಮಕಗೊಂಡ ಆಯುಕ್ತರು ಮತ್ತು 16ನೇ ಪ್ರಕರಣದ ಮೇರೆಗೆ ಆಯುಕ್ತರಾಗಿ ಕಾರ್ಯ ನಿರ್ವಹಿಸಲು ನೇಮಕಗೊಂಡ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(6) "ನಗರಪಾಲಿಕೆ" ಎಂದರೆ, ಈ ಅಧಿನಿಯಮದ ಮೇರೆಗೆ ಸ್ಥಾಪಿತವಾದ ನಗರಪಾಲಿಕೆ;

[1][(7) "ಕೌನ್ಸಿಲರ್" ಎಂದರೆ, 7ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಕೌನ್ಸಿಲರ್;][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(8) "ಅಪಾಯಕಾರಿ ರೋಗ" ಎಂದರೆ,-

(ಎ) ಆಂತ್ರ್ಯಾಕ್ಸ್, ಸೀತಾಳೆ ಸಿಡುಬು, ಕಾಲರ, ಡಿಫ್ತೀರಿಯಾ, ವಿಷಮಶೀತ ಜ್ವರ, ಕುಷ್ಟ, ದಡಾರ, ಪ್ಲೇಗು, ಶ್ವಾಸಕೋಶ ಕ್ಷಯರೋಗ, ರೇಬೀಸ್, ಸಿಡುಬು, ಮತ್ತು

(ಬಿ) ಈ ಅಧಿನಿಯಮದ ಮೇರೆಗೆ ಸರ್ಕಾರವು ಅಧಿಸೂಚಿಸಿದ ಇತರ ಯಾವುದೇ ಕಾಯಿಲೆ;

(9) "ಚರಂಡಿ"ಯು ಮನೆ ಚರಂಡಿ, ಒಳಚರಂಡಿ, ಸುರಂಗ, ಪೈಪು, ಗುಂಡಿ, ಗಟಾರ ಅಥವಾ ಕಾಲುವೆ ಮತ್ತು ಯಾವುದೇ ತೊಟ್ಟಿ, ಫ್ಲಷ್ - ಟ್ಯಾಂಕ್, ಸೆಪ್ಟಿಕ್ ಟ್ಯಾಂಕ್ ಅಥವಾ ಊರಿನ ರೊಚ್ಚು, ಹೊಲಸು ಪದಾರ್ಥ, ಮಲಿನ ನೀರು, ಹೊಲಸು ನೀರು, ಪೋಲಾದ ನೀರು, ಮಳೆನೀರು ಅಥವಾ ಭೂಮಿಯ ಒಳಪದರದ ಮಣ್ಣಿನ ನೀರನ್ನು ಸಾಗಿಸುವ ಅಥವಾ ಶುದ್ಧೀಕರಿಸುವ ಇತರೆ ಸಾಧನ ಮತ್ತು ಯಾವುದೇ ಅಡಿಗಾಲುವೆ, ವಾಯು ಸಂಚಾರ ಕೊಳವೆ ಅಥವಾ ಪೈಪು ಅಥವಾ ಅದಕ್ಕೆ ಕೂಡಿಸಿದ ಇತರ ಉಪಕರಣ ಅಥವಾ ಜೋಡಣೆ ಮತ್ತು ಯಾವುದೇ ವಿಸರ್ಜಕಗಳು, ಸಂಕುಚಿಸಿದ ವಾಯು ಪ್ರಧಾನ ಕೊಳವೆಗಳು, ಊರು ರೊಚ್ಚಿನ ಸೀಲು ಮಾಡಿದ ಪ್ರಧಾನ ಕೊಳವೆಗಳು ಮತ್ತು ಯಾವುದೇ ಸ್ಥಳದಿಂದ ಊರಿನ ರೊಚ್ಚನ್ನು ಅಥವಾ ಹೊಲಸು ಪದಾರ್ಥವನ್ನು ಎತ್ತುವ, ಸಂಗ್ರಹಿಸುವ, ಹೊರಹಾಕುವ ಅಥವಾ ಸಾಗಿಸುವ ವಿಶೇಷ ಯಂತ್ರ ಸಾಮಗ್ರಿಗಳು ಅಥವಾ ಸಲಕರಣೆಗಳನ್ನು ಒಳಗೊಳ್ಳುತ್ತದೆ;

(10) "ಅತ್ಯಾವಶ್ಯಕ ಸೇವೆಗಳು" ಎಂದರೆ, ನಗರಪಾಲಿಕೆಯಿಂದ ಅಥವಾ ಅದರ ಪರವಾಗಿ ಯಾರೇ ಪೌರಸಭಾ ಅಧಿಕಾರಿ, ನೌಕರ ಅಥವಾ ಇತರೆ ವ್ಯಕ್ತಿಯು ಯಾವ ಸೇವೆಗಳಲ್ಲಿ ನಿಯೋಜಿತನಾಗಿದ್ದಾನೋ ಮತ್ತು II ನೇ ಅನುಸೂಚಿಯಲ್ಲಿ ಯಾವ ಸೇವೆಗಳನ್ನು ನಿರ್ದಿಷ್ಟ ಪಡಿಸಲಾಗಿದೆಯೋ ಆ ಸೇವೆಗಳು;

(11) "ಕಾರ್ಖಾನೆ" ಎಂದರೆ 1948ರ ಕಾರ್ಖಾನೆಗಳ ಅಧಿನಿಯಮದಲ್ಲಿ ಪರಿಭಾಷಿಸಿದ ಕಾರ್ಖಾನೆ;

(12) "ಹೊಲಸು" ಎಂಬುದರಲ್ಲಿ ಊರಿನ ರೊಚ್ಚು, ಸಗಣಿ, ಕಸ, ಕಲಗಚ್ಚು, ಕೊಳೆತ ಮತ್ತು ಕೊಳೆತು ನಾರುತ್ತಿರುವ ವಸ್ತುಗಳು ಮತ್ತು ಎಲ್ಲಾ ಹೊಲಸು ಪದಾರ್ಥಗಳು ಒಳಗೊಳ್ಳುತ್ತವೆ;

(13) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(14) "ಗುಡಿಸಲು" ಎಂದರೆ, ಮುಖ್ಯವಾಗಿ ಮರ, ಮಣ್ಣು, ಎಲೆಗಳು, ಹುಲ್ಲು ಅಥವಾ ಮಟ್ಟಿಗಳಿಂದ ಕಟ್ಟಿದ ಯಾವುದೇ ಕಟ್ಟಡ, ಮತ್ತು ಯಾವುದೇ ಗಾತ್ರದ ಯಾವುದೇ ತಾತ್ಕಾಲಿಕ ರಚನೆಯನ್ನು ಅಥವಾ ಯಾವುದೇ ಸಾಮಗ್ರಿಯಿಂದ ಕಟ್ಟಿದ ಯಾವುದೇ ಸಣ್ಣ ಕಟ್ಟಡವನ್ನು ಒಳ್ಳಗೊಳ್ಳುತ್ತದೆ;

(15) "ಭೂಮಿ" ಎಂಬುದು, ಯಾವ ಭೂಮಿಯ ಮೇಲೆ ಕಟ್ಟಡವನ್ನು ಕಟ್ಟಲಾಗುತ್ತಿದೆಯೋ ಅಥವಾ ಕಟ್ಟಲಾಗಿದೆಯೋ ಅಥವಾ ಯಾವುದು ನೀರಿನಿಂದ ಆವೃತವಾಗಿದೆಯೋ ಆ ಭೂಮಿಯನ್ನು, ಭೂಮಿಯಿಂದ ಒದಗಿಬರುವ ಪ್ರಯೋಜನಗಳನ್ನು, ಭೂಮಿಗೆ ಲಗತ್ತಾಗಿರುವ ವಸ್ತುಗಳನ್ನು ಅಥವಾ ಭೂಮಿಗೆ ಲಗತ್ತಾಗಿರುವ ಯಾವುದೇ ವಸ್ತುವಿಗೆ ಖಾಯಂ ಆಗಿ ಅಂಟಿಕೊಂಡಿರುವ ಯಾವುದೇ ವಸ್ತುವನ್ನು ಮತ್ತು ಯಾವುದೇ ಬೀದಿಯ ಮೇಲೆ ಕಾನೂನಿನ ಮೂಲಕ ಸೃಜಿಸಲಾದ ಹಕ್ಕುಗಳನ್ನು ಒಳಗೊಳ್ಳುತ್ತದೆ;

(16) "ಲೇ-ಔಟ್" ಎಂದರೆ, ಒಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳ ನಿಕಾಯದಿಂದ, ಅದು ನಿಗಮಿತವಾಗಿರಲಿ ಅಥವಾ ನಿಗಮಿತವಾಗಿಲ್ಲದಿರಲಿ, ರೂಪಿಸಲಾದ ಲೇ-ಔಟ್;

(17) "ಲೈಸೆನ್ಸು ಪಡೆದ ಕೊಳಾಯಿಗಾರ", "ಲೈಸೆನ್ಸು ಪಡೆದ ಮೋಜಿಣಿದಾರ", "ಲೈಸೆನ್ಸು ಪಡೆದ ವಾಸ್ತುಶಿಲ್ಪಿ", "ಲೈಸೆನ್ಸು ಪಡೆದ ಇಂಜಿನಿಯರ್" ಮತ್ತು "ಲೈಸೆನ್ಸು ಪಡೆದ ರಚನಾ ವಿನ್ಯಾಸಕಾರ" ಎಂದರೆ, ಈ ಅಧಿನಿಯಮದ ಮೇರೆಗೆ ಅನುಕ್ರಮವಾಗಿ ಕೊಳಾಯಿಗಾರ, ಮೋಜಣಿದಾರ, ವಾಸ್ತುಶಿಲ್ಪಿ, ಇಂಜಿನಿಯರ್ ಮತ್ತು ರಚನಾ ವಿನ್ಯಾಸಕಾರನೆಂದು ನಗರಪಾಲಿಕೆಯಿಂದ ಲೈಸೆನ್ಸು ಪಡೆದ ವ್ಯಕ್ತಿ;

(18) "ಸ್ಥಳೀಯ ಪ್ರಾಧಿಕಾರ" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಿದ ನಗರಪಾಲಿಕೆ, ಮುನಿಸಿಪಲ್ ಕೌನ್ಸಿಲ್, [1][ಪಟ್ಟಣ ಪಂಚಾಯತಿ][1] ಅಭಿವೃದ್ಧಿ ಪ್ರಾಧಿಕಾರ, ನಗರ ಮೇಲ್ವಾಟು ಮಂಡಲಿ, ಪಟ್ಟಣ ಮೇಲ್ವಾಟು ಮಂಡಲಿ, [1][ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯಿತಿ][1];

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(19) "ಮಾರುಕಟ್ಟೆ" ಎಂಬುದು ಜಾನುವಾರು, ಜಾನುವಾರು ಆಹಾರ, ಮಾಂಸ, ಮೀನು, ಹಣ್ಣು, ತರಕಾರಿಗಳು, ಹೂಗಳು, ಮನುಷ್ಯನ ಆಹಾರಕ್ಕಾಗಿ ಉದ್ದೇಶಿಸಿದ ಪ್ರಾಣಿಗಳು ಅಥವಾ ಯಾವುದೇ ಬಗೆಯ ಮನುಷ್ಯನ ಆಹಾರದ ಯಾವುದೇ ಇತರ ವಸ್ತುಗಳನ್ನು ಮಾರಾಟ ಮಾಡುವುದಕ್ಕಾಗಿ ಅಥವಾ ಮಾರಾಟ ಮಾಡಲು ಪ್ರದರ್ಶಿಸುವ ಉದ್ದೇಶಕ್ಕಾಗಿ ಕೊಳ್ಳುವವರು ಮತ್ತು ಮಾರುವವರು ಒಟ್ಟಿಗೆ ಸೇರಲು ಯಾವುದೇ ಸಾಮಾನ್ಯ ಕಟ್ಟುಪಾಡುಗಳು ಇಲ್ಲದಿರಬಹುದಾಗಿದ್ದರೂ ಮತ್ತು ಸ್ಥಳದ ಒಡೆಯನು ಅಥವಾ ಇತರ ಯಾರೇ ವ್ಯಕ್ತಿಯು ಮಾರುಕಟ್ಟೆಗೆ ಮೇಲಿಂದ ಮೇಲೆ ಬರುವ ವ್ಯಕ್ತಿಗಳ ಮೇಲೆ ಅಥವಾ

ಅವರ ವ್ಯವಹಾರದ ಮೇಲೆ ಯಾವುದೇ ನಿಯಂತ್ರಣವನ್ನು ಚಲಾಯಿಸುತ್ತಿರಲಿ ಅಥವಾ ಚಲಾಯಿಸದಿರಲಿ ಅಂಥ ಸ್ಥಳದ ಒಡೆಯನ ಸಮ್ಮತಿಯಿಂದ ಅಥವಾ ಸಮ್ಮತಿ ಇಲ್ಲದೆ ವ್ಯಕ್ತಿಗಳು ಸೇರುವ ಯಾವುದೇ ಸ್ಥಳವನ್ನು ಒಳಗೊಳ್ಳುತ್ತದೆ;

(20) "ಪೌರ ಪ್ರಾಧಿಕಾರ" ಎಂದರೆ, ಈ ಅಧಿನಿಯಮದ ಮೇರೆಗೆ ಸ್ಥಾಪಿತವಾದ ಪೌರ ಪ್ರಾಧಿಕಾರ;

(21) "ಪೌರ ನೀರು ಕಾಮಗಾರಿಗಳು" ಎಂದರೆ, ನಗರಪಾಲಿಕೆಗೆ ಸೇರಿದ ಅಥವಾ ಅದರಲ್ಲಿ ನಿಹಿತವಾಗಿರುವ ನೀರು ಕಾಮಗಾರಿಗಳು;

(22) "ಉಪದ್ರವ" ಎಂಬುದು ಕ್ಷತಿ, ಅಪಾಯ, ಕಿರುಕುಳವನ್ನು ಅಥವಾ ದೃಷ್ಟಿಶಕ್ತಿ, ಘ್ರಾಣಶಕ್ತಿ ಅಥವಾ ಶ್ರವಣ ಶಕ್ತಿಗೆ ಕಿರಿಕಿರಿಯನ್ನು ಅಥವಾ ವಿಶ್ರಾಂತಿಗೆ ಅಥವಾ ನಿದ್ರೆಗೆ ತೊಂದರೆಯನ್ನು ಉಂಟುಮಾಡುವ ಅಥವಾ ಉಂಟುಮಾಡುವ ಸಂಭವವಿರುವ ಅಥವಾ ಪ್ರಾಣಕ್ಕೆ ಅಪಾಯಕಾರಿಯಾದ ಅಥವಾ ಅಪಾಯಕಾರಿ ಯಾಗಬಹುದಾದ ಅಥವಾ ಆರೋಗ್ಯಕ್ಕೆ ಅಥವಾ ಸ್ವತ್ತಿಗೆ ಹಾನಿಕಾರಕವಾದ ಯಾವುದೇ ಕಾರ್ಯ, ಲೋಪ, ಸ್ಥಳ ಅಥವಾ ವಸ್ತುವನ್ನು ಒಳಗೊಳ್ಳುತ್ತದೆ;

(23) "ಅಧಿಭೋಗದಾರ" ಎಂಬುದು ಯಾವ ಭೂಮಿಗೆ ಅಥವಾ ಕಟ್ಟಡಕ್ಕೆ ಅಥವಾ ಅದರ ಭಾಗಕ್ಕೆ ಸಂಬಂಧಿಸಿದಂತೆ ಈ ಪದವನ್ನು ಬಳಸಲಾಗಿದೆಯೋ ಆ ಭೂಮಿಯ ಅಥವಾ ಕಟ್ಟಡದ ಅಥವಾ ಅದರ ಭಾಗದ ಬಾಡಿಗೆಯನ್ನು ಅಥವಾ ಅದರ ಯಾವುದೇ ಭಾಗವನ್ನು ಅಥವಾ ಅಂಥ [1][ಖಾಲಿ ಭೂಮಿಯ ಅಥವಾ ಕಟ್ಟಡದ][1] ಅಥವಾ ಅದರ ಭಾಗದ ಅಧಿಭೋಗದಿಂದಾಗಿ ಉಂಟಾಗುವ ಹಾನಿಗಳಿಗೆ ಪರಿಹಾರವನ್ನು ಒಡೆಯನಿಗೆ ತತ್ಕಾಲದಲ್ಲಿ ಸಂದಾಯ ಮಾಡುತ್ತಿರುವ ಅಥವಾ ಸಂದಾಯ ಮಾಡಲು ಹೊಣೆಗಾರನಾಗಿರುವ ಯಾರೇ ವ್ಯಕ್ತಿಯನ್ನು ಮತ್ತು ಬಾಡಿಗೆ ರಹಿತ ಬಾಡಿಗೆದಾರನನ್ನು ಸಹ ಒಳಗೊಳ್ಳುತ್ತದೆ;

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(24) xxx ......][1]

1. 1979 ರ ಅಧಿನಿಯಮ ಸಂಖ್ಯೆ 21 ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(25) "ಹೊಲಸು ಪದಾರ್ಥ" ಎಂಬುದು ಪ್ರಾಣಿಗಳ ಶವಗಳು, ಸಗಣಿ, ಕಸ ಮತ್ತು ಊರಿನ ರೊಚ್ಚನ್ನು ಹೊರತುಪಡಿಸಿ ಕೊಳೆತ ಅಥವಾ ಕೊಳೆತು ನಾರುತ್ತಿರುವ ವಸ್ತುಗಳನ್ನು ಒಳಗೊಳ್ಳುತ್ತದೆ;

(26) "ಮಾಲೀಕ" ಎಂಬುದು ಯಾವ ಸ್ವತ್ತಿಗೆ ಸಂಬಂಧಿಸಿದಂತೆ ಈ ಪದವನ್ನು ಬಳಸಲಾಗಿದೆಯೋ, ಆ ಸ್ವತ್ತಿನ ಬಾಡಿಗೆಯನ್ನು ಅಥವಾ ಲಾಭಗಳನ್ನು ತನ್ನ ಸ್ವಂತ ಜವಾಬ್ದಾರಿಯ ಮೇಲಾಗಲಿ ಅಥವಾ ಬೇರೊಬ್ಬ ವ್ಯಕ್ತಿಯ ಪರವಾಗಿ ಅಥವಾ ಯಾವುದೇ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ಏಜೆಂಟ್, ನ್ಯಾಸಧಾರಿ, ಪಾಲಕ, ವ್ಯವಸ್ಥಾಪಕ ಅಥವಾ ರಿಸೀವರ್ ಆಗಿಯೇ ಆಗಲಿ, ತತ್ಕಾಲದಲ್ಲಿ ಸ್ವೀಕರಿಸುತ್ತಿರುವ ಅಥವಾ ಸ್ವೀಕರಿಸಲು ಹಕ್ಕುಳ್ಳ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

[1][(26ಎ) "ಜನಸಂಖ್ಯೆ" ಎಂದರೆ, ಯಾವ ಕೊನೆಯ ಹಿಂದಿನ ಜನಗಣತಿಯ ಸುಸಂಗತ ಅಂಕಿಗಳನ್ನು ಪ್ರಕಟಿಸಲಾಗಿದೆಯೋ ಆ ಜನಗಣತಿಯಲ್ಲಿ ಖಚಿತಪಡಿಸಿಕೊಂಡ ಜನಸಂಖ್ಯೆ;][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(27) "ಪೌರ-ಕಾರ್ಮಿಕ" ಎಂದರೆ, ಹೊಲಸನ್ನು ಸಂಗ್ರಹಿಸುವ ಅಥವಾ ಸಾಗಿಸುವ, ಚರಂಡಿಗಳನ್ನು ಅಥವಾ ಕಸಾಯಿಖಾನೆಗಳನ್ನು ಸ್ವಚ್ಛಗೊಳಿಸುವ ಅಥವಾ ಮಲವನ್ನು ಹೊರತುಪಡಿಸಿ ಹೊಲಸನ್ನು ಸಾಗಿಸುವುದಕ್ಕಾಗಿ ಬಳಸುವ ಗಾಡಿಗಳನ್ನು ನಡೆಸುವ ಕೆಲಸಕ್ಕೆ ನಿಯೋಜಿತನಾಗಿರುವ ವ್ಯಕ್ತಿ;

(28) "ಆವರಣ" ಎಂಬುದು ತೆರೆದಿರುವುದೇ ಆಗಲಿ ಅಥವಾ ಆವೃತವಾಗಿರುವುದೇ ಆಗಲಿ, ಕಟ್ಟಿರುವುದೇ ಆಗಲಿ ಅಥವಾ ಕಟ್ಟಿಲ್ಲದಿರುವುದೇ ಆಗಲಿ, ಸಾರ್ವಜನಿಕವಾದುದೇ ಆಗಲಿ ಅಥವಾ ಖಾಸಗಿಯದೇ ಆಗಲಿ ಯಾವುದೇ ಅನುಭೋಗಕ್ಕಾಗಿ ಇರುವ ನಿವಾಸಗಳು, ಕಟ್ಟಡಗಳು ಮತ್ತು ಭೂಮಿಗಳನ್ನು ಒಳಗೊಳ್ಳುತ್ತದೆ;

(29) "ನಿಯಮಿಸಿದ" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(30) "ಖಾಸಗಿ ಬೀದಿ" ಎಂಬುದು "ಸಾರ್ವಜನಿಕ ಬೀದಿ"ಯಲ್ಲದ ಯಾವುದೇ ಬೀದಿ, ರಸ್ತೆ ಚೌಕ, ತುಂಡು ಬೀದಿ, ಓಣಿ, ಮಾರ್ಗ ಅಥವಾ ಸವಾರಿ ದಾರಿ ಆದರೆ, ಅಂಥ ಆವರಣಕ್ಕೆ ಪ್ರವೇಶಿಸಲು ಅಥವಾ ಅದನ್ನು ಅನುಕೂಲಕರವಾಗಿ ಬಳಸಿಕೊಳ್ಳಲು ತನ್ನ ಸ್ವಂತ ಭೂಮಿಯ ಮೇಲೆ ಆವರಣದ ಮಾಲೀಕನು ನಿರ್ಮಿಸಿದ ದಾರಿಯನ್ನು ಒಳಗೊಳ್ಳುವುದಿಲ್ಲ;

(31) "ಸಾರ್ವಜನಿಕ ಬೀದಿ" ಎಂದರೆ, ರಾಜಮಾರ್ಗವಾಗಿರಲಿ ಅಥವಾ ಆಗಿಲ್ಲದಿರಲಿ ಸಾರ್ವಜನಿಕರು ದಾರಿಯ ಹಕ್ಕನ್ನು ಹೊಂದಿರುವ ಯಾವುದೇ ಬೀದಿ, ರಸ್ತೆ ಚೌಕ, ತುಂಡು ಬೀದಿ, ಓಣಿ, ಮಾರ್ಗ ಅಥವಾ ಸವಾರಿ ದಾರಿ ಮತ್ತು ಅದು,-

(ಎ) ಯಾವುದೇ ಸಾರ್ವಜನಿಕ ಸೇತುವೆಯ ಮೇಲಿನ ಸಂಚಾರ ಮಾರ್ಗವನ್ನು ಅಥವಾ ಒಡ್ಡುದಾರಿಯನ್ನು;

(ಬಿ) ಯಾವುದೇ ಅಂಥ ಬೀದಿ, ಸಾರ್ವಜನಿಕ ಸೇತುವೆಗೆ ಅಥವಾ ಒಡ್ಡುದಾರಿಗೆ ಲಗತ್ತಾಗಿರುವ ಕಾಲುದಾರಿಯನ್ನು; ಮತ್ತು

(ಸಿ) ಯಾವುದೇ ಅಂಥ ಬೀದಿ, ಸಾರ್ವಜನಿಕ ಸೇತುವೆ ಅಥವಾ ಒಡ್ಡುದಾರಿಗೆ ಲಗತ್ತಾಗಿರುವ ಚರಂಡಿಗಳು ಮತ್ತು ಹೊಂದಿಕೊಂಡಿರುವ ಸ್ವತ್ತು ಖಾಸಗಿ ಸ್ವತ್ತಾಗಿರಲಿ ಅಥವಾ ಸರ್ಕಾರಕ್ಕೆ ಅಥವಾ ನಗರಪಾಲಿಕೆಗೆ ಸೇರಿದ ಸ್ವತ್ತಾಗಿರಲಿ, ಅದರ ಎಲ್ಲೆಗಳವರೆಗೆ ಸಂಚಾರ ಮಾರ್ಗದ ಎರಡೂ ಬದಿಗಳಲ್ಲಿ ಇರುವ, ಯಾವುದೇ ನೆಲಗಟ್ಟಿನ ಕಾಲುದಾರಿ, ವರಾಂಡ ಅಥವಾ ಇತರ ರಚನೆಯಿಂದ ಆವೃತವಾಗಿರುವ ಅಥವಾ ಆವೃತವಾಗಿಲ್ಲದಿರುವ ಭೂಮಿಯನ್ನು

- ಒಳಗೊಳ್ಳುತ್ತದೆ;

[1][(32) xxx][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(33) "ವಿನಿಯಮ" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ವಿನಿಯಮ;

(34) "ಕಸಕಡ್ಡಿ" ಎಂಬುದು ಧೂಳು, ಬೂದಿ, ಒಡೆದ ಇಟ್ಟಿಗೆಗಳು, ಗಾರೆ, ಒಡೆದ ಗಾಜು, ತೋಟದ ಅಥವಾ ಕೊಟ್ಟಿಗೆಯ ಕಸ ಮತ್ತು ಹೊಲಸು ಪದಾರ್ಥ ಅಥವಾ ಊರಿನ ರೊಚ್ಚು ಅಲ್ಲದೆ ಯಾವುದೇ ಬಗೆಯ ಕಸ ಕಡ್ಡಿಯನ್ನು ಒಳಗೊಳ್ಳುತ್ತದೆ;

(35) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಅನುಬಂಧಿಸಿರುವ ಅನುಸೂಚಿ;

(36) "ಅನುಸೂಚಿತ ಜಾತಿಗಳು" ಎಂಬುದಕ್ಕೆ ಭಾರತದ ಸಂವಿಧಾನದಲ್ಲಿ ಇರುವ ಅರ್ಥವೇ ಇರತಕ್ಕದ್ದು;

(37) "ಅನುಸೂಚಿತ ಬುಡಕಟ್ಟುಗಳು" ಎಂಬುದಕ್ಕೆ ಭಾರತದ ಸಂವಿಧಾನದಲ್ಲಿ ಇರುವ ಅರ್ಥವೇ ಇರತಕ್ಕದ್ದು;

(38) "ಊರಿನರೊಚ್ಚು" ಎಂದರೆ, ಮಲ ಮತ್ತು ಶೌಚಾಲಯಗಳ, ಮೂತ್ರಾಲಯಗಳ, ರೊಚ್ಚುಗುಂಡಿಗಳ ಅಥವಾ ಚರಂಡಿಗಳ ಇತರ ಗಲೀಜು ಮತ್ತು ಸಿಂಕ್‌ಗಳು, ಸ್ನಾನದ ಮನೆ, ಲಾಯ, ದನದ ಕೊಟ್ಟಿಗೆಗಳು ಮತ್ತು ಅಂಥ ಇತರೆ ಸ್ಥಳಗಳಿಂದ ಹರಿದು ಬರುವ ಕೊಳೆ ನೀರು ಮತ್ತು ಇದರಲ್ಲಿ ಉದ್ಯಮಗಳ ಕೊಳಚೆ ನೀರು ಮತ್ತು ಎಲ್ಲ ಬಗೆಯ ಕಾರ್ಖಾನೆಗಳಿಂದ ವಿಸರ್ಜಿಸಲ್ಪಡುವ ಕಶ್ಮಲಗಳು ಒಳಗೊಳ್ಳುತ್ತವೆ;

(39) "ಒಳಚರಂಡಿ" ಎಂದರೆ, ಊರಿನ ರೊಚ್ಚು, ಹೊಲಸು ಪದಾರ್ಥ, ಮಲಿನಗೊಂಡ ನೀರು, ಪೋಲಾದ ನೀರು ಅಥವಾ ಭೂ ಒಳ ಪದರದ ಮಣ್ಣಿನ ನೀರನ್ನು ಹರಿಸುವುದಕ್ಕಾಗಿ ಇರುವ ಮುಚ್ಚಿದ ನಾಲೆ;

[1][(39ಎ) "ರಾಜ್ಯ ಚುನಾವಣಾ ಆಯೋಗ" ಎಂದರೆ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ 308ನೇ ಪ್ರಕರಣದ ಮೇರೆಗೆ ರಚಿಸಲಾದ ರಾಜ್ಯ ಚುನಾವಣಾ ಆಯೋಗ;][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(40) "ಬೀದಿಯ ಪಂಕ್ತೀಕರಣ" ಎಂದರೆ, ಬೀದಿಯಲ್ಲಿ ಒಳಗೊಂಡಿರುವ ಮತ್ತು ಅದರ ಭಾಗವಾಗಿರುವ ಭೂಮಿಯನ್ನು ಪಕ್ಕದ ಭೂಮಿಯಿಂದ ವಿಭಾಗಿಸುವ ರೇಖೆ;

(41) "ತೆರಿಗೆ" ಎಂಬುದು [1][XXX][1] ದಾರಿ ಸುಂಕ, ದರ, ಉಪಕರ, ಫೀಜು ಅಥವಾ ಈ ಅಧಿನಿಯಮದ ಮೇರೆಗೆ ವಿಧಿಸಬಹುದಾದ ಇತರ ಗಡಿ ತೆರಿಗೆಯನ್ನು ಒಳಗೊಳ್ಳುತ್ತದೆ;

1. 1979ರ ಅಧಿನಿಯಮ ಸಂಖ್ಯೆ 21 ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(41ಎ) "ತೆರಿಗೆಗೆ ಗುರಿಯಾಗುವ ಆಸ್ತಿ ಬಂಡವಾಳ ಮೌಲ್ಯ" ಎಂದರೆ, ಸ್ವತ್ತು ತೆರಿಗೆ ನಿರ್ಧಾರಣೆಯ ಉದ್ದೇಶಕ್ಕಾಗಿ ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ನಿಗದಿ ಮಾಡಿದ, [2][ಯಾವುದೇ ಕಟ್ಟಡವು ಆವರಿಸಿಕೊಂಡಿರುವ ಯಾವುದೇ ಭೂಮಿಯೂ ಸೇರಿದಂತೆ ಆ ಕಟ್ಟಡದ ಅಥವಾ ಯಾವುದೇ ಖಾಲಿ ಭೂಮಿಯ ಅಥವಾ ಅವೆರಡರ ಮೌಲ್ಯ;][2]][1]

1. 2001ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2003ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(42) "ಉದ್ಯಮಗಳ ಕೊಳಚೆ ನೀರು" ಎಂದರೆ, ಉದ್ಯಮದ ಆವರಣದಲ್ಲಿ ಯಾವುದೇ ಉದ್ಯಮ ಅಥವಾ ಕೈಗಾರಿಕೆ ನಡೆಯುತ್ತಿರುವಾಗ ಸಂಪೂರ್ಣವಾಗಿ ಅಥವಾ ಭಾಗಶಃ ಉತ್ಪತ್ತಿಯಾದ, ತೇಲಾಡುತ್ತಿರು ವಸ್ತುವಿನ ಕಣಗಳಿಂದ ಕೂಡಿದ ಅಥವಾ ಕೂಡಿರದ ಯಾವುದೇ ದ್ರವ ಮತ್ತು ಯಾವುದೇ ಉದ್ಯಮದ ಆವರಣಕ್ಕೆ ಸಂಬಂಧಪಟ್ಟಂತೆ, ಆ ಆವರಣದಲ್ಲಿ ಯಾವುದೇ ಉದ್ಯಮ ಅಥವಾ ಕೈಗಾರಿಕೆ ನಡೆಯುತ್ತಿರುವಾಗ ಹಾಗೆ ಉತ್ಪತ್ತಿಯಾದ ಮೇಲೆ ಹೇಳಿದಂಥ ಯಾವುದೇ ದ್ರವ, ಆದರೆ ಅದರಲ್ಲಿ ಊರಿನ ರೊಚ್ಚು ಒಳಗೊಳ್ಳುವುದಿಲ್ಲ;

(43) "ಉದ್ಯಮದ ಆವರಣ" ಎಂದರೆ, ಯಾವುದೇ ಉದ್ಯಮವನ್ನು ಅಥವಾ ಕೈಗಾರಿಕೆಯನ್ನು ನಡೆಸುವುದಕ್ಕಾಗಿ ಬಳಸಿದ ಅಥವಾ ಬಳಸಲು ಉದ್ದೇಶಿಸಿದ ಯಾವುದೇ ಆವರಣ;

(44)"ಉದ್ಯಮ ತ್ಯಾಜ್ಯ ವಸ್ತು" ಎಂದರೆ, ಯಾವುದೇ ಉದ್ಯಮದ ಅಥವಾ ಕೈಗಾರಿಕೆಯ ತ್ಯಾಜ್ಯ ವಸ್ತು;

[1][(44ಎ) "ಖಾಲಿ ಭೂಮಿ" ಎಂದರೆ, ಕಟ್ಟಡವನ್ನು ಕಟ್ಟಿರದ ಭೂಮಿ [2][ಮತ್ತು ಕಟ್ಟಡಕ್ಕೆ ಸೇರಿರುವ ಭೂಮಿಯನ್ನು ಒಳಗೊಳ್ಳುವುದಿಲ್ಲ;][2]][1]

1. 2003ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2005 ರ ಅಧಿನಿಯಮ ಸಂಖ್ಯೆ 5ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(45) ನಗರಪಾಲಿಕೆಯ ಕೌನ್ಸಿಲರುಗಳಿಗೆ ಸಂಬಂಧಿಸಿದಂತೆ ಬಳಸಿದಾಗ "ಒಟ್ಟು ಸಂಖ್ಯೆ" ಎಂದರೆ ಆ ಕಾಲದಲ್ಲಿ ಪದಧಾರಣ ಮಾಡಿರುವ ಕೌನ್ಸಿಲರುಗಳ ಒಟ್ಟು ಸಂಖ್ಯೆ.

## ಅಧ್ಯಾಯ – II

## ನಗರಪಾಲಿಕೆಯ ಸ್ಥಾಪನೆ

**3. ನಗರಪಾಲಿಕೆಯ [1][ದೊಡ್ಡದಾದ ನಗರ ಪ್ರದೇಶವನ್ನು ನಿರ್ದಿಷ್ಟಪಡಿಸುವುದು ಮತ್ತು ಸ್ಥಾಪನೆ][1] ಇತ್ಯಾದಿ.–** [1][(1) ರಾಜ್ಯಪಾಲರು,–

(ಎ) ಯಾವುದೇ ಪ್ರದೇಶದ ಜನಸಂಖ್ಯೆಯನ್ನು;

(ಬಿ) ಅಂಥ ಪ್ರದೇಶದ ಜನ ಸಾಂದ್ರತೆಯನ್ನು;

(ಸಿ) ಅಂಥ ಪ್ರದೇಶದ ಸ್ಥಳೀಯ ಆಡಳಿತಕ್ಕೆ ಉತ್ಪತ್ತಿಯಾಗುವ ಆದಾಯವನ್ನು;

(ಡಿ) ಅಂಥ ಪ್ರದೇಶದಲ್ಲಿನ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವ ಉದ್ಯೋಗಿಗಳ ಶೇಕಡಾವಾರನ್ನು;

(ಇ) ಅಂಥ ಪ್ರದೇಶದ ಆರ್ಥಿಕ ಪ್ರಾಮುಖ್ಯತೆಯನ್ನು; ಮತ್ತು

(ಎಫ್) ನಿಯಮಿಸಬಹುದಾದ ಅಂಥ ಇತರ ಅಂಶಗಳನ್ನು

– ಗಮನದಲ್ಲಿರಿಸಿಕೊಂಡು ಅಂಥ ಪ್ರದೇಶವನ್ನು ದೊಡ್ಡದಾದ ನಗರ ಪ್ರದೇಶವೆಂಬುದಾಗಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದು:

ಪರಂತು, ಅಂಥ ಯಾವುದೇ ಪ್ರದೇಶವನ್ನು,–

(ಎ) ಅಂಥ ಪ್ರದೇಶವು ಮೂರು ಲಕ್ಷಕ್ಕಿಂತ ಕಡಿಮೆ ಇಲ್ಲದ ಜನಸಂಖ್ಯೆಯನ್ನೊಳಗೊಂಡಿದ್ದ ಹೊರತು;

(ಬಿ) ಅಂಥ ಪ್ರದೇಶದಲ್ಲಿನ ಜನಸಾಂದ್ರತೆಯು ಒಂದು ಚದರ ಕಿಲೋಮೀಟರ್ ವಿಸ್ತೀರ್ಣದಲ್ಲಿ ಮೂರು ಸಾವಿರ ನಿವಾಸಿಗಳಿಗಿಂತ ಕಡಿಮೆ ಇರದ ಹೊರತು;

(ಸಿ) ಕೊನೆಯ ಹಿಂದಿನ ಜನಗಣತಿಯ ವರ್ಷದಲ್ಲಿ ಸ್ಥಳೀಯ ಆಡಳಿತಕ್ಕೆ ಅಂಥ ಪ್ರದೇಶದಿಂದ ಉತ್ಪತ್ತಿಯಾದ ಆದಾಯವು, ವಾರ್ಷಿಕ ಆರು ಕೋಟಿ ರೂಪಾಯಿಗಳಿಗಿಂತ ಕಡಿಮೆ ಇರದಷ್ಟು ಅಥವಾ ತಲಾವಾರು ವಾರ್ಷಿಕ ಆದಾಯ ಎರಡುನೂರು ರೂಪಾಯಿಗಳ ದರದಲ್ಲಿ ಲೆಕ್ಕ ಹಾಕಿದ ಮೊಬಲಗು –ಇವೆರಡರಲ್ಲಿ ಯಾವುದು ಅಧಿಕವೋ ಅಷ್ಟು ಇದ್ದ ಹೊರತು;

(ಡಿ) ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವ ಉದ್ಯೋಗಿಗಳ ಶೇಕಡಾ ಪ್ರಮಾಣವು ಒಟ್ಟು ಉದ್ಯೋಗಿಗಳಲ್ಲಿ ಶೇಕಡ ಐವತ್ತಕ್ಕಿಂತ ಕಡಿಮೆಯಾಗಿರದ ಹೊರತು

– ಅದನ್ನು ಒಂದು ದೊಡ್ಡ ನಗರ ಪ್ರದೇಶವೆಂಬುದಾಗಿ ನಿರ್ದಿಷ್ಟಪಡಿಸತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ಯಾವುದೇ ಅಧಿಸೂಚನೆಯನ್ನು, ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರ, ಯಾವುದಾದರೂ ಇದ್ದರೆ, ಅದರೊಂದಿಗೆ ಸಮಾಲೋಚಿಸಿದ ಹೊರತು ಹೊರಡಿಸತಕ್ಕದ್ದಲ್ಲ.

(1ಎ) (1)ನೇ ಉಪ–ಪ್ರಕರಣದ ಮೇರೆಗೆ ದೊಡ್ಡದಾದ ನಗರ ಪ್ರದೇಶವೆಂದು ನಿರ್ದಿಷ್ಟಪಡಿಸಿದ ಯಾವುದೇ ಪ್ರದೇಶವನ್ನು ನಗರವೆಂಬುದಾಗಿ ಭಾವಿಸತಕ್ಕದ್ದು ಮತ್ತು ಸದರಿ ನಗರಕ್ಕೆ ಒಂದು ನಗರಪಾಲಿಕೆಯನ್ನು ಸ್ಥಾಪಿಸತಕ್ಕದ್ದು.

(1ಬಿ) ಎರಡು ಅಥವಾ ಹೆಚ್ಚು ಸ್ಥಳೀಯ ಪ್ರಾಧಿಕಾರಗಳನ್ನು ಹೊಂದಿರುವ ಸ್ಥಳೀಯ ಪ್ರದೇಶವು ನಗರವಾಗಿ ರಚನೆ ಆಗಿರುವಲ್ಲಿ ಆ ನಗರದ ಹೆಸರು ರಾಜ್ಯಪಾಲರು ನಿರ್ಧರಿಸುವಂತೆ ಇರತಕ್ಕದ್ದು."][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ನಗರ ಪಾಲಿಕೆಯು, "ಮಹಾನಗರ ಪಾಲಿಕೆ" ಎಂಬ ಹೆಸರಿನ ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಸ್ವತ್ತನ್ನು ಆರ್ಜಿಸಲು, ಧಾರಣ ಮಾಡಲು ಮತ್ತು ವಿಲೆ ಮಾಡಲು ಮತ್ತು ಕರಾರು ಮಾಡಿಕೊಳ್ಳಲು ಅಧಿಕಾರ ಹೊಂದಿರುವುದರ ಜೊತೆಗೆ ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಅದು ಹೊಂದಿರತಕ್ಕದ್ದು ಮತ್ತು ಸದರಿ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೆ ಗುರಿಯಾಗಬಹುದು:

[1][ಪರಂತು, "ಬೆಂಗಳೂರು ನಗರ ಪಾಲಿಕೆ" ಎಂಬುದನ್ನು "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂದು ಕರೆಯತಕ್ಕದ್ದು.][1]

1. 2009ರ ಅಧಿನಿಯಮದ ಸಂಖ್ಯೆ 2ರ ಮೂಲಕ 13.01.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**4. [1][ದೊಡ್ಡ ನಗರ ಪ್ರದೇಶ][1]ದಲ್ಲಿ ಪ್ರದೇಶಗಳನ್ನು ಸೇರಿಸುವುದು ಅಥವಾ ಅದರಿಂದ ಪ್ರದೇಶಗಳನ್ನು ಬಿಟ್ಟುಬಿಡುವುದು.–** (1) [1][ರಾಜ್ಯಪಾಲರು 3ನೇ ಪ್ರಕರಣದ (1)ನೇ ಉಪ ಪ್ರಕರಣದ (ಎ) ಯಿಂದ (ಎಫ್) ವರೆಗಿನ ಖಂಡಗಳ ಉಪಬಂಧಗಳನ್ನು ಗಮನದಲ್ಲಿರಿಸಿಕೊಂಡು ಮತ್ತು][1] 2ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಅಧಿಸೂಚನೆಯ ಮೂಲಕ,–

(ಎ) [1][ದೊಡ್ಡ ನಗರ ಪ್ರದೇಶ]ದ ಪರಿಮಿತಿಗಳೊಳಗೆ ಆ ನಗರಕ್ಕೆ ಹೊಂದಿಕೊಂಡಿರುವ ಯಾವುದೇ ಸ್ಥಳೀಯ ಪ್ರದೇಶವನ್ನು ಸೇರಿಸಬಹುದು; ಅಥವಾ

(ಬಿ) [1][ದೊಡ್ಡ ನಗರ ಪ್ರದೇಶ][1]ದಲ್ಲಿ ಒಳಗೊಂಡಿರುವ ಯಾವುದೇ ಸ್ಥಳೀಯ ಪ್ರದೇಶವನ್ನು ಆ ನಗರದ ಪರಿಮಿತಿಗಳೊಳಗಿಂದ ಬಿಟ್ಟುಬಿಡಬಹುದು

– ಮತ್ತು ಅಂಥ ಪ್ರತಿಯೊಂದು ಅಧಿಸೂಚನೆಯಲ್ಲಿ ಆ ಅಧಿಸೂಚನೆಯು ಯಾವ ಸ್ಥಳೀಯ ಪ್ರದೇಶಕ್ಕೆ ಸಂಬಂಧಪಟ್ಟಿದೆಯೋ ಆ ಸ್ಥಳೀಯ ಪ್ರದೇಶದ ಪರಿಮಿತಿಗಳನ್ನು ನಿರ್ಧರಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಅಂಥ ಯಾವುದೇ ಅಧಿಸೂಚನೆಯನ್ನು, ಅದರ ಕರಡನ್ನು,–

(ಎ) ಆ ಅಧಿಸೂಚನೆಯಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿ, ಅದು ಪ್ರಕಟವಾದ ದಿನಾಂಕದಿಂದ [1][ಒಂದು ತಿಂಗಳ][1] ಒಳಗೆ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿದ ಹೊರತು; ಮತ್ತು

1. 1979ರ ಅಧಿನಿಯಮ ಸಂಖ್ಯೆ 11 ರ ಮೂಲಕ 17.11.1978 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅದರ ಬಗ್ಗೆ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ನಗರಪಾಲಿಕೆಗೆ ಒಪ್ಪಿಸಿದ ಹೊರತು

– ಹೊರಡಿಸತಕ್ಕದ್ದಲ್ಲ.

(3) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, [1][ದೊಡ್ಡ ನಗರಪ್ರದೇಶ][1] ದಿಂದ ಸ್ಥಳೀಯ ಪ್ರದೇಶವನ್ನು ಬಿಟ್ಟುಬಿಡುವಾಗ,–

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(i) ಅಂಥ ಪ್ರದೇಶದಲ್ಲಿನ ನಗರ ಪಾಲಿಕೆಯ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಸರ್ಕಾರದಲ್ಲಿ ನಿಹಿತಗೊಳ್ಳತಕ್ಕದ್ದು; ಮತ್ತು

(ii) ಸರ್ಕಾರವು ನಗರ ಪಾಲಿಕೆಯೊಂದಿಗೆ ಸಮಾಲೋಚಿಸಿದ ತರುವಾಯ ಅಂಥ ಸ್ಥಳೀಯ ಪ್ರದೇಶದ ನಿವಾಸಿಗಳ ಪ್ರಯೋಜನಕ್ಕಾಗಿ ನಗರ ಪಾಲಿಕೆಯ ನಿಧಿಯ ಮತ್ತು ನಗರ ಪಾಲಿಕೆಯ ಇತರ ಸ್ವತ್ತಿನ ಎಷ್ಟು ಭಾಗವು ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಎಂಬುದನ್ನು ಮತ್ತು ನಗರ ಪಾಲಿಕೆಯ ಹೊಣೆಗಾರಿಕೆಗಳನ್ನು ನಗರ ಪಾಲಿಕೆಯ ಮತ್ತು ಸರ್ಕಾರದ ನಡುವೆ ಹೇಗೆ ಹಂಚತಕ್ಕದ್ದು ಎಂಬುದನ್ನು ನಿರ್ಧರಿಸತಕ್ಕದ್ದು.

(4) [1][ದೊಡ್ಡ ನಗರ ಪ್ರದೇಶ][1] ದೊಳಗೆ ಸ್ಥಳೀಯ ಪ್ರದೇಶವನ್ನು ಸೇರಿಸಿದಾಗ, ಈ ಅಧಿನಿಯಮದ ಉಪಬಂಧಗಳು ಮತ್ತು ಈ ಅಧಿನಿಯಮದ ಅಥವಾ [1][ದೊಡ್ಡ ನಗರ ಪ್ರದೇಶ][1]ಕ್ಕೆ ಅನ್ವಯವಾಗಬಹುದಾದ ಯಾವುದೇ ಇತರ ಕಾನೂನಿನ ಮೇರೆಗೆ ವಿಧಿಸಿದ ಎಲ್ಲ ತೆರಿಗೆಗಳು, ಹೊರಡಿಸಿದ ಎಲ್ಲ ಅಧಿಸೂಚನೆಗಳು, ಮಾಡಿದ ಎಲ್ಲ ಆದೇಶಗಳು, ನೀಡಿದ ಎಲ್ಲ ನಿರ್ದೇಶನಗಳು, ರಚಿಸಿದ ಎಲ್ಲ ನಿಯಮಗಳು, ಉಪವಿಧಿಗಳು ಮತ್ತು ಪ್ರದತ್ತವಾದ ಎಲ್ಲ ಅಧಿಕಾರಗಳು ಸದರಿ ಪ್ರದೇಶಕ್ಕೆ ಅಂಥ ಪ್ರದೇಶವನ್ನು [1][ದೊಡ್ಡ ನಗರ ಪ್ರದೇಶ][1] ದೊಳಕ್ಕೆ ಸೇರಿಸಿಕೊಂಡ ದಿನಾಂಕದಿಂದ ಅನ್ವಯವಾಗತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**5. ಗಡಿ ಗುರುತು ಕಲ್ಲುಗಳನ್ನು ನಿಲ್ಲಿಸುವುದು ಮತ್ತು ಅವುಗಳ ನಿರ್ವಹಣೆ.–** ತನ್ನ ಅಧಿಕಾರಕ್ಕೆ ಒಳಪಟ್ಟಿರುವ ಸಂದರ್ಭಾನುಸಾರ ನಗರದ ಪರಿಮಿತಿಗಳನ್ನು ಅಥವಾ ಸಂದರ್ಭಾನುಸಾರ ವ್ಯತ್ಯಾಸ ಮಾಡಿದ ಪರಿಮಿತಿಗಳನ್ನು ವಿವರಿಸಿ, ರೆವಿನ್ಯೂ ಜಿಲ್ಲೆಯ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾಧಿಕಾರಿಯು ಅನುಮೋದಿಸತಕ್ಕಂಥ ವರ್ಣನೆಯ ದೃಢವಾದ ಗಡಿ ಗುರುತು ಕಲ್ಲುಗಳನ್ನು ಮತ್ತು ಅಂಥ ರೀತಿಯಲ್ಲಿ ತನ್ನ ಸ್ವಂತ ಖರ್ಚಿನಲ್ಲಿ ನಿಲ್ಲಿಸುವಂತೆ ಅಥವಾ ನೆಲೆಗೊಳಿಸುವಂತೆ ಮಾಡುವುದು ಮತ್ತು ಆ ತರುವಾಯ ಅವುಗಳನ್ನು ತನ್ನ ಸ್ವಂತ ಖರ್ಚಿನಲ್ಲಿ ನಿರ್ವಹಿಸುವುದು ನಗರ ಪಾಲಿಕೆಯ ಕರ್ತವ್ಯವಾಗಿರತಕ್ಕದ್ದು.

## ಅಧ್ಯಾಯ – III

## ಪೌರ ಪ್ರಾಧಿಕಾರಗಳು

**6. ಪೌರ ಪ್ರಾಧಿಕಾರಗಳು.–** ಈ ಕೆಳಕಂಡವುಗಳು ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತ ಮಾಡುವ ಹೊಣೆ ವಹಿಸಿರುವ ನಗರ ಪಾಲಿಕೆಯ ಪೌರ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(ಎ) ನಗರ ಪಾಲಿಕೆ;

(ಬಿ) ಸ್ಥಾಯೀ ಸಮಿತಿಗಳು; ಮತ್ತು

(ಸಿ) ಆಯುಕ್ತರು.

[1][**7. ನಗರ ಪಾಲಿಕೆಯ ರಚನೆ.–** (1) ನಗರ ಪಾಲಿಕೆಯು ಇವರುಗಳನ್ನು ಒಳಗೊಂಡಿರತಕ್ಕದ್ದು,–

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ 7ನೇ ಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

[1][(ಎ) ಸರ್ಕಾರವು ಅಧಿಸೂಚನೆಯ ಮೂಲಕ ನಿರ್ಧರಿಸಬಹುದಾದಂತೆ ಮೂವತ್ತಕ್ಕಿಂತ ಕಡಿಮೆ ಇಲ್ಲದಷ್ಟು ಮತ್ತು ಎರಡುನೂರಕ್ಕಿಂತ ಹೆಚ್ಚಲ್ಲದಷ್ಟು ಸಂಖ್ಯೆಯ ಚುನಾಯಿತ ಕೌನ್ಸಿಲರುಗಳನ್ನು; ಮತ್ತು][1]

1. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 04.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

(ಬಿ) ನಗರದ ನಿವಾಸಿಗಳ ಪೈಕಿ ಸರ್ಕಾರವು ನಾಮ ನಿರ್ದೇಶನ ಮಾಡಿದ ಸಂಖ್ಯೆಯ ಸಂದರ್ಭದಲ್ಲಿ,–

(i) ಪೌರಾಡಳಿತದಲ್ಲಿ ಅಥವಾ ಆರೋಗ್ಯ, ನಗರ ಯೋಜನೆ ಅಥವಾ ಶಿಕ್ಷಣಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ವಿಶೇಷ ಜ್ಞಾನ ಮತ್ತು ಅನುಭವ ಹೊಂದಿರುವ ಅಥವಾ;

(ii) ಸಮಾಜ ಸೇವಾ ಕಾರ್ಯಕರ್ತರಾಗಿರುವಂಥ

– [1][[2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ ಕೌನ್ಸಿಲರುಗಳ ಒಟ್ಟು ಸಂಖ್ಯೆಯ ಶೇಕಡ ಹತ್ತಕ್ಕೆ ಮೀರದಷ್ಟು][2] ಮತ್ತು ಇತರ ಮಹಾನಗರ ಪಾಲಿಕೆಗಳ ಸಂದರ್ಭದಲ್ಲಿ ಐದಕ್ಕೆ ಮೀರದಷ್ಟು ವ್ಯಕ್ತಿಗಳನ್ನು][1];

1. 2003ರ ಅಧಿನಿಯಮ ಸಂಖ್ಯೆ 5 ರ ಮೂಲಕ 27.3.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

(ಸಿ) ಲೋಕಸಭೆಯ ಯಾವ ಸದಸ್ಯರುಗಳ ಮತ್ತು ರಾಜ್ಯ ವಿಧಾನ ಸಭೆಯ ಯಾವ ಸದಸ್ಯರುಗಳ ಚುನಾವಣಾ ಕ್ಷೇತ್ರಗಳು ನಗರದೊಳಗೆ ಇವೆಯೋ ಆ ನಗರದ ಒಂದು ಭಾಗವನ್ನು ಅಥವಾ ಆ ಇಡೀ ನಗರವನ್ನು ಪ್ರತಿನಿಧಿಸುವ ಅಂಥ ಲೋಕಸಭಾ ಸದಸ್ಯರುಗಳನ್ನು ಮತ್ತು ಅಂಥ ರಾಜ್ಯ ವಿಧಾನಸಭಾ ಸದಸ್ಯರುಗಳನ್ನು [1][XXX][1] ;

1. 1998ರ ಅಧಿನಿಯಮ ಸಂಖ್ಯೆ 24 ರ ಮೂಲಕ 10.6.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಡಿ) ನಗರದೊಳಗೆ ಮತದಾರರಾಗಿ ನೋಂದಾಯಿತರಾಗಿರುವ ರಾಜ್ಯಸಭೆಯ ಮತ್ತು ರಾಜ್ಯವಿಧಾನ ಪರಿಷತ್ತಿನ ಸದಸ್ಯರುಗಳನ್ನು

– ಒಳಗೊಂಡಿರತಕ್ಕದ್ದು:

ಪರಂತು, (ಬಿ) ಖಂಡದಲ್ಲಿ ಉಲ್ಲೇಖಿಸಿರುವ ವ್ಯಕ್ತಿಗಳು ನಗರ ಪಾಲಿಕೆಯ ಸಭೆಗಳಲ್ಲಿ ಮತ ಚಲಾಯಿಸುವ ಹಕ್ಕು ಹೊಂದಿರತಕ್ಕದ್ದಲ್ಲ.

(2) ನಗರ ಪಾಲಿಕೆಯಲ್ಲಿ,–

(ಎ) ಅನುಸೂಚಿತ ಜಾತಿಗಳಿಗೆ; ಮತ್ತು

(ಬಿ) ಅನುಸೂಚಿತ ಪಂಗಡಗಳಿಗೆ

– ಸ್ಥಾನಗಳನ್ನು ಮೀಸಲಿರಿಸತಕ್ಕದ್ದು, ಮತ್ತು ಹಾಗೆ ಮೀಸಲಿರಿಸಿದ ಸ್ಥಾನಗಳ ಸಂಖ್ಯೆಯು, ನಗರದ ಒಟ್ಟು ಜನಸಂಖ್ಯೆಯಲ್ಲಿ ನಗರದಲ್ಲಿನ ಅನುಸೂಚಿತ ಜಾತಿಗಳ ಅಥವಾ ಅನುಸೂಚಿತ ಪಂಗಡಗಳ ಜನಸಂಖ್ಯೆಯು, ಯಾವ ಅನುಪಾತದಲ್ಲಿ ಇದೆಯೋ, ನಗರ ಪಾಲಿಕೆಯಲ್ಲಿ ನೇರ ಚುನಾವಣೆ ಮೂಲಕ ಭರ್ತಿಮಾಡಬೇಕಾದ ಒಟ್ಟು ಸ್ಥಾನಗಳ ಸಂಖ್ಯೆಯಲ್ಲಿ ಸರಿಸುಮಾರು ಅದೇ ಅನುಪಾತವನ್ನು ಹೊಂದಿರತಕ್ಕದ್ದು.

(3) ನಗರ ಪಾಲಿಕೆಯಲ್ಲಿ ನೇರ ಚುನಾವಣೆಯ ಮೂಲಕ ಭರ್ತಿ ಮಾಡಬೇಕಾದ ಒಟ್ಟು ಸ್ಥಾನಗಳಲ್ಲಿ ಸರಿ ಸುಮಾರು ಮೂರನೇ ಒಂದು ಭಾಗದಷ್ಟು ಸಂಖ್ಯೆಯ ಸ್ಥಾನಗಳನ್ನು ಹಿಂದುಳಿದ ವರ್ಗಗಳ ವ್ಯಕ್ತಿಗೆ ಮೀಸಲಿರಿಸತಕ್ಕದ್ದು:

[1][ಪರಂತು, ಈ ಉಪ–ಪ್ರಕರಣದ ಮೇರೆಗೆ ಮೀಸಲಿರಿಸಿದ ಸ್ಥಾನಗಳ ಪೈಕಿ ಅಂಥ ಸ್ಥಾನಗಳ ಒಟ್ಟು ಸಂಖ್ಯೆಯ ಶೇಕಡಾ ಎಂಬತ್ತರಷ್ಟು ಸ್ಥಾನಗಳನ್ನು "ಎ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಮತ್ತು ಉಳಿದ ಶೇಕಡ ಇಪ್ಪತ್ತರಷ್ಟು ಸ್ಥಾನಗಳನ್ನು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು:

ಮತ್ತು ಪರಂತು "ಎ" ಪ್ರವರ್ಗದ ಅಡಿಯಲ್ಲಿ ಬರುವ ಆ ಯಾರೇ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ, ಆ ಪ್ರವರ್ಗಕ್ಕೆ ಮೀಸಲಿರಿಸಿದ ಸ್ಥಾನಗಳನ್ನು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಂದ ಭರ್ತಿ ಮಾಡತಕ್ಕದ್ದು, ಮತ್ತು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ಯಾರೇ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ ಆ ಪ್ರವರ್ಗಕ್ಕೆ ಮೀಸಲಿರಿಸಿದ ಸ್ಥಾನಗಳನ್ನು "ಎ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಂದ ಭರ್ತಿ ಮಾಡತಕ್ಕದ್ದು.

**ವಿವರಣೆ.**– ಈ ಉಪ–ಪ್ರಕರಣದ ಮತ್ತು 10ನೇ ಪ್ರಕರಣದ (1ಎ) ಉಪ–ಪ್ರಕರಣದ (ಬಿ) ಖಂಡದ ಪರಂತುಕದ ಉದ್ದೇಶಕ್ಕಾಗಿ, "ಎ" ಮತ್ತು "ಬಿ" ಪ್ರವರ್ಗಗಳು ಎಂದರೆ 2ನೇ ಪ್ರಕರಣದ (1)ನೇ ಖಂಡದಲ್ಲಿ ಉಲ್ಲೇಖಿಸಲಾದ "ಎ" ಮತ್ತು "ಬಿ" ಪ್ರವರ್ಗಗಳು.][1]

1. 1995 ರ ಅಧಿನಿಯಮ ಸಂಖ್ಯೆ 25ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ನಗರ ಪಾಲಿಕೆಯಲ್ಲಿ ನೇರ ಚುನಾವಣೆ ಮೂಲಕ ಭರ್ತಿ ಮಾಡಬೇಕಾದ ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕೆ ಮೀಸಲಿರಿಸಿದ ಸ್ಥಾನಗಳಲ್ಲಿ ಮತ್ತು ಮೀಸಲಿಟ್ಟಿರದ ಸ್ಥಾನಗಳಲ್ಲಿ ಮೂರನೇ ಒಂದು ಭಾಗಕ್ಕೆ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿರಿಸತಕ್ಕದ್ದು:

ಪರಂತು, (2), (3) ಮತ್ತು (4)ನೇ ಉಪ–ಪ್ರಕರಣಗಳಲ್ಲಿ ಮೀಸಲಿರಿಸಿದ ಸ್ಥಾನಗಳನ್ನು ನಗರದಲ್ಲಿರುವ ವಿವಿಧ ವಾರ್ಡ್‌ಗಳಿಗೆ ಸರದಿಯ ಪ್ರಕಾರ ಹಂಚಿಕೆ ಮಾಡತಕ್ಕದ್ದು.

(5) (1)ನೇ ಉಪ–ಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ ಕೌನ್ಸಿಲರಗಳನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದ ರೀತಿಯಲ್ಲಿ ಚುನಾಯಿಸತಕ್ಕದ್ದು.

(6) (2), (3) ಮತ್ತು (4)ನೇ ಉಪ–ಪ್ರಕರಣಗಳಲ್ಲಿ ಒಳಗೊಂಡಿರುವುದು ಯಾವುದು ಅನುಸೂಚಿತ ಜಾತಿಗಳವರು, ಅನುಸೂಚಿತ ಪಂಗಡಗಳವರು, ಹಿಂದುಳಿದ ವರ್ಗಗಳವರು ಅಥವಾ ಮಹಿಳೆಯರು ಮೀಸಲಿಟ್ಟಿರದ ಸ್ಥಾನಗಳಿಗೆ ಚುನಾವಣೆಗೆ ನಿಲ್ಲುವುದನ್ನು ಪ್ರತಿಬಂಧಿಸುವುದೆಂದು ಭಾವಿಸತಕ್ಕದ್ದಲ್ಲ.][1]

**8. ಕೌನ್ಸಿಲರುಗಳ ಪದಾವಧಿ.**– [1][(1) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು,–

(i) ಸಾರ್ವತ್ರಿಕ ಚುನಾವಣೆಯಲ್ಲಿ ನೇರವಾಗಿ ಚುನಾಯಿತರಾದ ಕೌನ್ಸಿಲರುಗಳ ಪದಾವಧಿಯು ಐದು ವರ್ಷಗಳಾಗಿರತಕ್ಕದ್ದು;

(ii) 7ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ಸರ್ಕಾರವು ನಾಮನಿರ್ದೇಶನ ಮಾಡಿದ ಕೌನ್ಸಿಲರುಗಳ ಪದಾವಧಿಯು ಸರ್ಕಾರದ ಇಷ್ಟಪರ್ಯಂತಕ್ಕೆ ಒಳಪಟ್ಟು ಐದು ವರ್ಷಗಳಾಗಿರತಕ್ಕದ್ದು.

(2) ಕೌನ್ಸಿಲರುಗಳ ಪದಾವಧಿಯು, ನಗರ ಪಾಲಿಕೆಯ ಪ್ರಥಮ ಸಭೆಗೆ ಗೊತ್ತುಪಡಿಸಿದ ದಿನಾಂಕದಂದು ಪ್ರಾರಂಭವಾಗತಕ್ಕದ್ದು.

(3) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಚುನಾಯಿತರಾಗಬೇಕಾದ ಕೌನ್ಸಿಲರುಗಳ ಒಟ್ಟು ಸಂಖ್ಯೆಯ ಮೂರನೇ ಎರಡರಷ್ಟು ಕೌನ್ಸಿಲರುಗಳು ಚುನಾಯಿತರಾದಲ್ಲಿ, ಈ ಅಧಿನಿಯಮದ ಮೇರೆಗೆ ನಗರ ಪಾಲಿಕೆ ಯಥೋಚಿತವಾಗಿ ರಚಿತವಾಗಿದೆ ಎಂದು ಭಾವಿಸತಕ್ಕದ್ದು.][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಯಾವುದೇ ಆಕಸ್ಮಿಕ ಖಾಲೀ ಸ್ಥಾನವು ಉಂಟಾದರೆ, ಅದಕ್ಕೆ ಒಬ್ಬ ವ್ಯಕ್ತಿಯನ್ನು ಚುನಾಯಿಸುವ ಮೂಲಕ ಅದನ್ನು ಸಾಧ್ಯವಾದಷ್ಟು ಬೇಗನೆ ಭರ್ತಿ ಮಾಡತಕ್ಕದ್ದು, ಹಾಗೆ ಚುನಾಯಿತನಾದ ವ್ಯಕ್ತಿಯು, ಯಾವ ವ್ಯಕ್ತಿಯ ಸ್ಥಾನಕ್ಕೆ ಅವನು ಚುನಾಯಿತನಾದನೋ ಆ ಸ್ಥಾನವು ಖಾಲಿ ಆಗದೇ ಇದ್ದಿದ್ದರೆ ಆ ವ್ಯಕ್ತಿಯು ಎಲ್ಲಿಯವರೆಗೆ ಅದನ್ನು ಧಾರಣ ಮಾಡುತ್ತಿದ್ದನೋ, ಆ ಅವಧಿಗೆ ಮಾತ್ರವೇ ಪದವನ್ನು ಧಾರಣ ಮಾಡತಕ್ಕದ್ದು:

ಪರಂತು, ಕೌನ್ಸಿಲರುಗಳ ಪದಾವಧಿಯ ಕಾಲ ಮುಗಿದು ಹೋಗಿ ಮುಕ್ತಾಯವಾಗುವುದಕ್ಕೆ ಮುಂಚೆ ನಾಲ್ಕು ತಿಂಗಳ ಒಳಗೆ ಖಾಲಿ ಸ್ಥಾನವು ಉಂಟಾದರೆ, ಆ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಯಾವುದೇ ಚುನಾವಣೆಯನ್ನು ನಡೆಸತಕ್ಕದ್ದಲ್ಲ.

(5) ಕೌನ್ಸಿಲರನು ಮೇಯರ್‌ರವರಿಗೆ ಸಂಬೋಧಿಸಿದ ಲಿಖಿತ ನೋಟಿಸನ್ನು ಅವರಿಗೆ ತಲುಪಿಸುವ ಮೂಲಕ ಯಾವುದೇ ಕಾಲದಲ್ಲಿ ತನ್ನ ಪದಕ್ಕೆ ರಾಜಿನಾಮೆ ನೀಡಬಹುದು ಮತ್ತು ಅಂಥ ರಾಜಿನಾಮೆಯು ಅದನ್ನು ಸಲ್ಲಿಸಿದ ದಿನಾಂಕದಿಂದ ಪರಿಣಾಮಕಾರಿಯಾಗತಕ್ಕದ್ದು.

**[1][9. xxx][1]**

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**10. ಮೇಯರ್ ಮತ್ತು ಉಪಮೇಯರ್.**– (1) [1][(1ಎ) ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ನಗರಪಾಲಿಕೆಯು][1] ಕೌನ್ಸಿಲರುಗಳ ಸಾರ್ವತ್ರಿಕ ಚುನಾವಣೆಯ ನಂತರ ನಡೆಯುವ ಅದರ ಮೊದಲ ಸಭೆಯಲ್ಲಿ ಮತ್ತು ಆ ತರುವಾಯ ಪ್ರತಿ ವರ್ಷದ ಅದೇ ತಿಂಗಳಲ್ಲಿ ನಡೆಯುವ ಅದರ ಮೊದಲ ಸಭೆಯಲ್ಲಿ,–

(ಎ) [2][7ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ][2] ತನ್ನ ಕೌನ್ಸಿಲರ್‌ಗಳ ಪೈಕಿ ಒಬ್ಬರನ್ನು ಮೇಯರ್ ಆಗಿ; ಮತ್ತು

(ಬಿ) [2][7ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ][2] ಕೌನ್ಸಿಲರುಗಳ ಪೈಕಿ ಮತ್ತೊಬ್ಬರನ್ನು ಉಪಮೇಯರ್ ಆಗಿ

– ಚುನಾಯಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(1ಎ) ಸರ್ಕಾರವು ನಿರ್ದಿಷ್ಟಪಡಿಸಿದ ರೀತಿಯಲ್ಲಿ,–

(ಎ) ರಾಜ್ಯದಲ್ಲಿರುವ ಮೇಯರ್ ಮತ್ತು ಉಪ ಮೇಯರ್‌ಗಳ ಅಷ್ಟು ಸಂಖ್ಯೆಯ ಪದಗಳನ್ನು ಅನುಸೂಚಿತ ಜಾತಿಗಳವರಿಗೆ ಮತ್ತು ಅನುಸೂಚಿತ ಪಂಗಡಗಳವರಿಗೆ ಮೀಸಲಿಡತಕ್ಕದ್ದು ಮತ್ತು ಅಂಥ ಪದಗಳ ಸಂಖ್ಯೆಯು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿದೆಯೋ ರಾಜ್ಯದಲ್ಲಿನ ಅಂಥ ಪದಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಅದೇ ಅನುಪಾತವನ್ನು ಹೊಂದಿರತಕ್ಕದ್ದು;

(ಬಿ) ರಾಜ್ಯದಲ್ಲಿರುವ ಮೇಯರ್ ಮತ್ತು ಉಪಮೇಯರ್ ಪದಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಮೂರನೇ ಒಂದು ಭಾಗದಷ್ಟು ಸಂಖ್ಯೆಯ ರಾಜ್ಯದಲ್ಲಿರುವ ಮೇಯರ್ ಮತ್ತು ಉಪ ಮೇಯರ್ ಪದಗಳನ್ನು ಹಿಂದುಳಿದ ವರ್ಗಗಳ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು:

[1][ಪರಂತು, ಈ ಖಂಡದ ಮೇರೆಗೆ ಮೀಸಲಿರಿಸಿದ ಪದಗಳ ಪೈಕಿ ಅಂಥ ಪದಗಳ ಒಟ್ಟು ಸಂಖ್ಯೆಯಲ್ಲಿ ಶೇಕಡಾ ಎಂಬತ್ತರಷ್ಟನ್ನು "ಎ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಮತ್ತು ಉಳಿದ ಶೇಕಡಾ ಇಪ್ಪತ್ತರಷ್ಟು ಪದಗಳನ್ನು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು:

ಮತ್ತು ಪರಂತು "ಎ" ಪ್ರವರ್ಗದ ಅಡಿಯಲ್ಲಿ ಬರುವ ಯಾರೇ ವ್ಯಕ್ತಿಯು ಲಭ್ಯವಿಲ್ಲದಿದ್ದಲ್ಲಿ, ಆ ಪ್ರವರ್ಗಕ್ಕೆ ಮೀಸಲಿರಿಸದ ಪದಗಳನ್ನು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಂದ ಭರ್ತಿ ಮಾಡತಕ್ಕದ್ದು ಮತ್ತು "ಬಿ" ಪ್ರವರ್ಗದ ಅಡಿಯಲ್ಲಿ ಬರುವ ಯಾರೇ ವ್ಯಕ್ತಿಯೂ ಲಭವಿಲ್ಲದಿದ್ದಲ್ಲಿ, ಆ ಪ್ರವರ್ಗಕ್ಕೆ ಮೀಸಲಿರಿಸಿದ ಪದಗಳನ್ನು "ಎ" ಪ್ರವರ್ಗದ ಅಡಿಯಲ್ಲಿ ಬರುವ ವ್ಯಕ್ತಿಗಳಿಂದ ಭರ್ತಿ ಮಾಡಿಕೊಳ್ಳತಕ್ಕದ್ದು.][1]

1. 1995ರ ಅಧಿನಿಯಮ ಸಂಖ್ಯೆ 25 ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಸಿ) ರಾಜ್ಯದಲ್ಲಿರುವ ಮೇಯರ್ ಮತ್ತು ಉಪಮೇಯರ್ ಪದಗಳ ಒಟ್ಟು ಸಂಖ್ಯೆಯಲ್ಲಿ ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಪದಗಳಲ್ಲಿ ಮತ್ತು ಮೀಸಲಿಟ್ಟಿರದ ಪದಗಳಲ್ಲಿ ಮೂರನೆ ಒಂದರಷ್ಟಕ್ಕೆ ಕಡಿಮೆ ಇಲ್ಲದಷ್ಟು ಪದಗಳನ್ನು ಮಹಿಳೆಯರಿಗೆ ಮೀಸಲಿರಿಸತಕ್ಕದ್ದು:

ಪರಂತು, ಈ ಉಪಪ್ರಕರಣದ ಮೇರೆಗೆ ಮೀಸಲಿರಿಸಿದ ಪದಗಳನ್ನು ನಿರ್ದಿಷ್ಟಪಡಿಸಿದ ರೀತಿಯಲ್ಲಿ ಸರದಿಯ ಪ್ರಕಾರ ಹಂಚಿಕೆ ಮಾಡತಕ್ಕದ್ದು.

**ವಿವರಣೆ**:– ಸಂದೇಹಗಳ ನಿವಾರಣೆಗಾಗಿ, ಈ ಉಪಪ್ರಕರಣದ ಮೇರೆಗೆ ಪದಗಳ ಮೀಸಲಾತಿಯ ಉದ್ದೇಶಗಳಿಗಾಗಿ ಸರದಿಯ ಸೂತ್ರವು 1994ರ ಜೂನ್ ಮೊದಲನೇ ದಿನದ ತರುವಾಯ ನಡೆಯುವ ಪ್ರಥಮ ಸಾಮಾನ್ಯ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದೆಂದು ಈ ಮೂಲಕ ಘೋಷಿಸಲಾಗಿದೆ.][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ (1ಎ) ಉಪಪ್ರಕರಣವನ್ನು ಸೇರಿಸಲಾಗಿದೆ.

(2) ಮೇಯರ್ ಅಥವಾ ಉಪಮೇಯರ್‌ರವರು ತಾವು ಚುನಾಯಿತರಾದ ದಿನಾಂಕದಿಂದ ಒಂದು ವರ್ಷ ಪದಧಾರಣ ಮಾಡತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯಗೊಂಡಿದ್ದಾಗ್ಯೂ ತಮ್ಮ ಉತ್ತರಾಧಿಕಾರಿಯು ಚುನಾಯಿತರಾಗುವವರೆಗೆ ಪದದಲ್ಲಿ ಮುಂದುವರಿಯತಕ್ಕದ್ದು, ಪರಂತು ಈ ನಡುವೆ ಅವರು ಕೌನ್ಸಿಲರ್ ಆಗಿರುವುದು ನಿಂತುಹೋಗುವುದಿಲ್ಲ.

[1][(2ಎ) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ (1)ನೇ ಉಪ ಪ್ರಕರಣದ ಮೇರೆಗೆ ಮೇಯರ್ ಮತ್ತು ಉಪ ಮೇಯರ್ ಪದಕ್ಕೆ 1991ರ ಮೇ ಇಪ್ಪತ್ತನೇ ದಿನದಿಂದ ಒಂದು ತಿಂಗಳ ಅವಧಿಯು ಮುಕ್ತಾಯವಾಗುವವರೆಗೆ ಯಾವುದೇ ಚುನಾವಣೆಯನ್ನು ನಡೆಸತಕ್ಕದ್ದಲ್ಲ, ಆದರೆ, ಅಂಥ ಚುನಾವಣೆಯನ್ನು, ಸದರಿ ಅವಧಿಯು ಮುಕ್ತಾಯವಾಗುವ ತಿಂಗಳಲ್ಲಿನ ಮುಂದಿನ ತಿಂಗಳಲ್ಲಿ ನಡೆಯುವ ಮೊದಲನೇ ಸಭೆಯಲ್ಲಿ ನಡೆಸತಕ್ಕದ್ದು ಮತ್ತು ಹಾಗೆ ಚುನಾಯಿತನಾದ ವ್ಯಕ್ತಿಯು ಹಾಗೆ ಚುನಾಯಿತನಾದ ದಿನಾಂಕದಿಂದ ಮೇಯರ್ ಮತ್ತು ಉಪಮೇಯರ್‌ರನ್ನು ಚುನಾಯಿಸುವುದಕ್ಕಾಗಿ ನಡೆದ ಸಾಮಾನ್ಯ ಚುನಾವಣೆಯ ತರುವಾಯ ಯಾವ ತಿಂಗಳಿನಲ್ಲಿ ಮೊದಲನೇ ಸಭೆಯು ನಡೆಯಿತೋ, ಅದೇ ತಿಂಗಳಲ್ಲಿ ಆ ತರುವಾಯ ನಡೆದ ಮೊದಲನೇ ಸಭೆಯಲ್ಲಿ ತನ್ನ ಉತ್ತರಾಧಿಕಾರಿಯನ್ನು ಚುನಾಯಿಸುವವರೆಗಿನ ಅವಧಿಗೆ ಮಾತ್ರವೇ ಮೇಯರ್ ಮತ್ತು ಉಪ ಮೇಯರ್ ಆಗಿ ಪದಧಾರಣ ಮಾಡತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.5.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ನಿವೃತ್ತಿ ಹೊಂದುತ್ತಿರುವ ಮೇಯರ್ ಅಥವಾ ಉಪಮೇಯರ್ ಮತ್ತೆ ಚುನಾಯಿತನಾಗಲು ಅರ್ಹನಾಗಿರತಕ್ಕದ್ದು.

(4) ಮೇಯರ್ ಅಥವಾ ಉಪಮೇಯರ್ ಪದದಲ್ಲಿ ಯಾವುದೇ ಆಕಸ್ಮಿಕ ಖಾಲೀ ಸ್ಥಾನ ಉಂಟಾದರೆ, ನಗರ ಪಾಲಿಕೆಯು, ಖಾಲೀ ಸ್ಥಾನವು ಉಂಟಾದ ತರುವಾಯ ಖಾಲೀ ಸ್ಥಾನವನ್ನು ಭರ್ತಿ ಮಾಡುವುದಕ್ಕಾಗಿ [1][7ನೇ ಪ್ರಕರಣದ (1)ನೇ ಉಪ ಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ][1] ಕೌನ್ಸಿಲರುಗಳಲ್ಲಿ ಒಬ್ಬರನ್ನು ಆಯ್ಕೆ ಮಾಡತಕ್ಕದ್ದು ಮತ್ತು ಹಾಗೆ ಚುನಾಯಿತರಾದ ಪ್ರತಿಯೊಬ್ಬ ಮೇಯರ್ ಅಥವಾ ಉಪಮೇಯರ್, ಯಾರ ಸ್ಥಾನದಲ್ಲಿ ಅವರು ಹಾಗೆ ಚುನಾಯಿತರಾದರೋ ಆ ವ್ಯಕ್ತಿಯು, ಖಾಲಿ ಸ್ಥಾನವು ಉಂಟಾಗಿರದಿದ್ದರೆ ಎಲ್ಲಿಯವರೆಗೆ ಪದಧಾರಣ ಮಾಡುತ್ತಿದ್ದರೋ ಅಲ್ಲಿಯವರೆಗೆ ಪದಧಾರಣ ಮಾಡತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(5) ಮೇಯರ್‌ರವರು ಉಪಮೇಯರ್‌ರವರಿಗೆ ಸಂಬೋಧಿಸಿದ ಲಿಖಿತ ನೋಟೀಸನ್ನು ಆಯುಕ್ತರಿಗೆ ತಲುಪಿಸುವ ಮೂಲಕ ಮತ್ತು ಉಪಮೇಯರ್‌ರವರ ಗೈರುಹಾಜರಿಯಲ್ಲಿ ಆಯುಕ್ತರಿಗೆ ಸಂಬೋಧಿಸಿದ ಲಿಖಿತ ನೋಟೀಸನ್ನು ಅವರಿಗೆ ತಲುಪಿಸುವ ಮೂಲಕ ಯಾವುದೇ ಕಾಲದಲ್ಲಿ ತಮ್ಮ ಪದಕ್ಕೆ ರಾಜೀನಾಮೆ ಕೊಡಬಹುದು.

(6) ಉಪಮೇಯರ್‌ರವರು ಮೇಯರ್‌ರವರಿಗೆ ಸಂಬೋಧಿಸಿದ ಲಿಖಿತ ನೋಟೀಸನ್ನು ಆಯುಕ್ತರಿಗೆ ತಲುಪಿಸುವ ಮೂಲಕ ಮತ್ತು ಮೇಯರ್‌ರವರ ಗೈರುಹಾಜರಿಯಲ್ಲಿ ಆಯುಕ್ತರಿಗೆ ಸಂಬೋಧಿಸಿದ ಲಿಖಿತ ನೋಟೀಸನ್ನು ಅವರಿಗೆ ತಲುಪಿಸುವ ಮೂಲಕ ಯಾವುದೇ ಕಾಲದಲ್ಲಿ ತಮ್ಮ ಪದಕ್ಕೆ ರಾಜೀನಾಮೆ ಕೊಡಬಹುದು.

(7) (5)ನೇ ಉಪಪ್ರಕರಣ ಅಥವಾ (6)ನೇ ಉಪಪ್ರಕರಣದ ಮೇರೆಗಿನ ರಾಜೀನಾಮೆಯು ಅದನ್ನು ತಲುಪಿದ ದಿನಾಂಕದಿಂದ ಪರಿಣಾಮಕಾರಿಯಾಗಿರತಕ್ಕದ್ದು.

**11. ಸ್ಥಾಯೀ ಸಮಿತಿಗಳು.–** [1][(1) [2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ][2]ಯನ್ನು ಹೊರತುಪಡಿಸಿ ಇತರ ನಗರ ಪಾಲಿಕೆಗಳಲ್ಲಿ ಈ ಮುಂದಿನ ಸ್ಥಾಯೀ ಸಮಿತಿಗಳು ಇರತಕ್ಕದ್ದು, ಎಂದರೆ:–

(ಎ) ತೆರಿಗೆ, ಹಣಕಾಸು ಮತ್ತು ಅಪೀಲು ಸ್ಥಾಯೀ ಸಮಿತಿ;

(ಬಿ) ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿ;

(ಸಿ) ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿ;

(ಡಿ) ಲೆಕ್ಕಪತ್ರಗಳ ಸ್ಥಾಯೀ ಸಮಿತಿ;

[3][(1ಎ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಮುಂದಿನ ಸ್ಥಾಯೀ ಸಮಿತಿಗಳು ಇರತಕ್ಕದ್ದು, ಎಂದರೆ:–

(ಎ) ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿ;

(ಬಿ) ಸಾರ್ವಜನಿಕ ಆರೋಗ್ಯ ಸ್ಥಾಯೀ ಸಮಿತಿ;

(ಸಿ) ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿ;

(ಡಿ) ಬೃಹತ್ ಸಾರ್ವಜನಿಕ ಕಾಮಗಾರಿ ಸ್ಥಾಯೀ ಸಮಿತಿ;

(ಇ) ವಾರ್ಡು ಮಟ್ಟದ ಸಾರ್ವಜನಿಕ ಕಾಮಗಾರಿ ಸ್ಥಾಯೀ ಸಮಿತಿ;

(ಎಫ್) ಲೆಕ್ಕ ಪತ್ರ ಸ್ಥಾಯೀ ಸಮಿತಿ;

(ಜಿ) ಶಿಕ್ಷಣ ಸ್ಥಾಯೀ ಸಮಿತಿ;

(ಎಚ್) ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿ][1];

(ಐ) ಅಪೀಲು ಸ್ಥಾಯೀ ಸಮಿತಿ;

(ಜೆ) ತೋಟಗಾರಿಕೆ ಸ್ಥಾಯೀ ಸಮಿತಿ;

(ಕೆ) ಮಾರುಕಟ್ಟೆ ಸ್ಥಾಯೀ ಸಮಿತಿ;

(ಎಲ್) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸ್ಥಾಯೀ ಸಮಿತಿ.

(2) ಪ್ರತಿಯೊಂದು ಸ್ಥಾಯೀ ಸಮಿತಿಯು, ಸಾರ್ವತ್ರಿಕ ಚುನಾವಣೆಯ ತರುವಾಯ ನಡೆಯುವ ನಗರ ಪಾಲಿಕೆಯ ಮೊದಲನೇ ಸಭೆಯಲ್ಲಿ ಮತ್ತು ತದನಂತರದ ಪ್ರತಿಯೊಂದು ವರ್ಷದಲ್ಲಿ, ಅದೇ ತಿಂಗಳಿನಲ್ಲಿ ನಡೆಯುವ ಮೊದಲನೆ ಸಭೆಯಲ್ಲಿ, ಏಕ ವರ್ಗಾವಣೀಯ ಮತದ ಮೂಲಕ ಪ್ರಮಾಣಾನುಸಾರ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ಚುನಾಯಿತರಾದ,–

(ಎ) ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನು ಹೊರತುಪಡಿಸಿ, ನಗರ ಪಾಲಿಕೆಗಳಲ್ಲಿ, ಆ ನಗರ ಪಾಲಿಕೆಯ ಏಳು ಜನ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು; ಮತ್ತು

(ಬಿ) ಬೃಹತ್ ಬೆಂಗಳೂರು ಮಹಾನಗರಪಾಲಿಕೆಯಲ್ಲಿ ಆ ನಗರಪಾಲಿಕೆಯ ಹನ್ನೊಂದು ಜನ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು:

ಪರಂತು, ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯು ಅಥವಾ ಸಂದರ್ಭಾನುಸಾರ ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯು ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಇಬ್ಬರಿಗಿಂತ ಕಡಿಮೆಯಲ್ಲದ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು.][3]

1. 1998 ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2009 ರ ಅಧಿನಿಯಮ ಸಂಖ್ಯೆ 22 ರ ಮೂಲಕ 04.06.2009 ರಿಂದ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

3. 2010ರ ಅಧಿನಿಯಮ ಸಂಖ್ಯೆ 36ರ ಮೂಲಕ 30ನೇ ಜುಲೈ 2010 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಯಾರೇ ಕೌನ್ಸಿಲರನು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಸ್ಥಾಯೀ ಸಮಿತಿಗಳ ಸದಸ್ಯನಾಗಿರತಕ್ಕದ್ದಲ್ಲ.

(4) ಮೇಯರ್ ಮತ್ತು ಉಪಮೇಯರ್‌ರವರು ಎಲ್ಲಾ ಸ್ಥಾಯೀ ಸಮಿತಿಗಳ ಪದನಿಮಿತ್ತ ಸದಸ್ಯರುಗಳಾಗಿರತಕ್ಕದ್ದು, ಆದರೆ ಅವರು ಮತ ಚಲಾಯಿಸುವ ಹಕ್ಕನ್ನು ಹೊಂದಿರತಕ್ಕದ್ದಲ್ಲ.

(5) ಸ್ಥಾಯೀ ಸಮಿತಿಯ ಸದಸ್ಯರುಗಳ ಪದಾವಧಿಯು ಅವರು ಹಾಗೆ ಚುನಾಯಿತರಾದ ದಿನಾಂಕದಿಂದ ಒಂದು ವರ್ಷವಾಗಿರತಕ್ಕದ್ದು. ಒಬ್ಬ ವ್ಯಕ್ತಿಯು ಅವನು ಕೌನ್ಸಿಲರನಾಗಿರುವುದು ನಿಂತುಹೋದರೆ ಅಥವಾ ಅವನು ಸ್ಥಾಯೀ ಸಮಿತಿಯ ಮೂರು ನಿರಂತರ ಸಭೆಗಳಿಗೆ ಸ್ಥಾಯೀ ಸಮಿತಿಯ ಅನುಮತಿಯಿಲ್ಲದೆ ಗೈರುಹಾಜರಾದರೆ, ಅವನು ಸ್ಥಾಯೀ ಸಮಿತಿಯ ಸದಸ್ಯನಾಗಿರುವುದು ನಿಂತುಹೋಗತಕ್ಕದ್ದು.

[1][(5ಎ) (2) ಮತ್ತು (5)ನೇ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ 1991ರ ಮೇ ಇಪ್ಪತ್ತೊಂಬತ್ತನೆ ದಿನದಿಂದ ಒಂದು ತಿಂಗಳ ಅವಧಿಯು ಮುಕ್ತಾಯವಾಗುವವರೆಗೆ ಸ್ಥಾಯಿ ಸಮಿತಿಯ ಸದಸ್ಯನ ಪದಕ್ಕೆ ಯಾವುದೇ ಚುನಾವಣೆಯನ್ನು ನಡೆಸತಕ್ಕದ್ದಲ್ಲ. ಆದರೆ, ಅಂಥ ಚುನಾವಣೆಯನ್ನು, ಸದರಿ ಅವಧಿಯು ಮುಕ್ತಾಯವಾಗುವ ತಿಂಗಳಿನ ನಂತರದ ತಿಂಗಳಿನಲ್ಲಿ ನಡೆಯುವ ಮೊದಲನೇ ಸಭೆಯನ್ನು ನಡೆಸತಕ್ಕದ್ದು ಮತ್ತು ಹಾಗೆ ಚುನಾಯಿತನಾದ

ವ್ಯಕ್ತಿಯು ಹಾಗೆ ಚುನಾಯಿತರಾದ ದಿನಾಂಕದಿಂದ, ಸ್ಥಾಯೀ ಸಮಿತಿಯ ಸದಸ್ಯರನ್ನು ಚುನಾಯಿಸುವುದಕ್ಕಾಗಿ ಸಾಮಾನ್ಯ ಚುನಾವಣೆಯು ನಡೆದ ತರುವಾಯ ಯಾವ ತಿಂಗಳಿನಲ್ಲಿ ಮೊದಲನೇ ಸಭೆಯು ನಡೆಯಿತೋ ಅದೇ ತಿಂಗಳಿನಲ್ಲಿ ಆ ನಂತರ ನಡೆದ ಮೊದಲನೇ ಸಭೆಯಲ್ಲಿ ಸ್ಥಾಯೀ ಸಮಿತಿಯ ಸದಸ್ಯರನ್ನು ಚುನಾಯಿಸುವವರೆಗಿನ ಆ ಅವಧಿಗೆ ಮಾತ್ರವೇ ಸ್ಥಾಯೀ ಸಮಿತಿಯ ಸದಸ್ಯನಾಗಿ ಪದಧಾರಣ ಮಾಡತಕ್ಕದ್ದು.][1]

1. 1991 ರ ಅಧಿನಿಯಮ ಸಂಖ್ಯೆ 32 ರ ಮೂಲಕ 29.05.1991 ರಿಂದ ಸೇರಿಸಲಾಗಿದೆ.

(6) ಸ್ಥಾಯೀ ಸಮಿತಿಯ ಸದಸ್ಯತ್ವದಲ್ಲಿ ಆಕಸ್ಮಿಕ ಖಾಲೀ ಸ್ಥಾನ ಉಂಟಾದಲ್ಲಿ ಅದನ್ನು ನಗರಪಾಲಿಕೆಯು ಬೇರೊಬ್ಬ ಕೌನ್ಸಿಲರನನ್ನು ಚುನಾಯಿಸುವ ಮೂಲಕ ಭರ್ತಿಮಾಡತಕ್ಕದ್ದು. ಹಾಗೆ ಚುನಾಯಿತನಾದ ವ್ಯಕ್ತಿಯು, ಯಾವ ವ್ಯಕ್ತಿಯ ಸ್ಥಾನಕ್ಕೆ ಅವನು ಚುನಾಯಿತನಾದನೋ, ಆತನ ಸ್ಥಾನವು ಖಾಲಿಯಾಗಿರದಿದ್ದರೆ ಆ ವ್ಯಕ್ತಿಯು ಎಲ್ಲಿಯವರೆಗೆ ಪದಧಾರಣ ಮಾಡುತ್ತಿದ್ದನೋ ಅಲ್ಲಿಯವರೆಗೆ ಪದಧಾರಣ ಮಾಡತಕ್ಕದ್ದು.

(7) ಸ್ಥಾಯೀ ಸಮಿತಿಯ ಸದಸ್ಯನು, ಸ್ಥಾಯೀ ಸಮಿತಿಯ ಅಧ್ಯಕ್ಷರಿಗೆ ಸಂಬೋಧಿಸಿದ [1][ಅಥವಾ ಅಧ್ಯಕ್ಷರು ಇಲ್ಲದಿದ್ದರೆ ಮೇಯರ್ ಅವರಿಗೆ ಸಂಭೋದಿಸಿ ಅಧ್ಯಕ್ಷರಿಗೆ ಅಥವಾ ಸಂದರ್ಭಾನುಸಾರ ಮೇಯರ್‌ರವರಿಗೆ ತಲುಪಿಸಿದ][1] ಲಿಖಿತ ನೋಟೀಸಿನ ಮೂಲಕ ಯಾವುದೇ ಕಾಲದಲ್ಲಿ ತನ್ನ ಪದಕ್ಕೆ ರಾಜೀನಾಮೆ ಕೊಡಬಹುದು ಮತ್ತು ಅಂಥ ರಾಜೀನಾಮೆಯು ಅದನ್ನು ತಲುಪಿಸಿದ ದಿನಾಂಕದಿಂದ ಪರಿಣಾಮಕಾರಿಯಾಗಿರತಕ್ಕದ್ದು.

1. 1994ರ ಅಧಿನಿಯಮದ ಸಂಖ್ಯೆ 35ರ ಮೂಲಕ ಪ್ರತ್ಯಾಯೋಜಿಸಲಾಗಿದೆ, ಜಾರಿಗೆ ಬಂದಿರುವ ಅಧಿಸೂಚನೆ ಲಭ್ಯವಾಗಿಲ್ಲ.

**12. ಸ್ಥಾಯೀ ಸಮಿತಿಗಳ ಅಧ್ಯಕ್ಷರು.–** (1) ಪ್ರತಿಯೊಂದು ಸ್ಥಾಯೀ ಸಮಿತಿಯು ತನ್ನ ಸದಸ್ಯರುಗಳಲ್ಲಿ ಒಬ್ಬನನ್ನು ಅಧ್ಯಕ್ಷನನ್ನಾಗಿ ಚುನಾಯಿಸತಕ್ಕದ್ದು.

(2) ಅಂಥ ಅಧ್ಯಕ್ಷನು, ತನ್ನ ಉತ್ತರಾಧಿಕಾರಿಯು ಚುನಾಯಿತನಾಗುವವರೆಗೆ ಪದಧಾರಣ ಮಾಡತಕ್ಕದ್ದು, ಆದರೆ ಮತ್ತೆ ಚುನಾಯಿತನಾಗಲು ಅರ್ಹನಾಗಿರತಕ್ಕದ್ದು.

(3) (2)ನೇ ಉಪಪ್ರಕರಣದ ಉಪಬಂಧಗಳಲ್ಲಿ ಏನೇ ಇದ್ದಾಗ್ಯೂ, ಅಧ್ಯಕ್ಷನು ಸ್ಥಾಯೀ ಸಮಿತಿಯ ಸದಸ್ಯನಾಗಿರುವುದು ನಿಂತುಹೋದಾಗ ತನ್ನ ಪದವನ್ನು ತೆರವು ಮಾಡತಕ್ಕದ್ದು.

(4) ಅಧ್ಯಕ್ಷರ ಪದದಲ್ಲಿ ಯಾವುದೇ ಆಕಸ್ಮಿಕ ಖಾಲಿ ಸ್ಥಾನ ಉಂಟಾದರೆ, ಸಂಬಂಧಪಟ್ಟ ಸ್ಥಾಯೀ ಸಮಿತಿಯು, ಅಂಥ ಖಾಲಿ ಸ್ಥಾನವು ಉಂಟಾದ ನಂತರ, ಅಂಥ ಖಾಲಿ ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಅದರ ಸದಸ್ಯರಲ್ಲಿ ಒಬ್ಬರನ್ನು ಚುನಾಯಿಸತಕ್ಕದ್ದು ಮತ್ತು ಹಾಗೆ ಚುನಾಯಿತನಾದ ಪ್ರತಿಯೊಬ್ಬ ವ್ಯಕ್ತಿಯು, ಯಾರ ಸ್ಥಾನಕ್ಕೆ ಅವನು ಚುನಾಯಿತನಾದನೋ, ಅವನ ಸ್ಥಾನವು ಖಾಲಿ ಆಗದೆ ಇದ್ದಿದ್ದರೆ, ಎಲ್ಲಿಯವರೆಗೆ ಅವನು ಪದವನ್ನು ಧಾರಣ ಮಾಡಬಹುದಾಗಿತ್ತೋ ಅಲ್ಲಿಯವರೆಗೆ ಮಾತ್ರವೇ ಪದದಲ್ಲಿ ಮುಂದುವರಿಯತಕ್ಕದ್ದು.

**13. ಸ್ಥಾಯೀ ಸಮಿತಿಗಳು ಮತ್ತು ಅಧ್ಯಕ್ಷರಿಗೆ ಮಾಡಿದ ಉಲ್ಲೇಖದ ಅರ್ಥಾನ್ವಯ.–** (1) ಈ ಅಧಿನಿಯಮದಲ್ಲಿ 'ಸ್ಥಾಯೀ ಸಮಿತಿ' ಎಂಬ ಪದಾವಳಿಯು ಬಂದ ಕಡೆಯಲ್ಲೆಲ್ಲಾ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಯಾವ ಅಧಿಕಾರಕ್ಕೆ ಅಥವಾ ಕರ್ತವ್ಯಕ್ಕೆ ಸಂಬಂಧಿಸಿದಂತೆ ಈ ಪದಾವಳಿಯನ್ನು ಬಳಸಲಾಗಿದೆಯೋ ಆ ಅಧಿಕಾರವನ್ನು ಅಥವಾ ಕರ್ತವ್ಯವನ್ನು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಯಾವ ನಿರ್ದಿಷ್ಟ ಸ್ಥಾಯೀ ಸಮಿತಿಗೆ ವಹಿಸಲಾಗಿದೆಯೋ ಆ ನಿರ್ದಿಷ್ಟ ಸ್ಥಾಯೀ ಸಮಿತಿಗೆ ಮಾಡಿದ ಉಲ್ಲೇಖವೆಂದು ಭಾವಿಸತಕ್ಕದ್ದು ಮತ್ತು ಯಾವುದೇ ಇತರ ಕಾನೂನಿನಲ್ಲಿ ಸ್ಥಾಯೀ ಸಮಿತಿಗೆ ಮಾಡಿದ ಎಲ್ಲಾ ಉಲ್ಲೇಖಗಳನ್ನು ಅಂಥ ಕಾನೂನಿನ ಮೂಲಕ ಯಾವ ನಿರ್ದಿಷ್ಟ ಸ್ಥಾಯೀ ಸಮಿತಿಗೆ ಅಧಿಕಾರವನ್ನು ಪ್ರದಾನ ಮಾಡಲಾಗಿದೆಯೋ ಅಥವಾ ಕರ್ತವ್ಯವನ್ನು ವಿಧಿಸಲಾಗಿದೆಯೋ ಆ ನಿರ್ದಿಷ್ಟ ಸ್ಥಾಯೀ ಸಮಿತಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

(2) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಥವಾ ಇತರೆ ಯಾವುದೇ ಕಾನೂನಿನ ಮೇರೆಗೆ ಆ ಸ್ಥಾಯೀ ಸಮಿತಿಯ 'ಅಧ್ಯಕ್ಷ'ರಿಗೆ ಮಾಡಿದ ಯಾವುದೇ ಉಲ್ಲೇಖವನ್ನು ಯಾವ ಅಧಿಕಾರಕ್ಕೆ ಅಥವಾ ಕರ್ತವ್ಯಕ್ಕೆ ಸಂಬಂಧಿಸಿದಂತೆ ಆ ಉಲ್ಲೇಖವನ್ನು ಮಾಡಲಾಗಿದೆಯೋ ಆ ಅಧಿಕಾರವನ್ನು ಅಥವಾ ಕರ್ತವ್ಯವನ್ನು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಥವಾ ಅಂಥ ಕಾನೂನಿನ ಮೇರೆಗೆ ಯಾವ ನಿರ್ದಿಷ್ಟ ಸ್ಥಾಯೀ ಸಮಿತಿಗೆ ವಹಿಸಲಾಗಿದೆಯೋ ಆ ನಿರ್ದಿಷ್ಟ ಸ್ಥಾಯೀ ಸಮಿತಿಯ ಅಧ್ಯಕ್ಷರಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

## [1][ಅಧ್ಯಾಯ – IIIಎ

## ಪ್ರದೇಶ ಸಭಾಗಳು ಹಾಗೂ ವಾರ್ಡ್ ಸಮಿತಿಗಳು

**13ಎ. ಪರಿಭಾಷೆಗಳು ಮತ್ತು ಅನ್ವಯ.–** (1) ಈ ಅಧ್ಯಾಯದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) 'ಪ್ರದೇಶ' ಎಂದರೆ, 13ಬಿ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ನಿರ್ಧರಿಸಲಾದ ಪ್ರದೇಶ;

(ಬಿ) ಒಂದು ಪ್ರದೇಶದ ಸಂಬಂಧದಲ್ಲಿ 'ಪ್ರದೇಶ ಸಭಾ' ಎಂದರೆ, ಆ ಪ್ರದೇಶದ ಯಾವುದೇ ಮತಗಟ್ಟೆಗೆ ಸಂಬಂಧಪಡುವ ಮತದಾರರ ಪಟ್ಟಿಯಲ್ಲಿ ಮತದಾರರಾಗಿ ನೋಂದಣಿಯಾಗಿರುವ ಎಲ್ಲಾ ವ್ಯಕ್ತಿಗಳ ನಿಕಾಯ;

(ಸಿ) 'ಅಸೋಸಿಯೇಷನ್' ಎಂದರೆ, ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ ಮೇರೆಗೆ ನೋಂದಾಯಿತವಾದ ಹಾಗೂ 13ಹೆಚ್ ಪ್ರಕರಣದ (2)ನೇ ಉಪಪ್ರಕರಣದ (ಸಿ) ಖಂಡದ (iii)ನೇ ಉಪಖಂಡದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದ ಒಂದು ನ್ಯಾಸ, ಸಂಘ, ಅಸೋಸಿಯೇಷನ್ ಅಥವಾ ಸಂಸ್ಥೆ;

(ಡಿ) 'ಮತಗಟ್ಟೆ' ಎಂದರೆ, ನಗರಪಾಲಿಕೆಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿ ಸ್ಥಾಪಿಸಿರುವ ಮತಗಟ್ಟೆ;

(ಇ) 'ವಾರ್ಡ್ ಸಮಿತಿ' ಎಂದರೆ 13ಹೆಚ್ ಪ್ರಕರಣದ ಮೇರೆಗೆ ರಚಿಸಿದ ಸಮಿತಿ;

(ಎಫ್) 'ವಾರ್ಡ್ ಅಭಿವೃದ್ಧಿ ಯೋಜನೆ'ಯು ನಗರಪಾಲಿಕೆಯಿಂದ ವಾರ್ಡ್ ಸಮಿತಿಗೆ ಹಂಚಿಕೆಯಾದ ಬಜೆಟ್‌ಗಾಗಿ ಅದು ಸಿದ್ಧಪಡಿಸಿದ ಅಭಿವೃದ್ಧಿ ಯೋಜನೆ ಆಗಿರತಕ್ಕದ್ದು.

(2) ಈ ಅಧ್ಯಾಯದ ಉಪಬಂಧಗಳು, ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ನಗರಪಾಲಿಕೆಗಳಿಗೆ ಅನ್ವಯವಾಗತಕ್ಕದ್ದು.

**13ಬಿ. ಪ್ರದೇಶಗಳ ನಿರ್ಧಾರ.–** ರಾಜ್ಯ ಸರ್ಕಾರವು, ಆದೇಶದ ಮೂಲಕ,–

(ಎ) ಪ್ರತಿಯೊಂದು ವಾರ್ಡನ್ನು ಯಾವ ಪ್ರದೇಶಗಳನ್ನಾಗಿ ವಿಭಾಗಿಸಬೇಕಾಗಿದೆಯೋ ಆ ಪ್ರದೇಶಗಳನ್ನು ನಿರ್ಧರಿಸತಕ್ಕದ್ದು; ಮತ್ತು

(ಬಿ) ಪ್ರತಿಯೊಂದು ಪ್ರದೇಶವು, ಒಂದು ವಾರ್ಡ್‌ನಲ್ಲಿನ ಒಂದು ಅಥವಾ ಒಂದಕ್ಕೊಂದು ಹೊಂದಿಕೊಂಡಿರುವ ಹೆಚ್ಚು ಮತಗಟ್ಟೆಗಳ ಮತದಾನ ಪ್ರದೇಶವನ್ನು ಒಳಗೊಳ್ಳತಕ್ಕದ್ದು, ಆದರೆ ಯಾವುದೇ ಸಂದರ್ಭದಲ್ಲಿ ಅಂಥ ಐದು ಮತಗಟ್ಟೆಗಳ ಒಟ್ಟು ಪ್ರದೇಶವನ್ನು ಅದು ಮೀರತಕ್ಕದ್ದಲ್ಲ:

ಪರಂತು, ಯಾವುದೇ ಮತಗಟ್ಟೆಯ ಮತದಾನ ಪ್ರದೇಶವನ್ನು ಎರಡು ಅಥವಾ ಹೆಚ್ಚಿನ ಪ್ರದೇಶಗಳನ್ನಾಗಿ ವಿಭಾಗಿಸತಕ್ಕದ್ದಲ್ಲ.

**13ಸಿ. ಪ್ರದೇಶ ಸಭಾಗಳ ರಚನೆ.–** (1) ಪ್ರತಿಯೊಂದು ಪ್ರದೇಶಕ್ಕೆ ಒಂದು ಪ್ರದೇಶ ಸಭಾ ಇರತಕ್ಕದ್ದು.

(2) ಒಂದು ಪ್ರದೇಶದಲ್ಲಿನ ಮತಗಟ್ಟೆಗಳ ಮತದಾರರ ಪಟ್ಟಿಗಳಲ್ಲಿ ಮತದಾರರಾಗಿ ನೋಂದಣಿಯಾಗಿರುವಂಥ ಎಲ್ಲಾ ವ್ಯಕ್ತಿಗಳು ಆ ಪ್ರದೇಶ ಸಭಾದ ಸದಸ್ಯರಾಗಿರತಕ್ಕದ್ದು.

**13ಡಿ. ಪ್ರದೇಶ ಸಭಾದ ಪ್ರತಿನಿಧಿಗಳು.–** (1) ಪ್ರತಿಯೊಂದು ಪ್ರದೇಶವು, ನಿರ್ದಿಷ್ಟ ವಾರ್ಡ್‌ನ ಕೌನ್ಸಿಲರ್‌ರವರ ಶಿಫಾರಸಿನ ಮೇಲೆ ನಗರಪಾಲಿಕೆಯಿಂದ ನಾಮನಿರ್ದೇಶಿತರಾಗುವ ಒಬ್ಬ ಪ್ರದೇಶ ಸಭಾ ಪ್ರತಿನಿಧಿಯನ್ನು ಹೊಂದಿರತಕ್ಕದ್ದು:

ಪರಂತು, ನಗರಪಾಲಿಕೆಯು ರಚನೆಯಾದ ಅಥವಾ ಪುನರ್‌ರಚನೆಯಾದ ದಿನಾಂಕದಿಂದ ತೊಂಬತ್ತು ದಿನಗಳ ಒಳಗೆ ಯಾವುದೇ ಶಿಫಾರಸನ್ನು ಸ್ವೀಕರಿಸದಿದ್ದಲ್ಲಿ, ಆಯುಕ್ತರು, ನಾಮನಿರ್ದೇಶನಕ್ಕಾಗಿ ನಗರಪಾಲಿಕೆಗೆ ಹೆಸರುಗಳನ್ನು ಶಿಫಾರಸು ಮಾಡತಕ್ಕದ್ದು.

(2) ಯಾವುದೇ ವಾರ್ಡ್‌ನ ಕೌನ್ಸಿಲರನು, ಯಾವುದೇ ಕಾರಣಕ್ಕಾಗಿ, ನಗರಪಾಲಿಕೆಯ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆಯೇ ಕೌನ್ಸಿಲರನಾಗಿರುವುದು ನಿಂತುಹೋದಲ್ಲಿ, ಆ ವಾರ್ಡಿನ ಪ್ರದೇಶ ಸಭಾ ಪ್ರತಿನಿಧಿಗಳು ಸಹ ಪ್ರದೇಶ ಸಭಾ ಪ್ರತಿನಿಧಿಗಳಾಗಿರುವುದು ನಿಂತುಹೋಗತಕ್ಕದ್ದು ಮತ್ತು ಹೊಸ ಪ್ರದೇಶ ಸಭಾ ಪ್ರತಿನಿಧಿಗಳನ್ನು (1)ನೇ ಉಪ–ಪ್ರಕರಣಕ್ಕೆ ಅನುಸಾರವಾಗಿ ನಾಮನಿರ್ದೇಶನ ಮಾಡತಕ್ಕದ್ದು.

(3) ಪ್ರದೇಶ ಸಭಾ ಪ್ರತಿನಿಧಿಯು ಆ ಪ್ರದೇಶ ಸಭಾದ ಸದಸ್ಯರಾಗಿರತಕ್ಕದ್ದು.

(4) ಕೌನ್ಸಿಲರ್‌ನಾಗಿ ಚುನಾಯಿತನಾಗುವುದಕ್ಕೆ ಅನರ್ಹನಾಗಿರುವ ಯಾರೇ ವ್ಯಕ್ತಿಯನ್ನು ಪ್ರದೇಶ ಸಭಾ ಪ್ರತಿನಿಧಿಯನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

**13ಇ. ಪದಾವಧಿ.–** 13ಡಿ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು, ಪ್ರದೇಶ ಸಭಾ ಪ್ರತಿನಿಧಿಯ ಪದಾವಧಿಯು, ಸಂಬಂಧಪಟ್ಟ ನಗರ ಪಾಲಿಕೆಯ ಕೌನ್ಸಿಲರನ ಪದಾವಧಿಯು ಮುಕ್ತಾಯವಾಗುತ್ತಿದ್ದಂತೆಯೇ ಮುಕ್ತಾಯವಾಗತಕ್ಕದ್ದು:

ಪರಂತು, ಯಾರೇ ವ್ಯಕ್ತಿಯು, ತನ್ನ ಪದಾವಧಿಯ ಯಾವುದೇ ಕಾಲದಲ್ಲಿ ಸಂಬಂಧಪಟ್ಟ ನಗರಪಾಲಿಕೆಗೆ ಚುನಾವಣೆಯ ಉದ್ದೇಶಕ್ಕಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಗೊತ್ತುಪಡಿಸಿದ ಯಾವುದೇ ಅನರ್ಹತೆಗಳಿಗೆ ಅವನು ಒಳಗಾದರೆ ಪ್ರದೇಶ ಸಭಾದ ಪ್ರತಿನಿಧಿಯಾಗಿ ಮುಂದುವರೆಯತಕ್ಕದ್ದಲ್ಲ:

ಮತ್ತು ಪರಂತು, ಯಾರೇ ವ್ಯಕ್ತಿಯು ಪ್ರದೇಶ ಸಭಾದ ಸದಸ್ಯನಾಗಿ ಮುಂದುವರೆಯುವುದು ನಿಂತುಹೋಗುವುದೋ ಆ ಪ್ರದೇಶ ಸಭಾದ ಪ್ರತಿನಿಧಿಯಾಗಿ ಪದಧಾರಣ ಮಾಡುವುದು ಮುಂದುವರೆಯತಕ್ಕದ್ದಲ್ಲ ಅಥವಾ ಧಾರಣ ಮಾಡುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

**13ಎಫ್. ಪ್ರದೇಶ ಸಭಾ ಸಭೆಗಳು.–** (1) ಪ್ರದೇಶ ಸಭೆಯು ಕನಿಷ್ಠ ಪಕ್ಷ ಮೂರು ತಿಂಗಳಿಗೆ ಒಮ್ಮೆ ಸಭೆ ಸೇರತಕ್ಕದ್ದು. ಪ್ರದೇಶ ಸಭಾ ಪ್ರತಿನಿಧಿಯು ಆ ಪ್ರದೇಶ ಸಭಾ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(2) ನಗರಪಾಲಿಕೆಯ ಆಯುಕ್ತರು, ಪ್ರತಿಯೊಂದು ಪ್ರದೇಶ ಸಭಾದ ನೋಡಲ್ ಅಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಮುಚಿತ ದರ್ಜೆಯ ಅಧಿಕಾರಿಯನ್ನು ಹೆಸರಿಸತಕ್ಕದ್ದು ಮತ್ತು ಪ್ರದೇಶ ಸಭಾದ ಸಭೆಗಳನ್ನು ನಡೆಸುವಲ್ಲಿ ಪ್ರದೇಶ ಸಭಾ ಪ್ರತಿನಿಧಿಗಳಿಗೆ ಎಲ್ಲಾ ಆಡಳಿತಾತ್ಮಕ ನೆರವನ್ನು ಅವರು ಒದಗಿಸತಕ್ಕದ್ದು. ನೋಡಲ್ ಅಧಿಕಾರಿಯು ಪ್ರದೇಶ ಸಭಾ ಸಭೆಗಳ ಸಂಚಾಲಕರಾಗಿರತಕ್ಕದ್ದು ಮತ್ತು ಪ್ರದೇಶ ಸಭಾ ಪ್ರತಿನಿಧಿಗಳೊಂದಿಗೆ ಸಮಾಲೋಚಿಸಿ ಸಭೆಗಳನ್ನು ಸಮಾವೇಶಗೊಳಿಸತಕ್ಕದ್ದು. ಸಭೆಯ ವ್ಯವಹರಣೆಗಳ ಎಲ್ಲಾ ನಡವಳಿಗಳನ್ನು ನೋಡಲ್ ಅಧಿಕಾರಿಯು ದಾಖಲಿಸತಕ್ಕದ್ದು ಮತ್ತು ಅವರು ಅದರ ಪ್ರತಿಯನ್ನು ವಾರ್ಡ್ ಸಮಿತಿಗೆ ಕಳುಹಿಸತಕ್ಕದ್ದು.

(3) ಪ್ರದೇಶ ಸಭಾದಲ್ಲಿನ ಎಲ್ಲಾ ನಿರ್ಧಾರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಹಾಜರಿರುವ ಎಲ್ಲಾ ಸದಸ್ಯರ ಒಮ್ಮತಾಭಿಪ್ರಾಯದ ಮೂಲಕ ಕೈಗೊಳ್ಳತಕ್ಕದ್ದು. ಒಮ್ಮತಾಭಿಪ್ರಾಯವು ಸಾಧ್ಯವಾಗದಿದ್ದಲ್ಲಿ, ಹಾಜರಿರುವ ಸದಸ್ಯರ ಬಹುಮತದೊಂದಿಗೆ ನಿರ್ಧಾರವನ್ನು ತೆಗೆದುಕೊಳ್ಳತಕ್ಕದ್ದು.

**13ಜಿ. ಪ್ರದೇಶ ಸಭಾದ ಪ್ರಕಾರ್ಯಗಳು ಮತ್ತು ಕರ್ತವ್ಯಗಳು.–** ಪ್ರದೇಶ ಸಭಾವು, ತನ್ನ ವ್ಯವಸ್ಥಾಪನಾ, ತಾಂತ್ರಿಕ, ಆರ್ಥಿಕ ಮತ್ತು ಸಾಂಸ್ಥಿಕ ಸಾಮರ್ಥ್ಯವನ್ನು ಮತ್ತು ನಗರಪಾಲಿಕೆಯಲ್ಲಿ ಪ್ರಚಲಿತವಿರುವ ವಾಸ್ತವಿಕ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಹಾಗೂ ಈ ಮುಂದಿನ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(1) ಅದು, ವಾರ್ಡ್ ಅಭಿವೃದ್ಧಿ ಯೋಜನೆಯಲ್ಲಿ ಮತ್ತು ಕಾರ್ಯಕ್ರಮಗಳಲ್ಲಿ ಹಾಗೂ ನಗರಪಾಲಿಕೆಯು ಅನುಷ್ಠಾನಗೊಳಿಸುವ ಯೋಜನೆಗಳಲ್ಲಿ ಸೇರಿಸುವುದಕ್ಕಾಗಿ ಪ್ರದೇಶದಲ್ಲಿ ಅನುಷ್ಠಾನಗೊಳಿಸಲಾಗುವ ಯೋಜನೆಗಳ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಸ್ತಾವಗಳನ್ನು ವಾರ್ಡ್ ಸಮಿತಿಗೆ ಅಥವಾ ಅದು ಇಲ್ಲದ ಸಂದರ್ಭದಲ್ಲಿ ನಗರಪಾಲಿಕೆಗೆ ಕಳುಹಿಸಿಕೊಡತಕ್ಕದ್ದು.

(2) ಅದು ನಗರಪಾಲಿಕೆಯ ಫಲಾನುಭವಿ ಆಧಾರಿತ ಯೋಜನೆಗಳಿಗಾಗಿ ಪ್ರದೇಶದಿಂದ ಅರ್ಹ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಳ್ಳತಕ್ಕದ್ದು ಮತ್ತು ಅನುಮೋದನೆಗಾಗಿ ಅರ್ಹ ವ್ಯಕ್ತಿಗಳ ಪಟ್ಟಿಯನ್ನು ವಾರ್ಡ್ ಸಮಿತಿಗೆ ಅಥವಾ ಅದು ಇಲ್ಲದಿದ್ದಲ್ಲಿ, ನಗರಪಾಲಿಕೆಗೆ ಕಳುಹಿಸಿಕೊಡತಕ್ಕದ್ದು.

(3) ಅದು ಪಿಂಚಣಿಗಳು ಹಾಗೂ ಸಹಾಯಧನಗಳಂಥ ಸರ್ಕಾರದಿಂದ ಬರುವ ವಿವಿಧ ರೀತಿಯ ಕಲ್ಯಾಣದ ನೆರವನ್ನು ಪಡೆದುಕೊಳ್ಳುವ ವ್ಯಕ್ತಿಗಳ ಅರ್ಹತೆಯನ್ನು ಮರುಪರಿಶೀಲನೆ ಮಾಡತಕ್ಕದ್ದು ಮತ್ತು ಅನರ್ಹ ಫಲಾನುಭವಿಗಳು ಯಾರಾದರೂ ಇದ್ದಲ್ಲಿ ಅವರ ಪಟ್ಟಿಯನ್ನು ವಾರ್ಡ್ ಸಮಿತಿಗೆ ಅಥವಾ ಅದು ಇಲ್ಲದಿದ್ದಲ್ಲಿ ನಗರಪಾಲಿಕೆಗೆ ಸಲ್ಲಿಸತಕ್ಕದ್ದು.

(4) ಅದು ತೆರಿಗೆ ಮ್ಯಾಪಿಂಗ್ ಅನ್ನು ಬೆಂಬಲಿಸತಕ್ಕದ್ದು ಮತ್ತು ಪೌರಸಭಾ ತೆರಿಗೆಗಳು ಮತ್ತು ಬಳಕೆದಾರ ದರಗಳನ್ನು ಸಂದಾಯ ಮಾಡಲು ಪ್ರದೇಶ ಸಭಾದ ಸದಸ್ಯರ ಹೊಣೆಗಾರಿಕೆಗಳನ್ನು ಅವರಿಗೆ ನೆನಪಿಸತಕ್ಕದ್ದು ಮತ್ತು ಅವರನ್ನು ಪ್ರೋತ್ಸಾಹಿಸತಕ್ಕದ್ದು.

(5) ಅದು ನೀರಿನ ಪೂರೈಕೆಯಲ್ಲಿನ ನ್ಯೂನ್ಯತೆಗಳನ್ನು ಗುರುತಿಸಿ, ಪರಿಹಾರೋಪಾಯಗಳನ್ನು ಸೂಚಿಸತಕ್ಕದ್ದು.

(6) ಅದು ನೈರ್ಮಲ್ಯ ವ್ಯವಸ್ಥೆಗಳಲ್ಲಿನ ನ್ಯೂನ್ಯತೆಗಳನ್ನು ಗುರುತಿಸಿ ಪರಿಹಾರೋಪಾಯಗಳನ್ನು ಸೂಚಿಸತಕ್ಕದ್ದು.

(7) ಅದು ಬೀದಿ ದೀಪಗಳ ವ್ಯವಸ್ಥೆಗಳಲ್ಲಿನ ನ್ಯೂನತೆಗಳನ್ನು ಗುರುತಿಸಿ, ಪರಿಹಾರೋಪಾಯಗಳನ್ನು ಸೂಚಿಸತಕ್ಕದ್ದು.

(8) ಅದು, ಪ್ರದೇಶದಲ್ಲಿ ಸ್ವಚ್ಛತೆ, ಪರಿಸರ ಸಂರಕ್ಷಣೆ ಹಾಗೂ ಮಾಲಿನ್ಯವನ್ನು ತಡೆಗಟ್ಟುವುದು ಮತ್ತು ಉದ್ಯಾನವನಗಳ ಸಂರಕ್ಷಣೆ ಹಾಗೂ ಅಂಥ ಇತರೆ ಸಾರ್ವಜನಿಕ ಸೌಕರ್ಯಗಳ ಯೋಜನೆಗಳಂಥ ಸಾರ್ವಜನಿಕ ಹಿತಾಸಕ್ತಿಯ ವಿಷಯಗಳ ಬಗ್ಗೆ ಅರಿವನ್ನು ಮೂಡಿಸತಕ್ಕದ್ದು.

(9) ಅದು, ವಿಶೇಷವಾಗಿ ರೋಗ ತಡೆಗಟ್ಟುವುದು ಹಾಗೂ ಕುಟುಂಬ ಕಲ್ಯಾಣ ವಿಷಯಗಳಲ್ಲಿ ಪ್ರದೇಶದಲ್ಲಿನ ಸಾರ್ವಜನಿಕ ಆರೋಗ್ಯ ಕೇಂದ್ರಗಳ ಚಟುವಟಿಕೆಗಳಿಗೆ ನೆರವು ನೀಡತಕ್ಕದ್ದು ಮತ್ತು ಸಾಂಕ್ರಾಮಿಕ ರೋಗಗಳು ಹಾಗೂ ನೈಸರ್ಗಿಕ ವಿಕೋಪಗಳ ಬಗ್ಗೆ ಅರಿವು ಮೂಡಿಸತಕ್ಕದ್ದು ಮತ್ತು ಆ ಬಗ್ಗೆ ವರದಿ ಮಾಡತಕ್ಕದ್ದು.

(10) ಅದು, ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸ್ವಯಂಸೇವಾ ಕಾರ್ಮಿಕರನ್ನು ಒದಗಿಸತಕ್ಕದ್ದು ಮತ್ತು ಸಜ್ಜುಗೊಳಿಸತಕ್ಕದ್ದು ಮತ್ತು ನಗದು ರೂಪದಲ್ಲಿ ಮತ್ತು ವಸ್ತುರೂಪಗಳಲ್ಲಿ ಕೊಡುಗೆಗಳನ್ನು ಒದಗಿಸತಕ್ಕದ್ದು ಮತ್ತು ಕ್ರೋಡೀಕರಿಸತಕ್ಕದ್ದು ಮತ್ತು ಅಂಥ ಅಭಿವೃದ್ಧಿ ಕಾಮಗಾರಿಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ಮೇಲ್ವಿಚಾರಣೆ ಮಾಡತಕ್ಕದ್ದು.

(11) ಅದು, ಪ್ರದೇಶದಲ್ಲಿನ ಜನರ ವಿವಿಧ ಗುಂಪುಗಳ ನಡುವೆ ಸಾಮರಸ್ಯವನ್ನು ಮತ್ತು ಒಗ್ಗಟ್ಟನ್ನು ಸಂವರ್ಧಿಸತಕ್ಕದ್ದು ಮತ್ತು ಸಾಂಸ್ಕೃತಿಕ ಮತ್ತು ಕ್ರೀಡಾ ಚಟುವಟಿಕೆಗಳನ್ನು ಪ್ರೋತ್ಸಾಹಿಸತಕ್ಕದ್ದು.

(12) ವಾರ್ಡ್ ಸಮಿತಿಗೆ ವಹಿಸಿದಂಥ ಯಾವುದೇ ಪ್ರಕಾರ್ಯಗಳ ನಿರ್ವಹಣೆಯಲ್ಲಿ ವಾರ್ಡ್ ಸಮಿತಿಗೆ ಅದು ಸಹಕಾರ ನೀಡತಕ್ಕದ್ದು.

(13) ಉಪವಿಧಿಗಳಿಗೆ ಅನುಸಾರವಾಗಿ ನಗರಪಾಲಿಕೆಯು ಅದಕ್ಕೆ ವಹಿಸಬಹುದಾದಂಥ ಇತರೆ ಪ್ರಕಾರ್ಯಗಳನ್ನು ಅದು ನಿರ್ವಹಿಸತಕ್ಕದ್ದು.

**13ಹೆಚ್. ವಾರ್ಡ್ ಸಮಿತಿಯ ರಚನೆ, ಪ್ರಾದೇಶಿಕ ಪ್ರದೇಶ ಹಾಗೂ ಸ್ಥಾನಗಳನ್ನು ಭರ್ತಿಮಾಡುವ ವಿಧಾನ.–** (1) ನಗರಪಾಲಿಕೆಯಲ್ಲಿ ಪ್ರತಿಯೊಂದು ವಾರ್ಡ್‌ಗೆ ಒಂದು ವಾರ್ಡ್ ಸಮಿತಿ ಇರತಕ್ಕದ್ದು.

(2) ವಾರ್ಡ್ ಸಮಿತಿಯು ಈ ಮುಂದಿನವರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ವಾರ್ಡ್‌ನ್ನು ಪ್ರತಿನಿಧಿಸುವ ನಗರಪಾಲಿಕೆಯ ಕೌನ್ಸಿಲರ್ ವಾರ್ಡ್ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು.

(ಬಿ) ನಗರ ಪಾಲಿಕೆಯಿಂದ ನಾಮನಿರ್ದೇಶಿತರಾಗುವ ಹತ್ತು ಜನ ಇತರೆ ಸದಸ್ಯರು, ಅವರುಗಳಲ್ಲಿ,–

(i) ಅನುಸೂಚಿತ ಜಾತಿಗಳಿಗೆ ಹಾಗೂ ಅನುಸೂಚಿತ ಪಂಗಡಗಳಿಗೆ ಸೇರಿದ ಕನಿಷ್ಠ ಇಬ್ಬರು ಸದಸ್ಯರು;

(ii) ಕನಿಷ್ಠ ಮೂವರು ಮಹಿಳಾ ಸದಸ್ಯರು; ಮತ್ತು

(iii) ಈ ಕೆಳಗೆ ತಿಳಿಸಿದ ಎಲ್ಲ ಷರತ್ತುಗಳನ್ನು ಪಾಲಿಸುವ, ಯಾವುದೇ ಹೆಸರಿನಿಂದ ಕರೆಯಲಾಗುವ ನಿವಾಸಿಗಳ ಅಸೋಸಿಯೇಷನ್‌ಅನ್ನು ಪ್ರತಿನಿಧಿಸುವ ಕನಿಷ್ಠ ಇಬ್ಬರು ಸದಸ್ಯರು, ಎಂದರೆ:–

(ಎ) ಅದರ ನೋಂದಾಯಿತ ಕಚೇರಿಯು, ಆ ವಾರ್ಡ್‌ನ ಅಧಿಕಾರ ವ್ಯಾಪ್ತಿಯಲ್ಲಿರತಕ್ಕದ್ದು;

(ಬಿ) ಅದು ಬಹುಸಂಖ್ಯೆಯ ನಿವಾಸಿಗಳನ್ನು ಅಥವಾ ನಾಗರಿಕ ಸಮೂಹಗಳನ್ನು ಅಥವಾ ವಾಣಿಜ್ಯ ಸಮೂಹಗಳನ್ನು ಅಥವಾ ಕೈಗಾರಿಕಾ ಸಮೂಹಗಳನ್ನು ಪ್ರತಿನಿಧಿಸತಕ್ಕದ್ದು.

(ಸಿ) ಅದು ಮೂರು ವರ್ಷಗಳಿಗಿಂತ ಕಡಿಮೆಯಿರದಷ್ಟು ಅವಧಿಗೆ ತನ್ನ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ನಿರತವಾಗಿರತಕ್ಕದ್ದು.

(ಡಿ) ಅದು, ವಿಶ್ವಾಸಾರ್ಹತೆಯಿಂದ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳನ್ನು ಒಳಗೊಂಡ ಯಾವುದೇ ಹೆಸರಿನಿಂದ ಕರೆಯಲಾಗುವ ನೋಂದಾಯಿತ ಅಸೋಸಿಯೇಷನ್ ಆಗಿರತಕ್ಕದ್ದು.

(3) ಕೌನ್ಸಿಲರ್ ಆಗಿ ಚುನಾಯಿತನಾಗುವುದಕ್ಕೆ ಅನರ್ಹಗೊಂಡ ಯಾರೇ ವ್ಯಕ್ತಿಯನ್ನು ವಾರ್ಡ್ ಸಮಿತಿಯ ಸದಸ್ಯನನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(4) ನಗರಪಾಲಿಕೆಯ ಆಯುಕ್ತರು, ವಾರ್ಡ್ ಸಮಿತಿಗೆ ಎಲ್ಲಾ ಆಡಳಿತಾತ್ಮಕ ನೆರವನ್ನು ಒದಗಿಸುವುದಕ್ಕಾಗಿ ಪ್ರತಿ ವಾರ್ಡ್ ಸಮಿತಿಗೆ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಲು ಸಮುಚಿತ ದರ್ಜೆಯ ಅಧಿಕಾರಿಯನ್ನು ಹೆಸರಿಸತಕ್ಕದ್ದು. ವಾರ್ಡ್ ಸಮಿತಿಯ ಸಭೆಯ ಎಲ್ಲಾ ವ್ಯವಹರಣೆಗಳ ನಡವಳಿಕೆಗಳನ್ನು ಕಾರ್ಯದರ್ಶಿಯು ದಾಖಲಿಸತಕ್ಕದ್ದು ಹಾಗೂ ಅದರ ಪ್ರತಿಯನ್ನು ನಗರಪಾಲಿಕೆಗೆ ಕಳುಹಿಸಿಕೊಡತಕ್ಕದ್ದು.

(5) ವಾರ್ಡ್ ಸಮಿತಿಯ ಕಾರ್ಯದರ್ಶಿಯು, ವಾರ್ಡ್ ಸಮಿತಿಯ ಸಭೆಯ ಸಂಚಾಲಕ ಆಗಿರತಕ್ಕದ್ದು ಹಾಗೂ ಅವರು, ಅಧ್ಯಕ್ಷರೊಂದಿಗೆ ಸಮಾಲೋಚಿಸಿ ಸಭೆಗಳನ್ನು ಸಮಾವೇಶಗೊಳಿಸತಕ್ಕದ್ದು.

(6) ವಾರ್ಡ್ ಸಮಿತಿಯು ತಿಂಗಳಲ್ಲಿ ಕನಿಷ್ಠ ಒಮ್ಮೆಯಾದರೂ ಸಭೆ ಸೇರತಕ್ಕದ್ದು.

(7) ವಾರ್ಡ್ ಸಮಿತಿಯ ತೀರ್ಮಾನಗಳನ್ನು ಸಾಮಾನ್ಯವಾಗಿ ವಾರ್ಡ್ ಸಮಿತಿಯ ನಾಮನಿರ್ದೇಶಿತ ಸದಸ್ಯರ ಬಹುಮತದ ಮೂಲಕ ತೆಗೆದುಕೊಳ್ಳತಕ್ಕದ್ದು:

ಪರಂತು, ಅಧ್ಯಕ್ಷರು, ಲಿಖಿತದಲ್ಲಿ ಕಾರಣಗಳನ್ನು ನೀಡುವ ಮೂಲಕ ಯಾವುದೇ ನಿರ್ಧಾರದ ಮೇಲೆ 'ವೀಟೋ' ಚಲಾಯಿಸಬಹುದು. ಅಧ್ಯಕ್ಷರ ನಿರ್ಧಾರವು ಅಂತಿಮವಾದುದಾಗಿರತಕ್ಕದ್ದು ಹಾಗೂ ಅದಕ್ಕೆ ಬದ್ಧವಾಗಿರತಕ್ಕದ್ದು.

(8) ವಾರ್ಡ್ ಸಮಿತಿಯು ಈ ಅಧಿನಿಯಮದ ಮೇರೆಗೆ ಕೈಗೊಂಡ ಯಾವುದೇ ಕ್ರಮ ಅಥವಾ ಕೈಗೊಂಡ ವ್ಯವಹರಣೆಗಳು, ವಾರ್ಡ್ ಸಮಿತಿಯಲ್ಲಿ ಯಾವುದೇ ಖಾಲಿ ಸ್ಥಾನ ಇರುವ ಕಾರಣ ಮಾತ್ರದಿಂದಲೇ ಅಸಿಂಧುವಾಗತಕ್ಕದ್ದಲ್ಲ.

(9) ಆಯುಕ್ತರು ಅಥವಾ ಅವರ ನಾಮನಿರ್ದೇಶಿತರು ವಾರ್ಡ್ ಸಮಿತಿಯ ಸಭೆಗಳಲ್ಲಿ ಮತ್ತು ಚರ್ಚೆಗಳಲ್ಲಿ ಭಾಗವಹಿಸಲು ಹಕ್ಕುಳ್ಳವರಾಗಿರತಕ್ಕದ್ದು. ಸಭೆಗಳಲ್ಲಿ ವಿಶೇಷ ಆಹ್ವಾನಿತರಾಗಿ ಪಾಲ್ಗೊಳ್ಳುವಂತೆ ಸಂಬಂಧಪಟ್ಟ ಇಲಾಖೆಗಳ ಪ್ರತಿನಿಧಿಗಳನ್ನು ವಾರ್ಡ್ ಸಮಿತಿಯ ಅಧ್ಯಕ್ಷರು ಕೋರಬಹುದು.

(10) ನಗರ ಪಾಲಿಕೆಯ ಕೌನ್ಸಿಲರನ ಪದಾವಧಿಯು ಮುಕ್ತಾಯವಾಗುತ್ತಿದ್ದಂತೆಯೇ ನಾಮನಿರ್ದೇಶಿತ ಸದಸ್ಯರ ಅವಧಿಯು, ಮುಕ್ತಾಯವಾಗತಕ್ಕದ್ದು.

(11) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ ನಗರಪಾಲಿಕೆಯು ಆಯವ್ಯಯದಲ್ಲಿ ವಿವಿಧ ಯೋಜನೆಗಳಿಗೆ ನಿಧಿಗಳನ್ನು ಹಂಚಿಕೆ ಮಾಡುವುದರ ಜೊತೆಗೆ ಪ್ರತಿಯೊಂದು ವಾರ್ಡ್‌ಗೆ ವಾರ್ಡ್ ಅಭಿವೃದ್ಧಿ ಯೋಜನೆಗಾಗಿ ನಿಯಮಿಸಿದ ಮೊಬಲಗಿಗಿಂಥ ಕಡಿಮೆಯಿಲ್ಲದ ಮೊಬಲಗನ್ನು ಸಹ ಹಂಚಿಕೆ ಮಾಡಬಹುದು. ಈ ಮೊಬಲಗನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ವಾರ್ಡ್ ಸಮಿತಿಯು ಬಳಸಿಕೊಳ್ಳತಕ್ಕದ್ದು.

**13ಐ. ವಾರ್ಡ್ ಸಮಿತಿಯ ಪ್ರಕಾರ್ಯಗಳು.–** (1) ವಾರ್ಡ್ ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ವಾರ್ಡ್ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು, ನಿಧಿಗಳ ಹಂಚಿಕೆಗಾಗಿ ಅದನ್ನು ನಗರಪಾಲಿಕೆಗೆ ಸಲ್ಲಿಸತಕ್ಕದ್ದು;

(ಬಿ) ವಾರ್ಡ್‌ನ ವಾರ್ಡ್ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಹಂಚಿಕೆಮಾಡಿದ ನಿಧಿಗಳ ಸೂಕ್ತ ಬಳಕೆಯನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು.

(ಸಿ) ವಾರ್ಡ್‌ನ ವ್ಯಾಪ್ತಿಯಲ್ಲಿ ಬರುವ ಪ್ರದೇಶ ಸಭಾಗಳು ಸಲ್ಲಿಸಿದ ನಗರಪಾಲಿಕೆಯ ಫಲಾನುಭವಿ ಆಧಾರಿತ ಯೋಜನೆಗಳ ಫಲಾನುಭವಿಗಳ ಪಟ್ಟಿಯನ್ನು ಅನುಮೋದಿಸುವುದು;

(ಡಿ) ಪ್ರದೇಶ ಸಭಾಗಳು ಸಲ್ಲಿಸಿದ ಅನರ್ಹ ಫಲಾನುಭವಿಗಳ ಪಟ್ಟಿಯನ್ನು ಪರಿಶೀಲಿಸಿ ನಗರಪಾಲಿಕೆಗೆ ಸಲ್ಲಿಸುವುದು;

(ಇ) ವಾರ್ಡ್‌ನಲ್ಲಿ ನಗರಪಾಲಿಕೆಯು ಅನುಷ್ಠಾನಗೊಳಿಸುತ್ತಿರುವ ಎಲ್ಲಾ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಮೇಲ್ವಿಚಾರಣೆ ಮಾಡುವುದು;

(ಎಫ್) ನಗರ ಪಾಲಿಕೆಗೆ ಬಾಕಿ ಇರುವ ತೆರಿಗೆಗಳು, ಶುಲ್ಕಗಳು ಹಾಗೂ ಇತರೆ ಮೊಬಲಗು ಸಕಾಲದಲ್ಲಿ ಸಂಗ್ರಹವಾಗುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ಜಿ) ವಾರ್ಡ್‌ನಲ್ಲಿ ನೀರು ಸರಬರಾಜು ನಿರ್ವಹಣೆಯನ್ನು ಸುನಿಶ್ಚಿತಪಡಿಸಿಕೊಳ್ಳುವುದು ಮತ್ತು ಹೊಸ ಸಾರ್ವಜನಿಕ ನಲ್ಲಿಗಳ ಹಾಗೂ ಸಾರ್ವಜನಿಕ ಬಾವಿಗಳ ಸ್ಥಳವನ್ನು ಅಂತಿಮಗೊಳಿಸುವುದು;

(ಹೆಚ್) ವಾರ್ಡ್‌ನಲ್ಲಿ ಒಳಚರಂಡಿ ವ್ಯವಸ್ಥೆಯ ನಿರ್ವಹಣೆಯನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ಐ) ವಾರ್ಡ್‌ನಲ್ಲಿ ಘನ ತ್ಯಾಜ್ಯದ ನಿರ್ವಹಣೆ ಹಾಗೂ ನೈರ್ಮಲ್ಯ ಕಾಮಗಾರಿ ಸಮರ್ಪಕವಾಗಿ ಆಗುತ್ತಿರುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು ಹಾಗೂ ಹೊಸ ಸಾರ್ವಜನಿಕ ನೈರ್ಮಲ್ಯ ಘಟಕಗಳ ಸ್ಥಳವನ್ನು ಅಂತಿಮಗೊಳಿಸುವುದು;

(ಜೆ) ವಾರ್ಡ್‌ನಲ್ಲಿ ಬೀದಿದೀಪಗಳ ನಿರ್ವಹಣೆಯನ್ನು ಸುನಿಶ್ಚಿತಪಡಿಸುವುದು ಮತ್ತು ಹೊಸ ಬೀದಿದೀಪಗಳ ಸ್ಥಳವನ್ನು ಅಂತಿಮಗೊಳಿಸುವುದು;

(ಕೆ) ವಾರ್ಡ್‌ನಲ್ಲಿನ ಉದ್ಯಾನವನಗಳ, ಮೈದಾನಗಳ ನಿರ್ವಹಣೆಯನ್ನು ಆ ಪ್ರದೇಶದಲ್ಲಿ ಗಿಡಮರಗಳನ್ನು ಬೆಳೆಸಿ ಹಸಿರಾಗಿರುವಂತೆ ಮಾಡುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ಎಲ್) ವನ ನಿರ್ಮಾಣವನ್ನು ಹಾಗೂ ಮಳೆ ನೀರು ಕೊಯ್ಲು ಯೋಜನೆಗಳ ಅನುಷ್ಠಾನವನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ಎಂ) ವಾರ್ಡ್ ಅಭಿವೃದ್ಧಿ ಯೋಜನೆಯ ಮತ್ತು ವಿವಿಧ ಕಾರ್ಯಕ್ರಮಗಳ ಹಾಗೂ ನಗರಪಾಲಿಕೆಯ ಯೋಜನೆಗಳ ಅನುಷ್ಠಾನಕ್ಕಾಗಿ ಸ್ವಯಂ ಸೇವಾ ಕಾರ್ಮಿಕರನ್ನು ಮತ್ತು ಸರಕುಗಳ ಅಥವಾ ಹಣದ ರೂಪದಲ್ಲಿ ದೇಣಿಗೆಗಳನ್ನು ಕ್ರೋಡೀಕರಿಸುವುದು;

(ಎನ್) ನಗರ ಪಾಲಿಕೆಗೆ ಸೇರಿದ ಭೂಮಿಯ ಯಾವುದೇ ಒತ್ತುವರಿಗೆ ಸಂಬಂಧಿಸಿದಂತೆ ನಗರಪಾಲಿಕೆಗೆ ಮಾಹಿತಿ ನೀಡುವುದು;

(ಒ) ನಗರ ಪಾಲಿಕೆಯು ತನ್ನ ಉಪವಿಧಿಗಳಿಗೆ ಅನುಸಾರವಾಗಿ ಅದಕ್ಕೆ ವಹಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು.

(2) ವಾರ್ಡ್ ಸಮಿತಿಯು ತನ್ನ ವ್ಯವಹಾರವನ್ನು ನಿರ್ವಹಿಸುವಾಗ ಅದು ಅಳವಡಿಸಿಕೊಳ್ಳಬೇಕಾದ ಕಾರ್ಯವಿಧಾನವು ನಿಯಮಗಳಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು.

**13ಜೆ. ಉಪವಿಧಿಗಳು.–** ಈ ಅಧ್ಯಾಯವನ್ನು ಯಾವ ನಗರಪಾಲಿಕೆಗೆ ಅನ್ವಯಿಸಲಾಗುವುದೋ ಆ ಪ್ರತಿಯೊಂದು ನಗರಪಾಲಿಕೆಯು, ಆ ನಗರಪಾಲಿಕೆಯಲ್ಲಿ ಈ ಅಧ್ಯಾಯವು ಜಾರಿಗೆ ಬರುವ ದಿನಾಂಕದಿಂದ ಆರು ತಿಂಗಳುಗಳ ಒಳಗೆ, ಪ್ರದೇಶ ಸಭಾಗಳ ಹಾಗೂ ವಾರ್ಡ್ ಸಮಿತಿಗಳ ಕಾರ್ಯಕಲಾಪಗಳ ನಿರ್ವಹಣೆಗೆ ಮತ್ತು ಅವುಗಳ ಕಾರ್ಯನಿರ್ವಹಣೆಗೆ ಅನ್ವಯವಾಗುವಂತೆ ಹಣಕಾಸಿಗೆ ಮತ್ತು ಲೆಕ್ಕಪತ್ರಗಳನ್ನು ಇಡುವ ಕಾರ್ಯವಿಧಾನಗಳಿಗೆ ಸಂಬಂಧಿಸಿದಂತೆ ಉಪವಿಧಿಗಳನ್ನು ಅಧಿಸೂಚಿಸತಕ್ಕದ್ದು.

**13ಕೆ. ನಿಯಮಗಳನ್ನು ರಚಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ ನಿಯಮಗಳ ಮೂಲಕ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯದ ಬಗ್ಗೆ ಉಪಬಂಧ ಕಲ್ಪಿಸುವುದಕ್ಕೆ ನಿಯಮಗಳನ್ನು ರಚಿಸಬಹುದು.

**13ಎಲ್. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಾಗ ಯಾವುದೇ ತೊಂದರೆಗಳು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ, ತೊಂದರೆಯನ್ನು ನಿವಾರಿಸಲು ಅವಶ್ಯಕವೆಂದು ತನಗೆ ಕಂಡುಬರುವಂಥ ಉಪಬಂಧಗಳನ್ನು ರಚಿಸಬಹುದು.

(2) ಹಾಗೆ ಮಾಡಿದ ಪ್ರತಿಯೊಂದು ಆದೇಶವನ್ನು, ಸಾಧ್ಯವಾದಷ್ಟು ಬೇಗ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಇಡತಕ್ಕದ್ದು.][1]

1. 2011ರ ಅಧಿನಿಯಮ ಸಂಖ್ಯೆ 3ರ ಮೂಲಕ ಅಧ್ಯಾಯ ೩೩೩ಎ ಅನ್ನು ಸೇರಿಸಲಾಗಿದೆ ಮತ್ತು 13ಎ ಪ್ರಕರಣಕ್ಕೆ ಬದಲಾಗಿ 13ಎ ಯಿಂದ 13ಎಲ್ ವರೆಗಿನ ಪ್ರಕರಣಗಳನ್ನು 04.02.2011 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**14. ಆಯುಕ್ತರು ಮತ್ತು ಅವರ ಪದಾವಧಿ, ಇತ್ಯಾದಿ.–** (1) ಸರ್ಕಾರವು ಮೇಯರ್‌ರವರೊಂದಿಗೆ ಸಮಾಲೋಚನೆ ನಡೆಸಿದ ತರುವಾಯ ಆಯುಕ್ತರನ್ನು ನೇಮಕ ಮಾಡತಕ್ಕದ್ದು. ಅವರು ನಗರಪಾಲಿಕೆಯ ಸದಸ್ಯರಾಗಿರತಕ್ಕದ್ದಲ್ಲ ಮತ್ತು ಸರ್ಕಾರದ ಇಷ್ಟಪರ್ಯಂತ, ಸಾಮಾನ್ಯವಾಗಿ ಎರಡು ವರ್ಷಗಳ ಅವಧಿಗೆ ಪದವನ್ನು ಧಾರಣ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದಾಗ್ಯೂ, ನಗರ ಪಾಲಿಕೆಯು ತನ್ನ ಸದಸ್ಯರ ಮೂರನೇ ಎರಡರಷ್ಟಕ್ಕೆ ಕಡಿಮೆ ಇಲ್ಲದಷ್ಟು ಬಹುಮತದಿಂದ ಆಯುಕ್ತರನ್ನು ಪದದಿಂದ ತೆಗೆದುಹಾಕಬೇಕೆಂದು ನಿರ್ಣಯಿಸಿದರೆ ಹಾಗೆ ಮಾಡಬಹುದು.

**15. ಆಯುಕ್ತರ ಸಂಬಳ ಮತ್ತು ಇತರ ಸೇವಾ ಷರತ್ತುಗಳು.–** (1) ಆಯುಕ್ತರಿಗೆ ಸರ್ಕಾರವು ಕಾಲಕಾಲಕ್ಕೆ ಆದೇಶದ ಮೂಲಕ ನಿರ್ಧರಿಸಬಹುದಾದಂಥ ಮಾಸಿಕ ಸಂಬಳ ಮತ್ತು ಭತ್ಯಗಳನ್ನು ನಗರಪಾಲಿಕೆ ನಿಧಿಯಿಂದ ಸಂದಾಯಮಾಡತಕ್ಕದ್ದು.

(2) ಆಯುಕ್ತರು ನಗರಪಾಲಿಕೆಯ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಯಾವುದೇ ಇತರೆ ವೃತ್ತಿ, ವ್ಯಾಪಾರ ಅಥವಾ ಯಾವುದೇ ರೀತಿಯ ವ್ಯವಹಾರದಲ್ಲಿ ತೊಡಗತಕ್ಕದ್ದಲ್ಲ.

(3) ಸಂಬಳ ಪಡೆಯುವ ಸರ್ಕಾರಿ ನೌಕರನು ಆಯುಕ್ತರಾಗಿ ನೇಮಕಗೊಂಡಾಗ ಅವರಿಗೆ ಅನ್ವಯವಾಗುವ ಸೇವಾ ಷರತ್ತುಗಳ ಮೇರೆಗೆ ಅವರ ನಿವೃತ್ತಿ ವೇತನ, ರಜಾ, ಸಂಬಳ ಮತ್ತು ಇತರೆ ಭತ್ಯಗಳ ಬಾಬಿಗೆ ವಂತಿಗೆಯ ರೂಪದಲ್ಲಿ ಅವರು ಅಥವಾ ಅವರ ಪರವಾಗಿ ಸಂದಾಯ ಮಾಡಬೇಕಾದಂಥ ಮೊತ್ತವನ್ನು ನಗರಪಾಲಿಕೆ ನಿಧಿಯಿಂದ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

(4) ಸರ್ಕಾರವು ಕಾಲಕಾಲಕ್ಕೆ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ರಜೆಯನ್ನು ಪಡೆಯಲು ಆಯುಕ್ತರು ಹಕ್ಕುಳ್ಳವರಾಗಿರತಕ್ಕದ್ದು. ಆಯುಕ್ತರಿಗೆ ರಜೆಯನ್ನು ಸರ್ಕಾರವು ಮಂಜೂರು ಮಾಡಬಹುದು ಮತ್ತು ಅಂಥ ರಜೆಯನ್ನು ಮಂಜೂರು ಮಾಡಿದಾಗ ಸರ್ಕಾರವು ನಿರ್ಧರಿಸಬಹುದಾದಂಥ ರಜೆ, ಸಂಬಳ ಮತ್ತು ಭತ್ಯಗಳನ್ನು ನಗರಪಾಲಿಕೆ ನಿಧಿಗಳಿಂದ ಅವರಿಗೆ ಸಂದಾಯಮಾಡತಕ್ಕದ್ದು.

**16. ಹಂಗಾಮಿ ಆಯುಕ್ತರು.–** ಆಯುಕ್ತರ ಗೈರುಹಾಜರಿಯ ಅವಧಿಯಲ್ಲಿ ಆಯುಕ್ತರಾಗಿ ಕಾರ್ಯ ನಿರ್ವಹಿಸಲು ಒಬ್ಬ ವ್ಯಕ್ತಿಯನ್ನು ಸರ್ಕಾರ ನೇಮಿಸಬಹುದು ಮತ್ತು ಹಾಗೆ ನೇಮಕಗೊಂಡ ಪ್ರತಿಯೊಬ್ಬ ವ್ಯಕ್ತಿಯು, ಈ ಅಧಿನಿಯಮದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರೆ ಯಾವುದೇ ಕಾನೂನಿನ ಮೂಲಕ ಆಯುಕ್ತರಿಗೆ ಪ್ರಧಾನ ಮಾಡಿದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ವಿಧಿಸಿದ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು ಮತ್ತು ಆಯುಕ್ತರು ಯಾವ ಹೊಣೆಗಾರಿಕೆಗಳಿಗೆ, ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಬದ್ಧರಾಗಿರುತ್ತಾರೋ ಆ ಹೊಣೆಗಾರಿಕೆಗಳಿಗೆ, ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಸರ್ಕಾರವು ನಿರ್ಧರಿಸಬಹುದಾದಂತೆ ತತ್ಕಾಲದಲ್ಲಿ ಆಯುಕ್ತರಿಗೆ ಸಂದಾಯವಾಗಬೇಕಾದ ಸಂಬಳ ಮತ್ತು ಭತ್ಯಗಳಿಗೆ ಮೀರದಂಥ ಮಾಸಿಕ ಸಂಬಳವನ್ನು ಮತ್ತು ಭತ್ಯಗಳನ್ನು ಸ್ವೀಕರಿಸತಕ್ಕದ್ದು.

**17. ಗೌರವಧನ, ಫೀಜು ಅಥವಾ ಭತ್ಯಗಳು.–** (1) ಮೇಯರ್‌ರವರಿಗೆ, ಉಪಮೇಯರ್‌ರವರಿಗೆ ಮತ್ತು ಕೌನ್ಸಿಲರುಗಳಿಗೆ ಸರ್ಕಾರವು ನಿರ್ಧರಿಸಬಹುದಾದಂಥ ಗೌರವಧನ, ಫೀಜು ಅಥವಾ ಭತ್ಯಗಳನ್ನು ನಗರಪಾಲಿಕೆ ನಿಧಿಯಿಂದ ಸಂದಾಯ ಮಾಡಬಹುದು.

[1][(2) ನಗರಪಾಲಿಕೆಯು, ನಿಯಮಿಸಬಹುದಾದಂಥ ಮಿತಿಯನ್ನು ಮೀರದಷ್ಟು ಮೊತ್ತವನ್ನು ಆದರಾತಿಥ್ಯ ಭತ್ಯದ ರೂಪದಲ್ಲಿ ಪ್ರತಿವರ್ಷ ಮೇಯರ್‌ರವರ ವಶದಲ್ಲಿಡತಕ್ಕದ್ದು:

ಪರಂತು, ಹಾಗೆ ನಿಯಮಿಸಿದ ಮಿತಿಯು, ಇಪ್ಪತ್ತೈದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಗೆ ಇರತಕ್ಕದ್ದಲ್ಲ ಮತ್ತು ಬೇರೆ ಬೇರೆ ನಗರಪಾಲಿಕೆಗಳಿಗೆ ಬೇರೆ ಬೇರೆ ಮಿತಿಗಳನ್ನು ನಿಯಮಿಸಬಹುದು.][1]

1. 1986ರ ಅಧಿನಿಯಮ ಸಂಖ್ಯೆ 32 ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಹಿಂದೆ ಹೇಳಿದಂತೆ, ಯಾರೇ ವ್ಯಕ್ತಿಯು ಮೇಯರ್, ಉಪಮೇಯರ್ ಅಥವಾ ಕೌನ್ಸಿಲರ್ ಆಗಿ ಗೌರವಧನವನ್ನು, ಫೀಜನ್ನು ಅಥವಾ ಭತ್ಯವನ್ನು ಸ್ವೀಕರಿಸುವುದು, ಕೌನ್ಸಿಲರನಾಗಿ ಚುನಾಯಿತನಾಗಲು ಅಥವಾ ಕೌನ್ಸಿಲರನಾಗಿರಲು ಅವನನ್ನು ಅನರ್ಹಗೊಳಿಸತಕ್ಕದ್ದಲ್ಲ.

**18. ಕೌನ್ಸಿಲರ್‌ಗಳು ಸ್ವೀಕರಿಸಬೇಕಾಗಿರುವ ನಿಷ್ಠೆಯ ಪ್ರಮಾಣವಚನ.–** (1) 1969ರ ಪ್ರಮಾಣ ವಚನ ಅಧಿನಿಯಮ (1969ರ ಕೇಂದ್ರ ಅಧಿನಿಯಮ 44)ರಲ್ಲಿ ಏನೇ ಒಳಗೊಂಡಿದ್ದರೂ, ಕೌನ್ಸಿಲರ್‌ನಾಗಿ ಚುನಾಯಿತನಾಗಿರುವ ಪ್ರತಿಯೊಬ್ಬ ವ್ಯಕ್ತಿಯು, ತನ್ನ ಸ್ಥಾನದಲ್ಲಿ ಆಸೀನನಾಗುವುದಕ್ಕೆ ಮೊದಲು ನಗರಪಾಲಿಕೆಯ ಸಭೆಯಲ್ಲಿ ಸಂವಿಧಾನಕ್ಕೆ ತನ್ನ ನಿಷ್ಠೆಯ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾ ವಚನವನ್ನು ಈ ಕೆಳಕಂಡ ನಮೂನೆಯಲ್ಲಿ ಸ್ವೀಕರಿಸತಕ್ಕದ್ದು, ಎಂದರೆ–

> "........................... ಎಂಬ ಹೆಸರಿನ ನಾನು ಈ ನಗರಪಾಲಿಕೆಯ ಕೌನ್ಸಿಲರ್‌ನಾಗಿ ಚುನಾಯಿತನಾಗಿದ್ದು, ಭಾರತ ಸಂವಿಧಾನಕ್ಕೆ ನಿಜವಾದ ಶ್ರದ್ಧೆ ಮತ್ತು ನಿಷ್ಠೆಯನ್ನು ಹೊಂದಿರುತ್ತೇನೆಂದು ಮತ್ತು ನಾನು ಈಗ ಕೈಗೊಳ್ಳಲಿರುವ ಕರ್ತವ್ಯವನ್ನು ನಿಷ್ಠಾಪೂರ್ವಕವಾಗಿ ನಿರ್ವಹಿಸುತ್ತೇನೆಂದು ಭಗವಂತನ ಹೆಸರಿನಲ್ಲಿ ಪ್ರಮಾಣ ಮಾಡುತ್ತೇನೆ / ಶ್ರದ್ಧಾಪೂರ್ವಕವಾಗಿ ಪ್ರತಿಜ್ಞೆ ಮಾಡುತ್ತೇನೆ".

(2) ಕೌನ್ಸಿಲರ್‌ನಾಗಿ ಚುನಾಯಿತನಾದ, ಯಾರೇ ವ್ಯಕ್ತಿಯು ತನ್ನ ಪದಾವಧಿಯು ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳುಗಳ ಒಳಗೆ ಅಥವಾ ಸದರಿ ದಿನಾಂಕದ ತರುವಾಯ ನಡೆಯುವ ಮೊದಲ ಮೂರು ಸಭೆಗಳ ಪೈಕಿ ಒಂದರಲ್ಲಿ, ಇವುಗಳಲ್ಲಿ ಯಾವುದು ತರುವಾಯದ್ದೋ ಅದರಲ್ಲಿ (1)ನೇ ಉಪಪ್ರಕರಣದಲ್ಲಿ ಹೇಳಲಾದ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾ ವಚನವನ್ನು ಸ್ವೀಕರಿಸಲು ತಪ್ಪಿದರೆ, ಅವನು ತನ್ನ ಪದವನ್ನು ಧಾರಣ ಮಾಡುವುದು ನಿಂತುಹೋಗತಕ್ಕದ್ದು ಮತ್ತು ಆತನ ಸ್ಥಾನವು ತೆರವಾಗಿರುವುದಾಗಿ ಭಾವಿಸತಕ್ಕದ್ದು.

(3) ಕೌನ್ಸಿಲರ್‌ನಾಗಿ ಚುನಾಯಿತನಾದ ಯಾರೇ ವ್ಯಕ್ತಿಯು (1)ನೇ ಉಪಪ್ರಕರಣದಲ್ಲಿ ಹೇಳಲಾದ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾ ವಚನವನ್ನು ಸ್ವೀಕರಿಸಿದ ಹೊರತು, ನಗರ ಪಾಲಿಕೆಯ ಸಭೆಯಲ್ಲಿ ತನ್ನ ಸ್ಥಾನದಲ್ಲಿ ಆಸೀನನಾಗತಕ್ಕದ್ದಲ್ಲ ಅಥವಾ ಕೌನ್ಸಿಲರ್‌ನಾಗಿ ಯಾವುದೇ ಕಾರ್ಯವನ್ನು ಮಾಡತಕ್ಕದ್ದಲ್ಲ.

(4) (3)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಕೌನ್ಸಿಲರ್‌ನಾಗಿ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾ ವಚನವನ್ನು ಸ್ವೀಕರಿಸದೇ ಇರುವ ಮೇಯರ್ ಅಥವಾ ಉಪಮೇಯರ್ ಅಥವಾ ಸ್ಥಾಯೀ ಸಮಿತಿಯ ಅಧ್ಯಕ್ಷ ಅಥವಾ ಸದಸ್ಯರು, ಮೇಯರ್ ಆಗಿ, ಉಪಮೇಯರ್ ಆಗಿ, ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ಕಾರ್ಯ ನಿರ್ವಹಿಸಲು ಹಕ್ಕುಳ್ಳವರಾಗಿರಕ್ಕದ್ದಲ್ಲ.

**19. ಆಸ್ತಿಗಳ ಘೋಷಣೆ, ಇತ್ಯಾದಿ.–** [1][(1) 7ನೇ ಪ್ರಕರಣದ (1)ನೇ ಉಪ ಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ][1] ಪ್ರತಿಯೊಬ್ಬ ಕೌನ್ಸಿಲರನು, ತನ್ನ ಪದಾವಧಿಯು ಪ್ರಾರಂಭವಾದ ತರುವಾಯ ಒಂದು ತಿಂಗಳಿಗೆ ಮೀರದಂತೆ ಮತ್ತು ತರುವಾಯದ ಪ್ರತಿ ವರ್ಷದ ಅದೇ ತಿಂಗಳಲ್ಲಿ, ತಾನು ಮತ್ತು ತನ್ನ ಕುಟುಂಬದ ಯಾರೇ ಸದಸ್ಯನು ಒಡೆತನ ಹೊಂದಿರುವ ಎಲ್ಲಾ ಆಸ್ತಿಗಳ ಘೋಷಣೆಯನ್ನು ಮೇಯರ್ ಅವರಲ್ಲಿ ದಾಖಲು ಮಾಡತಕ್ಕದ್ದು. ಅಂಥ ಘೋಷಣೆಯು ನಗರಪಾಲಿಕೆಯ ದಾಖಲೆಗಳ ಭಾಗವಾಗಿರತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಘೋಷಣೆಯನ್ನು ದಾಖಲು ಮಾಡಲು ಯಾರೇ ಕೌನ್ಸಿಲರನು ತಪ್ಪಿದರೆ ಅಥವಾ ಅದು ಸುಳ್ಳು ಅಥವಾ ಸರಿಯಾಗಿಲ್ಲ ಎಂದು ತಿಳಿದೂ ತಿಳಿದೂ ದಾಖಲು ಮಾಡಿದರೆ ಅವನು ಕೌನ್ಸಿಲರನಾಗಿರುವುದು ನಿಂತುಹೋಗತಕ್ಕದ್ದು.

(3) (2)ನೇ ಉಪಪ್ರಕರಣದ ಮೇರೆಗೆ ಅನರ್ಹತೆಯು ಸಂಭವಿಸಿದೆಯೇ ಹೇಗೆ ಎಂಬ ಯಾವುದೇ ಪ್ರಶ್ನೆಯನ್ನು, ನಗರಪಾಲಿಕೆಯು ಮಾಡಿದ ಉಲ್ಲೇಖದ ಮೇಲೆ ಸರ್ಕಾರವು ತೀರ್ಮಾನಿಸತಕ್ಕದ್ದು ಮತ್ತು ಅದರ ಬಗ್ಗೆ ಸರ್ಕಾರದ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಗಳಿಗಾಗಿ, ಕುಟುಂಬ ಎಂದರೆ, ಕೌನ್ಸಿಲರನ/ಳ /ಹೆಂಡತಿ/ಗಂಡ ಮತ್ತು ಅವಲಂಬಿತ ಮಕ್ಕಳು.

**20. ಮೇಯರ್, ಉಪಮೇಯರ್ ಮತ್ತು ಸ್ಥಾಯೀ ಸಮಿತಿಗಳ ಸದಸ್ಯರು ಮತ್ತು ಅಧ್ಯಕ್ಷರನ್ನು ಚುನಾಯಿಸುವುದಕ್ಕೆ ಸಂಬಂಧಿಸಿದ ನಿಯಮಗಳ ರಚನಾಧಿಕಾರ.–** (1) ಮೇಯರ್ ಅಥವಾ ಉಪಮೇಯರ್ ಮತ್ತು ಸ್ಥಾಯೀ ಸಮಿತಿಗಳ ಸದಸ್ಯರು ಮತ್ತು ಅಧ್ಯಕ್ಷರನ್ನು ಚುನಾಯಿಸುವುದು ಮತ್ತು ಹಾಗೆ ಚುನಾಯಿಸುವುದಕ್ಕೆ ಸಂಬಂಧಪಟ್ಟ ವಿವಾದಗಳನ್ನು ಇತ್ಯರ್ಥಪಡಿಸುವುದು ಮತ್ತು ಸದರಿ ಪದಗಳಲ್ಲಿನ ಖಾಲೀಸ್ಥಾನಗಳನ್ನು ಭರ್ತಿಮಾಡುವುದು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿರತಕ್ಕದ್ದು.

(2) ಮೇಯರ್ ಅಥವಾ ಉಪಮೇಯರ್ ಅಥವಾ ಸ್ಥಾಯೀ ಸಮಿತಿಯ ಸದಸ್ಯರು ಅಥವಾ ಅಧ್ಯಕ್ಷರ ಚುನಾವಣೆಯ ಸಿಂಧುತ್ವಕ್ಕೆ ಸಂಬಂಧಪಟ್ಟ ಯಾವುದೇ ವಿವಾದವನ್ನು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾ ನ್ಯಾಯಾಲಯವು ತೀರ್ಮಾನಿಸತಕ್ಕದ್ದು. ಜಿಲ್ಲಾ ನ್ಯಾಯಾಲಯದ ಆದೇಶದ ವಿರುದ್ಧ, ಅಂಥ ಆದೇಶದ ಪ್ರತಿಯನ್ನು ಪಡೆಯಲು ಅಗತ್ಯವಾಗುವ ಕಾಲವನ್ನು ಹೊರತುಪಡಿಸಿ, ಅಂಥ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗಾಗಿ ಉಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಲು ಅವಕಾಶ ಇರತಕ್ಕದ್ದು:

ಪರಂತು ಅಂಥ ಅವಧಿಯೊಳಗೆ, ಅಪೀಲನ್ನು ಸಲ್ಲಿಸದಿರುವುದಕ್ಕೆ ಅಪೀಲುದಾರನಿಗೆ ಸಾಕಷ್ಟು ಕಾರಣ ಇತ್ತೆಂದು ಉಚ್ಚ ನ್ಯಾಯಾಲಯಕ್ಕೆ ಮನದಟ್ಟಾದರೆ, ಅದು ಸದರಿ ಮೂವತ್ತು ದಿನಗಳ ಅವಧಿಯು ಮುಕ್ತಾಯವಾದ ತರುವಾಯವೂ ಅಪೀಲನ್ನು ಪುರಸ್ಕರಿಸಬಹುದು.

## ಅಧ್ಯಾಯ – IV

## ಚುನಾವಣೆ

**21. [1][ವಾರ್ಡ್‌ಗಳ][1] ನಿರ್ಧರಣೆ, ಇತ್ಯಾದಿ.–** (1) ಕೌನ್ಸಿಲರುಗಳ ಚುನಾವಣೆಯ ಉದ್ದೇಶಗಳಿಗಾಗಿ ಸರ್ಕಾರವು, ಅಧಿಸೂಚನೆಯ ಮೂಲಕ,–

(ಎ) ನಗರವನ್ನು ಎಷ್ಟು [1][ವಾರ್ಡ್‌ಗಳಾಗಿ][1] ವಿಭಜಿಸತಕ್ಕದ್ದು ಎಂಬುದನ್ನು ಮತ್ತು ಪ್ರತಿಯೊಂದು ವಿಭಾಗದ ವ್ಯಾಪ್ತಿಯನ್ನು;

(ಬಿ) [1][ಪ್ರತಿಯೊಂದು ವಾರ್ಡಿಗೆ ಹಂಚಿಕೆ ಮಾಡಿದ][1] ಸ್ಥಾನಗಳ ಸಂಖ್ಯೆಯು [1][ಒಂದು ಆಗಿರತಕ್ಕದ್ದು][1];

(ಸಿ) ಅನುಸೂಚಿತ ಜಾತಿಗಳವರಿಗೆ, ಅನುಸೂಚಿತ ಪಂಗಡಗಳವರಿಗೆ, [1][ಹಿಂದುಳಿದ ವರ್ಗಗಳವರಿಗೆ ಮತ್ತು ಮಹಿಳೆಯರಿಗೆ][1] ಮೀಸಲಿಟ್ಟ ಸ್ಥಾನಗಳ ಸಂಖ್ಯೆಯನ್ನು ಮತ್ತು ಅಂಥ ಸ್ಥಾನಗಳನ್ನು ಯಾವ [1][ವಾರ್ಡ್‌ಗಳಲ್ಲಿ][1] ಮೀಸಲಿರಿಸತಕ್ಕದ್ದು ಎಂಬುದನ್ನು

– ನಿರ್ಧರಿಸತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(1ಎ) (1)ನೇ ಉಪಪ್ರಕರಣದ ಮೇರೆಗಿನ ಯಾವುದೇ ಅಧಿಸೂಚನೆಯನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದಲ್ಲ.][1]

1. 1983 ರ ಅಧಿನಿಯಮ ಸಂಖ್ಯೆ 13 ರ ಮೂಲಕ 24.2.1983 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಪ್ರತಿಯೊಂದು [1][ವಾರ್ಡ್][1]ನಿಂದ ಚುನಾಯಿಸಬೇಕಾದ ಕೌನ್ಸಿಲರುಗಳ ಸಂಖ್ಯೆ ಮತ್ತು ಆ [1][ವಾರ್ಡ್][1]ನ ಜನಸಂಖ್ಯೆ ಇವುಗಳ ನಡುವಣ ಅನುಪಾತವು [2][XXX][2] ಕಾರ್ಯಸಾಧ್ಯವಾದಷ್ಟು ಮಟ್ಟಿಗೆ ನಗರದಾದ್ಯಂತ ಒಂದೇ ಆಗಿರತಕ್ಕದ್ದು:

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ಪರಂತುಕ, xxx][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ರಾಜ್ಯಸರ್ಕಾರವು (1)ನೇ ಮತ್ತು (2)ನೇ ಉಪಪ್ರಕರಣಗಳ ಉದ್ದೇಶಗಳಿಗಾಗಿ ನಿಯಮಗಳನ್ನು ರಚಿಸಬಹುದು.

**22. ಮತದಾನದ ಹಕ್ಕು.–** 23ನೇ ಪ್ರಕರಣದಲ್ಲಿ ಉಲ್ಲೇಖಿಸಿದ [1][ಮತದಾರರ ಪಟ್ಟಿ][1]ಯಲ್ಲಿ ಯಾರ ಹೆಸರು ಇರುವುದೋ ಆ ಪ್ರತಿಯೊಬ್ಬ ವ್ಯಕ್ತಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಅನರ್ಹಗೊಂಡಿದ್ದ ಹೊರತು, ಯಾವ ವಿಭಾಗಕ್ಕೆ [2][xxx][2] ಅಂಥ [1][ಪಟ್ಟಿಯು ಸಂಬಂಧಪಟ್ಟಿರುತ್ತದೋ][1], ಆ ವಿಭಾಗಕ್ಕೆ ನಡೆಯುವ ಕೌನ್ಸಿಲರ್‌ನ ಚುನಾವಣೆಯಲ್ಲಿ ಮತದಾನ ಮಾಡಲು ಅರ್ಹನಾಗಿರತಕ್ಕದ್ದು:

[2][ಪರಂತುಕ, xxx][2]

1. 1990 ರ ಅಧಿನಿಯಮ ಸಂಖ್ಯೆ 2 ರ ಮೂಲಕ 6.1.1990 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1978 ರ ಅಧಿನಿಯಮ ಸಂಖ್ಯೆ 24 ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**23. ಮತದಾರರ ಪಟ್ಟಿಗಳು.–** ನಗರ ಪಾಲಿಕೆಯ ಮತದಾರರ ಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣಕ್ಕೆ ಒಳಪಟ್ಟು ತಯಾರಿಸತಕ್ಕದ್ದು:

ಪರಂತು, ಯಾವುದೇ ವಾರ್ಡ್‌ನಲ್ಲಿ ಸೇರಿರುವಂಥ ನಗರದ ಅಂಥ ಭಾಗಕ್ಕಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಕರ್ನಾಟಕ ವಿಧಾನಸಭಾ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಯನ್ನು, ಅಂಥ ವಾರ್ಡ್‌ಗಾಗಿ ನಗರಪಾಲಿಕೆಯ ಮತದಾರರ ಪಟ್ಟಿಯನ್ನು ತಯಾರಿಸುವ ಉದ್ದೇಶಕ್ಕಾಗಿ ಅಳವಡಿಸಿಕೊಳ್ಳಬಹುದು:

ಮತ್ತೂ ಪರಂತು, ನಗರ ಪಾಲಿಕೆಯ ಅಂಥ ವಾರ್ಡ್‌ನ ಮತದಾರರ ಪಟ್ಟಿಯು, ಅಂಥ ವಾರ್ಡ್‌ಗೆ ನಡೆಯುವ ಚುನಾವಣೆಗೆ ನಾಮಪತ್ರ ಸಲ್ಲಿಸುವುದಕ್ಕೆ ಇರುವ ಅಂತಿಮ ದಿನಾಂಕದ ತರುವಾಯ ಮತ್ತು ಅಂಥ ಚುನಾವಣೆ ಮುಗಿಯುವುದಕ್ಕೆ ಮೊದಲು ಯಾವುದೇ ನಮೂದಿನ ತಿದ್ದುಪಡಿ, ವರ್ಗಾವಣೆ, ಸೇರ್ಪಡೆ ಅಥವಾ ತೆಗೆದುಹಾಕಿರುವುದನ್ನು ಒಳಗೊಳ್ಳತಕ್ಕದ್ದಲ್ಲ.][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**24. [1][ರಾಜ್ಯ ಚುನಾವಣಾ ಆಯೋಗ][1]ವು ಚುನಾವಣೆಗಳ ದಿನಾಂಕವನ್ನು ಗೊತ್ತುಪಡಿಸುವುದು.–** [2][(1) ನಗರಪಾಲಿಕೆಯ ರಚನೆಗೆ ಮತ್ತು ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಚುನಾವಣೆಯ ದಿನಾಂಕ ಅಥವಾ ದಿನಾಂಕಗಳನ್ನು ರಾಜ್ಯ ಚುನಾವಣಾ ಆಯೋಗವು ಸರ್ಕಾರದೊಂದಿಗೆ ಸಮಾಲೋಚನೆ ನಡೆಸಿ ಗೊತ್ತುಪಡಿಸತಕ್ಕದ್ದು:

ಪರಂತು, ಕೌನ್ಸಿಲರನು ಸಾಮಾನ್ಯವಾಗಿ ನಿವೃತ್ತಿಯಾಗುವ ದಿನಾಂಕಕ್ಕೆ ಮುಂಚೆ ನಾಲ್ಕು ತಿಂಗಳುಗಳ ಒಳಗೆ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಯಾವುದೇ ಚುನಾವಣೆ ನಡೆಸತಕ್ಕದ್ದಲ್ಲ ಮತ್ತು ಅಂಥ ಖಾಲಿ ಸ್ಥಾನವನ್ನು ಮುಂದಿನ ಸಾರ್ವತ್ರಿಕ ಚುನಾವಣೆಯಲ್ಲಿ ಭರ್ತಿ ಮಾಡತಕ್ಕದ್ದು.][2]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.
2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ (1) ಮತ್ತು (2)ನೇ ಉಪಪ್ರಕರಣಗಳಿಗೆ ಬದಲಾಗಿ (1)ನೇ ಉಪಪ್ರಕರಣವನ್ನು 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಸಾಂದರ್ಭಿಕ ಚುನಾವಣೆಯಲ್ಲಿ ಚುನಾಯಿತನಾದ ಕೌನ್ಸಿಲರನು ತತ್‌ಕ್ಷಣವೇ ಪದವನ್ನು ವಹಿಸಿ ಕೊಳ್ಳತಕ್ಕದ್ದು, ಆದರೆ ಅವನು ಯಾವ ಕೌನ್ಸಿಲರನ ಸ್ಥಾನಕ್ಕೆ ಚುನಾಯಿತನಾದನೋ ಆ ಕೌನ್ಸಿಲರನ ಸ್ಥಾನವು ಖಾಲಿಯಾಗಿರದಿದ್ದಲ್ಲಿ ಆ ಕೌನ್ಸಿಲರ್‌ನು ಎಲ್ಲಿಯವರೆಗೆ ಪದವನ್ನು ಧಾರಣಮಾಡಬಹುದಾಗಿತ್ತೋ ಅಲ್ಲಿಯವರೆಗೆ ಮಾತ್ರವೇ ಪದಧಾರಣ ಮಾಡತಕ್ಕದ್ದು.

**25. ಅಭ್ಯರ್ಥಿಗಳ ಅರ್ಹತೆ.–** [1][(1) ಯಾರೇ ವ್ಯಕ್ತಿಯು ನಗರದ ಯಾವುದೇ [2][ವಾರ್ಡ್][2]ನ ಮತದಾರರ ಪಟ್ಟಿಯಲ್ಲಿ ಅವನ ಹೆಸರು ಸೇರಿದ್ದ ಹೊರತು ಮತ್ತು [2][ಅನುಸೂಚಿತ ಜಾತಿಗಳವರಿಗೆ ಅಥವಾ ಅನುಸೂಚಿತ ಪಂಗಡಗಳವರಿಗೆ ಅಥವಾ ಹಿಂದುಳಿದ ವರ್ಗಗಳವರಿಗೆ ಅಥವಾ ಮಹಿಳೆಯರಿಗೆ][2] ಮೀಸಲಿಟ್ಟ ಯಾವುದೇ ಸ್ಥಾನಗಳಿಗೆ ಸಂಬಂಧಿಸಿದಂತೆ ಅಂಥ ವ್ಯಕ್ತಿಯು ಸಂದರ್ಭಾನುಸಾರ ಯಾವುದೇ ಅಂಥ [2][ಜಾತಿಯ, ಬುಡಕಟ್ಟಿನ ಅಥವಾ ವರ್ಗಗಳ][2] ಸದಸ್ಯನಾಗಿದ್ದ ಹೊರತು ಅಥವಾ ಮಹಿಳೆಯಾಗಿದ್ದ ಹೊರತು, ಕೌನ್ಸಿಲರನಾಗಿ ಚುನಾವಣೆಗೆ ನಿಲ್ಲಲು ಅರ್ಹನಾಗಿರತಕ್ಕದ್ದಲ್ಲ.][1]

1. 1978 ರ ಅಧಿನಿಯಮ ಸಂಖ್ಯೆ 24ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ರಾಜ್ಯ ವಿಧಾನಮಂಡಲದ ಸದಸ್ಯನಾಗಿರಲು ಅನರ್ಹನಾಗಿರುವ [1][ಯಾರೇ [2][xxx][2] ವ್ಯಕ್ತಿಯು][1] ನಗರಪಾಲಿಕೆಯ ಯಾರೇ ನೌಕರನು ಮತ್ತು ರಾಜ್ಯಸರ್ಕಾರದ ಅಥವಾ ಕೇಂದ್ರಸರ್ಕಾರದ ಯಾರೇ ಪೂರ್ಣಕಾಲಿಕ ನೌಕರನು ಕೌನ್ಸಿಲರನ ಚುನಾವಣೆಗೆ ನಿಲ್ಲಲು ಅಥವಾ ಕೌನ್ಸಿಲರನಾಗಿ ಪದವನ್ನು ಧಾರಣ ಮಾಡಲು ಅರ್ಹನಾಗಿರತಕ್ಕದ್ದಲ್ಲ.

1. 1978ರ ಅಧಿನಿಯಮ ಸಂಖ್ಯೆ 24ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**26. ಕೌನ್ಸಿಲರ್ ಆಗುವುದಕ್ಕೆ ಸಾಮಾನ್ಯ ಅನರ್ಹತೆಗಳು.–** (1) ಒಬ್ಬ ವ್ಯಕ್ತಿಯು,–

(ಎ) ಆರು ತಿಂಗಳಿಗೆ ಮೀರಿದ ಅವಧಿಯ ಕಾರಾವಾಸದಿಂದ ದಂಡನೀಯವಾಗಬಹುದಾದ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯವು ಅವನಿಗೆ ಕಾರಾವಾಸ ಶಿಕ್ಷೆ ವಿಧಿಸಿದ್ದರೆ, ಪರಂತು, (1) ಅಪರಾಧವು ನೈತಿಕ ಅಧಃಪತನವನ್ನು ಒಳಗೊಂಡಿದ್ದಾಗಿರಬೇಕು ಮತ್ತು (2) ಅಂಥ ಶಿಕ್ಷೆಯನ್ನು ವ್ಯತಿರಿಕ್ತಗೊಳಿಸಿರಬಾರದು ಅಥವಾ ರದ್ದುಗೊಳಿಸಿರಬಾರದು ಅಥವಾ ಅಪರಾಧವನ್ನು ಮನ್ನಿಸಿರಬಾರದು; ಅಥವಾ

(ಬಿ) 1955ರ ಅಸ್ಪೃಶ್ಯತಾ ಅಪರಾಧ ಅಧಿನಿಯಮ (1955ರ ಕೇಂದ್ರ ಅಧಿನಿಯಮ 22) ಅಥವಾ 1954ರ ಆಹಾರ ಕಲಬೆರಕೆ ಪ್ರತಿಬಂಧಕ ಅಧಿನಿಯಮ (1954ರ ಕೇಂದ್ರ ಅಧಿನಿಯಮ 37)ದ ಉಪಬಂಧಗಳ ಮೇರೆಗಿನ ಅಪರಾಧದ ಅಪರಾಧಿ ಎಂದು ಅವನು ನ್ಯಾಯ ನಿರ್ಣೀತನಾಗಿದ್ದರೆ; ಅಥವಾ

(ಸಿ) ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ಘೋಷಿಸಲಾದಂತೆ ಹುದ್ದೆಯ ಧಾರಕನನ್ನು ಅನರ್ಹನನ್ನಾಗಿಸದಂಥ ಪದಗಳನ್ನು ಹೊರತುಪಡಿಸಿ ಅವನು ಭಾರತ ಸರ್ಕಾರದ ಅಥವಾ ಭಾರತ ಸಂವಿಧಾನದ ಮೊದಲನೇ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಯಾವುದೇ ರಾಜ್ಯಸರ್ಕಾರದ ಅಧೀನದಲ್ಲಿ ಅಥವಾ ಸದರಿ ಸರ್ಕಾರಗಳ ಪೈಕಿ ಯಾವುದೇ ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟು, ಯಾವುದೇ ಸ್ಥಳೀಯ ಅಥವಾ ಇತರೆ ಪ್ರಾಧಿಕಾರದ ಅಧೀನದಲ್ಲಿ ಲಾಭದಾಯಕ ಹುದ್ದೆಯನ್ನು ಧಾರಣ ಮಾಡಿದ್ದರೆ; ಅಥವಾ

(ಡಿ) ಸ್ಥಳೀಯ ಪ್ರಾಧಿಕಾರದ ಅಧೀನದಲ್ಲಿನ ಸೇವೆಯಿಂದ ಅಥವಾ ಸರ್ಕಾರದ ಸೇವೆಯಿಂದ ಅವನನ್ನು ವಜಾ ಮಾಡಲಾಗಿದ್ದರೆ; ಅಥವಾ

(ಇ) ಅವನು ನ್ಯಾಯ ವೃತ್ತಿಗನಾಗಿದ್ದು, ಸಕ್ಷಮ ಪ್ರಾಧಿಕಾರದ ಆದೇಶದ ಮೂಲಕ ಅವನನ್ನು ವೃತ್ತಿಯಿಂದ ವಜಾ ಮಾಡಲಾಗಿದ್ದರೆ ಅಥವಾ ಅಮಾನತುಗೊಳಿಸಿದ್ದರೆ, ಅಮಾನತುಗೊಳಿಸಿದ್ದ ಸಂದರ್ಭದಲ್ಲಿ, ಅಂಥ ಅಮಾನತಿನ ಅವಧಿಯಲ್ಲಿ ಅನರ್ಹತೆಯು ಪ್ರವರ್ತನೆಯಲ್ಲಿ ಇರಬೇಕು; ಅಥವಾ

(ಎಫ್) ಅವನು ಕಿವುಡನಾಗಿದ್ದರೆ, ಮೂಕನಾಗಿದ್ದರೆ; ಅಥವಾ

(ಜಿ) ಅವನು ಅಸ್ವಸ್ಥಚಿತ್ತನಾಗಿದ್ದರೆ ಮತ್ತು ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿತನಾಗಿದ್ದರೆ; ಅಥವಾ

(ಹೆಚ್) ಅವನು ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಐ) ಅವನು ಭಾರತದ ನಾಗರಿಕನಾಗಿರದಿದ್ದರೆ ಅಥವಾ ಯಾವುದೇ ವಿದೇಶೀ ರಾಷ್ಟ್ರದ ನಾಗರಿಕತ್ವವನ್ನು ಸ್ವಇಚ್ಛೆಯಿಂದ ಆರ್ಜಿಸಿದ್ದರೆ ಅಥವಾ ಒಂದು ವಿದೇಶೀ ರಾಷ್ಟ್ರಕ್ಕೆ ನಿಷ್ಠೆ ಅಥವಾ ಅನುಸಕ್ತಿ ಹೊಂದಿರುವುದನ್ನು ಒಪ್ಪಿಕೊಂಡಿದ್ದರೆ; ಅಥವಾ

[1][(ಜೆ) ಅವನು ರಾಜ್ಯ ವಿಧಾನಮಂಡಲದ ಚುನಾವಣೆಯ ಉದ್ದೇಶಗಳಿಗಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅನರ್ಹನಾಗಿದ್ದರೆ:

ಪರಂತು, ಯಾರೇ ವ್ಯಕ್ತಿಯನ್ನು ಅವನಿಗೆ ಇಪ್ಪತ್ತೊಂದು ವರ್ಷ ವಯಸ್ಸು ತುಂಬಿದ್ದರೆ, ಅವನು ಇಪ್ಪತ್ತೈದು ವರ್ಷಗಳಿಗಿಂತ ಕಡಿಮೆ ವಯಸ್ಸಿನವನೆಂಬ ಕಾರಣದ ಮೇಲೆ ಅನರ್ಹಗೊಳಿಸತಕ್ಕದ್ದಲ್ಲ;][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಕೆ) ಇಲ್ಲಿ ಇನ್ನು ಮುಂದೆ ಉಪಬಂಧಿಸಿರುವುದನ್ನುಳಿದು, ನಗರಪಾಲಿಕೆಯ ಆದೇಶದ ಮೂಲಕ ಮಾಡಿದ ಯಾವುದೇ ಕಾಮಗಾರಿಯಲ್ಲಿ ಅಥವಾ ನಗರಪಾಲಿಕೆಯು ಅಥವಾ ನಗರ ಪಾಲಿಕೆಯ ಪರವಾಗಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ನಗರಪಾಲಿಕೆಯಲ್ಲಿನ ಅಥವಾ ನಗರಪಾಲಿಕೆಯ ಅಧೀನದಲ್ಲಿನ ಉದ್ಯೋಗದಲ್ಲಿ ಅವನು ಸ್ವತಃ ಅಥವಾ ಅವನ ಪಾಲುದಾರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಪಾಲನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಲ್) ಅವನು ನಗರಪಾಲಿಕೆಯ ಪರವಾಗಿ ಸಂಬಳ ಪಡೆಯುವ ನ್ಯಾಯ ವೃತ್ತಿಗನಾಗಿ ನಿಯೋಜಿತನಾಗಿದ್ದರೆ ಅಥವಾ ನಗರಪಾಲಿಕೆಯ ವಿರುದ್ಧವಾಗಿ ನ್ಯಾಯವೃತ್ತಿಗನಾಗಿ ಉದ್ಯೋಗವನ್ನು ಅಂಗೀಕರಿಸಿದ್ದರೆ; ಅಥವಾ

(ಎಂ) ಅವನು ನಗರ ಪಾಲಿಕೆಯ ಲೈಸೆನ್ಸ್ ಪಡೆದ ಮೋಜಣಿದಾರ ಅಥವಾ ಕೊಳಾಯಿಗಾರ ಅಥವಾ ನೀರು ಸರಬರಾಜು ಕಂಟ್ರಾಕ್ಟದಾರನಾಗಿದ್ದರೆ ಅಥವಾ ಯಾರೇ ಅಂಥ ಲೈಸೆನ್ಸು ಪಡೆದ ವ್ಯಕ್ತಿಯು ಪಾಲುದಾರನಾಗಿರುವ ಫರ್ಮಿನ ಪಾಲುದಾರನಾಗಿದ್ದರೆ; ಅಥವಾ

(ಎನ್) ಅವನು ಏಜೆಂಟ್, ರಿಸೀವರ್, ನ್ಯಾಸಧಾರಿ ಅಥವಾ ಕಾರ್ಯನಿರ್ವಾಹಕನಾಗಿ ಹೊರತು, ಅವನಿಂದ ನಗರಪಾಲಿಕೆಗೆ ಬರಬೇಕಾದ ಯಾವುದೇ ಬಗೆಯ ಬಾಕಿಗಳನ್ನು ಈ ಬಗ್ಗೆ ಅವನಿಗೆ ನೋಟೀಸನ್ನು ಜಾರಿ ಮಾಡಿದ ತರುವಾಯ ಮೂರು ತಿಂಗಳ ಒಳಗಾಗಿ ಸಂದಾಯ ಮಾಡಲು ತಪ್ಪಿದ್ದರೆ; ಅಥವಾ

(ಒ) ಚುನಾವಣೆಯ ಸಿಂಧುತ್ವವನ್ನು ಅಥವಾ ಕ್ರಮಬದ್ಧತೆಯನ್ನು ಪ್ರಶ್ನಿಸುವ ವ್ಯವಹರಣೆಗಳಲ್ಲಿ ನಿರ್ಣಯದ ದಿನಾಂಕದಿಂದ ಆರು ವರ್ಷಗಳ ಅವಧಿಯು ಮುಕ್ತಾಯವಾಗಿದ್ದ ಹೊರತು ಅಥವಾ ಸರ್ಕಾರವು ಆದೇಶದ ಮೂಲಕ ಅನರ್ಹತೆಯನ್ನು ತೆಗೆದುಹಾಕಿದ್ದ ಹೊರತು, ಅವನು,–

(i) ಯಾವುದೇ ಭ್ರಷ್ಟಾಚಾರದ, ಅಥವಾ

(ii) ಭಾರತ ದಂಡ ಸಂಹಿತೆಯ 171ಇ ಪ್ರಕರಣ ಅಥವಾ 171ಎಫ್ ಪ್ರಕರಣದ ಮೇರೆಗೆ ದಂಡನೀಯವಾಗಬಹುದಾದ ಯಾವುದೇ ಅಪರಾಧ ಅಥವಾ ಈ ಅಧಿನಿಯಮದ 40ನೇ ಪ್ರಕರಣ ಅಥವಾ 52ನೇ ಪ್ರರಕಣದ ಅಥವಾ 53ನೇ ಪ್ರಕರಣದ 2ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ದಂಡನೀಯವಾಗಬಹುದಾದ ಯಾವುದೇ ಅಪರಾಧದ ತಪ್ಪಿತಸ್ಥನೆಂದು ಕಂಡು ಬಂದಿದ್ದರೆ

– ಕೌನ್ಸಿಲರನಾಗಿ ಚುನಾಯಿತನಾಗಲು ಅಥವಾ ಕೌನ್ಸಿಲರನಾಗಿರಲು ಅನರ್ಹನಾಗಿರತಕ್ಕದ್ದು:

ಪರಂತು,–

(ಎ) ಒಬ್ಬ ವ್ಯಕ್ತಿಯು,–

(i) ಯಾವುದೇ ನಿವೃತ್ತಿವೇತನವನ್ನು, ಅಥವಾ

(ii) ಅಧ್ಯಕ್ಷನಾಗಿ ಅಥವಾ ಉಪಾಧ್ಯಕ್ಷನಾಗಿ ಅಥವಾ ಕೌನ್ಸಿಲರ್‌ನಾಗಿ ಸೇವೆ ಸಲ್ಲಿಸುವುದಕ್ಕಾಗಿ ಸರ್ಕಾರವು ಅನುಮೋದಿಸಿದ ಯಾವುದೇ ಭತ್ಯವನ್ನು ಅಥವಾ ಸೌಲಭ್ಯವನ್ನು

– ಸ್ವೀಕರಿಸುತ್ತಿರುವ ಕಾರಣ ಮಾತ್ರದಿಂದಲೇ (ಸಿ) ಖಂಡದ ಮೇರೆಗೆ ಯಾವುದೇ ಅನರ್ಹತೆಗೆ ಒಳಗಾಗಿದ್ದಾನೆಂದು ಭಾವಿಸತಕ್ಕದ್ದಲ್ಲ;

(ಬಿ) (ಎ) ಮತ್ತು (ಡಿ) ಖಂಡಗಳಲ್ಲಿನ ಅನರ್ಹತೆಯು, ಅಂಥ ಶಿಕ್ಷೆಯ, ವಜಾ ಅಥವಾ ತೆಗೆದು ಹಾಕಿದ ದಿನಾಂಕದಿಂದ ನಾಲ್ಕು ವರ್ಷಗಳು ಮುಕ್ತಾಯವಾದ ತರುವಾಯ ಅಥವಾ ಸರ್ಕಾರದ ಆದೇಶದ ಮೂಲಕ ಆದಕ್ಕೂ ಮುಂಚಿತವಾಗಿ ಪ್ರವರ್ತನೆಯಲ್ಲಿರುವುದು ನಿಂತುಹೋಗತಕ್ಕದ್ದು;

(ಸಿ) ಒಬ್ಬ ವ್ಯಕ್ತಿಯು,–

(i) ಯಾವುದೇ ಸ್ಥಿರ ಸ್ವತ್ತಿನ ಯಾವುದೇ ಗುತ್ತಿಗೆ, ಮಾರಾಟ ಅಥವಾ ಖರೀದಿಯಲ್ಲಿ ಅಥವಾ ಅದಕ್ಕಾಗಿ ಮಾಡಿಕೊಂಡ ಯಾವುದೇ ಒಪ್ಪಂದದಲ್ಲಿ ಯಾವುದೇ ಪಾಲನ್ನು ಅಥವಾ ಹಿತಾಸಕ್ತಿಯನ್ನು ಹೊಂದಿರುವ; ಅಥವಾ

(ii) ವ್ಯವಸ್ಥಾಪಕ ನಿರ್ದೇಶಕನಾಗಿ ಅಥವಾ ಏಜೆಂಟ್ ಆಗಿ ಹೊರತು, ಯಾವುದೇ ಜಾಯಿಂಟ್ ಸ್ಟಾಕ್ ಕಂಪನಿಯಲ್ಲಿ ಅಥವಾ ಸಂಘಗಳ ನೋಂದಣಿ ಅಧಿನಿಯಮದ ಮೇರೆಗೆ ನೋಂದಾಯಿತವಾದ ಯಾವುದೇ ಸಾಹಿತ್ಯಕ ಸಂಘದಲ್ಲಿ ಅಥವಾ ನಗರ ಪಾಲಿಕೆಯೊಂದಿಗೆ ಕರಾರು ಮಾಡಿಕೊಂಡಿರುವ ಅಥವಾ ನಗರಪಾಲಿಕೆಯಿಂದ ಅಥವಾ ಅದರ ಪರವಾಗಿ ನಿಯೋಜಿತವಾಗಿರುವ ಯಾವುದೇ ಸಹಕಾರ ಸಂಘದಲ್ಲಿ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿರುವ; ಅಥವಾ

(iii) ನಗರಪಾಲಿಕೆಯ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಯಾವ ವೃತ್ತ ಪತ್ರಿಕೆಯಲ್ಲಿ ಪ್ರಕಟಿಸಬಹುದೋ ಅಂಥ ಯಾವುದೇ ವೃತ್ತಪತ್ರಿಕೆಯಲ್ಲಿ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿರುವ; ಅಥವಾ

(iv) ಡಿಬೆಂಚರ್ ಅನ್ನು ಹೊಂದಿರುವ ಅಥವಾ ನಗರಪಾಲಿಕೆ ಅಥವಾ ಅದರ ಪರವಾಗಿ ಎತ್ತಲಾದ ಯಾವುದೇ ಸಾಲದಲ್ಲಿ ಅನ್ಯಥಾ ಹಿತಾಸಕ್ತಿ ಹೊಂದಿರುವ; ಅಥವಾ

(v) ಅವನು ನಿಯತವಾಗಿ ವ್ಯಾಪಾರ ಮಾಡುತ್ತಿರುವ ಯಾವುದೇ ವಸ್ತುವನ್ನು ಯಾವುದೇ ಅಧಿಕೃತ ವರ್ಷದಲ್ಲಿ ಐವತ್ತು ರೂಪಾಯಿಗಳಿಗೆ ಮೀರದ ಮೌಲ್ಯಕ್ಕೆ ಅಥವಾ ಐದು ನೂರು ರೂಪಾಯಿಗಳಿಗೆ ಮೀರದಂತೆ ನಿಯಮಿಸಬಹುದಾದ ಅಂಥ ಹೆಚ್ಚಿನ ಮೊಬಲಗಿಗೆ ನಗರ ಪಾಲಿಕೆಗೆ ಆಗಾಗ್ಗೆ ಮಾಡುವ ಮಾರಾಟದಲ್ಲಿ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿರುವ; ಅಥವಾ

(vi) ಯಾವುದೇ ಅಧಿಕೃತ ವರ್ಷದಲ್ಲಿ ಐವತ್ತು ರೂಪಾಯಿಗಳಿಗೆ ಮೀರದ ಮೊಬಲಗಿಗೆ ಅಥವಾ ಐದು ನೂರು ರೂಪಾಯಿಗಳಿಗೆ ಮೀರದ ನಿಯಮಿಸಬಹುದಾದ ಅಂಥ ಹೆಚ್ಚಿನ ಮೊಬಲಗಿಗೆ ಯಾವುದೇ ವಸ್ತುವನ್ನು ಆಗಾಗ ನಗರಪಾಲಿಕೆಗೆ ಬಾಡಿಗೆಗೆ ಕೊಡುವುದರಲ್ಲಿ ಅಥವಾ ನಗರ ಪಾಲಿಕೆಯಿಂದ ಬಾಡಿಗೆಗೆ ಪಡೆಯುವುದರಲ್ಲಿ ಪಾಲು ಅಥವಾ ಹಿತಾಸಕ್ತಿಯನ್ನು ಹೊಂದಿರುವ

– ಕಾರಣದಿಂದಾಗಿ ಅವನು (ಕೆ) ಖಂಡದ ಮೇರೆಗಿನ ಅನರ್ಹತೆಗೆ ಒಳಗಾಗಿದ್ದಾನೆಂದು ಭಾವಿಸತಕ್ಕದ್ದಲ್ಲ.

[1][(1ಎ) ಒಬ್ಬ ವ್ಯಕ್ತಿಯನ್ನು, ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ) ಅಧಿನಿಯಮ, 1987ರ ಮೇರೆಗೆ ಹಾಗೆ ಅನರ್ಹಗೊಳಿಸಿದ್ದರೆ, ಅವನು ಕೌನ್ಸಿಲರನಾಗಿರಲು ಅನರ್ಹನಾಗತಕ್ಕದ್ದು.][1]

1. 1987ರ ಅಧಿನಿಯಮ ಸಂಖ್ಯೆ 20 ರ ಮೂಲಕ 29.12.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(1ಬಿ) ಒಬ್ಬ ವ್ಯಕ್ತಿಯನ್ನು 26ಸಿ ಪ್ರಕರಣದ ಮೇರೆಗೆ ಅನರ್ಹಗೊಳಿಸಿದ್ದರೆ ಅವನು ಕೌನ್ಸಿಲರನಾಗಿ ಆಯ್ಕೆಯಾಗಲು ಮತ್ತು ಕೌನ್ಸಿಲರನಾಗಿರಲು ಅನರ್ಹನಾಗತಕ್ಕದ್ದು:

ಪರಂತು, ಈ ಉಪಪ್ರಕರಣದ ಮೇರೆಗೆ ಅನರ್ಹತೆಯು, 26ಸಿ ಪ್ರಕರಣದ ಮೇರೆಗೆ ಮಾಡಿದ ಆದೇಶದ ದಿನಾಂಕದಿಂದ ಮೂರು ವರ್ಷಗಳು ಮುಕ್ತಾಯವಾದ ತರುವಾಯ ಪ್ರವರ್ತನೆಯಲ್ಲಿರುವುದು ನಿಂತುಹೋಗತಕ್ಕದ್ದು.][1]

1. 2003ರ ಅಧಿನಿಯಮ ಸಂಖ್ಯೆ 39 ರ ಮೂಲಕ 16.1.2004 ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಅಂತ್ಯದಲ್ಲಿದೆ.

(2) ಯಾರೇ ಕೌನ್ಸಿಲರನು, ಅವನು ಯಾವ ಅವಧಿಗೆ ಚುನಾಯಿತನಾಗಿರವನೋ ಆ ಅವಧಿಯಲ್ಲಿ,–

(ಎ) (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅನರ್ಹತೆಗೆ ಒಳಗಾದರೆ; ಅಥವಾ

(ಬಿ) ಯಾವ ವಿಷಯದಲ್ಲಿ ಅವನು,–

(i) (1)ನೇ ಉಪಪ್ರಕರಣದ ಪರಂತುಕದ (ಸಿ) ಖಂಡದ (i), (ii), (iii), ಅಥವಾ (v) ನೇ ಉಪಖಂಡಗಳಲ್ಲಿ ವಿವರಿಸಲಾದ ಯಾವುದೇ ಪಾಲಿನ ಅಥವಾ ಹಿತಾಸಕ್ತಿಯ ಮೌಲ್ಯವು ಎಷ್ಟೇ ಆಗಿರಬಹುದಾದರೂ ಅಂಥ ಪಾಲನ್ನು ಅಥವಾ ಹಿತಾಸಕ್ತಿಯನ್ನು ತಾನೇ ಸ್ವತಃ ಅಥವಾ ತನ್ನ ಪಾಲುದಾರನ ಮೂಲಕ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಹೊಂದಿರುವನೋ; ಅಥವಾ

(ii) ಮೂಲಕರ್ತ ಅಥವಾ ಇತರೆ ವ್ಯಕ್ತಿಯ ಪರವಾಗಿ ವೃತ್ತಿಯ ಹಿತಾಸಕ್ತಿ ಹೊಂದಿರುವನೋ; ಅಥವಾ

(iii) ಆ ಕಾಲದಲ್ಲಿ ನಗರ ಪಾಲಿಕೆ ವಿರುದ್ಧದ ಯಾವುದೇ ವ್ಯವಹರಣೆಯಲ್ಲಿ ತೊಡಗಿರುವನೋ

– ಆ ಯಾವುದೇ ವಿಷಯದ ಚರ್ಚೆಗಳಲ್ಲಿ ಕೌನ್ಸಿಲರನಾಗಿ ಮತದಾನ ಮಾಡಿದರೆ ಅಥವಾ ಭಾಗವಹಿಸಿದರೆ; ಅಥವಾ

(ಸಿ) ನಗರ ಪಾಲಿಕೆ ಅನುಮತಿ ಪಡೆದ ಹೊರತು ಮೂರು ಅನುಕ್ರಮ ತಿಂಗಳುಗಳ ಅವಧಿಯಲ್ಲಿ ನಗರ ಪಾಲಿಕೆಯ ಸಭೆಗಳಿಗೆ ಅವನು ಗೈರುಹಾಜರಾದರೆ:

ಪರಂತು, ಆರು ಅನುಕ್ರಮ ತಿಂಗಳುಗಳಿಗೆ ಮೀರಿದ ಅವಧಿಯಲ್ಲಿ ನಗರ ಪಾಲಿಕೆ ಸಭೆಗಳಿಗೆ ಗೈರುಹಾಜರಾದ ಸಂದರ್ಭದಲ್ಲಿ ಯಾವುದೇ ಅಂಥ ಅನುಮತಿಯನ್ನು ಮಂಜೂರು ಮಾಡತಕ್ಕದ್ದಲ್ಲ:

ಮತ್ತೂ ಪರಂತು, ಗೈರುಹಾಜರಾಗಲು ಅನುಮತಿಗಾಗಿ ನಗರಪಾಲಿಕೆಗೆ ಕೌನ್ಸಿಲರನು ಅರ್ಜಿಯನ್ನು ಸಲ್ಲಿಸಿರುವಾಗ ಮತ್ತು ಆ ಅರ್ಜಿಯ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ ಆ ಅರ್ಜಿಯ ಮೇಲೆ ತನ್ನ ತೀರ್ಮಾನವನ್ನು ಅರ್ಜಿದಾರನಿಗೆ ತಿಳಿಸಲು ನಗರಪಾಲಿಕೆಯು ತಪ್ಪಿದಲ್ಲಿ ಕೋರಿರುವ ಅನುಮತಿಯನ್ನು ನಗರ ಪಾಲಿಕೆಯು ಮಂಜೂರು ಮಾಡಿದೆ ಎಂಬುದಾಗಿ ಭಾವಿಸತಕ್ಕದ್ದು. [1][ಪ್ರಾದೇಶಿಕ ಆಯುಕ್ತರು][1] ತಾವಾಗಿಯೇ ಆಗಲಿ ಅಥವಾ ತಮಗೆ ನೀಡಿದ ವರದಿಯ ಮೇಲಾಗಲಿ, ತಾವು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ಮಾಡಿದ ತರುವಾಯ ಆದೇಶದ ಮೂಲಕ, ಸಂಬಂಧಪಟ್ಟ ವ್ಯಕ್ತಿಯ ಸ್ಥಾನವು ತೆರವಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ತೀರ್ಮಾನಿಸಬಹುದು. ಅಂಥ ಆದೇಶವನ್ನು ಸಾಧ್ಯವಾದಷ್ಟು ಮಟ್ಟಿಗೆ ವರದಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಅಥವಾ ತಾವಾಗಿಯೇ ಕ್ರಮವನ್ನು ಕೈಗೊಂಡಿರುವಲ್ಲಿ ಅದನ್ನು ಪ್ರಾರಂಭಿಸಿದಂದಿನಿಂದ ಮೂವತ್ತು ದಿನಗಳೊಳಗಾಗಿ ಮಾಡತಕ್ಕದ್ದು.

1. 2007ರ ಅಧಿನಿಯಮ ಸಂಖ್ಯೆ 17 ರ ಮೂಲಕ 5.1.2007 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) (2)ನೇ ಉಪಪ್ರಕರಣದ ಮೇರೆಗೆ [1][ಪ್ರಾದೇಶಿಕ ಆಯುಕ್ತರ][1] ತೀರ್ಮಾನದಿಂದ ಬಾಧಿತನಾದ ಯಾರೇ ವ್ಯಕ್ತಿಯು ಅಂಥ ತೀರ್ಮಾನದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ಸರ್ಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು ಮತ್ತು ಅಂಥ ಅಪೀಲಿನ ಮೇಲೆ ಸರ್ಕಾರವು ಮಾಡಿದ ಆದೇಶವು ಅಂತಿಮವಾದುದಾಗಿರತಕ್ಕದ್ದು:

1. 2007 ರ ಅಧಿನಿಯಮ ಸಂಖ್ಯೆ 17 ರ ಮೂಲಕ 5.1.2007 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಪರಂತು, ಯಾರೇ ಕೌನ್ಸಿಲರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವನಿಗೆ ಯುಕ್ತ ಅವಕಾಶವನ್ನು ಕೊಟ್ಟ ಹೊರತು (2) ಮತ್ತು (3)ನೇ ಉಪಪ್ರಕರಣಗಳ ಮೇರೆಗೆ ಅವನ ವಿರುದ್ಧ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

[1][**26ಎ. ಚುನಾವಣಾ ವೆಚ್ಚಗಳ ಲೆಕ್ಕ ಮತ್ತು ಅದರ ಗರಿಷ್ಠಮಿತಿ.–** (1) ಈ ಅಧಿನಿಯಮದ ಮೇರೆಗೆ, ಚುನಾವಣಾ ಕಣದಲ್ಲಿರುವ ಪ್ರತಿಯೊಬ್ಬ ಅಭ್ಯರ್ಥಿಯು, ಅವನು ಚುನಾವಣಾ ಅಭ್ಯರ್ಥಿಯಾಗಿ ನಾಮನಿರ್ದೇಶಿತನಾದ ದಿನಾಂಕ ಮತ್ತು ಚುನಾವಣಾ ಫಲಿತಾಂಶದ ಘೋಷಣೆಯ ದಿನಾಂಕ ಎರಡೂ ದಿನಗಳು ಸೇರಿ, ಇವುಗಳ ನಡುವಣ ಅವಧಿಯಲ್ಲಿ, ಅವನು ಅಥವಾ ಅವನ ಚುನಾವಣಾ ಏಜೆಂಟನು ವಹಿಸಿದ ಅಥವಾ ಅಧಿಕೃತಗೊಳಿಸಿದ, ಚುನಾವಣೆಗೆ ಸಂಬಂಧಿಸಿದ ಎಲ್ಲ ವೆಚ್ಚಗಳ ಬಗ್ಗೆ ಪ್ರತ್ಯೇಕವಾದ ಮತ್ತು ಸರಿಯಾದ ಲೆಕ್ಕವನ್ನು ಸ್ವತ: ತಾನಾಗಲೀ ಅಥವಾ ತನ್ನ ಚುನಾವಣಾ ಏಜೆಂಟನಾಗಲೀ ಇಡತಕ್ಕದ್ದು.

(2) ಈ ಅಧಿನಿಯಮದ ಮೇರೆಗೆ, ಅಭ್ಯರ್ಥಿಯ ಚುನಾವಣೆಗೆ ಸಂಬಂಧಿಸಿದಂತೆ ಒಂದು ರಾಜಕೀಯ ಪಕ್ಷವು ಅಥವಾ ಇತರ ಯಾವುದೇ ಸಂಘವು ಅಥವಾ ನಿಕಾಯವು ಅಥವಾ ವ್ಯಕ್ತಿಗಳು ಅಥವಾ ಯಾರೇ ವ್ಯಕ್ತಿಯು (ಅಭ್ಯರ್ಥಿಯನ್ನು ಅಥವಾ ಅವನ ಚುನಾವಣಾ ಏಜೆಂಟನನ್ನು ಹೊರತುಪಡಿಸಿ) ವಹಿಸಿದ ಅಥವಾ ಅಧಿಕೃತಗೊಳಿಸಿದ ಯಾವುದೇ ವೆಚ್ಚವನ್ನು (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ, ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು, ಚುನಾವಣೆಗೆ ಸಂಬಂಧಿಸಿದಂತೆ ವಹಿಸಿದ ಅಥವಾ ಅಧಿಕೃತಗೊಳಿಸಿದ ವೆಚ್ಚವೆಂದು ಭಾವಿಸತಕ್ಕದ್ದಲ್ಲ.

**ವಿವರಣೆ 1.–** ಈ ಉಪಪ್ರಕರಣದ ಉದ್ದೇಶಕ್ಕಾಗಿ "ರಾಜಕೀಯ ಪಕ್ಷ" ಎಂಬುದಕ್ಕೆ ತತ್ಕಾಲದಲ್ಲಿ ಜಾರಿಯಲ್ಲಿರುವ ಚುನಾವಣಾ ಚಿಹ್ನೆಗಳ (ಮೀಸಲಾತಿ ಮತ್ತು ಹಂಚಿಕೆ) ಆದೇಶ, 1968 ರಲ್ಲಿ ಇರುವ ಅರ್ಥವೇ ಇರತಕ್ಕದ್ದು.

**ವಿವರಣೆ 2.–** ಸಂದೇಹಗಳ ನಿವಾರಣೆಗಾಗಿ, ಯಾರೇ ಅಭ್ಯರ್ಥಿಗಾಗಿ ಅಥವಾ ಅವನ ಚುನಾವಣಾ ಏಜೆಂಟನಿಗಾಗಿ ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಒಪ್ಪಿಗೆ ಪಡೆದು ಕಾರ್ಯನಿರ್ವಹಿಸುತ್ತಿರುವ ಯಾರೇ ಇತರ ವ್ಯಕ್ತಿಗಾಗಿ (ಅಭ್ಯರ್ಥಿಯು ಧಾರಣ ಮಾಡಿದ ಪದದ ಕಾರಣದಿಂದಾಗಿ ಆಗಲಿ ಅಥವಾ ಯಾವುದೇ ಇತರ ಕಾರಣದಿಂದಾಗಿ ಆಗಲಿ) ಅಥವಾ ಅವನಿಗೆ ಅಥವಾ ಅವನ ಸಲುವಾಗಿ ಸರ್ಕಾರದ ಸೇವೆಯಲ್ಲಿರುವ ಅಥವಾ ನಗರಪಾಲಿಕೆ ಸೇವೆಯಲ್ಲಿರುವ ಯಾರೇ ವ್ಯಕ್ತಿಯು ತನ್ನ ಅಧಿಕೃತ ಕರ್ತವ್ಯದ ನಿರ್ವಹಣೆಯಲ್ಲಿ ಅಥವಾ ಕರ್ತವ್ಯ ನಿರ್ವಹಣೆಯಲ್ಲಿರುವನೆಂದು ತಾತ್ಪರ್ಯವಾಗುವಲ್ಲಿ ಅವನು ಮಾಡಿದ ಯಾವುದೇ ಏರ್ಪಾಡಿಗೆ, ಒದಗಿಸಿದ ಸೌಲಭ್ಯಗಳಿಗೆ ಅಥವಾ ಮಾಡಿದ ಇತರ ಯಾವುದೇ ಕೃತ್ಯಕ್ಕೆ ಅಥವಾ ಕಾರ್ಯಕ್ಕೆ ಸಂಬಂಧಿಸಿದಂತೆ ವಹಿಸಿದ ಯಾವುದೇ ವೆಚ್ಚವನ್ನು ಈ ಪ್ರಕರಣದ ಉದ್ದೇಶಕ್ಕಾಗಿ, ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು ವಹಿಸಿದ ಅಥವಾ ಅಧಿಕೃತಗೊಳಿಸಿದ ಚುನಾವಣೆಗೆ ಸಂಬಂಧಿಸಿದ ವೆಚ್ಚವೆಂಬುದಾಗಿ ಭಾವಿಸತಕ್ಕದ್ದಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

(3) ಲೆಕ್ಕಗಳು ನಿಯಮಿಸಬಹುದಾದಂಥ ವಿವರಗಳನ್ನು ಒಳಗೊಂಡಿರತಕ್ಕದ್ದು.

(4) ಸದರಿ ವೆಚ್ಚದ ಒಟ್ಟು ಮೊತ್ತವು, ನಿಯಮಿಸಬಹುದಾದಂಥ ಮೊಬಲಗನ್ನು ಮೀರತಕ್ಕದ್ದಲ್ಲ.

**26ಬಿ. ಚುನಾವಣಾ ಅಧಿಕಾರಿಗೆ ಲೆಕ್ಕವನ್ನು ಸಲ್ಲಿಸುವುದು.–** ಈ ಅಧಿನಿಯಮದ ಮೇರೆಗೆ ಚುನಾವಣೆಯಲ್ಲಿ ಸ್ಪರ್ಧಿಸಿರುವ ಪ್ರತಿಯೊಬ್ಬ ಅಭ್ಯರ್ಥಿಯು, ಗೆದ್ದ ಅಭ್ಯರ್ಥಿಯ ಚುನಾವಣೆಯ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅಥವಾ ಚುನಾವಣೆಯಲ್ಲಿ ಒಬ್ಬರಿಗಿಂತ ಹೆಚ್ಚು ಗೆದ್ದ ಅಭ್ಯರ್ಥಿಗಳಿದ್ದರೆ ಮತ್ತು ಚುನಾವಣೆಯ ದಿನಾಂಕಗಳು ಬೇರೆ ಬೇರೆಯಾಗಿದ್ದರೆ, ಆ ಎರಡು ದಿನಾಂಕಗಳ ಪೈಕಿ, ತರುವಾಯದ ದಿನಾಂಕದಿಂದ, ಮೂವತ್ತು ದಿನಗಳೊಳಗೆ 26ಎ ಪ್ರಕರಣದ ಮೇರೆಗೆ ತಾನು ಅಥವಾ ತನ್ನ ಚುನಾವಣಾ ಏಜೆಂಟನು ಇಟ್ಟಿರುವ ಲೆಕ್ಕದ ಒಂದು ಯಥಾ ಪ್ರತಿಯಾಗಿರುವ ತನ್ನ ಚುನಾವಣೆಯ ವೆಚ್ಚದ ಲೆಕ್ಕವನ್ನು ಈ ಅಧಿನಿಯಮದ ಮೇರೆಗೆ ಚುನಾವಣೆಗೆ ನೇಮಕಗೊಂಡ ಚುನಾವಣಾ ಅಧಿಕಾರಿಗೆ ಸಲ್ಲಿಸತಕ್ಕದ್ದು.

**26ಸಿ. ಚುನಾವಣಾ ವೆಚ್ಚಗಳ ಲೆಕ್ಕವನ್ನು ಸಲ್ಲಿಸಲು ವಿಫಲವಾಗುವುದು.–** ಯಾರೇ ವ್ಯಕ್ತಿಯು,–

(ಎ) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ, ಅಗತ್ಯಪಡಿಸಿದ ಕಾಲದೊಳಗೆ ಮತ್ತು ರೀತಿಯಲ್ಲಿ, ಚುನಾವಣಾ ವೆಚ್ಚಗಳ ಲೆಕ್ಕವನ್ನು ಸಲ್ಲಿಸಲು ವಿಫಲನಾಗಿರುವನೆಂದು; ಮತ್ತು

(ಬಿ) ಹಾಗೆ ಸಲ್ಲಿಸಲು ವಿಫಲನಾದುದಕ್ಕೆ ಯಾವುದೇ ಯುಕ್ತ ಕಾರಣ ಅಥವಾ ಸಮರ್ಥನೆ ಇಲ್ಲವೆಂದು

– ರಾಜ್ಯ ಚುನಾವಣಾ ಆಯೋಗಕ್ಕೆ ಮನದಟ್ಟಾದರೆ, ರಾಜ್ಯ ಚುನಾವಣಾ ಆಯೋಗವು ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಅವನನ್ನು ಅನರ್ಹನೆಂದು ಘೋಷಿಸತಕ್ಕದ್ದು ಮತ್ತು ಅಂಥ ಯಾರೇ ವ್ಯಕ್ತಿಯು, ಆದೇಶವನ್ನು ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಯವರೆಗೆ ಅನರ್ಹನಾಗಿರತಕ್ಕದ್ದು.][1]

1. ಅಧಿನಿಯಮ 2003ರ ಸಂಖ್ಯೆ 39 ರ ಮೂಲಕ 26ಎ ಯಿಂದ 26ಸಿ ವರೆಗಿನ ಪ್ರಕರಣಗಳನ್ನು 16.1.2004 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯಲ್ಲಿದೆ.

**27. ಅನರ್ಹತೆಯನ್ನುಂಟುಮಾಡುವ ಭ್ರಷ್ಟಾಚಾರಗಳು.–** 39ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಭ್ರಷ್ಟಾಚಾರಗಳು ಅಂಥ ಭ್ರಷ್ಟಾಚಾರದ ಬಗ್ಗೆ ನ್ಯಾಯಾಲಯದ ತೀರ್ಮಾನವು ಈ ಅಧಿನಿಯಮದ ಮೇರೆಗೆ ಜಾರಿಗೆ ಬರುವಂಥ ದಿನಾಂಕದಿಂದ ಲೆಕ್ಕ ಹಾಕಿದ ಆರು ವರ್ಷಗಳ ಅವಧಿಯವರೆಗೆ ಕೌನ್ಸಿಲರನಾಗಿರುವುದಕ್ಕೆ ಅನರ್ಹತೆಯನ್ನುಂಟುಮಾಡತಕ್ಕದ್ದು.

**28. ಮತದಾರನಾಗಿರುವುದಕ್ಕೆ ಅಪರಾಧ ನಿರ್ಣಯ ಮತ್ತು ಭ್ರಷ್ಟಾಚಾರದಿಂದ ಉದ್ಭವಿಸುವ ಅನರ್ಹತೆ.–** ಯಾರೇ ವ್ಯಕ್ತಿಯು,–

(ಎ) ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ 45) 171ಇ ಪ್ರಕರಣದ ಅಥವಾ 171ಎಫ್ ಪ್ರಕರಣದ ಮೇರೆಗೆ ಕಾರಾವಾಸದಿಂದ ದಂಡನೀಯವಾಗಬಹುದಾದ ಅಪರಾಧದ ಅಥವಾ ಈ ಅಧಿನಿಯಮದ 40ನೇ ಪ್ರಕರಣದ ಅಥವಾ 52ನೇ ಪ್ರಕರಣದ ಅಥವಾ 53ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ದಂಡನೀಯವಾಗಬಹುದಾದ ಅಪರಾಧದ ಅಪರಾಧಿ ಎಂದು ನ್ಯಾಯ ನಿರ್ಣೀತನಾದರೆ; ಅಥವಾ

(ಬಿ) ಈ ಅಧಿನಿಯಮದ ಮೇರೆಗಿನ ಚುನಾವಣಾ ತಕರಾರು ಅರ್ಜಿಯ ಅಧಿವಿಚಾರಣೆಯಲ್ಲಿ ಯಾವುದೇ ಭ್ರಷ್ಟಾಚಾರದ ತಪ್ಪಿತಸ್ಥನೆಂದು ಕಂಡುಬಂದರೆ

– ಅಪರಾಧಿ ಎಂದು ನ್ಯಾಯ ನಿರ್ಣೀತನಾದ ದಿನಾಂಕದಿಂದ ಅಥವಾ ಅಂಥ ತೀರ್ಮಾನವು ಜಾರಿಗೆ ಬರುವ ದಿನಾಂಕದಿಂದ ಆರು ವರ್ಷಗಳ ಅವಧಿಯವರೆಗೆ ಚುನಾವಣೆಯಲ್ಲಿ ಮತ ನೀಡಲು ಅವನು ಅನರ್ಹನಾಗತಕ್ಕದ್ದು.

**29. ಚುನಾವಣಾ ಏಜೆಂಟನಾಗಿರುವುದಕ್ಕೆ ಅನರ್ಹತೆ.–** ಕೌನ್ಸಿಲರನಾಗಿರುವುದಕ್ಕೆ ಅಥವಾ ಚುನಾವಣೆಗಳಲ್ಲಿ ಮತ ನೀಡುವುದಕ್ಕೆ 26, 27 ಅಥವಾ 28ನೇ ಪ್ರಕರಣಗಳ ಮೇರೆಗೆ ತತ್ಕಾಲದಲ್ಲಿ ಅನರ್ಹನಾಗಿರುವ ಯಾರೇ ವ್ಯಕ್ತಿಯು, ಆ ಅನರ್ಹತೆಯು ಎಲ್ಲಿಯವರೆಗೆ ಅಸ್ತಿತ್ವದಲ್ಲಿರುವುದೋ ಅಲ್ಲಿಯವರೆಗೆ, ಚುನಾವಣೆಯಲ್ಲಿ ಚುನಾವಣಾ ಏಜೆಂಟನಾಗಿರುವುದಕ್ಕೆ ಸಹ ಅನರ್ಹನಾಗಿರತಕ್ಕದ್ದು.

**30. ಸಮಾನ ಮತಗಳು.–** ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳಿಗೆ ಸಮಾನ ಮತಗಳು ಬಂದಿದ್ದರೆ [1][ರಾಜ್ಯ ಚುನಾವಣಾ ಆಯೋಗದಿಂದ ಅಥವಾ ಅದರ ಪರವಾಗಿ ನೇಮಕಗೊಂಡ ಚುನಾವಣಾಧಿಕಾರಿಯು][1] ಯಾವ ಅಭ್ಯರ್ಥಿಯು ಚುನಾಯಿತನಾಗಿದ್ದಾನೆಂದು ಭಾವಿಸತಕ್ಕದ್ದು ಎಂಬುದನ್ನು ಚೀಟಿ ಎತ್ತುವ ಮೂಲಕ ತೀರ್ಮಾನಿಸತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**31. ಏಕಕಾಲಿಕ ಸದಸ್ಯತ್ವದ ನಿಷೇಧ.–** (1) ಒಬ್ಬ ವ್ಯಕ್ತಿಯು ಒಂದಕ್ಕಿಂತ ಹೆಚ್ಚಿನ ವಿಭಾಗಗಳಿಗೆ ಚುನಾಯಿತನಾಗಿದ್ದರೆ, ಅಂಥ ಚುನಾವಣೆಗಳ ಪೈಕಿ ಕೊನೆಯ ಚುನಾವಣೆಯ ದಿನಾಂಕದಿಂದ ಮೂರು ದಿನಗಳೊಳಗಾಗಿ ತಾನು ಸಹಿ ಮಾಡಿರುವ ಲಿಖಿತ ನೋಟೀಸನ್ನು ಆಯುಕ್ತರಿಗೆ ತಲುಪಿಸುವ ಮೂಲಕ ಅವನು ಯಾವ ವಿಭಾಗದಿಂದ ಸೇವೆ ಸಲ್ಲಿಸಲು ಆಯ್ಕೆ ಮಾಡಿಕೊಳ್ಳುವನೋ ಆ ವಿಭಾಗವನ್ನು ತಿಳಿಸತಕ್ಕದ್ದು ಮತ್ತು ಆ ಆಯ್ಕೆಯು ಅಂತಿಮವಾದುದಾಗಿರತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ತಿಳಿಸಿರುವಂತೆ ಅಭ್ಯರ್ಥಿಯು ಆಯ್ಕೆಯನ್ನು ಮಾಡಿಕೊಳ್ಳದಿದ್ದರೆ, ಅಂಥ ಅಭ್ಯರ್ಥಿಯು ಯಾವ ವಿಭಾಗದಿಂದ ಸೇವೆ ಸಲ್ಲಿಸತಕ್ಕದ್ದೆಂಬುದನ್ನು ಆಯುಕ್ತರು ಚೀಟಿ ಎತ್ತುವ ಮೂಲಕ ನಿರ್ಧರಿಸತಕ್ಕದ್ದು ಮತ್ತು ಅದನ್ನು ಅಧಿಸೂಚಿಸತಕ್ಕದ್ದು.

(3) ಸದರಿ ವ್ಯಕ್ತಿಯು ಹಾಗೆ ಆಯ್ಕೆ ಮಾಡಿಕೊಂಡ ಅಥವಾ ಸಂದರ್ಭಾನುಸಾರ ಅಧಿಸೂಚಿಸಿದ ವಿಭಾಗದ ಸ್ಥಾನಕ್ಕಾಗಿ ಮಾತ್ರವೇ ಚುನಾಯಿತನಾಗಿರುವನೆಂದು ಭಾವಿಸತಕ್ಕದ್ದು ಮತ್ತು ಅದರಿಂದ ತೆರವಾಗುವ ಇತರ ಸ್ಥಾನ ಅಥವಾ ಸ್ಥಾನಗಳನ್ನು ಹೊಸದಾಗಿ ಚುನಾವಣೆ ನಡೆಸುವ ಮೂಲಕ ಭರ್ತಿ ಮಾಡತಕ್ಕದ್ದು.

**32. ಚುನಾವಣಾ ಫಲಿತಾಂಶಗಳ ಪ್ರಕಟಣೆ.–** ಮೇಯರ್ ಮತ್ತು ಉಪಮೇಯರ್‌ರವರ ಎಲ್ಲ ಚುನಾವಣೆಗಳ ಫಲಿತಾಂಶಗಳನ್ನು ಮತ್ತು ಕೌನ್ಸಿಲರುಗಳ ಚುನಾವಣೆಗಳ ಫಲಿತಾಂಶಗಳನ್ನು ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

**33. ಚುನಾವಣಾ ತಕರಾರು ಅರ್ಜಿ.–** (1) 32ನೇ ಪ್ರಕರಣದ ಮೇರೆಗೆ ಚುನಾವಣೆಯ ಫಲಿತಾಂಶವನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ ನ್ಯಾಯ ನಿರ್ಣಯಕ್ಕಾಗಿ ಸಲ್ಲಿಸಿದ ಚುನಾವಣಾ ತಕರಾರು ಅರ್ಜಿಯ ಮೂಲಕ ಹೊರತು, ಕೌನ್ಸಿಲರನ ಯಾವುದೇ ಚುನಾವಣೆಯನ್ನು ಪ್ರಶ್ನಿಸತಕ್ಕದ್ದಲ್ಲ.

(2) 35ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಒಂದು ಅಥವಾ ಹೆಚ್ಚು ಕಾರಣಗಳ ಮೇಲೆ,–

(ಎ) ಅಂಥ ಚುನಾವಣೆಯ ಕಣದಲ್ಲಿದ್ದ ಯಾರೇ ಅಭ್ಯರ್ಥಿಯು; ಅಥವಾ

(ಬಿ) ಸಂಬಂಧಪಟ್ಟ [1][ವಾರ್ಡ್][1]ನ ಯಾರೇ ಮತದಾರನು

– ಚುನಾವಣಾ ತಕರಾರು ಅರ್ಜಿಯನ್ನು ಸಲ್ಲಿಸಬಹುದು.

1. 1994 ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಅರ್ಜಿದಾರನು ಚುನಾವಣಾ ಕಣದಲ್ಲಿದ್ದ ಎಲ್ಲ ಅಭ್ಯರ್ಥಿಗಳನ್ನು ತನ್ನ ಅರ್ಜಿಗೆ ಪ್ರತ್ಯರ್ಜಿದಾರರನ್ನಾಗಿ ಸೇರಿಸತಕ್ಕದ್ದು.

(4) ಚುನಾವಣಾ ತಕರಾರು ಅರ್ಜಿಯು,–

(ಎ) ಅರ್ಜಿದಾರನು ಯಾವ ಮುಖ್ಯ ಸಂಗತಿಗಳನ್ನು ಆಧರಿಸಿರುವನೋ ಆ ಮುಖ್ಯ ಸಂಗತಿಗಳ ಸಂಕ್ಷಿಪ್ತ ನಿರೂಪಣೆಯನ್ನು ಒಳಗೊಂಡಿರತಕ್ಕದ್ದು;

(ಬಿ) ಯಾವ ಪಕ್ಷಕಾರರು ಭ್ರಷ್ಟಾಚಾರ ಮಾಡಿದ್ದಾರೆಂದು ಆಪಾದಿಸಲಾಗಿದೆಯೋ ಆ ಪಕ್ಷಕಾರರ ಹೆಸರುಗಳನ್ನು ಮತ್ತು ಅಂಥ ಪ್ರತಿಯೊಂದು ಭ್ರಷ್ಟಚಾರ ಮಾಡಿದ ದಿನಾಂಕ ಮತ್ತು ಸ್ಥಳವನ್ನು ಕುರಿತಂತೆ ಸಾಧ್ಯವಾದಷ್ಟು ಮಟ್ಟಿಗೆ ಪೂರ್ಣ ವಿವರಣೆಯೂ ಸೇರಿದಂತೆ ಅರ್ಜಿದಾರನು, ಆಪಾದಿಸಿರುವ ಅಂಥ ಯಾವುದೇ ಭ್ರಷ್ಟಾಚಾರದ ಪೂರ್ಣ ವಿವರಗಳ ನಿರೂಪಣೆಯನ್ನು ಒಳಗೊಂಡಿರತಕ್ಕದ್ದು.

(ಸಿ) ಅರ್ಜಿದಾರನು ಅದಕ್ಕೆ ರುಜು ಮಾಡಿರತಕ್ಕದ್ದು ಮತ್ತು ವಾದ ಪ್ರತಿವಾದ ಪತ್ರಗಳ ಸತ್ಯಾಪನೆಗಾಗಿ 1908ರ ಸಿವಿಲ್ ಪ್ರಕ್ರಿಯಾ ಸಂಹಿತೆ (1908ರ ಕೇಂದ್ರ ಅಧಿನಿಯಮ 5)ಯಲ್ಲಿ ವಿಧಿಸಿರುವ ರೀತಿಯಲ್ಲಿ ಅದನ್ನು ಸತ್ಯಾಪನೆ ಮಾಡಿರತಕ್ಕದ್ದು.

(5) ಪ್ರತಿಯೊಂದು ಚುನಾವಣಾ ತಕರಾರು ಅರ್ಜಿಯನ್ನು ಸಾಧ್ಯವಾದಷ್ಟು ಶೀಘ್ರವಾಗಿ ಅಧಿವಿಚಾರಣೆ ಮಾಡತಕ್ಕದ್ದು ಮತ್ತು (1)ನೇ ಉಪಪ್ರಕರಣದ ಮೇರೆಗೆ ಚುನಾವಣಾ ತಕರಾರು ಅರ್ಜಿಯನ್ನು ಸಲ್ಲಿಸಿದ ದಿನಾಂಕದಿಂದ ಆರು ತಿಂಗಳುಗಳ ಒಳಗಾಗಿ ಅಧಿವಿಚಾರಣೆಯನ್ನು ಮುಕ್ತಾಯಗೊಳಿಸಲು ಪ್ರಯತ್ನ ಮಾಡತಕ್ಕದ್ದು:

ಪರಂತು, ಅರ್ಜಿದಾರನು ಯಾವುದೇ ಭ್ರಷ್ಟಾಚಾರವನ್ನು ಆರೋಪಿಸಿದರೆ, ಅಂಥ ಭ್ರಷ್ಟಾಚಾರದ ಆರೋಪಕ್ಕೆ ಮತ್ತು ಅದರ ವಿವರಗಳಿಗೆ ಸಮರ್ಥನೆಯಾಗಿ ನಿಯಮಿಸಿದ ನಮೂನೆಯಲ್ಲಿ ಒಂದು ಅಫಿಡಾವಿಟ್ಟನ್ನು ಸಹ ಅರ್ಜಿಯ ಜೊತೆಗೆ ಲಗತ್ತಿಸಿರತಕ್ಕದ್ದು.

(6) ತಕರಾರು ಅರ್ಜಿಯ ಯಾವುದೇ ಅನುಸೂಚಿ ಅಥವಾ ಅನುಬಂಧಕ್ಕೆ ಸಹ ಅರ್ಜಿದಾರನು ರುಜು ಮಾಡತಕ್ಕದ್ದು ಮತ್ತು ತಕರಾರು ಅರ್ಜಿಯನ್ನು ಸತ್ಯಾಪನ ಮಾಡುವ ರೀತಿಯಲ್ಲಿಯೇ ಅದನ್ನು ಸತ್ಯಾಪನೆ ಮಾಡತಕ್ಕದ್ದು.

**34. ಅರ್ಜಿದಾರನು ಕ್ಲೇಮು ಮಾಡಬಹುದಾದ ಪರಿಹಾರ.–** ಅರ್ಜಿದಾರನು, ಗೆದ್ದ ಎಲ್ಲಾ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯು ಅನೂರ್ಜಿತವೆಂದು ಘೋಷಿಸಬೇಕೆಂದು ಕ್ಲೇಮು ಮಾಡುವುದರ ಜೊತೆಗೆ ತಾನೇ ಅಥವಾ ಯಾರೇ ಇತರ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿರುವುದಾಗಿಯೂ ಘೋಷಿಸಬೇಕೆಂದು ಸಹ ಕ್ಲೇಮು ಮಾಡಬಹುದು.

**35. ಚುನಾವಣೆಗಳು ಅನೂರ್ಜಿತವೆಂದು ಘೋಷಿಸುವುದಕ್ಕೆ ಕಾರಣಗಳು.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು,–

(ಎ) ಗೆದ್ದ ಅಭ್ಯರ್ಥಿಯು, ಅವನ ಚುನಾವಣೆಯ ದಿನಾಂಕದಂದು, ಈ ಅಧಿನಿಯಮದ ಮೇರೆಗೆ ಕೌನ್ಸಿಲರನಾಗಿ ಚುನಾಯಿತನಾಗಲು ಅರ್ಹನಾಗಿರಲಿಲ್ಲವೆಂದು ಅಥವಾ ಅನರ್ಹನಾಗಿದ್ದನೆಂದು; ಅಥವಾ

(ಬಿ) ಗೆದ್ದ ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು ಅಥವಾ ಗೆದ್ದ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ಇತರೆ ವ್ಯಕ್ತಿಯು ಯಾವುದೇ ಭ್ರಷ್ಟಾಚಾರವನ್ನು ಮಾಡಿದ್ದಾನೆಂದು; ಅಥವಾ

(ಸಿ) ಯಾವುದೇ ನಾಮ ಪತ್ರವನ್ನು ಅನುಚಿತವಾಗಿ ತಿರಸ್ಕರಿಸಲಾಗಿದೆ ಎಂದು; ಅಥವಾ

(ಡಿ) ಗೆದ್ದ ಅಭ್ಯರ್ಥಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಚುನಾವಣೆಯ ಫಲಿತಾಂಶದ ಮೇಲೆ,–

(i) ಯಾವುದೇ ನಾಮಪತ್ರವನ್ನು ಅನುಚಿತವಾಗಿ ಅಂಗೀಕರಿಸಿರುವುದು; ಅಥವಾ

(ii) ಗೆದ್ದ ಅಭ್ಯರ್ಥಿಯ ಹಿತದೃಷ್ಟಿಯಿಂದ ಅಭ್ಯರ್ಥಿಯ ಚುನಾವಣಾ ಏಜೆಂಟನನ್ನು ಹೊರತುಪಡಿಸಿ, ಇತರ ಯಾರೇ ಏಜೆಂಟನು ಮಾಡಿದ ಯಾವುದೇ ಭ್ರಷ್ಟಾಚಾರವು; ಅಥವಾ

(iii) ಯಾವುದೇ ಮತವನ್ನು ಅನುಚಿತವಾಗಿ ಅಂಗೀಕರಿಸಿರುವುದು, ನಿರಾಕರಿಸಿರುವುದು ಅಥವಾ ತಿರಸ್ಕರಿಸಿರುವುದು ಅಥವಾ ಅನೂರ್ಜಿತವಾದ ಯಾವುದೇ ಮತವನ್ನು ಅಂಗೀಕರಿಸಿರುವುದು; ಅಥವಾ

(iv) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುವೇ ನಿಯಮಗಳ ಉಪಬಂಧಗಳನ್ನು ಅಥವಾ ಮಾಡಿದ ಆದೇಶಗಳನ್ನು ಪಾಲಿಸದೇ ಇರುವುದು ಮುಖ್ಯವಾಗಿ ಪ್ರಭಾವ ಬೀರಿದೆ

– ಎಂದು ನ್ಯಾಯಾಲಯವು ಅಭಿಪ್ರಾಯಪಟ್ಟರೆ, ನ್ಯಾಯಾಲಯವು ಗೆದ್ದ ಅಭ್ಯರ್ಥಿಯ ಚುನಾವಣೆಯನ್ನು ಅನೂರ್ಜಿತವೆಂದು ಘೋಷಿಸತಕ್ಕದ್ದು.

(2) ನ್ಯಾಯಾಲಯದ ಅಭಿಪ್ರಾಯದಲ್ಲಿ, ತನ್ನ ಚುನಾವಣಾ ಏಜೆಂಟನಲ್ಲದ ಬೇರೊಬ್ಬ ವ್ಯಕ್ತಿಯ ಮೂಲಕ ಗೆದ್ದ ಅಭ್ಯರ್ಥಿಯು ಭ್ರಷ್ಟಾಚಾರದ ತಪ್ಪಿತಸ್ಥನಾಗಿದ್ದರೆ, ಆದರೆ,–

(ಎ) ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು ಚುನಾವಣೆಯಲ್ಲಿ ಯಾವುದೇ ಅಂಥ ಭ್ರಷ್ಟಾಚಾರವನ್ನು ಮಾಡಿಲ್ಲವೆಂದು ಮತ್ತು ಅಂಥ ಪ್ರತಿಯೊಂದು ಭ್ರಷ್ಟಾಚಾರವನ್ನು ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಆದೇಶಗಳಿಗೆ ತದ್ವಿರುದ್ಧವಾಗಿ ಮತ್ತು ಅವರ ಸಮ್ಮತಿ ಇಲ್ಲದೆ ಮಾಡಲಾಗಿದೆ ಎಂದು;

(ಬಿ) ಅಭ್ಯರ್ಥಿಯು ಮತ್ತು ಅವನ ಚುನಾವಣಾ ಏಜೆಂಟನು ಚುನಾವಣೆಯಲ್ಲಿ ಭ್ರಷ್ಟಾಚಾರಗಳನ್ನು ಮಾಡುವುದನ್ನು ತಡೆಗಟ್ಟಲು ಎಲ್ಲಾ ಯುಕ್ತ ಕ್ರಮಗಳನ್ನು ತೆಗೆದುಕೊಂಡಿದ್ದನೆಂದು; ಮತ್ತು

(ಸಿ) ಇತರ ಎಲ್ಲಾ ವಿಷಯಗಳಲ್ಲಿ ಆ ಚುನಾವಣೆಯು, ಅಭ್ಯರ್ಥಿಯ ಅಥವಾ ಅವನ ಯಾರೇ ಏಜೆಂಟನ ಯಾವುದೇ ಭ್ರಷ್ಟಾಚಾರದಿಂದ ಮುಕ್ತವಾಗಿತ್ತೆಂದು

– ನ್ಯಾಯಾಲಯಕ್ಕೆ ಮನದಟ್ಟಾದರೆ ಆಗ, ನ್ಯಾಯಾಲಯವು ಗೆದ್ದ ಅಭ್ಯರ್ಥಿಯ ಚುನಾವಣೆಯು ಅನೂರ್ಜಿತವಲ್ಲವೆಂದು ತೀರ್ಮಾನಿಸಬಹುದು.

**36. ನ್ಯಾಯಾಲಯವು ಅನುಸರಿಸಬೇಕಾದ ಪ್ರಕ್ರಿಯೆ.–** ದಾವೆಗಳಿಗೆ ಸಂಬಂಧಿಸಿದಂತೆ, 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯಲ್ಲಿ ಉಪಬಂಧಿಸಿರುವ ಪ್ರಕ್ರಿಯೆಯನ್ನು ಈ ಅಧಿನಿಯಮದ ಮೇರೆಗಿನ ಚುನಾವಣಾ ತಕರಾರು ಅರ್ಜಿಯ ಅಧಿವಿಚಾರಣೆಯಲ್ಲಿ ಮತ್ತು ವಿಲೆಯಲ್ಲಿ ಆ ಪ್ರಕ್ರಿಯೆಯನ್ನು ಅನ್ವಯ ಮಾಡಬಹುದಾದಷ್ಟರಮಟ್ಟಿಗೆ ನ್ಯಾಯಾಲಯವು ಅನುಸರಿಸತಕ್ಕದ್ದು.

**37. ನ್ಯಾಯಾಲಯದ ತೀರ್ಮಾನ.–** (1) ಚುನಾವಣಾ ತಕರಾರು ಅರ್ಜಿಯ ಅಧಿವಿಚಾರಣೆಯ ಕೊನೆಯಲ್ಲಿ ನ್ಯಾಯಾಲಯವು,–

(ಎ) ಚುನಾವಣಾ ತಕರಾರು ಅರ್ಜಿಯನ್ನು ವಜಾ ಮಾಡಿ; ಅಥವಾ

(ಬಿ) ಗೆದ್ದ ಎಲ್ಲ ಅಭ್ಯರ್ಥಿಗಳ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯನ್ನು ಅನೂರ್ಜಿತವೆಂದು ಘೋಷಿಸಿ; ಅಥವಾ

(ಸಿ) ಗೆದ್ದ ಎಲ್ಲ ಅಭ್ಯರ್ಥಿಗಳ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯನ್ನು ಅನೂರ್ಜಿತವೆಂದು ಮತ್ತು ಅರ್ಜಿದಾರನು ಅಥವಾ ಇತರ ಯಾರೇ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿದ್ದಾನೆಂದು ಘೋಷಿಸಿ

– ಆದೇಶವನ್ನು ಮಾಡತಕ್ಕದ್ದು.

(2) ಚುನಾವಣಾ ತಕರಾರು ಅರ್ಜಿಯನ್ನು ಸಲ್ಲಿಸಿರುವ ಯಾರೇ ವ್ಯಕ್ತಿಯು, ಗೆದ್ದ ಅಭ್ಯರ್ಥಿಯ ಚುನಾವಣೆಯನ್ನು ಪ್ರಶ್ನಿಸುವುದರ ಜೊತೆಗೆ ತಾನೇ ಅಥವಾ ಇತರ ಯಾರೇ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿರುವುದಾಗಿ ಘೋಷಿಸುವಂತೆ ಕ್ಲೇಮು ಮಾಡಿದ್ದರೆ ಮತ್ತು ನ್ಯಾಯಾಲಯವು,–

(ಎ) ವಾಸ್ತವವಾಗಿ ಅರ್ಜಿದಾರನು ಅಥವಾ ಅಂಥ ಇತರ ಅಭ್ಯರ್ಥಿಯು ಸಿಂಧುವಾದ ಮತಗಳಲ್ಲಿ ಬಹುಮತಗಳನ್ನು ಪಡೆದಿದ್ದಾನೆಂದು; ಅಥವಾ

(ಬಿ) ಗೆದ್ದ ಅಭ್ಯರ್ಥಿಯು ಭ್ರಷ್ಟಾಚಾರದ ಮೂಲಕ ಮತಗಳನ್ನು ಪಡೆಯದೆ ಇದ್ದಿದ್ದರೆ ಅರ್ಜಿದಾರನು ಅಥವಾ ಇತರ ಅಭ್ಯರ್ಥಿಯು ಸಿಂಧುವಾದ ಮತಗಳಲ್ಲಿ ಬಹುಮತಗಳನ್ನು ಪಡೆಯುತ್ತಿದ್ದನೆಂದು

– ಅಭಿಪ್ರಾಯಪಟ್ಟರೆ ಆ ನ್ಯಾಯಾಲಯವು, ಗೆದ್ದ ಅಭ್ಯರ್ಥಿಯ ಚುನಾವಣೆಯನ್ನು ಅನೂರ್ಜಿತವೆಂದು ಘೋಷಿಸಿದ ತರುವಾಯ ಸಂದರ್ಭಾನುಸಾರ ಅರ್ಜಿದಾರನು ಅಥವಾ ಅಂಥ ಇತರ ಅಭ್ಯರ್ಥಿಯು ಕ್ರಮಬದ್ಧವಾಗಿ ಚುನಾಯಿತನಾಗಿದ್ದಾನೆಂದು ಘೋಷಿಸತಕ್ಕದ್ದು.

(3) ಚುನಾವಣಾ ತಕರಾರು ಅರ್ಜಿಯ ಅಧಿವಿಚಾರಣೆಯಲ್ಲಿ ಚುನಾವಣೆಯ ಕಣದಲ್ಲಿರುವ ಯಾರೇ ಅಭ್ಯರ್ಥಿಗಳಿಗೆ ಸಮಾನ ಮತಗಳು ಬಂದಿರುವುದಾಗಿ ಮತ್ತು ಒಂದು ಮತ ಸೇರ್ಪಡೆಯಿಂದ ಆ ಅಭ್ಯರ್ಥಿಗಳ ಪೈಕಿ ಯಾರೇ ಅಭ್ಯರ್ಥಿಯು ಚುನಾಯಿತನಾಗಿದ್ದಾನೆಂದು ಘೋಷಿಸುವುದಕ್ಕೆ ಹಕ್ಕುಳ್ಳವನಾಗಬಹುದು ಎಂದು ಕಂಡುಬಂದರೆ, ಆಗ ನ್ಯಾಯಾಲಯವು ಅವರ ನಡುವಣ ಪ್ರಶ್ನೆಯನ್ನು ಚೀಟಿ ಎತ್ತುವ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಚೀಟಿ ಎತ್ತಿದಾಗ ಯಾರ ಹೆಸರು ಬರುತ್ತದೋ ಅವನು ಒಂದು ಹೆಚ್ಚಿನ ಮತವನ್ನು ಪಡೆದಿದ್ದರೆ ಹೇಗೋ ಹಾಗೆ ಭಾವಿಸಿ ಕ್ರಮವನ್ನು ಜರುಗಿಸತಕ್ಕದ್ದು.

**38. ಅಪೀಲು.**– 37ನೇ ಪ್ರಕರಣದ ಮೇರೆಗೆ ಜಿಲ್ಲಾ ನ್ಯಾಯಾಲಯದ ಆದೇಶದ ವಿರುದ್ಧ ಉಚ್ಚನ್ಯಾಯಾಲಯಕ್ಕೆ, ಆ ಆದೇಶದ ಪ್ರತಿಯನ್ನು ಪಡೆದುಕೊಳ್ಳಲು ಅಗತ್ಯವಾದ ಕಾಲವನ್ನು ಹೊರತುಪಡಿಸಿ, ಆ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು:

ಪರಂತು, ಸದರಿ ಅವಧಿಯೊಳಗೆ ಅಪೀಲನ್ನು ಸಲ್ಲಿಸದಿರಲು ಅಪೀಲುದಾರನಿಗೆ ಸಾಕಷ್ಟು ಕಾರಣ ಇತ್ತೆಂದು ಉಚ್ಚ ನ್ಯಾಯಾಲಯಕ್ಕೆ ಮನದಟ್ಟಾದರೆ, ಅದು ಮೂವತ್ತು ದಿನಗಳ ಅವಧಿಯು ಮುಗಿದ ತರುವಾಯವು ಅಪೀಲನ್ನು ಪುರಸ್ಕರಿಸಬಹುದು.

**39. ಭ್ರಷ್ಟಾಚಾರಗಳು.**– ಈ ಅಧಿನಿಯಮದ ಉದ್ದೇಶಗಳಿಗಾಗಿ ಈ ಕೆಳಕಂಡವುಗಳನ್ನು ಭ್ರಷ್ಟಾಚಾರಗಳೆಂದು ಭಾವಿಸತಕ್ಕದ್ದು, ಎಂದರೆ:–

(1) ತತ್ಕಾಲದಲ್ಲಿ ಜಾರಿಯಲ್ಲಿರುವ 1951ರ ಜನತಾ ಪ್ರಾತಿನಿಧ್ಯ ಅಧಿನಿಯಮ (1951ರ ಕೇಂದ್ರ ಅಧಿನಿಯಮ 43) ದ 123ನೇ ಪ್ರಕರಣದ (1)ನೇ ಖಂಡದಲ್ಲಿ ಪರಿಭಾಷಿಸಿರುವಂತೆ "ಲಂಚಗುಳಿತನ";

(2) ತತ್ಕಾಲದಲ್ಲಿ ಜಾರಿಯಲ್ಲಿರುವ ಸದರಿ ಪ್ರಕರಣದ (2)ನೇ ಖಂಡದಲ್ಲಿ ಪರಿಭಾಷಿಸಿರುವಂತೆ "ಅನುಚಿತ ಪ್ರಭಾವ";

(3) ಒಬ್ಬ ಅಭ್ಯರ್ಥಿಯು ಚುನಾವಣೆಯಲ್ಲಿ ಗೆಲ್ಲುವ ಅವಕಾಶವನ್ನು ಹೆಚ್ಚಿಸುವುದಕ್ಕಾಗಿ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಉಂಟುಮಾಡುವುದಕ್ಕಾಗಿ ಅಭ್ಯರ್ಥಿಯು ಅಥವಾ ಅವನ ಏಜೆಂಟನು, ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಇತರ ಯಾರೇ ವ್ಯಕ್ತಿಯು, ಆತನ ಧರ್ಮ, ಮೂಲವಂಶ, ಜಾತಿ, ಕೋಮು ಅಥವಾ ಭಾಷೆಯ ಆಧಾರದ ಮೇಲೆ ಮತ ನೀಡುವಂತೆ ಅಥವಾ ಮತ ನೀಡದಿರುವಂತೆ ಮನವಿ ಮಾಡುವುದು ಅಥವಾ ಧಾರ್ಮಿಕ ಚಿಹ್ನೆಗಳನ್ನು ಬಳಸಿಕೊಳ್ಳುವುದು ಅಥವಾ ಅವುಗಳಿಗೆ ಮನವಿ ಮಾಡುವುದು ಅಥವಾ ರಾಷ್ಟ್ರಧ್ವಜ ಅಥವಾ ರಾಷ್ಟ್ರಲಾಂಛನದಂಥ ರಾಷ್ಟ್ರೀಯ ಚಿಹ್ನೆಗಳನ್ನು ಬಳಸಿಕೊಳ್ಳುವುದು ಅಥವಾ ಅವುಗಳಿಗೆ ಮನವಿ ಮಾಡುವುದು;

(4) ಒಬ್ಬ ಅಭ್ಯರ್ಥಿಯು ಚುನಾವಣೆಯಲ್ಲಿ ಗೆಲ್ಲುವ ಅವಕಾಶವನ್ನು ಹೆಚ್ಚಿಸುವುದಕ್ಕಾಗಿ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡುವುದಕ್ಕಾಗಿ, ಆ ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ಇತರ ವ್ಯಕ್ತಿಯು ಧರ್ಮ, ಮೂಲವಂಶ, ಜಾತಿ, ಕೋಮು ಅಥವಾ ಭಾಷೆಯ ಆಧಾರದ ಮೇಲೆ ಭಾರತದ ನಾಗರಿಕರ ವಿವಿಧ ವರ್ಗಗಳ ನಡುವೆ ಶತ್ರುತ್ವ ಅಥವಾ ದ್ವೇಷದ ಭಾವನೆಯನ್ನು ಬೆಳೆಸುವುದು ಅಥವಾ ಬೆಳೆಸಲು ಪ್ರಯತ್ನಿಸುವುದು;

(5) ಯಾರೇ ಅಭ್ಯರ್ಥಿಯ ವೈಯಕ್ತಿಕ ಚಾರಿತ್ರ್ಯಕ್ಕೆ ಅಥವಾ ನಡವಳಿಕೆಗೆ ಸಂಬಂಧಪಟ್ಟಂತೆ ಅಥವಾ ಯಾರೇ ಅಭ್ಯರ್ಥಿಯ ಉಮೇದುವಾರಿಕೆಗೆ ಅಥವಾ ಅದನ್ನು ಹಿಂತೆಗೆದುಕೊಳ್ಳುವುದಕ್ಕೆ ಸಂಬಂಧಪಟ್ಟಂತೆ, ಆ ಒಬ್ಬ ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಆ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯೊಂದಿಗೆ ಇತರ ಯಾರೇ ವ್ಯಕ್ತಿಯು, ಒಬ್ಬ ಅಭ್ಯರ್ಥಿಯು ಚುನಾವಣೆಯಲ್ಲಿ ಗೆಲ್ಲುವ ಅವಕಾಶದ ಮೇಲೆ ಪ್ರತಿಕೂಲ ಪರಿಣಾಮವನ್ನುಂಟು ಮಾಡಲು ಯುಕ್ತವಾಗಿ ಉದ್ದೇಶಿಸಿದ ಹೇಳಿಕೆಯಾಗಿರುವ, ಸುಳ್ಳಾದ ಮತ್ತು ಸುಳ್ಳೆಂದು ಅವನು ನಂಬುವ ಅಥವಾ ಸತ್ಯವೆಂದು ನಂಬದಂಥ ಸಂಗತಿಯ ಯಾವುದೇ ಹೇಳಿಕೆಯನ್ನು ಪ್ರಕಟಿಸುವುದು; ಅಥವಾ

(6) ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯೊಂದಿಗೆ ಇತರ ಯಾರೇ ವ್ಯಕ್ತಿಯು ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ (ಸ್ವತಃ ಅಭ್ಯರ್ಥಿ ಮತ್ತು ಅವನ ಕುಟುಂಬದ ಸದಸ್ಯರು ಅಥವಾ ಅವನ ಏಜೆಂಟ್ ಇವರನ್ನು ಹೊರತುಪಡಿಸಿ) ಯಾರೇ ಮತದಾರನನ್ನು ಯಾವುದೇ ಮತದಾನ ಕೇಂದ್ರಕ್ಕೆ ಕರೆತರುವುದಕ್ಕಾಗಿ ಅಥವಾ ಆ ಮತದಾನ ಕೇಂದ್ರದಿಂದ ಕರೆದೊಯ್ಯುವುದಕ್ಕಾಗಿ ಹಣ ಸಂದಾಯದ ಮೇಲೆ ಅಥವಾ ಅನ್ಯಥಾ ಯಾವುದೇ ವಾಹನವನ್ನು ಬಾಡಿಗೆಗೆ ಪಡೆಯುವುದು ಅಥವಾ ಒದಗಿಸುವುದು:

ಪರಂತು, ಯಾವುದೇ ಅಂಥ ಮತದಾನ ಕೇಂದ್ರಕ್ಕೆ ಹೋಗುವ ಅಥವಾ ಅಲ್ಲಿಂದ ಬರುವ ಉದ್ದೇಶಕ್ಕಾಗಿ ಮತದಾರನು ತನ್ನ ಖರ್ಚಿನಲ್ಲಿ ಅಥವಾ ಅನೇಕ ಮತದಾರರು ತಮ್ಮ ಜಂಟಿ ಖರ್ಚಿನಲ್ಲಿ ವಾಹನವನ್ನು ಬಾಡಿಗೆಗೆ ಪಡೆಯುವುದು, ಹಾಗೆ ಬಾಡಿಗೆಗೆ ಪಡೆದುಕೊಂಡ ವಾಹನವು ಯಂತ್ರ ಚಾಲಿತ ವಾಹನವಾಗಿರದಿದ್ದರೆ, ಈ ಖಂಡದ ಮೇರೆಗೆ ಅದನ್ನು ಭ್ರಷ್ಟಾಚಾರ ಎಂದು ಭಾವಿಸತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ಯಾವುದೇ ಮತದಾನ ಕೇಂದ್ರಕ್ಕೆ ಹೋಗುವ ಅಥವಾ ಅಲ್ಲಿಂದ ಬರುವ ಉದ್ದೇಶಕ್ಕಾಗಿ ಯಾರೇ ಮತದಾರನು ತನ್ನ ಸ್ವಂತ ಖರ್ಚಿನಲ್ಲಿ ಯಾವುದೇ ಸಾರ್ವಜನಿಕ ಸಾರಿಗೆ ವಾಹನವನ್ನು ಅಥವಾ ಯಾವುದೇ ರೈಲ್ವೆ ಬೋಗಿಯನ್ನು ಉಪಯೋಗಿಸುವುದನ್ನು ಈ ಖಂಡದ ಮೇರೆಗೆ ಭ್ರಷ್ಟಾಚಾರ ಎಂದು ಭಾವಿಸತಕ್ಕದ್ದಲ್ಲ;

**ವಿವರಣೆ.–** ಈ ಖಂಡದಲ್ಲಿ 'ವಾಹನ' ಎಂಬ ಪದಕ್ಕೆ ರಸ್ತೆ ಸಾರಿಗೆ ಉದ್ದೇಶಕ್ಕಾಗಿ ಉಪಯೋಗಿಸುವ ಅಥವಾ ಉಪಯೋಗಿಸಲು ಸಮರ್ಥವಾಗಿರುವ ಯಾವುದೇ ವಾಹನ ಎಂದು ಅರ್ಥ, ಅದು ಯಂತ್ರ ಚಾಲಿತವಾದುದಾಗಿರಬಹುದು ಅಥವಾ ಬೇರೆ ರೀತಿಯದ್ದಾಗಿರಬಹುದು ಮತ್ತು ಅದು ಬೇರೆ ವಾಹನವನ್ನು ಎಳೆಯಲು ಉಪಯೋಗಿಸುವಂಥದ್ದಾಗಿರಬಹುದು ಅಥವಾ ಬೇರೆ ರೀತಿಯದ್ದಾಗಿರಬಹುದು;

(7) ಯಾವ ಕೂಟಗಳಲ್ಲಿ ಮಾದಕ ಪೇಯಗಳನ್ನು ಒದಗಿಸಲಾಗುತ್ತದೋ ಆ ಯಾವುದೇ ಕೂಟಗಳನ್ನು ಏರ್ಪಡಿಸುವುದು;

(8) ಒಬ್ಬ ಅಭ್ಯರ್ಥಿಯು ಅಥವಾ ಅವನ ಏಜೆಂಟನು, ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯೊಂದಿಗೆ ಇತರ ಯಾರೇ ವ್ಯಕ್ತಿಯು ಆ ಅಭ್ಯರ್ಥಿಯು ಚುನಾವಣೆಯಲ್ಲಿ ಗೆಲ್ಲುವ ಅವಕಾಶವನ್ನು ಹೆಚ್ಚಿಸುವುದಕ್ಕಾಗಿ ಸರ್ಕಾರದ ಸೇವೆಯಲ್ಲಿರುವ ಅಥವಾ ನಗರಪಾಲಿಕೆಯ ಸೇವೆಯಲ್ಲಿರುವ ಯಾರೇ ವ್ಯಕ್ತಿಯಿಂದ ಯಾವುದೇ ಸಹಾಯವನ್ನು (ಮತ ನೀಡುವುದನ್ನು ಹೊರತುಪಡಿಸಿ) ಪಡೆಯುವುದು ಅಥವಾ ದೊರಕಿಸಿಕೊಳ್ಳುವುದು ಅಥವಾ ಪಡೆಯಲು ಅಥವಾ ದೊರಕಿಸಿಕೊಳ್ಳಲು ದುಷ್ಪ್ರೇರಣೆ ನೀಡುವುದು ಅಥವಾ ಪ್ರಯತ್ನಿಸುವುದು;

(9) ಸರ್ಕಾರವು ನಿಯಮಗಳ ಮೂಲಕ ಭ್ರಷ್ಟಾಚಾರ ಎಂದು ನಿರ್ದಿಷ್ಟಪಡಿಸಬಹುದಾದಂಥ ಯಾವುದೇ ಇತರ ಆಚರಣೆ;

**ವಿವರಣೆ.–** (ಎ) ಈ ಪ್ರಕರಣದಲ್ಲಿ 'ಏಜೆಂಟ್' ಎಂಬ ಪದವು ಚುನಾವಣಾ ಏಜೆಂಟ್, ಮತದಾನ ಏಜೆಂಟ್ ಮತ್ತು ಅಭ್ಯರ್ಥಿಯ ಸಮ್ಮತಿಯೊಂದಿಗೆ ಚುನಾವಣೆಗೆ ಸಂಬಂಧಪಟ್ಟಂತೆ ಒಬ್ಬ ಏಜೆಂಟನಾಗಿ ಕಾರ್ಯ ನಿರ್ವಹಿಸುವ ಯಾರೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

(ಬಿ) (8)ನೇ ಖಂಡದ ಉದ್ದೇಶಗಳಿಗಾಗಿ, ಒಬ್ಬ ವ್ಯಕ್ತಿಯು ಅಭ್ಯರ್ಥಿಯ ಚುನಾವಣಾ ಏಜೆಂಟ್ ಅಥವಾ ಮತದಾನ ಏಜೆಂಟ್ ಅಥವಾ ಮತ ಎಣಿಕೆ ಏಜೆಂಟ್ ಆಗಿ ಕಾರ್ಯನಿರ್ವಹಿಸಿದರೆ ಆ ವ್ಯಕ್ತಿಯು, ಅಭ್ಯರ್ಥಿಯು ಚುನಾವಣೆಯಲ್ಲಿ ಗೆಲ್ಲುವ ಅವಕಾಶವನ್ನು ಹೆಚ್ಚಿಸಲು ಸಹಾಯ ಮಾಡುತ್ತಿರುವುದಾಗಿ ಭಾವಿಸತಕ್ಕದ್ದು.

**40. ಚುನಾವಣೆಗೆ ಸಂಬಂಧಿಸಿದಂತೆ ವರ್ಗಗಳ ನಡುವೆ ಶತ್ರುತ್ವವನ್ನು ಬೆಳೆಸುವುದು.–** ಈ ಅಧಿನಿಯಮದ ಮೇರೆಗೆ ಚುನಾವಣೆಗೆ ಸಂಬಂಧಿಸಿದಂತೆ ಧರ್ಮ, ಮೂಲವಂಶ, ಜಾತಿ, ಕೋಮು ಅಥವಾ ಭಾಷೆಯ ಆಧಾರದ ಮೇಲೆ ಭಾರತದ ನಾಗರಿಕರ ವಿವಿಧ ವರ್ಗಗಳ ನಡುವೆ ಶತ್ರುತ್ವ ಅಥವಾ ದ್ವೇಷದ ಭಾವನೆಯನ್ನು ಬೆಳೆಸಲು ಪ್ರಯತ್ನಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯ ಆದ ಮೇಲೆ, ಮೂರು ವರ್ಷಗಳಿಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ದಂಡದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**41. ಚುನಾವಣೆಯ ದಿನದ ಹಿಂದಿನ [1][ಎರಡು ದಿನಗಳ ಮೊದಲು][1] ಮತ್ತು ಚುನಾವಣೆಯ ದಿನ ಸಾರ್ವಜನಿಕ ಸಭೆಗಳ ನಿಷೇಧ.–** (1) ಯಾರೇ ವ್ಯಕ್ತಿಯು ಯಾವ ವಾರ್ಡಿಗೆ ಚುನಾವಣೆ ನಡೆಯುವುದೋ ಆ ಯಾವುದೇ [2][ವಾರ್ಡ್][2]ನಲ್ಲಿ ಮತದಾನ ಪ್ರಾರಂಭವಾಗುವುದಕ್ಕೆ ಮುಂಚೆ [1][ನಲವತ್ತೆಂಟು ಗಂಟೆಗಳ][1] ಒಳಗೆ ಅಥವಾ ಆ [2][ವಾರ್ಡ್][2]ನಲ್ಲಿ ಚುನಾವಣಾ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು ಯಾವುದೇ ಸಾರ್ವಜನಿಕ ಸಭೆಯನ್ನು ಕರೆಯತಕ್ಕದ್ದಲ್ಲ, ನಡೆಸತಕ್ಕದ್ದಲ್ಲ ಅಥವಾ ಅದಕ್ಕೆ ಹಾಜರಾಗತಕ್ಕದ್ದಲ್ಲ.

1. 2001 ರ ಅಧಿನಿಯಮ ಸಂಖ್ಯೆ 9 ರ ಮೂಲಕ 9.1.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಎರಡುನೂರ ಐವತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**42. ಚುನಾವಣಾ ಸಭೆಗಳಲ್ಲಿ ಗಲಭೆಗಳು.–** (1) ಯಾರೇ ವ್ಯಕ್ತಿಯು ಈ ಪ್ರಕರಣವು ಅನ್ವಯವಾಗುವ ಸಾರ್ವಜನಿಕ ಸಭೆಯಲ್ಲಿ, ಆ ಸಭೆಯನ್ನು ಯಾವ ಕಾರ್ಯಗಳ ನಿರ್ವಹಣೆಗಾಗಿ ಕರೆಯಲಾಗಿತ್ತೋ ಆ ಕಾರ್ಯಗಳು ನಡೆಯದಂತೆ ತಡೆಯುವ ಉದ್ದೇಶಕ್ಕಾಗಿ ಅವ್ಯವಸ್ಥಿತ ರೀತಿಯಲ್ಲಿ ವರ್ತಿಸಿದರೆ ಅಥವಾ ಹಾಗೆ ವರ್ತಿಸಲು ಇತರರನ್ನು ಪ್ರಚೋದಿಸಿದರೆ, ಅವನು, ಅಪರಾಧ ನಿರ್ಣಯ ಆದ ಮೇಲೆ ಎರಡುನೂರ ಐವತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಈ ಪ್ರಕರಣವು, ಕೌನ್ಸಿಲರ್‌ನನ್ನು ಅಥವಾ ಕೌನ್ಸಿಲರ್‌ಗಳನ್ನು ಚುನಾಯಿಸಲು ಮತದಾನದ ದಿನಾಂಕವನ್ನು ಗೊತ್ತುಪಡಿಸಿ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ಚುನಾವಣೆ ನಡೆಯುವ ದಿನಾಂಕ ಇವುಗಳ ನಡುವೆ, ಯಾವುದೇ [1][ವಾರ್ಡ್][1]ನಲ್ಲಿ ನಡೆಯುವ ನಗರಪಾಲಿಕೆಯ ಚುನಾವಣೆಗಳಿಗೆ ಸಂಬಂಧಿಸಿದಂತೆ ಯಾವುದೇ ಸಾರ್ವಜನಿಕ ಸಭೆಗೆ ಅನ್ವಯವಾಗುತ್ತದೆ.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) (1)ನೇ ಉಪಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯು ಅಪರಾಧವನ್ನು ಮಾಡುತ್ತಿದ್ದಾನೆಂದು ಯಾರೇ ಪೊಲೀಸ್ ಅಧಿಕಾರಿಯು ಯುಕ್ತವಾಗಿ ಸಂದೇಹಪಟ್ಟರೆ, ಸಭೆಯ ಅಧ್ಯಕ್ಷನು ಆ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ಕೂಡಲೇ ಪೊಲೀಸ್ ಅಧಿಕಾರಿಗೆ ಘೋಷಿಸುವಂತೆ ಅವನನ್ನು ಅಗತ್ಯಪಡಿಸಬೇಕೆಂದು ಪೊಲೀಸ್ ಅಧಿಕಾರಿಯನ್ನು ಕೋರಿದರೆ, ಅವನು ಹಾಗೆ ಮಾಡಬಹುದು ಮತ್ತು ಆ ವ್ಯಕ್ತಿಯು ತನ್ನ ಹೆಸರು ಮತ್ತು ವಿಳಾಸವನ್ನು ಘೋಷಿಸಲು ನಿರಾಕರಿಸಿದರೆ ಅಥವಾ ತಪ್ಪಿದರೆ ಅಥವಾ ಅವನು ಸುಳ್ಳು ಹೆಸರು ಮತ್ತು ವಿಳಾಸ ನೀಡುತ್ತಿದ್ದಾನೆಂದು ಪೊಲೀಸ್ ಅಧಿಕಾರಿಯು ಯುಕ್ತವಾಗಿ ಸಂದೇಹಿಸಿದರೆ, ಪೋಲೀಸ್ ಅಧಿಕಾರಿಯು ಅವನನ್ನು ವಾರಂಟ್ ಇಲ್ಲದೆಯೆ ದಸ್ತಗಿರಿ ಮಾಡಬಹುದು.

**43. ಕಿರುಹೊತ್ತಿಗೆ, ಭಿತ್ತಿಪತ್ರಗಳು, ಇತ್ಯಾದಿಗಳ ಮುದ್ರಣದ ಮೇಲೆ ನಿರ್ಬಂಧ.–** (1) ಯಾರೇ ವ್ಯಕ್ತಿಯು, ಯಾವುದೇ ಚುನಾವಣಾ ಕಿರುಹೊತ್ತಿಗೆಯನ್ನು ಅಥವಾ ಭಿತ್ತಿಪತ್ರವನ್ನು, ಅವುಗಳಲ್ಲಿ ಮುದ್ರಕನ ಮತ್ತು ಪ್ರಕಾಶಕನ ಹೆಸರುಗಳು ಮತ್ತು ವಿಳಾಸಗಳಿಲ್ಲದೆಯೇ ಮುದ್ರಿಸತಕ್ಕದ್ದಲ್ಲ ಅಥವಾ ಪ್ರಕಟಿಸತಕ್ಕದ್ದಲ್ಲ ಅಥವಾ ಮುದ್ರಿಸುವಂತೆ ಅಥವಾ ಪ್ರಕಟಿಸುವಂತೆ ಮಾಡತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು, ಯಾವುದೇ ಚುನಾವಣಾ ಕಿರುಹೊತ್ತಿಗೆಯನ್ನು ಅಥವಾ ಭಿತ್ತಿಪತ್ರವನ್ನು, ಅದರ ಪ್ರಕಾಶಕನನ್ನು ಗುರುತಿಸುವುದಕ್ಕಾಗಿ ಮಾಡಿದ ಘೋಷಣೆಗೆ ತನ್ನ ರುಜು ಮಾಡಿ, ತನಗೆ ಖುದ್ದಾಗಿ ಗೊತ್ತಿರುವ ಇಬ್ಬರು ವ್ಯಕ್ತಿಗಳಿಂದ ದೃಢೀಕರಣ ಮಾಡಿಸಿ, ಅದನ್ನು ದ್ವಿಪ್ರತಿಯಲ್ಲಿ ಮುದ್ರಕನಿಗೆ ಕೊಟ್ಟ ಹೊರತು ಮುದ್ರಿಸತಕ್ಕದ್ದಲ್ಲ ಅಥವಾ ಮುದ್ರಿಸುವಂತೆ ಮಾಡತಕ್ಕದ್ದಲ್ಲ.

(3) ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) ಯಾವುದೇ ಒಂದು ದಸ್ತಾವೇಜನ್ನು, ಕೈಬರಹದಿಂದ ಪ್ರತಿ ಮಾಡುವುದನ್ನು ಹೊರತುಪಡಿಸಿ, ಅದನ್ನು ಬಹು ಪ್ರತಿಗಳನ್ನಾಗಿ ಮಾಡುವ ಯಾವುದೇ ಕಾರ್ಯವಿಧಾನವನ್ನು ಮುದ್ರಣ ಎಂದು ಭಾವಿಸತಕ್ಕದ್ದು ಮತ್ತು 'ಮುದ್ರಕ' ಎನ್ನುವ ಪದವನ್ನು ತದನುಸಾರವಾಗಿ ಅರ್ಥೈಸತಕ್ಕದ್ದು; ಮತ್ತು

(ಬಿ) 'ಚುನಾವಣೆಯ ಕಿರುಹೊತ್ತಿಗೆ ಅಥವಾ ಭಿತ್ತಿಪತ್ರ ' ಎಂದರೆ ಈ ಅಧಿನಿಯಮದ ಮೇರೆಗೆ ಅಭ್ಯರ್ಥಿಯ ಅಥವಾ ಅಭ್ಯರ್ಥಿಗಳ ಗುಂಪಿನ ಗೆಲ್ಲುವ ಅವಕಾಶವನ್ನು ಹೆಚ್ಚಿಸುವ ಅಥವಾ ಅದರ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡುವ ಉದ್ದೇಶಗಳಿಗಾಗಿ ಹಂಚಿದ ಯಾವುದೇ ಮುದ್ರಿತ ಕಿರುಹೊತ್ತಿಗೆ, ಕರಪತ್ರ ಅಥವಾ ಇತರ ದಸ್ತಾವೇಜು ಅಥವಾ ಚುನಾವಣೆಗೆ ಸಂಬಂಧಿಸಿದ ಪ್ರಕಟಣಾ ಪತ್ರ ಅಥವಾ ಭಿತ್ತಿಪತ್ರ, ಆದರೆ ಚುನಾವಣಾ ಸಭೆಯ ದಿನಾಂಕ, ವೇಳೆ, ಸ್ಥಳ ಮತ್ತು ಇತರೆ ವಿವರಗಳನ್ನು, ಅಥವಾ ಚುನಾವಣಾ ಏಜೆಂಟರಿಗೆ ಅಥವಾ ಕಾರ್ಯಕರ್ತರಿಗೆ ವಾಡಿಕೆಯ ಸೂಚನೆಗಳನ್ನು ಮಾತ್ರವೇ ತಿಳಿಸುವ ಯಾವುದೇ ಕರಪತ್ರ, ಪ್ರಕಟಣಾ ಪತ್ರ ಅಥವಾ ಭಿತ್ತಿಪತ್ರವನ್ನು ಇದು ಒಳಗೊಳ್ಳುವುದಿಲ್ಲ.

(4) (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದು.

**44. ಮತದಾನದ ರಹಸ್ಯವನ್ನು ಕಾಪಾಡುವುದು.–** (1) ಈ ಅಧಿನಿಯಮದ ಮೇರೆಗೆ ಚುನಾವಣೆಯಲ್ಲಿ ಮತಗಳನ್ನು ದಾಖಲು ಮಾಡುವುದಕ್ಕೆ ಅಥವಾ ಎಣಿಕೆ ಮಾಡುವುದಕ್ಕೆ ಸಂಬಂಧಪಟ್ಟ ಯಾವುದೇ ಕರ್ತವ್ಯವನ್ನು ನಿರ್ವಹಿಸುವ ಪ್ರತಿಯೊಬ್ಬ ಅಧಿಕಾರಿ, ಗುಮಾಸ್ತ, ಏಜೆಂಟ್ ಅಥವಾ ಇತರೆ ವ್ಯಕ್ತಿಯು ಮತದಾನದ ರಹಸ್ಯವನ್ನು ಕಾಪಾಡತಕ್ಕದ್ದು ಮತ್ತು ಹಾಗೆ ಕಾಪಾಡಲು ನೆರವಾಗತಕ್ಕದ್ದು ಮತ್ತು ಯಾವುದೇ ಕಾನೂನಿನ ಮೂಲಕ ಅಥವಾ ಮೇರೆಗೆ ಅಧಿಕೃತಗೊಳಿಸಿದ ಯಾವುದೇ ಉದ್ದೇಶಕ್ಕಾಗಿ ಹೊರತುಪಡಿಸಿ ಅಂಥ ರಹಸ್ಯವನ್ನು ಉಲ್ಲಂಘಿಸುವ ಉದ್ದೇಶದಿಂದ, ಯಾರೇ ವ್ಯಕ್ತಿಗೆ ಯಾವುದೇ ಮಾಹಿತಿಯನ್ನು ತಿಳಿಸತಕ್ಕದ್ದಲ್ಲ;

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಮೂರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು;

**45. ಚುನಾವಣೆಯಲ್ಲಿ ಅಧಿಕಾರಿಗಳು, ಮೊದಲಾದವರು ಅಭ್ಯರ್ಥಿಗಳ ಪರವಾಗಿ ಕಾರ್ಯನಿರ್ವಹಿಸಕೂಡದು ಅಥವಾ ಮತದಾನದ ಮೇಲೆ ಪ್ರಭಾವ ಬೀರಕೂಡದು.–** (1) ಈ ಅಧಿನಿಯಮದ ಮೇರೆಗೆ ಚುನಾವಣೆಯಲ್ಲಿ ಚುನಾವಣಾಧಿಕಾರಿಯಾಗಿರುವ ಅಥವಾ ಸಹಾಯಕ ಚುನಾವಣಾಧಿಕಾರಿಯಾಗಿರುವ ಅಥವಾ ಪ್ರಿಸೈಡಿಂಗ್ ಅಧಿಕಾರಿಯಾಗಿರುವ ಅಥವಾ ಮತದಾನ ಅಧಿಕಾರಿಯಾಗಿರುವ ಯಾರೇ ವ್ಯಕ್ತಿಯು ಅಥವಾ ಅಂಥ ಚುನಾವಣೆಗೆ ಸಂಬಂಧಪಟ್ಟಂತೆ ಯಾವುದೇ ಕರ್ತವ್ಯವನ್ನು ನಿರ್ವಹಿಸಲು ಚುನಾವಣಾಧಿಕಾರಿಯಿಂದ ಅಥವಾ ಪ್ರಿಸೈಡಿಂಗ್ ಅಧಿಕಾರಿಯಿಂದ ನೇಮಕಗೊಂಡ ಅಧಿಕಾರಿಯು ಅಥವಾ ಗುಮಾಸ್ತನು ಆ ಚುನಾವಣೆಯನ್ನು ನಡೆಸುವಾಗ ಅಥವಾ ಅದರ ವ್ಯವಸ್ಥಾಪನೆಯಲ್ಲಿ ಅಭ್ಯರ್ಥಿಯ ಗೆಲ್ಲುವ ಅವಕಾಶವನ್ನು ಹೆಚ್ಚಿಸುವುದಕ್ಕಾಗಿ ಯಾವುದೇ ಕಾರ್ಯವನ್ನು (ಮತ ನೀಡುವುದನ್ನು ಹೊರತುಪಡಿಸಿ) ಮಾಡತಕ್ಕದ್ದಲ್ಲ.

(2) ಮೇಲೆ ಹೇಳಲಾದಂಥ ಯಾರೇ ವ್ಯಕ್ತಿಯು ಮತ್ತು ಪೊಲೀಸ್ ದಳದ ಯಾರೇ ಸದಸ್ಯನು,–

(ಎ) ಚುನಾವಣೆಯಲ್ಲಿ ಯಾರೇ ವ್ಯಕ್ತಿಯನ್ನು ಆತನ ಮತವನ್ನು ನೀಡುವಂತೆ ಮನ ಒಲಿಸಲು; ಅಥವಾ

(ಬಿ) ಚುನಾವಣೆಯಲ್ಲಿ ಯಾರೇ ವ್ಯಕ್ತಿಯನ್ನು ಆತನ ಮತವನ್ನು ನೀಡದಂತೆ ವಿಮುಖಗೊಳಿಸಲು;

(ಸಿ) ಚುನಾವಣೆಯಲ್ಲಿ ಯಾವುದೇ ರೀತಿಯಲ್ಲಿ ಯಾರೇ ವ್ಯಕ್ತಿಯು ಮತ ನೀಡುವುದರ ಮೇಲೆ ಪ್ರಭಾವ ಬೀರಲು

– ಪ್ರಯತ್ನಿಸತಕ್ಕದ್ದಲ್ಲ.

(3) (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**46. ಮತಗಟ್ಟೆಗಳಲ್ಲಿ ಅಥವಾ ಅವುಗಳ ಸಮೀಪದಲ್ಲಿ ಮತಯಾಚನೆ ನಿಷೇಧ.–** (1) ಯಾರೇ ವ್ಯಕ್ತಿಯು ಯಾವುದೇ ಮತಗಟ್ಟೆಯಲ್ಲಿ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು ಆ ಮತಗಟ್ಟೆಯೊಳಗೆ ಅಥವಾ ಮತಗಟ್ಟೆಯಿಂದ ಒಂದು ನೂರು ಮೀಟರ್‌ಗಳ ಅಂತರದೊಳಗಿನ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಈ ಕೆಳಕಂಡ ಯಾವುದೇ ಕಾರ್ಯಗಳನ್ನು ಮಾಡತಕ್ಕದ್ದಲ್ಲ, ಎಂದರೆ:–

(ಎ) ಮತಗಳಿಗಾಗಿ ಯಾಚಿಸುವುದು; ಅಥವಾ

(ಬಿ) ಯಾರೇ ಮತದಾರನ ಮತವನ್ನು ಕೋರುವುದು; ಅಥವಾ

(ಸಿ) ಯಾರೇ ನಿರ್ದಿಷ್ಟ ಅಭ್ಯರ್ಥಿಗೆ ಮತ ನೀಡದಂತೆ ಯಾರೇ ಮತದಾರನ ಮನ ಒಲಿಸುವುದು; ಅಥವಾ

(ಡಿ) ಚುನಾವಣೆಯಲ್ಲಿ ಮತ ನೀಡದಂತೆ ಯಾರೇ ಮತದಾರನ ಮನ ಒಲಿಸುವುದು; ಅಥವಾ

(ಇ) ಚುನಾವಣೆಗೆ ಸಂಬಂಧಪಟ್ಟ (ಸರ್ಕಾರೀ ನೋಟೀಸನ್ನು ಹೊರತುಪಡಿಸಿ) ಯಾವುದೇ ನೋಟೀಸನ್ನು ಅಥವಾ ಚಿಹ್ನೆಯನ್ನು ಪ್ರದರ್ಶಿಸುವುದು.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಎರಡುನೂರ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) ಈ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾದುದಾಗಿರತಕ್ಕದ್ದು.

**47. ಮತಗಟ್ಟೆಗಳ ಒಳಗೆ ಅಥವಾ ಅವುಗಳ ಸಮೀಪದಲ್ಲಿ ಅವ್ಯವಸ್ಥಿತ ವರ್ತನೆಗೆ ದಂಡನೆ.–** (1) ಯಾರೇ ವ್ಯಕ್ತಿಯು, ಯಾವುದೇ ಗಟ್ಟೆಯಲ್ಲಿ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು,–

(ಎ) ಮತಗಟ್ಟೆಯೊಳಗೆ ಅಥವಾ ಅದರ ಪ್ರವೇಶದ್ವಾರದಲ್ಲಿ ಅಥವಾ ಅದರ ಅಕ್ಕಪಕ್ಕದಲ್ಲಿನ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ, ಮಾನವ ಧ್ವನಿಯನ್ನು ವರ್ಧಿಸುವುದಕ್ಕಾಗಿ ಅಥವಾ ಪುನರ್ ಉಚ್ಚರಿಸುವುದಕ್ಕಾಗಿ ಮೆಗಾಫೋನ್ ಅಥವಾ ಧ್ವನಿವರ್ಧಕದಂಥ ಯಾವುದೇ ಸಲಕರಣೆಯನ್ನು ಬಳಸತಕ್ಕದ್ದಲ್ಲ ಅಥವಾ ಚಾಲೂಮಾಡತಕ್ಕದ್ದಲ್ಲ; ಅಥವಾ

(ಬಿ) ಮತದಾನಕ್ಕಾಗಿ ಮತಗಟ್ಟೆಗೆ ಬರುವ ಯಾರೇ ವ್ಯಕ್ತಿಗೆ ಕಿರುಕುಳ ಉಂಟುಮಾಡುವ ಹಾಗೆ ಅಥವಾ ಮತಗಟ್ಟೆಯಲ್ಲಿ ಕರ್ತವ್ಯ ನಿರತರಾದ ಅಧಿಕಾರಿಗಳ ಅಥವಾ ಇತರ ವ್ಯಕ್ತಿಗಳ ಕೆಲಸಕ್ಕೆ ಅಡ್ಡಿಯುಂಟು ಮಾಡುವ ಹಾಗೆ ಮತಗಟ್ಟೆಯೊಳಗೆ ಅಥವಾ ಅದರ ಪ್ರವೇಶದ್ವಾರದಲ್ಲಿ ಅಥವಾ ಅದರ ಅಕ್ಕಪಕ್ಕದಲ್ಲಿನ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಜೋರಾಗಿ ಕೂಗಾಡತಕ್ಕದ್ದಲ್ಲ ಅಥವಾ ಅನ್ಯಥಾ ಅವ್ಯವಸ್ಥಿತ ರೀತಿಯಲ್ಲಿ ವರ್ತಿಸತಕ್ಕದ್ದಲ್ಲ

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಅಥವಾ ಉಲ್ಲಂಘನೆಗೆ ಉದ್ದೇಶಪೂರ್ವಕವಾಗಿ ಸಹಾಯಮಾಡುವ ಅಥವಾ ದುಷ್ಪ್ರೇರಣೆ ಮಾಡುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಈ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಯಾರೇ ವ್ಯಕ್ತಿಯು ಮಾಡುತ್ತಿದ್ದಾನೆಂದು ಅಥವಾ ಮಾಡಿದ್ದಾನೆಂದು ಮತಗಟ್ಟೆಯ ಪ್ರಿಸೈಡಿಂಗ್ ಆಫೀಸರ್‌ಗೆ ನಂಬಲು ಕಾರಣವಿದ್ದರೆ ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡಲು ಯಾರೇ ಪೊಲೀಸ್ ಅಧಿಕಾರಿಗೆ ಅವನು ನಿರ್ದೇಶಿಸಬಹುದು ಮತ್ತು ಆ ತರುವಾಯ ಪೊಲೀಸ್ ಅಧಿಕಾರಿಯು ಆ ವ್ಯಕ್ತಿಯನ್ನು ದಸ್ತಗಿರಿ ಮಾಡತಕ್ಕದ್ದು.

(4) ಯಾರೇ ಪೊಲೀಸ್ ಅಧಿಕಾರಿಯು (1)ನೇ ಉಪಪ್ರಕರಣದ ಉಪಬಂಧಗಳ ಯಾವುದೇ ಉಲ್ಲಂಘನೆಯನ್ನು ತಡೆಗಟ್ಟುವುದಕ್ಕಾಗಿ ಯುಕ್ತವಾಗಿ ಅವಶ್ಯವಾಗಬಹುದಾದಂಥ ಕ್ರಮಗಳನ್ನು ಕೈಗೊಳ್ಳಬಹುದು ಮತ್ತು ಅಂಥ ಬಲವನ್ನು ಪ್ರಯೋಗಿಸಬಹುದು ಮತ್ತು ಅಂಥ ಉಲ್ಲಂಘನೆಗಾಗಿ ಉಪಯೋಗಿಸಿದ ಯಾವುದೇ ಸಲಕರಣೆಯನ್ನು ವಶಪಡಿಸಿಕೊಳ್ಳಬಹುದು.

**48. ಮತಗಟ್ಟೆಯಲ್ಲಿ ದುರ್ನಡತೆಗಾಗಿ ದಂಡನೆ.–** (1) ಯಾವುದೇ ಮತಗಟ್ಟೆಯಲ್ಲಿ ಮತದಾನಕ್ಕೆ ನಿಗದಿಪಡಿಸಲಾದ ವೇಳೆಗಳಲ್ಲಿ ಸ್ವತಃ ದುರ್ವರ್ತಿಸುವ ಅಥವಾ ಪ್ರಿಸೈಡಿಂಗ್ ಆಫೀಸರ್‌ರ ಕಾನೂನುಸಮ್ಮತ ನಿರ್ದೇಶನಗಳನ್ನು ಪಾಲಿಸಲು ತಪ್ಪುವ ಯಾರೇ ವ್ಯಕ್ತಿಯನ್ನು, ಪ್ರಿಸೈಡಿಂಗ್ ಆಫೀಸರ್ ಅಥವಾ ಕರ್ತವ್ಯದ ಮೇಲಿರುವ ಯಾರೇ ಪೊಲೀಸ್ ಅಧಿಕಾರಿಯು ಅಥವಾ ಅಂಥ ಪ್ರಿಸೈಂಡಿಂಗ್ ಆಫೀಸರರು ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ಮತಗಟ್ಟೆಯಿಂದ ಹೊರ ಹಾಕಬಹುದು.

(2) (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು, ಮತಗಟ್ಟೆಯಲ್ಲಿ ಮತನೀಡಲು ಅನ್ಯಥಾ ಹಕ್ಕುಳ್ಳ ಯಾರೇ ಮತದಾರನನ್ನು ಆ ಮತಗಟ್ಟೆಯಲ್ಲಿ ಮತನೀಡುವ ಅವಕಾಶ ಹೊಂದಿರುವುದನ್ನು ತಡೆಗಟ್ಟುವ ಹಾಗೆ ಚಲಾಯಿಸತಕ್ಕದ್ದಲ್ಲ.

(3) ಮತಗಟ್ಟೆಯಿಂದ ಹಾಗೆ ಹೊರಹಾಕಲಾದ ಯಾರೇ ವ್ಯಕ್ತಿಯು ಪ್ರಿಸೈಂಡಿಂಗ್ ಆಫೀಸರರ ಅನುಮತಿ ಇಲ್ಲದೆಯೇ ಮತ್ತೆ ಮತಗಟ್ಟೆಯನ್ನು ಪ್ರವೇಶಿಸಿದರೆ, ಅಪರಾಧ ನಿರ್ಣಯವಾದ ಮೇಲೆ ಮೂರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಅವನು ದಂಡಿತನಾಗತಕ್ಕದ್ದು.

(4) (3)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾದುದಾಗಿರತಕ್ಕದ್ದು.

**49. ಚುನಾವಣೆಗಳಲ್ಲಿ ವಾಹನಗಳನ್ನು ಕಾನೂನುಬಾಹಿರವಾಗಿ ಬಾಡಿಗೆಗೆ ಪಡೆಯುವುದಕ್ಕೆ ಅಥವಾ ಪಡೆದು ಒದಗಿಸುವುದಕ್ಕೆ ದಂಡನೆ.–** ಚುನಾವಣೆಯಲ್ಲಿ ಅಥವಾ ಚುನಾವಣೆಗೆ ಸಂಬಂಧಪಟ್ಟಂತೆ 39ನೇ ಪ್ರಕರಣದ (6)ನೇ ಖಂಡದಲ್ಲಿ ನಿರ್ದಿಷ್ಟಪಡಿಸಿದಂಥ ಯಾವುದೇ ಭ್ರಷ್ಟಾಚಾರದ ತಪ್ಪಿತಸ್ಥನಾದ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ, ಎರಡುನೂರ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**50. ಚುನಾವಣೆಗಳಿಗೆ ಸಂಬಂಧಿಸಿದ ಸರ್ಕಾರೀ ಕರ್ತವ್ಯದ ಉಲ್ಲಂಘನೆಗಳು.–** (1) ಈ ಪ್ರಕರಣವು ಅನ್ವಯವಾಗುವ ಯಾರೇ ವ್ಯಕ್ತಿಯು, ಯುಕ್ತ ಕಾರಣವಿಲ್ಲದೆ ತನ್ನ ಸರ್ಕಾರಿ ಕರ್ತವ್ಯವನ್ನು ಉಲ್ಲಂಘಿಸಿ ಯಾವುದೇ ಕಾರ್ಯದ ಅಥವಾ ಲೋಪದ ತಪ್ಪಿತಸ್ಥನಾಗಿದ್ದರೆ ಅಪರಾಧ ನಿರ್ಣಯವಾದ ಮೇಲೆ ಅವನು ಐದುನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಮೇಲೆ ಹೇಳಿರುವ ಯಾವುದೇ ಅಂಥ ಕಾರ್ಯಕ್ಕೆ ಅಥವಾ ಲೋಪಕ್ಕೆ ಸಂಬಂಧಿಸಿದಂತೆ ಹಾನಿಪರಿಹಾರಕ್ಕಾಗಿ ಅಂಥ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆಯನ್ನು ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

(3) ಈ ಪ್ರಕರಣವು ಅನ್ವಯವಾಗುವ ವ್ಯಕ್ತಿಗಳು ಯಾರೆಂದರೆ, ರಿಟರ್ನಿಂಗ್ ಆಫೀಸರ್, ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್, ಪ್ರಿಸೈಂಡಿಂಗ್ ಆಫೀಸರ್, ಪೋಲಿಂಗ್ ಆಫೀಸರುಗಳ ಮತ್ತು ಚುನಾವಣೆಯಲ್ಲಿ ಅಭ್ಯರ್ಥಿಯ ನಾಮಪತ್ರಗಳನ್ನು ಸ್ವೀಕರಿಸುವುದಕ್ಕೆ ಅಥವಾ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮತಗಳನ್ನು ದಾಖಲು ಮಾಡುವುದಕ್ಕೆ ಅಥವಾ ಎಣಿಸುವುದಕ್ಕೆ ಸಂಬಂಧಪಟ್ಟಂತೆ ಯಾವುದೇ ಕರ್ತವ್ಯವನ್ನು ನೆರವೇರಿಸಲು ನೇಮಕಗೊಂಡ ಯಾರೇ ಇತರ ವ್ಯಕ್ತಿ; ಮತ್ತು ಈ ಪ್ರಕರಣದ ಉದ್ದೇಶಗಳಿಗಾಗಿ "ಸರ್ಕಾರೀ ಕರ್ತವ್ಯ" ಎಂಬ ಪದಾವಳಿಯನ್ನು ತದನುಸಾರವಾಗಿ ಅರ್ಥೈಸತಕ್ಕದ್ದು, ಆದರೆ ಅದು ಅಂಥ ಚುನಾವಣೆಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಲ್ಲದೆ ಅನ್ಯಥಾ ವಿಧಿಸಿದ ಕರ್ತವ್ಯಗಳನ್ನು ಒಳಗೊಳ್ಳತಕ್ಕದ್ದಲ್ಲ.

[1][**50ಎ. ರಿಟರ್ನಿಂಗ್ ಆಫೀಸರ್, ಪ್ರಿಸೈಡಿಂಗ್ ಆಫೀಸರ್, ಮುಂತಾದವರು ರಾಜ್ಯ ಚುನಾವಣಾ ಆಯೋಗಕ್ಕೆ ಪ್ರತಿನಿಯೋಜಿತರಾಗಿರುವುದಾಗಿ ಭಾವಿಸತಕ್ಕದ್ದು.–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೇರೆಗೆ ಕೌನ್ಸಿಲರುಗಳ ಯಾವುದೇ ಚುನಾವಣೆಯನ್ನು ನಡೆಸುವುದಕ್ಕೆ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನೇಮಕಗೊಂಡ ರಿಟರ್ನಿಂಗ್ ಆಫೀಸರ್, ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್, ಪ್ರಿಸೈಡಿಂಗ್ ಆಫೀಸರ್, ಪೋಲಿಂಗ್ ಆಫೀಸರ್ ಮತ್ತು ಇತರ ಯಾರೇ ಅಧಿಕಾರಿಯು ಮತ್ತು ಸರ್ಕಾರವು ತತ್ಕಾಲಕ್ಕೆ ನೇಮಿಸಿದ ಯಾರೇ ಪೋಲೀಸು ಅಧಿಕಾರಿಯು ಅಂಥ ಚುನಾವಣೆಯನ್ನು ನಡೆಸುವುದಕ್ಕೆ ಕರೆ ನೀಡುವ ಅಧಿಸೂಚನೆಯ ದಿನಾಂಕದಂದು ಮತ್ತು ದಿನಾಂಕದಿಂದ ಪ್ರಾರಂಭವಾಗುವ ಮತ್ತು ಅಂಥ ಚುನಾವಣೆಯ ಫಲಿತಾಂಶಗಳನ್ನು ಘೋಷಿಸಿದ ದಿನಾಂಕದೊಂದಿಗೆ ಮುಕ್ತಾಯವಾಗುವ ಅವಧಿಗೆ ರಾಜ್ಯ ಚುನಾವಣಾ ಆಯೋಗಕ್ಕೆ ಪ್ರತಿನಿಯೋಜಿತರಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅಂಥ ಅಧಿಕಾರಿಯು ಆ ಅವಧಿಯಲ್ಲಿ ರಾಜ್ಯ ಚುನಾವಣಾ ಆಯೋಗದ ನಿಯಂತ್ರಣಕ್ಕೆ, ಅಧೀಕ್ಷಣೆಗೆ ಮತ್ತು ಶಿಸ್ತಿಗೆ ಒಳಪಟ್ಟಿರತಕ್ಕದ್ದು.][1]

1. 1995 ರ ಅಧಿನಿಯಮ ಸಂಖ್ಯೆ 25 ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**51. ಚುನಾವಣಾ ಏಜೆಂಟನಾಗಿ, ಪೋಲಿಂಗ್ ಏಜೆಂಟನಾಗಿ ಅಥವಾ ಎಣಿಕೆ ಏಜೆಂಟನಾಗಿ ಕಾರ್ಯ ನಿರ್ವಹಿಸಿದ್ದಕ್ಕಾಗಿ ಸರ್ಕಾರಿ ನೌಕರನಿಗೆ ದಂಡನೆ.–** ಸರ್ಕಾರಿ ಸೇವೆಯಲ್ಲಿರುವ ಯಾರೇ ವ್ಯಕ್ತಿಯು ಚುನಾವಣೆಯಲ್ಲಿ ಅಭ್ಯರ್ಥಿಯ ಚುನಾವಣಾ ಏಜೆಂಟ್‌ನಾಗಿ, ಪೋಲಿಂಗ್ ಏಜೆಂಟ್‌ನಾಗಿ ಅಥವಾ ಎಣಿಕೆ ಏಜೆಂಟ್‌ನಾಗಿ ಕಾರ್ಯನಿರ್ವಹಿಸಿದರೆ, ಅವನು ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**52. ಮತಗಟ್ಟೆಯಿಂದ ಮತಪತ್ರಗಳನ್ನು [1][ಅಥವಾ ಮತಯಂತ್ರವನ್ನು][1] ತೆಗೆದುಕೊಂಡು ಹೋಗುವುದು ಅಪರಾಧ.–** (1) ಯಾರೇ ವ್ಯಕ್ತಿಯು, ಯಾವುದೇ ಚುನಾವಣೆಯಲ್ಲಿ ಮತಗಟ್ಟೆಯಿಂದ ಹೊರಕ್ಕೆ ಮತಪತ್ರವನ್ನು [1][ಅಥವಾ ಮತಯಂತ್ರವನ್ನು][1] ಮೋಸದಿಂದ ತೆಗೆದುಕೊಂಡು ಹೋದರೆ ಅಥವಾ ತೆಗೆದುಕೊಂಡು ಹೋಗಲು ಪ್ರಯತ್ನಿಸಿದರೆ ಅಥವಾ ಅಂಥ ಯಾವುದೇ ಕಾರ್ಯವನ್ನು ಮಾಡುವುದಕ್ಕೆ ಉದ್ದೇಶಪೂರ್ವಕವಾಗಿ ನೆರವಾದರೆ ಅಥವಾ ದುಷ್ಪ್ರೇರಿಸಿದರೆ, ಅವನು, ಅಪರಾಧ ನಿರ್ಣಯವಾದ ಮೇಲೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

1. 2009ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಯಾರೇ ವ್ಯಕ್ತಿಯು ಮಾಡುತ್ತಿದ್ದಾನೆಂದು ಅಥವಾ ಮಾಡಿದ್ದಾನೆಂದು ಮತಗಟ್ಟೆಯ ಪ್ರಿಸೈಡಿಂಗ್ ಆಫೀಸರ್‌ಗೆ ನಂಬಲು ಕಾರಣವಿದ್ದರೆ, ಅಂಥ ಅಧಿಕಾರಿಯು, ಅಂಥ ವ್ಯಕ್ತಿಯು ಮತಗಟ್ಟೆಯನ್ನು ಬಿಡುವುದಕ್ಕೆ ಮುಂಚೆ ಅವನನ್ನು ದಸ್ತಗಿರಿ ಮಾಡಬಹುದು ಅಥವಾ ದಸ್ತಗಿರಿ ಮಾಡುವಂತೆ ಪೊಲೀಸ್ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ಅಂಥ ವ್ಯಕ್ತಿಯ ಶೋಧನೆಯನ್ನು ಮಾಡಬಹುದು ಅಥವಾ ಪೊಲೀಸ್ ಅಧಿಕಾರಿಯಿಂದ ಅಂಥ ವ್ಯಕ್ತಿಯ ಶೋಧನೆ ಮಾಡಿಸಬಹುದು:

ಪರಂತು, ಮಹಿಳೆಯನ್ನು ಶೋಧನೆ ಮಾಡಿಸುವುದು ಅವಶ್ಯವಿರುವಾಗ, ಆ ಶೋಧನೆಯನ್ನು, ಸಭ್ಯತೆಗೆ ಕಟ್ಟುನಿಟ್ಟಾಗಿ ಗಮನ ನೀಡಿ ಮತ್ತೊಬ್ಬ ಮಹಿಳೆಯಿಂದ ಮಾಡಿಸತಕ್ಕದ್ದು.

(3) ದಸ್ತಗಿರಿಯಾದ ವ್ಯಕ್ತಿಯ ಬಳಿ ಶೋಧನೆ ಮಾಡಿದಾಗ ಕಂಡುಬಂದ ಯಾವುದೇ ಮತಪತ್ರವನ್ನು [1][ಅಥವಾ ಮತಯಂತ್ರವನ್ನು][1] ಪ್ರಿಸೈಡಿಂಗ್ ಆಫೀಸರ್ ಪೊಲೀಸ್ ಅಧಿಕಾರಿಗೆ ಸುರಕ್ಷಿತ ಅಭಿರಕ್ಷೆಗಾಗಿ ಒಪ್ಪಿಸತಕ್ಕದ್ದು ಅಥವಾ ಪೊಲೀಸ್ ಅಧಿಕಾರಿಯು ಶೋಧನೆಯನ್ನು ಮಾಡಿದಾಗ ಅದನ್ನು ಆ ಅಧಿಕಾರಿಯು ಸುರಕ್ಷಿತ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳತಕ್ಕದ್ದು.

1. 2009ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(4) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾದುದಾಗಿರತಕ್ಕದ್ದು.

**53. ಇತರ ಅಪರಾಧಗಳು ಮತ್ತು ಅವುಗಳಿಗೆ ದಂಡನೆಗಳು.–** (1) ಯಾರೇ ವ್ಯಕ್ತಿಯು ಯಾವುದೇ ಚುನಾವಣೆಯಲ್ಲಿ,–

(ಎ) ಯಾವುದೇ ನಾಮಪತ್ರವನ್ನು ಮೋಸದಿಂದ ವಿರೂಪಗೊಳಿಸಿದರೆ ಅಥವಾ ಮೋಸದಿಂದ ನಾಶಪಡಿಸಿದರೆ; ಅಥವಾ

(ಬಿ) ರಿಟ್ನರಿಂಗ್ ಆಫೀಸರ್‌ರ ಅಧಿಕಾರದ ಮೂಲಕ ಅಥವಾ ಮೇರೆಗೆ ಅಂಟಿಸಲಾದ ಯಾವುದೇ ಪಟ್ಟಿಯನ್ನು ನೋಟೀಸನ್ನು ಅಥವಾ ಇತರ ದಸ್ತಾವೇಜನ್ನು ಮೋಸದಿಂದ ವಿರೂಪಗೊಳಿಸಿದರೆ, ನಾಶಪಡಿಸಿದರೆ ಅಥವಾ ತೆಗೆದುಹಾಕಿದರೆ; ಅಥವಾ

(ಸಿ) ಯಾವುದೇ ಮತಪತ್ರವನ್ನು ಅಥವಾ [1][ಮತಯಂತ್ರ][1]ವನ್ನು ಅಥವಾ ಯಾವುದೇ ಮತಪತ್ರದ ಅಥವಾ [1][ಮತಯಂತ್ರ][1]ದ ಮೇಲಿನ ಅಧಿಕೃತ ಗುರುತನ್ನು ಮೋಸದಿಂದ ವಿರೂಪಗೊಳಿಸಿದರೆ ಅಥವಾ ಮೋಸದಿಂದ ನಾಶಪಡಿಸಿದರೆ; ಅಥವಾ

1. 2009 ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(ಡಿ) ಸೂಕ್ತ ಅಧಿಕಾರವಿಲ್ಲದೆ ಯಾರೇ ವ್ಯಕ್ತಿಗೆ ಯಾವುದೇ ಮತಪತ್ರವನ್ನು [1][ಅಥವಾ ಮತಯಂತ್ರ][1] ವನ್ನು ಒದಗಿಸಿದರೆ ಅಥವಾ ಯಾರೇ ವ್ಯಕ್ತಿಯಿಂದ ಯಾವುದೇ ಮತಪತ್ರವನ್ನು [1][ಅಥವಾ ಮತಯಂತ್ರ][1] ವನ್ನು ಸ್ವೀಕರಿಸಿದರೆ ಅಥವಾ ಯಾವುದೇ ಮತಪತ್ರವನ್ನು [1][ಅಥವಾ ಮತಯಂತ್ರ][1]ವನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿದ್ದರೆ; ಅಥವಾ

1. 2009ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(ಇ) ಯಾವ ಮತಪತ್ರವನ್ನು ಮತಪೆಟ್ಟಿಗೆಯೊಳಕ್ಕೆ ಹಾಕಲು ಅವನನ್ನು ಕಾನೂನು ಮೂಲಕ ಅಧಿಕೃತಗೊಳಿಸಲಾಗಿದೆಯೋ ಆ ಮತಪತ್ರವನ್ನಲ್ಲದೆ ಬೇರೆ ಏನನ್ನಾದರೂ ಯಾವುದೇ ಮತಪೆಟ್ಟಿಗೆಯೊಳಕ್ಕೆ ಮೋಸದಿಂದ ಹಾಕಿದರೆ; ಅಥವಾ

(ಎಫ್) ಸೂಕ್ತ ಅಧಿಕಾರವಿಲ್ಲದೆ ಚುನಾವಣಾ ಉದ್ದೇಶಗಳಿಗಾಗಿ ಆಗ ಬಳಕೆಯಲ್ಲಿದ್ದ ಯಾವುದೇ [1][ಮತಪೆಟ್ಟಿಗೆಯನ್ನು ಅಥವಾ ಮತಪತ್ರಗಳನ್ನು ಅಥವಾ ಮತಯಂತ್ರ][1]ವನ್ನು ನಾಶಪಡಿಸಿದರೆ, ತೆಗೆದುಕೊಂಡು ಹೋದರೆ, ತೆರೆದರೆ ಅಥವಾ ಅನ್ಯಥಾ ಅವುಗಳಲ್ಲಿ ಹಸ್ತಕ್ಷೇಪ ಮಾಡಿದರೆ; ಅಥವಾ

1. 2009 ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(ಜಿ) ಸಂದರ್ಭಾನುಸಾರ ಮೋಸದಿಂದ ಅಥವಾ ಸೂಕ್ತ ಅಧಿಕಾರವಿಲ್ಲದೆ, ಮೇಲೆ ಹೇಳಿದ ಕಾರ್ಯಗಳಲ್ಲಿ ಯಾವುದನ್ನಾದರೂ ಮಾಡಲು ಪ್ರಯತ್ನಿಸಿದರೆ ಅಥವಾ ಅಂಥ ಯಾವುದೇ ಕಾರ್ಯಗಳನ್ನು ಮಾಡಲು ಉದ್ದೇಶಪೂರ್ವಕವಾಗಿ ನೆರವು ನೀಡಿದರೆ ಅಥವಾ ದುಷ್ಪ್ರೇರಣೆ ಮಾಡಿದರೆ

– ಅವನು ಚುನಾವಣಾ ಅಪರಾಧದ ತಪ್ಪಿತಸ್ಥನಾಗತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಚುನಾವಣಾ ಅಪರಾಧದ ತಪ್ಪಿತಸ್ಥನಾಗಿರುವ ಯಾರೇ ವ್ಯಕ್ತಿಯು,–

(ಎ) ಅವನು ಮತಗಟ್ಟೆಯಲ್ಲಿ ರಿಟರ್ನಿಂಗ್ ಆಫೀಸರ್ ಆಗಿದ್ದರೆ ಅಥವಾ ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್ ಆಗಿದ್ದರೆ ಅಥವಾ ಪ್ರಿಸೈಡಿಂಗ್ ಆಫೀಸರ್ ಆಗಿದ್ದರೆ ಅಥವಾ ಚುನಾವಣೆಗೆ ಸಂಬಂಧಪಟ್ಟಂತೆ ಸರ್ಕಾರಿ ಕರ್ತವ್ಯದ ಮೇಲೆ ನಿಯೋಜಿತನಾದ ಯಾರೇ ಅಧಿಕಾರಿ ಅಥವಾ ಬೇರೆ ವ್ಯಕ್ತಿಯಾಗಿದ್ದರೆ, ಅವನು, ಅಪರಾಧ ನಿರ್ಣಯವಾದ ಮೇಲೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು;

(ಬಿ) ಅವನು ಇತರ ಯಾರೇ ವ್ಯಕ್ತಿಯಾಗಿದ್ದರೆ, ಅಪರಾಧ ನಿರ್ಣಯವಾದ ಮೇಲೆ ಅವನು, ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಈ ಪ್ರಕರಣದ ಉದ್ದೇಶಕ್ಕಾಗಿ ವ್ಯಕ್ತಿಯು ಮತಗಳ ಎಣಿಕೆಯೂ ಒಳಗೊಂಡಂತೆ ಚುನಾವಣೆಯನ್ನು ನಡೆಸುವುದರಲ್ಲಿ ಅಥವಾ ಚುನಾವಣೆಯ ಒಂದು ಭಾಗವನ್ನು ನಡೆಸುವುದರಲ್ಲಿ ಪಾಲ್ಗೊಳ್ಳುವುದು ಅವನ ಕರ್ತವ್ಯವಾಗಿದ್ದರೆ ಅಥವಾ ಅಂಥ ಚುನಾವಣೆಗೆ ಸಂಬಂಧಪಟ್ಟಂತೆ ಉಪಯೋಗಿಸಲಾದ ಮತಪತ್ರಗಳಿಗೆ ಮತ್ತು ಇತರ ದಸ್ತಾವೇಜುಗಳಿಗೆ ಚುನಾವಣೆಯ ತರುವಾಯವೂ ಜವಾಬ್ದಾರನಾಗಿರುವುದು ಅವನ ಕರ್ತವ್ಯವಾಗಿದ್ದರೆ, ಅವನು ಸರ್ಕಾರಿ ಕರ್ತವ್ಯದ ಮೇಲಿರುವನೆಂದು ಭಾವಿಸತಕ್ಕದ್ದು, ಆದರೆ "ಸರ್ಕಾರೀ ಕರ್ತವ್ಯ" ಎಂಬ ಪದಾವಳಿಯು ಅಂಥ ಚುನಾವಣೆಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಲ್ಲದೆ ಅನ್ಯಥಾ ವಿಧಿಸಲಾದ ಯಾವುದೇ ಕರ್ತವ್ಯವನ್ನು ಒಳಗೊಳ್ಳತಕ್ಕದ್ದಲ್ಲ.

(4) (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾದುದಾಗಿರತಕ್ಕದ್ದು.

**54. ಕೆಲವು ಅಪರಾಧಗಳಿಗೆ ಸಂಬಂಧಿಸಿದಂತೆ ಪ್ರಾಸಿಕ್ಯೂಷನ್.**– ನಿಯಮಿಸಬಹುದಾದಂಥ ಅಧಿಕಾರಿಯ ಆದೇಶದ ಮೂಲಕ ಅಥವಾ ಅಂಥ ಅಧಿಕಾರಿಯಿಂದ ಪಡೆದ ಅಧಿಕಾರದ ಮೇರೆಗೆ ಮಾಡಿದ್ದ ಫಿರ್ಯಾದು ಇದ್ದ ಹೊರತು, 45ನೇ ಪ್ರಕರಣದ ಮೇರೆಗಿನ ಅಥವಾ 50ನೇ ಪ್ರಕರಣದ ಮೇರೆಗಿನ ಅಥವಾ 53ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗಿನ ಯಾವುದೇ ಅಪರಾಧವನ್ನು ಯಾವುದೇ ನ್ಯಾಯಾಲಯವು ಸಂಜ್ಞೇಯಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**55. [1][ಚುನಾವಣೆಗಳ ನಿಯಂತ್ರಣ ಮತ್ತು][1] ಕೌನ್ಸಿಲರುಗಳ ಚುನಾವಣೆಯನ್ನು ವಿನಿಯಮಿಸುವ ನಿಯಮಗಳನ್ನು [1][ರಚಿಸಲು ಅಧಿಕಾರ][1].**– [2][(1) ನಗರ ಪಾಲಿಕೆಯ ಚುನಾವಣೆಗಳಿಗಾಗಿ ಮತದಾರರ ಪಟ್ಟಿಯನ್ನು ತಯಾರಿಸುವುದರ ಮೇಲಿನ ಮತ್ತು ನಗರ ಪಾಲಿಕೆಗೆ ಚುನಾವಣೆಗಳನ್ನು ನಡೆಸುವುದರ ಮೇಲಿನ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣವು ರಾಜ್ಯ ಚುನಾವಣಾ ಆಯೋಗದಲ್ಲಿ ನಿಹಿತವಾಗಿರತಕ್ಕದ್ದು.][2]

[3][(2)][3] [1][[2][(1)ನೇ ಉಪಪ್ರಕರಣಕ್ಕೆ ಒಳಪಟ್ಟು,][2] ಸರ್ಕಾರವು][1] ಈ ಅಧಿನಿಯಮದ ಮೇರೆಗೆ ಕೌನ್ಸಿಲರುಗಳ ಚುನಾವಣೆಗಳನ್ನು ನಡೆಸುವ ಉದ್ದೇಶಕ್ಕಾಗಿ ಈ ಕೆಳಕಂಡ ಎಲ್ಲ ಅಥವಾ ಯಾವುದೇ ವಿಷಯಗಳ ಬಗ್ಗೆ ಉಪಬಂಧಿಸಲು ಅಥವಾ ಅವುಗಳನ್ನು ನಿಯಂತ್ರಿಸಲು ನಿಯಮಗಳನ್ನು ರಚಿಸಬಹುದು, ಎಂದರೆ:–

1. 1991 ರ ಅಧಿನಿಯಮ ಸಂಖ್ಯೆ 19 ರ ಮೂಲಕ 19.2.1990 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 1991 ರ ಅಧಿನಿಯಮ ಸಂಖ್ಯೆ 19 ರ ಮೂಲಕ 19.2.1990 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.

(ಎ) ಚುನಾವಣೆಗಳನ್ನು ನಡೆಸುವುದಕ್ಕಾಗಿ ರಿಟರ್ನಿಂಗ್ ಆಫೀಸರನ, ಅಸ್ಸಿಸ್ಟಂಟ್ ರಿಟರ್ನಿಂಗ್ ಆಫೀಸರ್‌ಗಳ, ಪ್ರಿಸೈಡಿಂಗ್ ಆಫೀಸರ್‌ಗಳ ಮತ್ತು ಪೋಲಿಂಗ್ ಆಫೀಸರ್‌ಗಳ ನೇಮಕ;

(ಬಿ) ಅಭ್ಯರ್ಥಿಗಳ ನಾಮನಿರ್ದೇಶನ, ನಾಮಪತ್ರಗಳ ನಮೂನೆ, ನಾಮಪತ್ರಗಳಿಗೆ ಆಕ್ಷೇಪಣೆಗಳು ಮತ್ತು ನಾಮಪತ್ರಗಳ ಪರಿಶೀಲನೆ;

(ಸಿ) ಚುನಾವಣೆಗಳಲ್ಲಿ ರಾಜಕೀಯ ಪಕ್ಷಗಳನ್ನು ಪ್ರತಿನಿಧಿಸುವ ಅಭ್ಯರ್ಥಿಗಳು ಮತ್ತು ಇತರೆ ಅಭ್ಯರ್ಥಿಗಳು ಆಯ್ಕೆ ಮಾಡಿಕೊಳ್ಳಬಹುದಾದ ಚಿಹ್ನೆಗಳು ಮತ್ತು ಯಾವ ನಿರ್ಬಂಧಗಳಿಗೆ ಅವರ ಆಯ್ಕೆಯು ಒಳಪಡಬೇಕೋ ಆ ನಿರ್ಬಂಧಗಳು;

(ಡಿ) ಅಭ್ಯರ್ಥಿಗಳು ಇಡಬೇಕಾದ ಠೇವಣಿಗಳು, ಅಂಥ ಠೇವಣಿಗಳನ್ನು ಇಡುವ ಕಾಲ ಮತ್ತು ರೀತಿ, ಅಂಥ ಠೇವಣಿಗಳನ್ನು ಯಾವ ಸಂದರ್ಭಗಳಲ್ಲಿ ಅಭ್ಯರ್ಥಿಗಳಿಗೆ ಮರುಪಾವತಿ ಮಾಡಬೇಕೋ ಅಥವಾ ನಗರಪಾಲಿಕೆಗೆ ಮುಟ್ಟುಗೋಲು ಹಾಕಿಕೊಳ್ಳಬೇಕೋ ಆ ಸಂದರ್ಭಗಳು;

(ಇ) ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದು;

(ಎಫ್) ಅಭ್ಯರ್ಥಿಗಳ ಏಜೆಂಟರ ನೇಮಕ;

(ಜಿ) ಸ್ಪರ್ಧೆ ಇರುವ ಮತ್ತು ಸ್ಪರ್ಧೆ ಇಲ್ಲದ ಚುನಾವಣೆಗಳಲ್ಲಿ ಪ್ರಕ್ರಿಯೆ ಮತ್ತು ಅನುಸೂಚಿತ ಜಾತಿಗಳಿಗೆ ಅಥವಾ ಅನುಸೂಚಿತ ಪಂಗಡಗಳಿಗೆ, [1][ಹಿಂದುಳಿದ ವರ್ಗಗಳಿಗೆ ಅಥವಾ ಮಹಿಳೆಯರಿ][1] ಗೆ [2][xxx][2] ಯಾವುದೇ ಸ್ಥಾನವನ್ನು ಕಾಯ್ದಿರಿಸಿದ [1][ವಾರ್ಡ್][1]ಗಳಲ್ಲಿ ನಡೆಯುವ ಚುನಾವಣೆಗಳಲ್ಲಿ ವಿಶೇಷ ಪ್ರಕ್ರಿಯೆ;

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1978 ರ ಅಧಿನಿಯಮ ಸಂಖ್ಯೆ 24 ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಹೆಚ್) ಮತದಾನಕ್ಕಾಗಿ ದಿನಾಂಕ, ಕಾಲ ಮತ್ತು ಸ್ಥಳ, ಮತ್ತು,–

(i) ಪ್ರತಿಯೊಂದು [1][ವಾರ್ಡ್][1]ಗೆ ಮತಗಟ್ಟೆಗಳನ್ನು ಗೊತ್ತುಪಡಿಸುವುದು;

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ii) ಮತಗಳನ್ನು ಚಲಾಯಿಸಲು ಮತಗಟ್ಟೆಯನ್ನು ತೆರೆದಿಡಬೇಕಾದ ವೇಳೆಗಳು;

(iii) ಮತಪತ್ರಗಳ ಮುದ್ರಣ ಮತ್ತು ನೀಡಿಕೆ;

(iv) ಮತದಾರರ ಪಟ್ಟಿಯನ್ನು ಪರಿಶೀಲಿಸಿ ಮತದಾರರನ್ನು ಪರೀಕ್ಷಿಸುವುದು;

(v) ಮತದಾರನ ಎಡಗೈ ತೋರುಬೆರಳಿನ ಅಥವಾ ಇತರ ಯಾವುದೇ ಬೆರಳಿನ ಅಥವಾ ಅವಯವದ ಮೇಲೆ ಅಳಿಸಲಾಗದ ಶಾಯಿಯಿಂದ ಗುರುತು ಮಾಡುವುದು ಮತ್ತು ಮತದಾರನಂತೆ ನಟಿಸುವುದನ್ನು ತಡೆಗಟ್ಟುವ ಹಾಗೆ, ಈಗಾಗಲೇ ಅಂಥ ಗುರುತು ಹೊಂದಿರುವಂಥ ವ್ಯಕ್ತಿಯು ಆ ಕಾಲದಲ್ಲಿ, ಅಂಥ ಮತ ಪತ್ರಕ್ಕಾಗಿ ಮನವಿ ಸಲ್ಲಿಸಿದರೆ, ಅಂಥ ಯಾರೇ ವ್ಯಕ್ತಿಗೆ ಯಾವುದೇ ಮತಪತ್ರ ಕೊಡುವುದನ್ನು ನಿಷೇಧಿಸುವುದು;

(vi) ಮತಗಳನ್ನು ಕೊಡಬೇಕಾದ ಮತ್ತು ವಿಶೇಷವಾಗಿ ಅನಕ್ಷರಸ್ಥ ಮತದಾರರು ಅಥವಾ ದೈಹಿಕ ಅಥವಾ ಇತರ ಅಸಾಮರ್ಥ್ಯ ಇರುವ ಮತದಾರರ ಸಂದರ್ಭದಲ್ಲಿ ಮತ ನೀಡಬೇಕಾದ ರೀತಿ;

[1][(viಎ) ಮತಯಂತ್ರಗಳ ಮೂಲಕ ಮತಗಳನ್ನು ನೀಡುವ ಮತ್ತು ದಾಖಲಿಸುವ ರೀತಿ][1];

1. 2009ರ ಅಧಿನಿಯಮ ಸಂಖ್ಯೆ 17ರ ಮೂಲಕ 28.5.2009ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

(vii) ಆಕ್ಷೇಪಿತ ಮತಗಳ ಮತ್ತು ಟೆಂಡರ್ಡ್ ಮತಗಳ ಬಗ್ಗೆ ಅನುಸರಿಸಬೇಕಾದ ಕಾರ್ಯವಿಧಾನ;

(viii) ಮತಗಳ ಪರಿಶೀಲನೆ ಮತ್ತು ಎಣಿಕೆ, ಫಲಿತಾಂಶಗಳ ಘೋಷಣೆ ಮತ್ತು ಪ್ರಕಟಣೆ ಮತ್ತು ಸಮಾನ ಮತಗಳು ಬಂದ ಸಂದರ್ಭದಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ;

(ix) ಚುನಾವಣೆಗಳಿಗೆ ಸಂಬಂಧಪಟ್ಟ ಕಾಗದಪತ್ರಗಳ ಅಭಿರಕ್ಷೆ ಮತ್ತು ವಿಲೆ;

(x) ದೊಂಬಿ, ಹಿಂಸಾಚಾರ ಅಥವಾ ಯಾವುದೇ ಇತರ ಸಾಕಷ್ಟು ಕಾರಣದಿಂದ ಯಾವುದೇ ರೀತಿಯ ಅಡ್ಡಿಯುಂಟಾದ ಸಂದರ್ಭದಲ್ಲಿ ಮತದಾನ ಸ್ಥಗಿತಗೊಳಿಸುವುದು ಮತ್ತು ಹೊಸದಾಗಿ ಮತದಾನ ನಡೆಸುವುದು;

(xi) ಎಣಿಕೆಗೆ ಮುಂಚೆ ಮತಪೆಟ್ಟಿಗೆಗಳನ್ನು ನಾಶಪಡಿಸಿದ ಅಥವಾ ಅವುಗಳೊಂದಿಗೆ ಹಸ್ತಕ್ಷೇಪ ಮಾಡಿದ ಸಂದರ್ಭದಲ್ಲಿ ಹೊಸ ಮತದಾನವನ್ನು ನಡೆಸುವುದು;

(xii) ಮತದಾನಕ್ಕೆ ಮುಂಚೆ ಅಭ್ಯರ್ಥಿಯು ಮರಣಹೊಂದಿದ ಸಂದರ್ಭದಲ್ಲಿ ಮತದಾನವನ್ನು ರದ್ದುಮಾಡುವುದು

– ಒಳಗೊಂಡಂತೆ ಚುನಾವಣೆಗಳನ್ನು ನಡೆಸುವುದಕ್ಕೆ ಸಂಬಂಧಪಟ್ಟ ಇತರ ವಿಷಯಗಳು;

(ಐ) ಚುನಾವಣಾ ತಕರಾರು ಅರ್ಜಿಯ ಮೇಲೆ ಸಂದಾಯ ಮಾಡಬೇಕಾದ ಫೀಜು;

(ಜೆ) ಯಾವ ಚುನಾವಣೆಗಳಿಗೆ ಅಥವಾ ಚುನಾವಣಾ ವಿವಾದಗಳಿಗೆ ಸಂಬಂಧಿಸಿದಂತೆ ಸರ್ಕಾರವು ಈ ಪ್ರಕರಣದ ಮೇರೆಗೆ ನಿಯಮಗಳನ್ನು ರಚಿಸುವುದು ಅವಶ್ಯವೆಂದು ಭಾವಿಸುವುದೋ ಆ ಚುನಾವಣೆಗಳಿಗೆ ಅಥವಾ ಚುನಾವಣಾ ವಿವಾದಗಳಿಗೆ ಸಂಬಂಧಪಟ್ಟ ಇತರ ಯಾವುದೇ ವಿಷಯ.

[1][(3)][1] ಈ ಪ್ರಕರಣದ ಮೇರೆಗೆ ಯಾವುದೇ ನಿಯಮವನ್ನು ರಚಿಸುವಾಗ ಅವುಗಳ ಯಾವುದೇ ಉಲ್ಲಂಘನೆಯು, ಅಪರಾಧ ನಿರ್ಣಯವಾದ ಮೇಲೆ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾಗತಕ್ಕದ್ದೆಂದು ಸರ್ಕಾರವು ಉಪಬಂಧಿಸಬಹುದು.

1. 1991 ರ ಅಧಿನಿಯಮ ಸಂಖ್ಯೆ 19 ರ ಮೂಲಕ 19.2.1990 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.

[1][**55ಎ. ಚುನಾವಣೆಗಳಲ್ಲಿ ಮತಯಂತ್ರಗಳು.**– ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಮತಯಂತ್ರಗಳ ಮೂಲಕ ಮತಗಳನ್ನು ನೀಡುವುದನ್ನು ಅಥವಾ ದಾಖಲಿಸುವುದನ್ನು, ಪ್ರತಿಯೊಂದು ಪ್ರಕರಣದ ಸನ್ನಿವೇಶಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ಚುನಾವಣಾ ಆಯೋಗವು ನಿರ್ದಿಷ್ಟಪಡಿಸಬಹುದಾದಂಥ ಚುನಾವಣಾ ಕ್ಷೇತ್ರದಲ್ಲಿ ಅಥವಾ ಚುನಾವಣಾ ಕ್ಷೇತ್ರಗಳಲ್ಲಿ ಅಳವಡಿಸಿಕೊಳ್ಳಬಹುದು.

**ವಿವರಣೆ.**– ಈ ಪ್ರಕರಣದ ಉದ್ದೇಶಕ್ಕಾಗಿ 'ಮತಯಂತ್ರ' ಎಂದರೆ, ಮತಗಳನ್ನು ನೀಡುವುದಕ್ಕಾಗಿ ಅಥವಾ ದಾಖಲಿಸುವುದಕ್ಕಾಗಿ ಬಳಸುವ, ವಿದ್ಯುನ್ಮಾನದ ಮೂಲಕವಾಗಲಿ ಅಥವಾ ಬೇರೆ ರೀತಿಯಲ್ಲಾಗಲೀ ನಿರ್ವಹಿಸಲಾಗುವ, ಯಾವುದೇ ಯಂತ್ರ ಅಥವಾ ಉಪಕರಣ ಮತ್ತು ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳಲ್ಲಿ ಮತಪೆಟ್ಟಿಗೆಗೆ ಅಥವಾ ಮತಪತ್ರಕ್ಕೆ ಮಾಡಿದ ಯಾವುದೇ ಉಲ್ಲೇಖವು, ಅನ್ಯಥಾ ಉಪಬಂಧಿಸಿರುವುದನ್ನುಳಿದು, ಯಾವುದೇ ಚುನಾವಣೆಯಲ್ಲಿ ಅಂಥ ಮತಯಂತ್ರವನ್ನು ಬಳಸುವಲ್ಲೆಲ್ಲಾ ಅಂಥ ಮತಯಂತ್ರಕ್ಕೆ ಮಾಡಲಾದ ಉಲ್ಲೇಖವನ್ನು ಒಳಗೊಳ್ಳುವುದಾಗಿ ಅರ್ಥೈಸತಕ್ಕದ್ದು.][1]

1. 2009ರ ಅಧಿನಿಯಮ ಸಂಖ್ಯೆ 17 ರ ಮೂಲಕ 28.5.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

**56. ಚುನಾವಣೆಗಳಿಗೆ ಸಂಬಂಧಪಟ್ಟ ದಾವೆಗಳ ಪ್ರತಿಷೇಧ, ಇತ್ಯಾದಿ.**– ಕೌನ್ಸಿಲರುಗಳ, ಮೇಯರ್ ಅಥವಾ ಉಪಮೇಯರ್‌ರ ಮತ್ತು ಸ್ಥಾಯಿ ಸಮಿತಿಯ ಸದಸ್ಯರುಗಳ ಹಾಗೂ ಅಧ್ಯಕ್ಷರ ಚುನಾವಣೆ, ನೇಮಕ ಅಥವಾ ಅವರನ್ನು ತೆಗೆದುಹಾಕುವುದಕ್ಕೆ ಸಂಬಂಧಪಟ್ಟ ಯಾವುದೇ ವಿಷಯದ ಬಗೆಗಿನ ಯಾವುದೇ ದಾವೆಯನ್ನು, ಅಂಥ ದಾವೆಯನ್ನು ಹೂಡಲು ಈ ಅಧಿನಿಯಮದ ಉಪಬಂಧಗಳ ಅಥವಾ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ ಮೂಲಕ ಅಧಿಕೃತಗೊಳಿಸಿದ್ದ ಹೊರತು, ಸಿವಿಲ್ ನ್ಯಾಯಾಲಯವು ಪುರಸ್ಕರಿಸತಕ್ಕದ್ದಲ್ಲ.

## ಅಧ್ಯಾಯ – V

## ನಗರಪಾಲಿಕೆ ಮತ್ತು ಇತರ ಪ್ರಾಧಿಕಾರಗಳ ಅಧಿಕಾರಗಳು ಮತ್ತು ಪ್ರಕಾರ್ಯಗಳು

**57. ನಗರ ಪಾಲಿಕೆಯ ಸಾಮಾನ್ಯ ಅಧಿಕಾರಗಳು.**– (1) ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ, ವಿನಿಮಯಗಳಿಗೆ ಮತ್ತು ಉಪವಿಧಿಗಳಿಗೆ ಒಳಪಟ್ಟು ನಗರದ ಪೌರಾಡಳಿತವು ನಗರಪಾಲಿಕೆಯಲ್ಲಿ ನಿಹಿತವಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಉಪಬಂಧಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ನಗರಪಾಲಿಕೆಯು ಈ ಅಧಿನಿಯಮದ ಮೂಲಕ ಮತ್ತು ಮೇರೆಗೆ ಅದಕ್ಕೆ ಪ್ರದತ್ತವಾದಂಥ ಅಧಿಕಾರಗಳನ್ನು ಚಲಾಯಿಸುವುದು, ಅಂಥ ಪ್ರಕಾರ್ಯಗಳನ್ನು ನೆರವೇರಿಸುವುದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸುವುದು ಮತ್ತು ಜಮೆಗಳು ಮತ್ತು ಬಟವಾಡೆಗಳಿಗೆ ಸಂಬಂಧಪಟ್ಟ ಎಲ್ಲ ನಿಯತಕಾಲಿಕ ವಿವರಣ ಪಟ್ಟಿಗಳನ್ನು ಮತ್ತು ಎಲ್ಲ ಪ್ರಗತಿ ವರದಿಗಳನ್ನು ಪರ್ಯಾಲೋಚಿಸುವುದು ಮತ್ತು ಅವುಗಳ ಮೇಲೆ ತಾನು ಸೂಕ್ತ ಎಂದು ಭಾವಿಸಿದಂಥ ನಿರ್ಣಯಗಳನ್ನು ಅಂಗೀಕರಿಸುವುದು ಅದರ ಕರ್ತವ್ಯವಾಗಿರತಕ್ಕದ್ದು.

**58. ನಗರಪಾಲಿಕೆಗಳ ಕಡ್ಡಾಯ ಪ್ರಕಾರ್ಯಗಳು.**– ಈ ಕೆಳಕಂಡ ವಿಷಯಗಳಲ್ಲಿ ಪ್ರತಿಯೊಂದಕ್ಕೆ ತಾನು ಕಾನೂನುಸಮ್ಮತವಾಗಿ ಬಳಸಲು ಅಥವಾ ತೆಗೆದುಕೊಳ್ಳಲು ಸಕ್ಷಮವಾದ ಯಾವುದೇ ಮಾರ್ಗೋಪಾಯಗಳ ಅಥವಾ ಕ್ರಮಗಳ ಮೂಲಕ ಯುಕ್ತವಾದ ಮತ್ತು ಸಾಕಷ್ಟು ಏರ್ಪಾಡು ಮಾಡುವುದು ನಗರ ಪಾಲಿಕೆಯ ಕರ್ತವ್ಯವಾಗಿರತಕ್ಕದ್ದು, ಎಂದರೆ:–

(1) ನಗರದ ಎಲ್ಲೆಗಳನ್ನು ಅಥವಾ ಅದರ ಎಲ್ಲೆಗಳಲ್ಲಿ ಯಾವುದೇ ಬದಲಾವಣೆಯನ್ನು ವಿವರಿಸಿ, ಸರ್ಕಾರವು ಅನುಮೋದಿಸತಕ್ಕಂಥ ವರ್ಣನೆಯ ಮತ್ತು ಅಂಥ ರೀತಿಯಲ್ಲಿ ದೃಢವಾದ ಗಡಿ ಗುರುತುಗಳನ್ನು ನಿಲ್ಲಿಸುವುದು;

(2) ನಗರದ ಎಲ್ಲ ಸಾರ್ವಜನಿಕ ಬೀದಿಗಳಿಗೆ ಮತ್ತು ಸಾರ್ವಜನಿಕ ಸ್ಥಳಗಳಿಗೆ ನೀರು ಹಾಕುವುದು ಮತ್ತು ಅವುಗಳನ್ನು ಸ್ವಚ್ಛ ಮಾಡುವುದು ಮತ್ತು ಅವುಗಳಿಂದ ಎಲ್ಲ ಕಸವನ್ನು ತೆಗೆದುಹಾಕುವುದು;

(3) ಊರಿನ ರೊಚ್ಚನ್ನು, ಹೊಲಸು ಪದಾರ್ಥವನ್ನು ಮತ್ತು ಕಸಕಡ್ಡಿಯನ್ನು ಸಂಗ್ರಹಿಸುವುದು, ಸಾಗಿಸುವುದು, ಸಂಸ್ಕರಿಸುವುದು ಮತ್ತು ವಿಲೇ ಮಾಡುವುದು ಮತ್ತು ಅಂಥ ಊರಿನ ರೊಚ್ಚು, ಹೊಲಸು ಪದಾರ್ಥ ಮತ್ತು ಕಸಕಡ್ಡಿಗಳಿಂದ ಕಾಂಪೋಸ್ಟ್ ಗೊಬ್ಬರವನ್ನು ತಯಾರಿಸುವುದು;

(4) ಚರಂಡಿಗಳ ಮತ್ತು ಒಳಚರಂಡಿ ಕಾಮಗಾರಿಗಳ ಮತ್ತು ಸಾರ್ವಜನಿಕ ಕಕ್ಕಸ್ಸುಗಳ, ಶೌಚಗೃಹಗಳ, ಮೂತ್ರಿಗಳ ಮತ್ತು ಅಂಥವೇ ಸೌಲಭ್ಯಗಳ ನಿರ್ಮಾಣ, ನಿರ್ವಹಣೆ ಮತ್ತು ಸ್ವಚ್ಛಗೊಳಿಸುವುದು;

(5) ನಗರಪಾಲಿಕೆಯಲ್ಲಿ ನಿಹಿತವಾದ ಸಾರ್ವಜನಿಕ ಬೀದಿಗಳು, ಪೌರಸಭಾ ಮಾರುಕಟ್ಟೆಗಳು ಮತ್ತು ಜನರು ಸೇರುವ ಸ್ಥಳಗಳಿಗೆ ದೀಪದ ವ್ಯವಸ್ಥೆ ಮಾಡುವುದು;

(6) ನಗರಪಾಲಿಕೆಯ ಕಚೇರಿ ಮತ್ತು ನಗರಪಾಲಿಕೆಯಲ್ಲಿ ನಿಹಿತವಾಗಿರುವ ಎಲ್ಲಾ ಸಾರ್ವಜನಿಕ ಸ್ಮಾರಕಗಳು ಮತ್ತು ಬಯಲು ಜಾಗಗಳು ಮತ್ತು ಇತರ ಸ್ವತ್ತನ್ನು ನಿರ್ವಹಿಸುವುದು ಮತ್ತು ನಗರಪಾಲಿಕೆಯ ಎಲ್ಲ ಸ್ವತ್ತುಗಳ ನಿಜವಾದ ಮತ್ತು ಸರಿಯಾದ ಲೆಕ್ಕವನ್ನು ಇಡುವುದು;

(7) ನಗರಪಾಲಿಕೆಯಲ್ಲಿ ನಿಹಿತವಾಗಿರುವ ಬೀದಿಗಳ ಮತ್ತು ಸಾರ್ವಜನಿಕ ಸ್ಥಳಗಳಿಗೆ ಹೆಸರಿಡುವುದು ಅಥವಾ ಸಂಖ್ಯೆಯನ್ನು ನೀಡುವುದು ಮತ್ತು ಆವರಣಗಳಿಗೆ ಸಂಖ್ಯೆಯನ್ನು ನೀಡುವುದು;

(8) ಅಸಹ್ಯಕಾರಿ ಮತ್ತು ಅಪಾಯಕಾರಿ ವೃತ್ತಿಗಳನ್ನು ಮತ್ತು ಆಚರಣೆಗಳನ್ನು ನಿಯಂತ್ರಿಸುವುದು ಮತ್ತು ಕೊನೆಗೊಳಿಸುವುದು;

(9) ಮೃತರ ಅಂತ್ಯಕ್ರಿಯೆಗಾಗಿನ ಸ್ಥಳಗಳ ನಿರ್ವಹಣೆ, ಬದಲಾವಣೆ ಮತ್ತು ನಿಯಂತ್ರಣ ಹಾಗೂ ಸದರಿ ಉದ್ದೇಶಕ್ಕಾಗಿ ಹೊಸ ಸ್ಥಳಗಳ ಏರ್ಪಾಡು ಮತ್ತು ಕ್ಲೇಮು ಮಾಡದಿರುವ ಶವಗಳನ್ನು ವಿಲೇ ಮಾಡುವುದು;

(10) ಸಾರ್ವಜನಿಕ ಮಾರುಕಟ್ಟೆಗಳ ಮತ್ತು ಕಸಾಯಿಖಾನೆಗಳ ನಿರ್ಮಾಣ ಅಥವಾ ಆರ್ಜನೆ ಹಾಗೂ ನಿರ್ವಹಣೆ ಮತ್ತು ಎಲ್ಲ ಮಾರುಕಟ್ಟೆಗಳ ಮತ್ತು ಕಸಾಯಿಖಾನೆಗಳ ನಿಯಂತ್ರಣ;

(11) ಆಂಬುಲೆನ್ಸ್ ಸೇವೆಯ ಮತ್ತು ಚಿತಾಗಾರಗಳಿಗೆ ಶವಗಳನ್ನು ಸಾಗಿಸುವುದಕ್ಕಾಗಿಯ ಸೇವೆಯ ನಿರ್ವಹಣೆ;

(12) ಉಪದ್ರವ ಉಂಟು ಮಾಡುವ ಪಕ್ಷಿಗಳ ಅಥವಾ ಪ್ರಾಣಿಗಳ ಅಥವಾ ಕ್ರಿಮಿಕೀಟಗಳ ನಾಶ ಮತ್ತು ಬೀದಿ ನಾಯಿಗಳ ಅಥವಾ ಒಡೆಯನಿಲ್ಲದ ನಾಯಿಗಳ ಬಂಧನ ಅಥವಾ ನಾಶ;

(13) ಹೊಸ ಸಾರ್ವಜನಿಕ ಬೀದಿಗಳ ರಚನೆ;

(14) ಪ್ರಾಥಮಿಕ ಪೂರ್ವ ಶಿಕ್ಷಣಕ್ಕಾಗಿ ಶಾಲೆಗಳನ್ನು ನಿರ್ವಹಿಸುವುದು ಅಥವಾ ಅವುಗಳಿಗೆ ನೆರವು ನೀಡುವುದು;

(15) ದನಗಳ ದೊಡ್ಡಿಗಳನ್ನು ನಿರ್ಮಿಸುವುದು ಅಥವಾ ಆರ್ಜಿಸುವುದು ಮತ್ತು ನಿರ್ವಹಿಸುವುದು;

(16) ಸಾರ್ವಜನಿಕರಿಗೆ ಲಸಿಕೆ ಹಾಕುವ ವ್ಯವಸ್ಥೆಯನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(17) ಅನಾರೋಗ್ಯಕರ ಸ್ಥಳಗಳನ್ನು ಉಪಯೋಗಕ್ಕೆ ಯೋಗ್ಯವಾಗಿಸುವುದು, ಹಾನಿಕರ ಸಸ್ಯಗಳನ್ನು ತೆಗೆದು ಹಾಕುವುದು ಮತ್ತು ಸಾಮಾನ್ಯವಾಗಿ ಎಲ್ಲಾ ಉಪದ್ರವಗಳನ್ನು ಕೊನೆಗೊಳಿಸುವುದು;

(18) ರಸ್ತೆ ಬದಿಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಮರಗಳನ್ನು ನೆಡುವುದು ಮತ್ತು ಅವುಗಳ ನಿರ್ವಹಣೆ;

(19) ಸಾರ್ವಜನಿಕ ಬೀದಿಗಳು, ಸೇತುವೆಗಳು, ಒಳದಾರಿಗಳು, ಅಡಿಗಾಲುವೆಗಳು, ಒಡ್ಡುದಾರಿಗಳು ಮತ್ತು ಅಂತಹವುಗಳನ್ನು ನಿರ್ಮಿಸುವುದು, ನಿರ್ವಹಿಸುವುದು, ಬದಲಾಯಿಸುವುದು ಮತ್ತು ಸುಧಾರಣೆ ಮಾಡುವುದು;

(20) ಬೀದಿಗಳು, ಸೇತುವೆಗಳು ಮತ್ತು ಇತರೆ ಸಾರ್ವಜನಿಕ ಸ್ಥಳಗಳಲ್ಲಿನ ಅಡೆತಡೆಗಳನ್ನು ಮತ್ತು ಅವುಗಳ ಮೇಲೆ ಮುಂಚಾಚಿಕೆಗಳನ್ನು ತೆಗೆದುಹಾಕುವುದು;

(21) ಎಲ್ಲ ಪೌರಸಭಾ ನೀರು ಸರಬರಾಜು ಕಾಮಗಾರಿಗಳ ವ್ಯವಸ್ಥಾಪನೆ ಮತ್ತು ನಿರ್ವಹಣೆ ಮತ್ತು ಸಾರ್ವಜನಿಕ ಮತ್ತು ಖಾಸಗಿ ಉದ್ದೇಶಗಳಿಗಾಗಿ ಸಾಕಷ್ಟು ನೀರು ಸರಬರಾಜು ಮಾಡಲು ಅವಶ್ಯವಾದ ಹೊಸ ಕಾಮಗಾರಿಗಳನ್ನು ನಿರ್ಮಿಸುವುದು ಮತ್ತು ಆರ್ಜಿಸುವುದು;

(22) ಅಪಾಯಕಾರಿ ರೋಗಗಳು ಹರಡುವುದನ್ನು ತಡೆಗಟ್ಟುವುದು ಮತ್ತು ನಿಯಂತ್ರಿಸುವುದು;

(23) ಅಪಾಯಕಾರಿ ಕಟ್ಟಡಗಳನ್ನು ಮತ್ತು ಸ್ಥಳಗಳನ್ನು ಸುಭದ್ರಗೊಳಿಸುವುದು ಅಥವಾ ತೆಗೆದು ಹಾಕುವುದು;

(24) ಪೌರ ಕಾರ್ಮಿಕರಿಗಾಗಿ ವಸತಿಗೃಹಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು;

(25) ಸಾರ್ವಜನಿಕ ಉದ್ಯಾನವನಗಳು, ತೋಟಗಳು, ಆಟದ ಮೈದಾನಗಳು ಮತ್ತು ಮನರಂಜನಾ ಮೈದಾನಗಳಿಗೆ ಅವಕಾಶ ಕಲ್ಪಿಸುವುದು;

(26) ನಗರದಲ್ಲಿನ ವಸತಿಗೃಹಗಳನ್ನು, ಶಿಬಿರ ಮೈದಾನಗಳನ್ನು ಮತ್ತು ವಿಶ್ರಾಂತಿ ಗೃಹಗಳನ್ನು ನಿಯಂತ್ರಿಸುವುದು;

(27) ಊರಿನ ರೊಚ್ಚನ್ನು ವಿಲೇ ಮಾಡುವುದಕ್ಕಾಗಿ ಕಂಪೋಸ್ಟ್ ಸ್ಥಾವರಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(28) ನಗರಪಾಲಿಕೆಯು ಅನುಮೋದಿಸಿದ ಸಾಮಾನ್ಯ ವ್ಯವಸ್ಥೆಗೆ ಅನುಸಾರವಾಗಿ, ನಗರಪಾಲಿಕೆಯ ನಿಯಂತ್ರಣದಲ್ಲಿರುವ ಒಳಚರಂಡಿಗಳೊಳಕ್ಕೆ, ಆವರಣಗಳ ರೊಚ್ಚನ್ನು ಹರಿಸಲು ಮತ್ತು ಅದನ್ನು ಒಯ್ಯಲು ಆ ಆವರಣಗಳಲ್ಲಿ ಅಥವಾ ಅವುಗಳ ಬಳಕೆಗಾಗಿ ತೊಟ್ಟಿಗಳು, ಜೋಡಣೆಗಳು, ಪೈಪುಗಳು ಮತ್ತು ಇತರ ಯಾವುದೇ ಬಗೆಯ ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡುವುದು, ನಿರ್ಮಿಸುವುದು ಮತ್ತು ನಿರ್ವಹಿಸುವುದು;

[1][(28ಎ) ಜನನ ಮತ್ತು ಮರಣಗಳ ನೋಂದಣಿಯೂ ಸೇರಿದಂತೆ ಜನನ ಮರಣ ಅಂಕಿ ಅಂಶಗಳು;

(28ಬಿ) ಚರ್ಮ ಹದ ಮಾಡುವ ಕಾರ್ಖಾನೆಗಳ ನಿಯಂತ್ರಣ;][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(29) ಸಾರ್ವಜನಿಕರಿಗೆ ಬಾಧೆಯನ್ನುಂಟುಮಾಡುವ ಯಾವುದೇ ವಿಪತ್ತನ್ನೂ ಎದುರಿಸಲು ಕ್ರಮಗಳನ್ನು ಕೈಗೊಳ್ಳುವುದು;

(30) ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ವಿಧಿಸಲಾದ ಯಾವುದೇ ಹೊಣೆಯನ್ನು ಈಡೇರಿಸುವುದು ಮತ್ತು ಸರ್ಕಾರವು ಅಧಿಸೂಚನೆಯ ಮೂಲಕ ನಗರಪಾಲಿಕೆಗೆ ವಹಿಸಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಪ್ರಕಾರ್ಯಗಳನ್ನು ನಿರ್ವಹಿಸುವುದು;

(31) ಮೇಲೆ ನಿರ್ದಿಷ್ಟ ಪಡಿಸಿದ ವಿಷಯಗಳಿಗೆ ಸಾಕಷ್ಟು ಏರ್ಪಾಡು ಮಾಡುವುದಕ್ಕೆ ಒಳಪಟ್ಟು, ಕ್ಷಾಮ ಮತ್ತು ಅಭಾವ ಪರಿಸ್ಥಿತಿಯ ಕಾಲಗಳಲ್ಲಿ ನಗರದಲ್ಲಿನ ನಿರಾಶ್ರಿತ ವ್ಯಕ್ತಿಗಳಿಗೆ ಪರಿಹಾರದ ವ್ಯವಸ್ಥೆ ಮಾಡುವುದು ಮತ್ತು ಅಂಥ ಕಾಲಗಳಲ್ಲಿ ಪರಿಹಾರ ಕಾಮಗಾರಿಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

**59. ನಗರಪಾಲಿಕೆಯ ವಿವೇಚನಾತ್ಮಕ ಪ್ರಕಾರ್ಯಗಳು.**– ನಗರಪಾಲಿಕೆಯು ತನ್ನ ವಿವೇಚನಾನುಸಾರ ಈ ಕೆಳಕಂಡ ಎಲ್ಲಾ ಅಥವಾ ಯಾವುದೇ ವಿಷಯಗಳಿಗೆ, ಸಂಪೂರ್ಣವಾಗಿಯೇ ಆಗಲಿ ಅಥವಾ ಭಾಗಶಃ ಆಗಲಿ ಅವಕಾಶ ಕಲ್ಪಿಸಬಹುದು, ಎಂದರೆ:–

(1) ದುರ್ಬಲರು, ರೋಗಿಗಳು ಅಥವಾ ವಾಸಿ ಆಗದ ರೋಗಪೀಡಿತ ವ್ಯಕ್ತಿಗಳ ಪಾಲನೆಗಾಗಿ ಅಥವಾ ಕುರುಡರು, ಕಿವುಡರು, ಮೂಕರು ಅಥವಾ ಅನ್ಯಥಾ ಅಸಮರ್ಥರಾದ ತಾಯಂದಿರು ಅಥವಾ ಶಿಶುಗಳು ಅಥವಾ ಶಾಲಾ ಮಕ್ಕಳ ಪಾಲನೆ ಮತ್ತು ತರಬೇತಿಗಾಗಿ ನಗರದಲ್ಲಿ ಅಥವಾ ನಗರದ ಹೊರಗೆ ಸಂಸ್ಥೆಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ವ್ಯವಸ್ಥಾಪನೆ ಮಾಡುವುದು;

(2) ಪ್ರಸೂತಿ ಮತ್ತು ಶಿಶು ಕಲ್ಯಾಣ ಗೃಹಗಳನ್ನು ಅಥವಾ ಕೇಂದ್ರಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ವ್ಯವಸ್ಥಾಪನೆ ಮಾಡುವುದು;

(3) ಗರ್ಭಿಣಿಯರಿಗೆ ಅಥವಾ ಹಾಲೂಡಿಸುವ ತಾಯಂದಿರಿಗೆ ಅಥವಾ ಶಿಶುಗಳಿಗೆ ಅಥವಾ ಶಾಲಾ ಮಕ್ಕಳಿಗೆ ಹಾಲಿನ ವ್ಯವಸ್ಥೆ ಮಾಡುವುದು;

(4) ರೋಗಗಳನ್ನು ಪತ್ತೆ ಮಾಡುವುದಕ್ಕಾಗಿ ಅಥವಾ ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದ ಸಂಶೋಧನೆಗಾಗಿ ನೀರು, ಆಹಾರ ಅಥವಾ ಔಷಧಿಗಳನ್ನು ಪರೀಕ್ಷಿಸುವುದಕ್ಕಾಗಿ ಅಥವಾ ವಿಶ್ಲೇಷಣೆ ಮಾಡುವುದಕ್ಕಾಗಿ ರಾಸಾಯನಿಕ ಅಥವಾ ಜೀವಾಣು ವಿಜ್ಞಾನ ಪ್ರಯೋಗಾಲಯಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ವ್ಯವಸ್ಥಾಪನೆ ಮಾಡುವುದು;

(5) ಸಾರ್ವಜನಿಕ ಆರೋಗ್ಯದ ಸುಧಾರಣೆಗಾಗಿ ವಿನ್ಯಾಸಗೊಳಿಸಿದ ಈಜು ಕೊಳಗಳು, ಸಾರ್ವಜನಿಕ ತೊಳೆಯುವ ಗೃಹಗಳು, ಸ್ನಾನದ ಸ್ಥಳಗಳು ಮತ್ತು ಇತರ ಸಂಸ್ಥೆಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ವ್ಯವಸ್ಥಾಪನೆ ಮಾಡುವುದು;

(6) ಸಾರ್ವಜನಿಕ ಬೀದಿಗಳಲ್ಲಿ ಅಥವಾ ಸ್ಥಳಗಳಲ್ಲಿ, ಮನುಷ್ಯರಿಗಾಗಿ ಕುಡಿಯುವ ನೀರಿನ, ಕೊಳಾಯಿಗಳನ್ನು ಮತ್ತು ಪ್ರಾಣಿಗಳಿಗಾಗಿ ನೀರಿನ ತೊಟ್ಟಿಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು;

(7) ಕಟ್ಟಡಗಳ ಅಥವಾ ಭೂಮಿಗಳ ಮೋಜಣಿ;

(8) ಜನರಿಗೆ ಸಂಗೀತದ ವ್ಯವಸ್ಥೆ;

(9) ಖಾಸಗಿ ಭೂಮಿಯಲ್ಲಿ ಹಾಗೂ ಖಾಸಗಿ ಕಾಂಪೌಂಡುಗಳೊಳಗೆ ಮರಗಿಡಗಳನ್ನು ನೆಟ್ಟು ಬೆಳೆಸುವುದಕ್ಕೆ ಮತ್ತು ನಿರ್ವಹಿಸುವುದಕ್ಕೆ ಪ್ರೋತ್ಸಾಹ ನೀಡುವುದು;

(10) ಆರೋಗ್ಯ ವಸ್ತು ಸಂಗ್ರಹಾಲಯಗಳನ್ನು ನಿರ್ವಹಿಸುವುದು;

(11) ಪ್ರಾಣಿಗಳಿಗಾಗಿ ಚಿಕಿತ್ಸಾಲಯಗಳ ಅಥವಾ ಆಸ್ಪತ್ರೆಗಳ ನಿರ್ಮಾಣ ಅಥವಾ ನಿರ್ವಹಣೆ;

(12) ಅಭಾವ ಕಾಲಗಳಲ್ಲಿ ಜೀವನಾವಶ್ಯಕ ವಸ್ತುಗಳ ಮಾರಾಟಕ್ಕಾಗಿ ಅಂಗಡಿಗಳನ್ನು ಅಥವಾ ಮಳಿಗೆಗಳನ್ನು ಸ್ಥಾಪಿಸುವುದು ಅಥವಾ ನಿರ್ವಹಿಸುವುದು;

(13) ನಗರಪಾಲಿಕೆಯು ಅಧಿಕಾರಿಗಳು ಮತ್ತು ನೌಕರರಿಗಾಗಿ ವಾಸದ ಮನೆಗಳನ್ನು ಕಟ್ಟುವುದು ಅಥವಾ ಖರೀದಿ ಮಾಡುವುದು ಮತ್ತು ನಿರ್ವಹಿಸುವುದು;

(14) ನಗರಪಾಲಿಕೆಯು ನಿಯಮಿಸಬಹುದಾದಂಥ ನಿಬಂಧನೆಗಳಿಗೆ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ನಗರಪಾಲಿಕೆಯ ನೌಕರರಿಗೆ ಮನೆ ಕಟ್ಟುವ ಉದ್ದೇಶಗಳಿಗಾಗಿ ಸಾಲಗಳ ಮಂಜೂರಾತಿ;

(15) ನಗರಪಾಲಿಕೆಯ ನೌಕರರ ಕಲ್ಯಾಣಕ್ಕಾಗಿ ಯಾವುದೇ ಇತರ ಕ್ರಮಗಳು;

(16) ವಸ್ತು ಸಂಗ್ರಹಾಲಯಗಳನ್ನು, ಕಲಾ ಸಂಗ್ರಹಾಲಯಗಳನ್ನು, ಸಸ್ಯ ಸಂಬಂಧಿ ಅಥವಾ ಪ್ರಾಣಿ ಸಂಬಂಧಿ ಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು ಅಥವಾ ಅವುಗಳಿಗೆ ನೆರವು ನೀಡುವುದು ಮತ್ತು ಅವುಗಳಿಗಾಗಿ ಕಟ್ಟಡಗಳನ್ನು ಖರೀದಿಸುವುದು ಅಥವಾ ನಿರ್ಮಿಸುವುದು;

(17) ನಗರದೊಳಗೆ ನೈಸರ್ಗಿಕ ವಿಕೋಪದಿಂದುಂಟಾದ ಮಾನವ ಸಂಕಷ್ಟ ಪರಿಹಾರಕ್ಕಾಗಿ ಅಥವಾ ಸಾರ್ವಜನಿಕ ಕಲ್ಯಾಣಕ್ಕಾಗಿ ಎತ್ತಲಾದ ಯಾವುದೇ ಸಾರ್ವಜನಿಕ ನಿಧಿಗೆ ವಂತಿಗೆ ನೀಡುವುದು;

(18) ಪ್ರಸಿದ್ಧ ವ್ಯಕ್ತಿಗಳಿಗೆ ಬಿನ್ನವತ್ತಳೆಗಳನ್ನು ಸಿದ್ಧಪಡಿಸುವುದು ಮತ್ತು ಸಮರ್ಪಿಸುವುದು;

(19) ಈ ಅಧಿನಿಯಮದ ಅಥವಾ ನಿಯಮಗಳ, ಉಪವಿಧಿಗಳ ಮತ್ತು ವಿನಿಮಯಗಳ ಯಾವುದೇ ಉಪಬಂಧಗಳ ಉಲ್ಲಂಘನೆಗೆ ಸಂಬಂಧಿಸಿದ ಮಾಹಿತಿಗಾಗಿ ಬಹುಮಾನಗಳನ್ನು ಕೊಡುವುದು;

(20) ಬಡವರಿಗೆ ಮತ್ತು ಶ್ರಮಿಕ ವರ್ಗದವರಿಗೆ ಸೂಕ್ತ ವಸತಿಯನ್ನು ನಿರ್ಮಿಸುವುದು ಅಥವಾ ಖರೀದಿಸುವುದು ಮತ್ತು ಅದನ್ನು ನಿರ್ವಹಿಸುವುದು;

(21) ನಿರ್ಗತಿಕರಿಗೆ ಅಥವಾ ಮನೆ ಇಲ್ಲದವರಿಗೆ ನೆಲೆಯನ್ನು ಮತ್ತು ಬಡಜನರಿಗೆ ಯಾವುದೇ ರೀತಿಯ ಪರಿಹಾರವನ್ನು ಒದಗಿಸುವುದು;

[1][(21ಎ) ಕೊಳಚೆ ಪ್ರದೇಶಗಳ ಸುಧಾರಣೆ ಮತ್ತು ಅವುಗಳನ್ನು ಮೇಲ್ದರ್ಜೆಗೇರಿಸುವುದು;

(21ಬಿ) ನಗರ ವನ ನಿರ್ಮಾಣ, ಪರಿಸರ ಸಂರಕ್ಷಣೆ ಮತ್ತು ಜೀವಿ ಪರಿಸರ ಅಂಶಗಳ ಸಂವರ್ಧನೆ;

(21ಸಿ) ನಗರ ಬಡತನ ನಿರ್ಮೂಲನೆ;

(21ಡಿ) ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಸೌಂದರ್ಯ ಅಂಶಗಳ ಸಂವರ್ಧನೆ;][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ (21ಎ) ಯಿಂದ (21ಡಿ) ವರೆಗಿನ ಖಂಡಗಳನ್ನು ಸೇರಿಸಲಾಗಿದೆ.

(22) ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ನಗರದಲ್ಲಿ ಯಾವುದೇ ಸಾರ್ವಜನಿಕ ಸಮಾರಂಭಕ್ಕೆ ಅಥವಾ ಮನೋರಂಜನೆಗೆ ವಂತಿಗೆ ನೀಡುವುದು;

(23) ಸಾರ್ವಜನಿಕ ಸುರಕ್ಷೆ, ಆರೋಗ್ಯ, ಸೌಕರ್ಯ ಮತ್ತು ಶಿಕ್ಷಣವನ್ನು ಸಂವರ್ಧಿಸುವ ಸಾಧ್ಯತೆಯುಳ್ಳ, ಇದರಲ್ಲಿ ಈ ಹಿಂದೆ ನಿರ್ದಿಷ್ಟವಾಗಿ ಹೇಳಿರದಂಥ, ಯಾವುದೇ ಕ್ರಮ.

**60. ಮೇಯರ್‌ರವರ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಮೇಯರ್‌ರವರು ನಗರಪಾಲಿಕೆಯ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಮೇಯರ್‌ರವರು ಪರಿವೀಕ್ಷಣೆಯ ಸಾಮಾನ್ಯ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ನಗರಪಾಲಿಕೆಯ ಯಾವುದೇ ಕಡ್ಡಾಯ ಮತ್ತು ವಿವೇಚನಾತ್ಮಕ ಪ್ರಕಾರ್ಯಗಳನ್ನು ನಿರ್ವಹಿಸುವಾಗ ನಗರಪಾಲಿಕೆಯ ಅಥವಾ ಸ್ಥಾಯೀ ಸಮಿತಿಯ ಯಾವುದೇ ನಿರ್ಣಯವನ್ನು ಜಾರಿಗೆ ತರುವುದಕ್ಕೆ ಸಂಬಂಧಿಸಿದಂತೆ ಆಯುಕ್ತರಿಗೆ ನಿರ್ದೇಶನವನ್ನು ಕೊಡಬಹುದು ಮತ್ತು ಆಯುಕ್ತರು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು. ಮೇಯರ್‌ರವರು ನಗರಪಾಲಿಕೆಯ ಯಾವುದೇ ದಾಖಲೆಯನ್ನು ಆಯುಕ್ತರಿಂದ ತರಿಸಿಕೊಳ್ಳಬಹುದು ಮತ್ತು ತಮಗೆ ಒದಗಿಸಿದ ದಾಖಲೆಗಳನ್ನು, ಅವುಗಳನ್ನು ತಮಗೆ ಒದಗಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಮೇಯರ್‌ರವರು ಹಿಂದಿರುಗಿಸತಕ್ಕದ್ದು.

(3) ಮೇಯರ್‌ರವರು ಲಿಖಿತ ಆದೇಶದ ಮೂಲಕ ತಮ್ಮ ಯಾವುದೇ ಪ್ರಕಾರ್ಯಗಳನ್ನು ಉಪ ಮೇಯರ್‌ರವರಿಗೆ ವಹಿಸಿಕೊಡಬಹುದು.

(4) ಮೇಯರ್‌ರವರು ಯಾವುದೇ ಸ್ಥಾಯೀ ಸಮಿತಿಯ ಅಧ್ಯಕ್ಷರಾಗಿ ಚುನಾಯಿತರಾಗಲು ಅರ್ಹರಾಗಿರತಕ್ಕದ್ದಲ್ಲ.

(5) ಮೇಯರ್‌ರವರು ತಾವು ಮೇಯರ್ ಆಗಿ ಚುನಾಯಿತರಾಗುವ ಕಾಲದಲ್ಲಿ ಸ್ಥಾಯೀ ಸಮಿತಿಯ ಅಧ್ಯಕ್ಷರಾಗಿದ್ದರೆ ಅಥವಾ ಚುನಾಯಿತ ಸದಸ್ಯರಾಗಿದ್ದರೆ, ಅವರು ಅಂಥ ಸಮಿತಿಯ ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ಪದಧಾರಣ ಮಾಡಿರುವುದು ನಿಂತುಹೋಗತಕ್ಕದ್ದು.

(6) ಯಾವುದೇ ಸ್ಥಾಯೀ ಸಮಿತಿಯ ಅಧ್ಯಕ್ಷರ ಪದದಲ್ಲಿ ಯಾವುದೇ ಖಾಲೀ ಸ್ಥಾನ ಉಂಟಾದರೆ ಬೇರೊಬ್ಬ ಅಧ್ಯಕ್ಷರನ್ನು ಚುನಾಯಿಸುವುದಕ್ಕಾಗಿ ಮೇಯರ್ ಅವರು ಅಂಥ ಸಮಿತಿಯ ಸಭೆಯನ್ನು ಕರೆಯತಕ್ಕದ್ದು.

**61. ಉಪಮೇಯರ್‌ರವರ ಪ್ರಕಾರ್ಯಗಳು.–** (1) ಮೇಯರ್ ಪದವು ಖಾಲಿ ಇರುವಾಗ ಮತ್ತೊಬ್ಬ ಹೊಸ ಮೇಯರ್‌ರವರನ್ನು ಚುನಾಯಿಸುವವರೆಗೆ ಅವರ ಪ್ರಕಾರ್ಯಗಳು ಉಪ ಮೇಯರ್‌ರವರಿಗೆ ಪ್ರಾಪ್ತವಾಗತಕ್ಕದ್ದು.

(2) ಮೇಯರ್‌ರವರು ಸತತವಾಗಿ ಎಂಟು ದಿನಗಳಿಗಿಂತಲೂ ಹೆಚ್ಚು ಕಾಲ ನಗರದಲ್ಲಿರದಿದ್ದರೆ ಅಥವಾ ಎಂಟು ದಿನಗಳಿಗಿಂತಲೂ ಹೆಚ್ಚು ಕಾಲ ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸಲು ಅಸಮರ್ಥರಾದರೆ ಮೇಯರ್‌ರವರು ನಗರಕ್ಕೆ ಹಿಂತಿರುಗುವವರೆಗೆ ಅಥವಾ ಸಂದರ್ಭಾನುಸಾರ, ಅವರು ಅಸಾಮರ್ಥ್ಯದಿಂದ ಚೇತರಿಸಿಕೊಳ್ಳುವವರೆಗೆ ಅವರ ಪ್ರಕಾರ್ಯಗಳು ಉಪಮೇಯರ್‌ರವರಿಗೆ ಪ್ರಾಪ್ತವಾಗತಕ್ಕದ್ದು.

(3) ಆಡಳಿತ ಮತ್ತು ಲೆಕ್ಕಪರಿಶೋಧನಾ ವರದಿಗಳನ್ನು ಸಕಾಲದಲ್ಲಿ ಸಿದ್ಧಪಡಿಸುವಂತೆ ಆಯುಕ್ತರಿಗೆ ನಿರ್ದೇಶಿಸುವ ಅಧಿಕಾರ ಉಪಮೇಯರ್‌ರವರಿಗೆ ಇರತಕ್ಕದ್ದು.

(4) ಉಪಮೇಯರ್‌ರವರು, ಮೇಯರ್‌ರವರು ತಮಗೆ ವಹಿಸಿಕೊಡಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**[1][61ಎ. [2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ][2]ಯ ಸ್ಥಾಯೀ ಸಮಿತಿಗಳ ಪ್ರಕಾರ್ಯಗಳು.–** [3][(1) [2][ಬೃಹತ್ ಬೆಂಗಳೂರು ಮಹಾನಗರಪಾಲಿಕೆ][2]ಯ ಸ್ಥಾಯೀ ಸಮಿತಿಗಳು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ,–

(ಎ) ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯು, ಹಣಕಾಸಿಗೆ ಮತ್ತು ತೆರಿಗೆ ವಿಧಿಸುವುದಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಮತ್ತು ಯಾವುದೇ ಇತರ ಸ್ಥಾಯೀ ಸಮಿತಿಗೆ ನಿರ್ದಿಷ್ಟವಾಗಿ ವಹಿಸಿಕೊಡದಿರುವ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಬಿ) ಸಾರ್ವಜನಿಕ ಆರೋಗ್ಯ ಸ್ಥಾಯೀ ಸಮಿತಿಯು, ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಸಿ) ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿಯು ನಗರ ಯೋಜನೆ ಮತ್ತು ಸುಧಾರಣೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಡಿ) ಬೃಹತ್ ಕಾಮಗಾರಿ ಸ್ಥಾಯೀ ಸಮಿತಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಧಿಕಾರ ವ್ಯಾಪ್ತಿಯಲ್ಲಿ ಭೂ ಸ್ವಾಧೀನವೂ ಸೇರಿದಂತೆ ಮೇಲು ಸೇತುವೆಗಳು, ಕೆಳ ಸೇತುವೆಗಳು, ಸುರಂಗ ಮಾರ್ಗಗಳು, ರಸ್ತೆಯ ಅಗಲೀಕರಣ, ವರ್ತುಲ ರಸ್ತೆಗಳು, ಎತ್ತರಿಸಿದ ರಸ್ತೆಗಳಂಥ ಬೃಹತ್ ಕಾಮಗಾರಿಗಳನ್ನು ಹಾಗೂ ಅವುಗಳಿಗೆ ಪ್ರಾಸಂಗಿಕವಾದ ಎಲ್ಲಾ ಇತರ ಕಾಮಗಾರಿಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಇ) ವಾರ್ಡ್ ಮಟ್ಟದ ಕಾಮಗಾರಿ ಸ್ಥಾಯೀ ಸಮಿತಿಯು ಮೇಲು ಸೇತುವೆಗಳು, ಕೆಳ ಸೇತುವೆಗಳು, ಸುರಂಗ ಮಾರ್ಗಗಳು, ರಸ್ತೆಯ ಅಗಲೀಕರಣ, ವರ್ತುಲ ರಸ್ತೆಗಳು, ಎತ್ತರಿಸಿದ ರಸ್ತೆಗಳಂಥ ಬೃಹತ್ ಕಾಮಗಾರಿಗಳನ್ನು ಹೊರತುಪಡಿಸಿ, ವಾರ್ಡ್ ಮಟ್ಟದಲ್ಲಿ ಬೀದಿದೀಪಗಳ ವ್ಯವಸ್ಥೆಯೂ ಸೇರಿದಂತೆ ಸಾರ್ವಜನಿಕ ಬೀದಿಗಳನ್ನು ಮತ್ತು ಅವುಗಳಿಗೆ ಹೊಂದಿಕೊಂಡಿರುವವುಗಳನ್ನು ಕುರಿತು ವ್ಯವಹರಿಸತಕ್ಕದ್ದು:

(ಎಫ್) ಲೆಕ್ಕಪತ್ರಗಳ ಸ್ಥಾಯೀ ಸಮಿತಿಯು ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಜಿ) ಶಿಕ್ಷಣ ಸ್ಥಾಯೀ ಸಮಿತಿಯು ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳು ಒಳಗೊಂಡಂತೆ ಪ್ರಾಥಮಿಕ ಪೂರ್ವ, ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಎಚ್) ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯು ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಮತ್ತು ಸಮಾಜದ ಇತರ ದುರ್ಬಲ ವರ್ಗಗಳ ವ್ಯಕ್ತಿಗಳಿಗೆ ಹಾಗೂ ಮಹಿಳೆಯರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವುದಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಐ) ಅಪೀಲು ಸ್ಥಾಯೀ ಸಮಿತಿಯು, ಅಪೀಲುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಜೆ) ತೋಟಗಾರಿಕೆ ಸ್ಥಾಯೀ ಸಮಿತಿಯು, ತೋಟಗಾರಿಕೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಕೆ) ಮಾರುಕಟ್ಟೆ ಸ್ಥಾಯೀ ಸಮಿತಿಯು, ಮಾರುಕಟ್ಟೆಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು;

(ಎಲ್) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸ್ಥಾಯೀ ಸಮಿತಿಯು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕುರಿತು ವ್ಯವಹರಿಸತಕ್ಕದ್ದು.][3]

(2) ನಗರಪಾಲಿಕೆಯು ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿರದ, ಪ್ರತಿಯೊಂದು ಸ್ಥಾಯೀ ಸಮಿತಿಯ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು, ಈ ಉದ್ದೇಶಕ್ಕಾಗಿ ರೂಪಿಸಲಾದ ವಿನಿಯಮಗಳ ಮೂಲಕ ನಿರ್ಧರಿಸತಕ್ಕದ್ದು ಮತ್ತು ಎರಡು ಅಥವಾ ಹೆಚ್ಚು ಸ್ಥಾಯೀ ಸಮಿತಿಗಳು ಕಲೆತು ಸಮಾಲೋಚಿಸುವುದಕ್ಕೆ ಅಥವಾ ಯಾವ ಉದ್ದೇಶದ ಸಂಬಂಧದಲ್ಲಿ ಅವು ಜಂಟಿ ಹಿತಾಸಕ್ತಿಯನ್ನು ಹೊಂದಿವೆಯೋ ಆ ಯಾವುದೇ ಉದ್ದೇಶಕ್ಕಾಗಿ ಅಂಥ ಸಮಿತಿಗಳ ಪೈಕಿಯಿಂದ ಒಂದು ಜಂಟಿ ಸಮಿತಿಯನ್ನು ನೇಮಕ ಮಾಡುವ ಬಗ್ಗೆ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದು.

(3) ಲೆಕ್ಕ ಪತ್ರ ಸ್ಥಾಯೀ ಸಮಿತಿಯು, ವಿನಿಯಮಗಳ ಮೇರೆಗೆ ತನಗೆ ವಹಿಸಿದ ಅಧಿಕಾರಗಳು ಮತ್ತು ಕರ್ತವ್ಯಗಳ ಜೊತೆಗೆ,–

(ಎ) ಬಜೆಟ್ ಅನುದಾನಗಳ ಬಳಕೆ ಕುರಿತು ಮೇಲ್ವಿಚಾರಣೆ ನಡೆಸತಕ್ಕದ್ದು;

(ಬಿ) ನಗರಪಾಲಿಕೆಯ ಲೆಕ್ಕ ಪತ್ರಗಳನ್ನು ಪರಿಶೀಲಿಸುವ ಅವಕಾಶ ಹೊಂದಿರತಕ್ಕದ್ದು ಮತ್ತು ನಗರಪಾಲಿಕೆಯ ನಿಧಿಯ ಜಮೆ ಮತ್ತು ವೆಚ್ಚಕ್ಕೆ ಸಂಬಂಧಿಸಿದಂತೆ ಅದು ಅವಶ್ಯವೆಂದು ಭಾವಿಸಬಹುದಾದ ಯಾವುದೇ ಸ್ಪಷ್ಟೀಕರಣವನ್ನು ಒದಗಿಸುವಂತೆ ಆಯುಕ್ತರನ್ನು ಅಗತ್ಯಪಡಿಸಬಹುದು;

(ಸಿ) ನಗರಪಾಲಿಕೆಯ ಲೆಕ್ಕಪತ್ರಗಳ ಮಾಸಿಕ ಲೆಕ್ಕ ಪರಿಶೋಧನೆಯನ್ನು ನಡೆಸಬಹುದು ಮತ್ತು ಆಯುಕ್ತರು ಒದಗಿಸಿದಂಥ ಹಿಂದಿನ ತಿಂಗಳ ಜಮೆ ಮತ್ತು ವೆಚ್ಚಗಳ ಮಾಸಿಕ ಗೋಷ್ವಾರೆಯನ್ನು ಪರಿಶೀಲಿಸಲು ಬದ್ಧವಾಗಿರತಕ್ಕದ್ದು; ಮತ್ತು

(ಡಿ) ನಗರಪಾಲಿಕೆಯ ಅನುಮೋದನೆಗೆ ಒಳಪಟ್ಟು, ವಸೂಲಿ ಮಾಡಲಾಗದ್ದೆಂದು ಸಮಿತಿಗೆ ಕಂಡು ಬರುವಂಥ ನಗರಪಾಲಿಕೆಯ ಸ್ವತ್ತಿಗೆ ಉಂಟಾದ ಯಾವುದೇ ನಷ್ಟ ಅಥವಾ ಸವಕಳಿ ಮೊಬಲಗನ್ನು ಲೆಕ್ಕದಿಂದ ತೆಗೆದು ಹಾಕತಕ್ಕದ್ದು:

ಪರಂತು, ಯಾವುದೇ ಅಂಥ ನಷ್ಟ ಅಥವಾ ಸವಕಳಿಯ ಮೊಬಲಗು ಒಂದು ಸಾವಿರ ರೂಪಾಯಿಗಳನ್ನು ಮೀರಿರುವಲ್ಲಿ, ಅದನ್ನು ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೆ ಲೆಕ್ಕದಿಂದ ತೆಗೆದುಹಾಕತಕ್ಕದ್ದಲ್ಲ.

(4) ನಗರಪಾಲಿಕೆಯು, ಸ್ಥಾಯೀ ಸಮಿತಿಗಳು ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅವುಗಳಿಗೆ ಸೂಕ್ತವಾಗಿ ಅವಶ್ಯಕವಾಗಬಹುದಾದಂಥ ಸಿಬ್ಬಂದಿಗೆ ಮಂಜೂರಾತಿ ನೀಡತಕ್ಕದ್ದು.][1]

1. 1998ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

3. 2010ರ ಅಧಿನಿಯಮ ಸಂಖ್ಯೆ 36ರ ಮೂಲಕ 30.7.10 ರಿಂದ ಜಾರಿಗೆ ಬರುವಂತೆ (1)ನೇ ಉಪಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

**62.** [1]**[ಇತರ ನಗರ ಪಾಲಿಕೆಗಳ ಸ್ಥಾಯೀ ಸಮಿತಿಗಳ ಪ್ರಕಾರ್ಯಗಳು]**[1]**.–** [2][[1][[3][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು][3] ಹೊರತುಪಡಿಸಿ, ಇತರ ನಗರ ಪಾಲಿಕೆಗಳ ಸ್ಥಾಯೀ ಸಮಿತಿಗಳು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(1) ತೆರಿಗೆ, ಹಣಕಾಸು ಮತ್ತು ಅಪೀಲು ಸ್ಥಾಯೀ ಸಮಿತಿಯು ತೆರಿಗೆ ನಿರ್ಧರಣೆ ಹಣಕಾಸು ಮತ್ತು ಅಪೀಲುಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಮತ್ತು ಯಾವುದೇ ಇತರ ಸ್ಥಾಯೀ ಸಮಿತಿಗೆ ನಿರ್ದಿಷ್ಟವಾಗಿ ವಹಿಸಿಕೊಟ್ಟಿರದ ಎಲ್ಲ ವಿಷಯಗಳ ಕುರಿತು ವ್ಯವಹರಿಸತಕ್ಕದ್ದು.][1]

(2) ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯು, ಸಾರ್ವಜನಿಕ ಆರೋಗ್ಯ ಮತ್ತು ಶಿಕ್ಷಣಕ್ಕೆ ಸಂಬಂಧಪಟ್ಟ ಮತ್ತು ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಸಮಾಜದ ಇತರ ದುರ್ಬಲ ವರ್ಗಗಳ ವ್ಯಕ್ತಿಗಳಿಗೆ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವುದಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಕುರಿತು ವ್ಯವಹರಿಸತಕ್ಕದ್ದು.

(3) ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿಯು ಲೋಕೋಪಯೋಗಿ ಕಾಮಗಾರಿಗಳು, ನಗರ ಯೋಜನೆ ಮತ್ತು ಸುಧಾರಣೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಕುರಿತು ವ್ಯವಹರಿಸತಕ್ಕದ್ದು.

(3ಎ) ಲೆಕ್ಕ ಪತ್ರ ಸ್ಥಾಯೀ ಸಮಿತಿಯು ಲೆಕ್ಕ ಪತ್ರಗಳ ಮತ್ತು ಲೆಕ್ಕ ಪರಿಶೋಧನೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಕುರಿತು ವ್ಯವಹರಿಸತಕ್ಕದ್ದು.][2]

1. 1998ರ ಅಧಿನಿಯಮ ಸಂಖ್ಯೆ 27ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ (1) ರಿಂದ (3ಎ) ಉಪಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ. ಅಧಿಸೂಚನೆ ಜಾರಿಗೆ ಬಂದಿರುವುದು ಲಭ್ಯವಾಗಿಲ್ಲ

3. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 04.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸುವುದು.

(4) ನಗರಪಾಲಿಕೆಯು, ಆ ಉದ್ದೇಶಕ್ಕಾಗಿ ರಚಿಸಲಾದ ವಿನಿಮಯಗಳ ಮೂಲಕ ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿರದ ಪ್ರತಿಯೊಂದು ಸ್ಥಾಯೀ ಸಮಿತಿಯ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ನಿರ್ಧರಿಸತಕ್ಕದ್ದು ಮತ್ತು ವಿನಿಮಯಗಳ ಮೂಲಕ ಎರಡು ಅಥವಾ ಹೆಚ್ಚು ಸ್ಥಾಯೀ ಸಮಿತಿಗಳು ಕಲೆತು ಸಮಾಲೋಚಿಸುವುದಕ್ಕೆ ಅಥವಾ ಅವು ಜಂಟಿಯಾಗಿ ಹಿತಾಸಕ್ತಿ ಹೊಂದಿರುವಂಥ ಯಾವುದೇ ಉದ್ದೇಶಕ್ಕಾಗಿ ಅಂಥ ಸಮಿತಿಗಳಿಂದ ಒಂದು ಜಂಟಿ ಸಮಿತಿಯ ನೇಮಕಾತಿಗಾಗಿ ಉಪಬಂಧಿಸಬಹುದು.

(5) [1][ಲೆಕ್ಕಪತ್ರಗಳ][1] ಸ್ಥಾಯೀ ಸಮಿತಿಯು ವಿನಿಮಯಗಳ ಮೇರೆಗೆ ಅದಕ್ಕೆ ವಹಿಸಲಾದ ಅಧಿಕಾರಗಳು ಮತ್ತು ಕರ್ತವ್ಯಗಳ ಜೊತೆಗೆ,–

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದಿರುವ ಅಧಿಸೂಚನೆಯು ಲಭ್ಯವಾಗಿಲ್ಲ.

(ಎ) ಬಜೆಟ್ ಅನುದಾನಗಳ ವಿನಿಯೋಗವನ್ನು ಪರಿವೀಕ್ಷಿಸತಕ್ಕದ್ದು;

(ಬಿ) ನಗರಪಾಲಿಕೆಯ ಲೆಕ್ಕಪತ್ರಗಳನ್ನು ನೋಡುವ ಅವಕಾಶವನ್ನು ಹೊಂದಿರತಕ್ಕದ್ದು ಮತ್ತು ನಗರಪಾಲಿಕೆಯ ನಿಧಿಯ ಜಮಾಖರ್ಚುಗಳ ಬಗ್ಗೆ ತಾನು ಅವಶ್ಯವೆಂದು ಪರಿಗಣಿಸುವ ಯಾವುದೇ ಸ್ಪಷ್ಟೀಕರಣವನ್ನು ಒದಗಿಸುವಂತೆ ಆಯುಕ್ತರನ್ನು ಅಗತ್ಯಪಡಿಸಬಹುದು;

(ಸಿ) ನಗರಪಾಲಿಕೆಯ ಲೆಕ್ಕಪತ್ರಗಳ ಮಾಸಿಕ ಲೆಕ್ಕಪರಿಶೋಧನೆಯನ್ನು ನಡೆಸಬಹುದು ಮತ್ತು ಆಯುಕ್ತರು ಒದಗಿಸಿದ ಹಿಂದಿನ ತಿಂಗಳ ಸ್ವೀಕೃತಿಗಳು ಮತ್ತು ಬಟವಾಡೆಗಳನ್ನು ಮಾಸಿಕ ಗೋಷ್ವಾರೆಯ ತನಿಖೆ ನಡೆಸಲು ಬದ್ಧರಾಗಿರತಕ್ಕದ್ದು; ಮತ್ತು

(ಡಿ) ನಗರಪಾಲಿಕೆಯ ಅನುಮೋದನೆಗೆ ಒಳಪಟ್ಟು ಸಮಿತಿಗೆ ವಸೂಲು ಮಾಡಲು ಅಸಾಧ್ಯ ಎಂದು ತೋರಿಬರುವ ನಗರಪಾಲಿಕೆಯ ಸ್ವತ್ತಿಗೆ ಉಂಟಾದ ಯಾವುದೇ ನಷ್ಟ ಅಥವಾ ಸವಕಳಿಯ ಮೊಬಲಗನ್ನು ತೊಡೆದು ಹಾಕಬಹುದು:

ಪರಂತು, ಅಂಥ ಯಾವುದೇ ನಷ್ಟದ ಅಥವಾ ಸವಕಳಿಯ ಮೊಬಲಗು ಒಂದು ಸಾವಿರ ರೂಪಾಯಿಗಳಿಗೆ ಮೀರಿದರೆ ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಅದನ್ನು ತೊಡೆದುಹಾಕತಕ್ಕದ್ದಲ್ಲ.

[1][(5ಎ) xxx][1]

1. 1986ರ ಅಧಿನಿಯಮ ಸಂಖ್ಯೆ 32 ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿತ್ತು ಮತ್ತು 1994ರ ಅಧಿನಿಯಮ ಸಂಖ್ಯೆ 35ರ ಮೂಲಕ ಬಿಟ್ಟುಬಿಡಲಾಗಿದೆ. ಅಧಿಸೂಚನೆಯು ಜಾರಿಗೆ ಬಂದಿರುವುದು ಲಭ್ಯವಾಗಿಲ್ಲ.

(6) ನಗರಪಾಲಿಕೆಯು, ಸ್ಥಾಯೀ ಸಮಿತಿಗಳು ತಮ್ಮ ತಮ್ಮ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕೆ ಅವುಗಳಿಗೆ ಸೂಕ್ತವಾಗಿ ಅವಶ್ಯವಾಗಬಹುದಾದಂಥ ಸಿಬ್ಬಂದಿಗೆ ಮಂಜೂರಾತಿ ನೀಡತಕ್ಕದ್ದು.

**63. ಸ್ಥಾಯೀ ಸಮಿತಿಗಳಿಂದ ಆಯುಕ್ತರಿಗೆ ಅಧಿಕಾರಗಳ ಪ್ರತ್ಯಾಯೋಜನೆ.–** (1) ಈ ಅಧಿನಿಯಮದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ಆಯುಕ್ತರು ಸ್ಥಾಯೀ ಸಮಿತಿಯ ಅನುಮೋದನೆ, ಮಂಜೂರಾತಿ, ಸಮ್ಮತಿ ಅಥವಾ ಸಹಮತಿಗೆ ಒಳಪಟ್ಟು ಕ್ರಮ ತೆಗೆದುಕೊಳ್ಳಬಹುದೆಂದು ಉಪಬಂಧಿಸಿರುವಲ್ಲೆಲ್ಲಾ ಸ್ಥಾಯೀ ಸಮಿತಿಯು ಲಿಖಿತ ನಿರ್ಣಯದ ಮೂಲಕ ಅಂಥ ನಿರ್ಣಯದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳೇನಾದರೂ ಇದ್ದರೆ, ಅವುಗಳಿಗೆ ಒಳಪಟ್ಟು, ತನ್ನ ಅನುಮೋದನೆ, ಮಂಜೂರಾತಿ, ಸಮ್ಮತಿ ಅಥವಾ ಸಹಮತಿಯನ್ನು ನಿರೀಕ್ಷಿಸಿ ಕ್ರಮ ತೆಗೆದುಕೊಳ್ಳಲು ಅವರಿಗೆ ಅಧಿಕಾರ ನೀಡಬಹುದು.

(2) ಅಂಥ ನಿರ್ಣಯಕ್ಕೆ ಅನುಸಾರವಾಗಿ ಸ್ಥಾಯೀ ಸಮಿತಿಯ ಅನುಮೋದನೆ, ಮಂಜೂರಾತಿ, ಸಮ್ಮತಿ ಅಥವಾ ಸಹಮತಿಯನ್ನು ನಿರೀಕ್ಷಿಸಿ ಆಯುಕ್ತರು ಯಾವುದೇ ಕ್ರಮವನ್ನು ತೆಗೆದುಕೊಂಡಾಗಲೆಲ್ಲಾ ಹಾಗೆ ತೆಗೆದುಕೊಂಡ ಕ್ರಮದ ಬಗ್ಗೆ ಸಮಿತಿಗೆ ತತ್‌ಕ್ಷಣ ತಿಳಿಸತಕ್ಕದ್ದು.

**64. ಆಯುಕ್ತರ ಪ್ರಕಾರ್ಯಗಳು.–** (1) ನಗರಪಾಲಿಕೆಯ ಅಥವಾ ಸಂಬಂಧಪಟ್ಟ ಸ್ಥಾಯೀ ಸಮಿತಿಯ ಅನುಮೋದನೆಗೆ ಅಥವಾ ಮಂಜೂರಾತಿಗೆ ಒಳಪಟ್ಟು ಮತ್ತು ಈ ಅಧಿನಿಯಮದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ವಿಧಿಸಿದ ಇತರ ಎಲ್ಲ ನಿರ್ಬಂಧಗಳು, ಪರಿಮಿತಿಗಳು ಮತ್ತು ಷರತ್ತುಗಳಿಗೆ ಸಹ ಒಳಪಟ್ಟು ನಗರಪಾಲಿಕೆಗೆ ಯಾವುದೇ ಕರ್ತವ್ಯವನ್ನು ವಿಧಿಸುವ ಅಥವಾ ಯಾವುದೇ ಅಧಿಕಾರವನ್ನು ಪ್ರದಾನ ಮಾಡುವ ಈ ಅಧಿನಿಯಮದ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಉಪಬಂಧಗಳು ಇರದಿದ್ದರೆ ಅವುಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಕಾರ್ಯಾಂಗ ಅಧಿಕಾರವನ್ನು ಆಯುಕ್ತರಲ್ಲಿ ನಿಹಿತಗೊಳಿಸತಕ್ಕದ್ದೆಂದು, ಈ ಅಧಿನಿಯಮದಲ್ಲಿ ಸ್ಪಷ್ಟವಾಗಿ ನಿರ್ದೇಶಿಸಿದಾಗಲೆಲ್ಲಾ ಆ ಕಾರ್ಯಾಂಗ ಅಧಿಕಾರವನ್ನು ಅವರಲ್ಲಿ ನಿಹಿತಗೊಳಿಸತಕ್ಕದ್ದು, ಅವರು,–

(ಎ) ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಥವಾ ತಾತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ಅವರಿಗೆ ನಿರ್ದಿಷ್ಟವಾಗಿ ವಿಧಿಸಿದ ಎಲ್ಲ ಕರ್ತವ್ಯಗಳನ್ನು ಸಹ ನೆರವೇರಿಸತಕ್ಕದ್ದು ಮತ್ತು ಪ್ರದಾನ ಮಾಡಿದ ಎಲ್ಲ ಅಧಿಕಾರಗಳನ್ನು ಸಹ ಚಲಾಯಿಸತಕ್ಕದ್ದು;

(ಬಿ) ಯಾವುದೇ ತುರ್ತುಪರಿಸ್ಥಿತಿಯಲ್ಲಿ, ಸಾರ್ವಜನಿಕರ ಸೇವೆಗಾಗಿ ಅಥವಾ ಸುರಕ್ಷೆಗಾಗಿ ಅಥವಾ ನಗರಪಾಲಿಕೆಯ ಸ್ವತ್ತಿನ ರಕ್ಷಣೆಗಾಗಿ, ತಕ್ಷಣದ ಕ್ರಮವನ್ನು ಇನ್ನಾವುದೇ ಪೌರ ಪ್ರಾಧಿಕಾರದಿಂದ ಅಥವಾ ಸರ್ಕಾರದಿಂದ ಮಂಜೂರಾತಿ, ಅನುಮೋದನೆ ಅಥವಾ ಅಧಿಕಾರವನ್ನು ಪಡೆಯದೆಯೇ ಈ ಅಧಿನಿಯಮದ ಮೇರೆಗೆ ಕೈಗೊಳ್ಳಲಾಗದಿದ್ದರೂ, ತುರ್ತುಪರಿಸ್ಥಿತಿಯಿಂದಾಗಿ ಅಂಥ ತಕ್ಷಣದ ಕ್ರಮವನ್ನು ತೆಗೆದುಕೊಳ್ಳಬೇಕಾಗುತ್ತದೆಂದು ಅವರಿಗೆ ಕಂಡುಬಂದರೆ ಅಥವಾ ಅಂಥ ಕ್ರಮವನ್ನು ಕೈಗೊಳ್ಳುವುದಕ್ಕೆ ತುರ್ತುಪರಿಸ್ಥಿತಿಯು ಸಮರ್ಥನೆ ಒದಗಿಸಿದರೆ ಅಥವಾ ಅಗತ್ಯಪಡಿಸಿದರೆ ಅಂಥ ತಕ್ಷಣದ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು:

ಪರಂತು, ಆಯುಕ್ತರು ತಾವು ತೆಗೆದುಕೊಂಡ ಕ್ರಮವನ್ನು ಮತ್ತು ಆ ಕ್ರಮವನ್ನು ತೆಗೆದುಕೊಂಡದ್ದಕ್ಕೆ ಕಾರಣಗಳನ್ನು ಮತ್ತು ಅಂಥ ಕ್ರಮದ ಪರಿಣಾಮವಾಗಿ ವಹಿಸಿದ ಅಥವಾ ವಹಿಸುವ ಸಂಭವವಿರುವ ಆದರೆ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಪ್ರಸಕ್ತ ಬಜೆಟ್ ಅನುದಾನದಲ್ಲಿ ಒಳಗೊಂಡಿರದಂಥ ಖರ್ಚಿನ ಮೊಬಲಗು ಯಾವುದಾದರೂ ಇದ್ದರೆ, ಅದನ್ನು ತತ್‌ಕ್ಷಣ ಸಂಬಂಧಪಟ್ಟ ಸ್ಥಾಯೀ ಸಮಿತಿಗೆ ಮತ್ತು ನಗರಪಾಲಿಕೆಗೆ ವರದಿ ಮಾಡತಕ್ಕದ್ದು.

(2) ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ನಗರಪಾಲಿಕೆಗೆ ಪ್ರದಾನ ಮಾಡಿದ ಯಾವುವೇ ಅಧಿಕಾರಗಳನ್ನು ಅಥವಾ ವಿಧಿಸಿದ ಯಾವುವೇ ಕರ್ತವ್ಯಗಳನ್ನು ಮತ್ತು ನಿಹಿತವಾದ ಯಾವುವೇ ಪ್ರಕಾರ್ಯಗಳನ್ನು ಅಂಥ ಕಾನೂನಿನ ಉಪಬಂಧಗಳಿಗೊಳಪಟ್ಟು ಆಯುಕ್ತರು ಚಲಾಯಿಸತಕ್ಕದ್ದು, ನೆರವೇರಿಸತಕ್ಕದ್ದು ಅಥವಾ ನಿರ್ವಹಿಸತಕ್ಕದ್ದು.

(3) ಆಯುಕ್ತರು ಸಂಬಂಧಪಟ್ಟ ಸ್ಥಾಯೀ ಸಮಿತಿಯ ಅನುಮೋದನೆಯೊಂದಿಗೆ ಲಿಖಿತ ಆದೇಶದ ಮೂಲಕ ಯಾವುದೇ ಅಂಥ ಅಧಿಕಾರವನ್ನು ಚಲಾಯಿಸುವುದಕ್ಕೆ, ಕರ್ತವ್ಯವನ್ನು ನೆರವೇರಿಸುವುದಕ್ಕೆ ಅಥವಾ ಪ್ರಕಾರ್ಯವನ್ನು ನಿರ್ವಹಿಸುವುದಕ್ಕೆ ತಮ್ಮ ಪರಿಶೀಲನೆಗೆ ಹಾಗೂ ತಾವು ನಿರ್ದಿಷ್ಟಪಡಿಸುವುದು ಸೂಕ್ತವೆಂದು ಭಾವಿಸುವಂಥ ಷರತ್ತುಗಳು ಮತ್ತು ಪರಿಮಿತಿಗಳು ಯಾವುವಾದರೂ ಇದ್ದರೆ ಅವುಗಳಿಗೆ ಒಳಪಟ್ಟು, ತಮ್ಮ ನಿಯಂತ್ರಣದಲ್ಲಿರುವ ನಗರ ಪಾಲಿಕೆಯ ಯಾರೇ ಅಧಿಕಾರಿಗೆ ಅಧಿಕಾರ ನೀಡಬಹುದು.

**65. ಆಯುಕ್ತರು ಪತ್ರವ್ಯವಹಾರವನ್ನು ಮಾಡುವುದು.–** ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಥವಾ ಇತರ ಯಾವುದೇ ಕಾನೂನಿನ ಮೇರೆಗೆ ನಗರಪಾಲಿಕೆಯ ಮತ್ತು ಸರ್ಕಾರದ ಅಥವಾ ಇತರೆ ಪ್ರಾಧಿಕಾರದ ನಡುವೆ ವ್ಯವಹರಿಸುವ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ಎಲ್ಲಾ ಪತ್ರವ್ಯವಹಾರವನ್ನು ಆಯುಕ್ತರು ಮಾಡತಕ್ಕದ್ದು ಮತ್ತು ಆಯುಕ್ತರು ಅಂಥ ಪತ್ರವ್ಯವಹಾರ ಪ್ರತಿಗಳನ್ನು ಮೇಯರ್‌ರವರಿಗೆ ಕಳುಹಿಸತಕ್ಕದ್ದು.

**66. ಆಯುಕ್ತರ ಸಾಮಾನ್ಯ ಅಧಿಕಾರವನ್ನು ವಹಿಸಿಕೊಡುವುದು.–** ರಾಜ್ಯಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು ಆಯುಕ್ತರು, [1][ಅನುಸೂಚಿ–III ರಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಗಳೂ ಒಳಗೊಂಡಂತೆ][1] ತಮ್ಮ ಯಾವುದೇ ಸಾಮಾನ್ಯ ಅಧಿಕಾರಗಳಲ್ಲಿ, ಕರ್ತವ್ಯಗಳಲ್ಲಿ ಹಾಗೂ ಪ್ರಕಾರ್ಯಗಳಲ್ಲಿ ಯಾವುದನ್ನಾದರೂ ನಗರಪಾಲಿಕೆಯ ಯಾರೇ ತನ್ನ ಅಧೀನ ಅಧಿಕಾರಿಗೆ ವಹಿಸಿಕೊಡಬಹುದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**67. ಆಯುಕ್ತರ ವಿಶೇಷ ಅಧಿಕಾರವನ್ನು ವಹಿಸಿಕೊಡುವುದು.–** ಆಯುಕ್ತರು, 64ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ ಮೂಲಕ ತಮಗೆ ಪ್ರದತ್ತವಾದ ವಿಶೇಷ ಅಧಿಕಾರಗಳನ್ನು ಚಲಾಯಿಸಲು, ಆರೋಗ್ಯಾಧಿಕಾರಿಗೆ, ಇಂಜಿನಿಯರ್‌ಗೆ, ರೆವಿನ್ಯೂ ಅಧಿಕಾರಿಗೆ ಅಥವಾ ತನ್ನ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ವಿಭಾಗದ ಮುಖ್ಯಸ್ಥರಾದ ಇತರ ಯಾರೇ ಅಧಿಕಾರಿಗೆ ಅಥವಾ ಹಿಂದೆ ಹೇಳಿದ ಅಧಿಕಾರಿಗಳಲ್ಲಿ ಯಾರೇ ಅಧಿಕಾರಿಯ ಕರ್ತವ್ಯಗಳ ತಾತ್ಕಾಲಿಕ ಪ್ರಭಾರದಲ್ಲಿರುವ ಯಾರೇ ವ್ಯಕ್ತಿಗೆ ತನ್ನ ಸ್ವಂತ ಜವಾಬ್ದಾರಿಯ ಮೇಲೆ ಮತ್ತು ಲಿಖಿತ ಆದೇಶದ ಮೂಲಕ ಅಧಿಕಾರ ನೀಡಬಹುದು.

**68. ದಾಖಲೆಗಳ ಅಭಿರಕ್ಷೆ.–** ಆಯುಕ್ತರು ನಗರಪಾಲಿಕೆಯ ಸ್ಥಾಯೀ ಸಮಿತಿಯ ಮತ್ತು ಇತರ ಸಮಿತಿಗಳ ವ್ಯವಹರಣೆಗಳಿಗೆ ಸಂಬಂಧಪಟ್ಟ ಎಲ್ಲ ಕಾಗದಪತ್ರಗಳು ಮತ್ತು ದಸ್ತಾವೇಜುಗಳು ಒಳಗೊಂಡಂತೆ ನಗರಪಾಲಿಕೆಯ ಎಲ್ಲ ದಾಖಲೆಗಳ ಅಭಿರಕ್ಷೆಗೆ ಜವಾಬ್ದಾರರಾಗಿರತಕ್ಕದ್ದು.

**69. ನಗರಪಾಲಿಕೆಯ ಸಿಬ್ಬಂದಿಯ ಮೇಲೆ ನಿಯಂತ್ರಣ.–** ಈ ಅಧಿನಿಯಮದ, ನಿಯಮಗಳ ಮತ್ತು ವಿನಿಮಯಗಳ ಉಪಬಂಧಗಳಿಗೆ ಒಳಪಟ್ಟು, ಆಯುಕ್ತರು ನಗರಪಾಲಿಕೆಯ ಸಿಬ್ಬಂದಿ ವರ್ಗಕ್ಕೆ ಸೇರಿದ ವ್ಯಕ್ತಿಗಳ ಕರ್ತವ್ಯಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಅವರ ಮೇಲೆ ಮೇಲ್ವಿಚಾರಣೆ ಮತ್ತು ನಿಯಂತ್ರಣಾಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅವರ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ಎಲ್ಲ ಪ್ರಶ್ನೆಗಳನ್ನು ತೀರ್ಮಾನಿಸತಕ್ಕದ್ದು.

**70. ಕೌನ್ಸಿಲರುಗಳ ಅಧಿಕಾರ.–** (1) ನಗರಪಾಲಿಕೆಯ ಕಾರ್ಯದ ನಿರ್ವಹಣೆಯಲ್ಲಿನ ಯಾವುದೇ ನಿರ್ಲಕ್ಷ್ಯದ ಬಗ್ಗೆ ನಗರಪಾಲಿಕೆಯ ಸ್ವತ್ತಿನ ಯಾವುದೇ ಬಗೆಯ ಪೋಲು ಕುರಿತಂತೆ ಅಥವಾ ಯಾವುದೇ ಪ್ರದೇಶದ ಅಗತ್ಯತೆಗಳ ಬಗ್ಗೆ ಯಾರೇ ಕೌನ್ಸಿಲರನು ಸೂಕ್ತ ಪ್ರಾಧಿಕಾರಿಯ ಗಮನ ಸೆಳೆಯಬಹುದು ಮತ್ತು ತಾನು ಅಪೇಕ್ಷಣೀಯವೆಂದು ಪರಿಗಣಿಸುವಂಥ ಯಾವುದೇ ಸುಧಾರಣೆಗಳನ್ನು ಸೂಚಿಸಬಹುದು.

(2) ಪ್ರತಿಯೊಬ್ಬ ಕೌನ್ಸಿಲರನು, ಈ ಬಗ್ಗೆ ರಚಿಸಿದ ವಿನಿಯಮಗಳಿಗೆ ಒಳಪಟ್ಟು ನಗರಪಾಲಿಕೆಯ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳ ಮೇಲೆ ಪ್ರಶ್ನೆ, ಪ್ರತಿ ಪ್ರಶ್ನೆ ಕೇಳಲು ಹಕ್ಕುಳ್ಳವನಾಗಿರತಕ್ಕದ್ದು.

## ಅಧ್ಯಾಯ – VI

## ನಗರಪಾಲಿಕೆಯ ಮತ್ತು ಸಮಿತಿಗಳ ಕಾರ್ಯವಿಧಾನ

**71. ನಗರಪಾಲಿಕೆಯ ಮತ್ತು ಸ್ಥಾಯೀ ಸಮಿತಿಗಳ ವ್ಯವಹರಣೆಗಳು.–** (1) ಸಾರ್ವತ್ರಿಕ ಚುನಾವಣೆಯ ತರುವಾಯ ನಗರಪಾಲಿಕೆಯ ಮೊದಲ ಸಭೆಯನ್ನು ಅಂಥ ಚುನಾವಣೆಯ ಫಲಿತಾಂಶಗಳು ಪ್ರಕಟವಾದ ತರುವಾಯ ಆದಷ್ಟು ಬೇಗನೆ ನಡೆಸತಕ್ಕದ್ದು ಮತ್ತು ಆಯುಕ್ತರು ಆ ಸಭೆಯನ್ನು ಕರೆಯತಕ್ಕದ್ದು. ಅದರ ಅಧ್ಯಕ್ಷತೆಯನ್ನು ಅಧಿಕಾರ ವ್ಯಾಪ್ತಿಯುಳ್ಳ [1][ರೆವಿನ್ಯೂ ಪ್ರದೇಶದ ಪ್ರಾದೇಶಿಕ ಆಯುಕ್ತರು][1] ವಹಿಸತಕ್ಕದ್ದು.

1. 2007 ರ ಅಧಿನಿಯಮ ಸಂಖ್ಯೆ 17 ರ ಮೂಲಕ 1.5.2007 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ನಗರಪಾಲಿಕೆಯ ಮತ್ತು ಸ್ಥಾಯೀ ಸಮಿತಿಗಳ ಸಭೆಗಳನ್ನು ನಗರಪಾಲಿಕೆಯ ಕಚೇರಿಯಲ್ಲಿ ನಡೆಸತಕ್ಕದ್ದು ಮತ್ತು ಆ ಸಭೆಗಳ ಮುಂದೆ ಇರುವ ಕಾರ್ಯಕಲಾಪಗಳನ್ನು ನಿಯಮಿಸಲಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ವಿಲೇ ಮಾಡತಕ್ಕದ್ದು, ಅಂಥ ಸಭೆಗಳ ನೋಟೀಸುಗಳನ್ನು ಕೌನ್ಸಿಲ್‌ನ ಕಾರ್ಯದರ್ಶಿಯವರು ನೀಡತಕ್ಕದ್ದು, ನಗರಪಾಲಿಕೆಯ ಸಭೆಗಳ ಸಂದರ್ಭದಲ್ಲಿ ಅವರು ಮೇಯರ್‌ರವರೊಂದಿಗೆ ಮತ್ತು ಆಯುಕ್ತರೊಂದಿಗೆ ಸಮಾಲೋಚಿಸಿ ಮತ್ತು ಸ್ಥಾಯೀ ಸಮಿತಿಯ ಸಭೆಗಳ ಸಂದರ್ಭದಲ್ಲಿ, ಅಂಥ ಸಮಿತಿಯ ಅಧ್ಯಕ್ಷರೊಂದಿಗೆ ಮತ್ತು ಆಯುಕ್ತರೊಂದಿಗೆ ಸಮಾಲೋಚಿಸಿ ನೋಟೀಸುಗಳನ್ನು ನೀಡತಕ್ಕದ್ದು. ಪ್ರತಿಯೊಂದು ನೋಟೀಸಿನಲ್ಲಿ ಸಭೆಯ ಕಾರ್ಯಸೂಚಿಯನ್ನು ನಿರ್ದಿಷ್ಟಪಡಿಸತಕ್ಕದ್ದು. ಮೇಯರ್‌ರವರು ಅಥವಾ ಅಧ್ಯಕ್ಷರು ತುರ್ತು ವಿಷಯಗಳು ಎಂದು ಪರಿಗಣಿಸುವ ವಿಷಯಗಳನ್ನು ಹೊರತುಪಡಿಸಿ ಸಾಮಾನ್ಯವಾಗಿ ಕಾರ್ಯಸೂಚಿಯಲ್ಲಿ ಒಳಗೊಂಡಿರದ ಯಾವುದೇ ವಿಷಯವನ್ನು ಸಭೆಯಲ್ಲಿ ಕೈಗೆತ್ತಿಕೊಳ್ಳತಕ್ಕದ್ದಲ್ಲ. ಅಂಥ ತುರ್ತು ವಿಷಯಗಳನ್ನು, ಅವುಗಳಿಗೆ ಸಂಬಂಧಿಸಿದಂತೆ ಪೂರಕ ಕಾರ್ಯ ಸೂಚಿಯನ್ನು ಸಭೆಗೆ ಮುಂಚೆ ಕೌನ್ಸಿಲರುಗಳಿಗೆ ಅಥವಾ ಸದಸ್ಯರಿಗೆ ಕೊಟ್ಟಿದ್ದರೆ ಪರಿಗಣಿಸಬಹುದು.

(3) ನಗರಪಾಲಿಕೆಯು ತನ್ನ ಅಧಿಕಾರಿಗಳ ಪೈಕಿ ಯಾರೇ ಅಧಿಕಾರಿಯನ್ನು, ಅಂಥ ಅಧಿಕಾರಿಯು ತನ್ನ ಕರ್ತವ್ಯ ಪಾಲನೆಯಲ್ಲಿ ವ್ಯವಹರಿಸಿದ ಯಾವುದೇ ವಿಷಯವನ್ನು ನಗರಪಾಲಿಕೆಯ ಯಾವ ಸಭೆಯಲ್ಲಿ ಚರ್ಚಿಸಲಾಗುವುದೋ ಆ ಸಭೆಗೆ ಹಾಜರಾಗುವಂತೆ ಅಗತ್ಯಪಡಿಸಬಹುದು, ಹಾಗೆ ಯಾರೇ ಅಧಿಕಾರಿಯನ್ನು ಅಂಥ ಯಾವುದೇ ಸಭೆಗೆ ಹಾಜರಾಗುವಂತೆ ಅಗತ್ಯಪಡಿಸಿದಾಗ ಅವನು ವ್ಯವಹರಿಸಿದ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ನಗರಪಾಲಿಕೆಯು ಅಗತ್ಯಪಡಿಸಬಹುದಾದಂಥ ವಾಸ್ತವಾಂಶಗಳ ಹೇಳಿಕೆಯನ್ನು ನೀಡುವಂತೆ ಅಥವಾ ಆ ವಿಷಯಕ್ಕೆ ಸಂಬಂಧಿಸಿದಂತೆ ತನ್ನ ಬಳಿ ಇರುವಂಥ ಮಾಹಿತಿಯನ್ನು ಒದಗಿಸುವಂತೆ ಆತನಿಗೆ ಕೇಳಬಹುದು.

**72. ನಗರಪಾಲಿಕೆಯ ನಿರ್ಣಯಗಳನ್ನು ಕಾರ್ಯಗತಗೊಳಿಸುವುದಕ್ಕೆ ಉಳಿದ ಪೌರಪ್ರಾಧಿಕಾರಗಳ ಮೇಲೆ ಹೊರಿಸಿದ ಹೊಣೆಗಾರಿಕೆ.–** ಈ ಅಧಿನಿಯಮದ ಮೇರೆಗೆ ರಚಿಸಲಾದ ಸಮಿತಿಗಳು ಮತ್ತು ಆಯುಕ್ತರು ನಗರಪಾಲಿಕೆಯ ಪ್ರತಿಯೊಂದು ನಿರ್ಣಯವನ್ನು, ಸರ್ಕಾರವು ಅಂಥ ನಿರ್ಣಯವನ್ನು ಪೂರ್ಣವಾಗಿ ಅಥವಾ ಭಾಗಶಃ ರದ್ದುಗೊಳಿಸಿದ ಹೊರತು, ಕಾರ್ಯಗತಗೊಳಿಸಲು ಬದ್ಧರಾಗಿರತಕ್ಕದ್ದು:

ಪರಂತು, ಈ ಅಧಿನಿಯಮದ ಮೇರೆಗೆ ರಚಿಸಿದ ನಗರಪಾಲಿಕೆಯ ಅಥವಾ ಸಮಿತಿಯ ಯಾವುದೇ ನಿರ್ಣಯವು ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧವನ್ನು ಅಥವಾ ಈ ಅಧಿನಿಯಮದ ಮೇರೆಗೆ ಅಥವಾ ಇತರ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮ, ಅಧಿಸೂಚನೆ, ವಿನಿಯಮ ಅಥವಾ ಉಪವಿಧಿಯನ್ನು ಅಥವಾ ಸರ್ಕಾರವು ಹೊರಡಿಸಿದ ಯಾವುದೇ ಆದೇಶವನ್ನು ಉಲ್ಲಂಘಿಸುತ್ತದೆಂದು ಅಥವಾ ನಗರಪಾಲಿಕೆಯ ಹಿತಾಸಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡುತ್ತದೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಅವರು ಆ ನಿರ್ಣಯವನ್ನು ಅಂಗೀಕರಿಸಿದ ಹದಿನೈದು ದಿನಗಳ ಒಳಗಾಗಿ, ಆದೇಶಗಳಿಗಾಗಿ ಸರ್ಕಾರಕ್ಕೆ ಆ ವಿಷಯವನ್ನು ಕಳುಹಿಸತಕ್ಕದ್ದು ಮತ್ತು ಸಂದರ್ಭಾನುಸಾರ ನಗರಪಾಲಿಕೆಗೆ ಅಥವಾ ಸಮಿತಿಗೆ ತಾನು ಕೈಕೊಂಡ ಕ್ರಮದ ಬಗ್ಗೆ ಅದರ ಮುಂದಿನ ಸಭೆಯಲ್ಲಿ ತಿಳಿಸತಕ್ಕದ್ದು ಮತ್ತು ಹಾಗೆ ಕಳುಹಿಸಿದ ವಿಷಯದ ಬಗ್ಗೆ ಸರ್ಕಾರದ ಆದೇಶವನ್ನು ಸ್ವೀಕರಿಸುವವರೆಗೆ ಆಯುಕ್ತರು ಆ ನಿರ್ಣಯವನ್ನು ಕಾರ್ಯಗತಗೊಳಿಸಲು ಬದ್ಧರಾಗಿರತಕ್ಕದ್ದಲ್ಲ.

**73. ನಗರಪಾಲಿಕೆಯು, ವ್ಯವಹರಣೆಗಳು, ಮುಂತಾದವುಗಳ ಉದ್ಧೃತ ಭಾಗಗಳನ್ನು ಸ್ಥಾಯೀ ಸಮಿತಿಯಿಂದ ತರಿಸಿಕೊಳ್ಳಬಹುದು, ಇತ್ಯಾದಿ.–** ನಗರಪಾಲಿಕೆಯು ಈ ಅಧಿನಿಯಮದ ಮೇರೆಗೆ ರಚಿತವಾದ ಯಾವುದೇ ಸಮಿತಿಯ ಯಾವುವೇ ವ್ಯವಹರಣೆಗಳ ಉದ್ಧೃತ ಭಾಗವನ್ನು ಮತ್ತು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಯಾವ ವಿಷಯದ ಬಗ್ಗೆ ವ್ಯವಹರಿಸಲು ಅಂಥ ಯಾವುದೇ ಸಮಿತಿಗೆ ಅಧಿಕಾರ ನೀಡಲಾಗಿದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧಪಡುವ ಅಥವಾ ಸಂಬಂಧಿಸಿದ ಯಾವುದೇ ವಿವರಪಟ್ಟಿಕೆ, ವಿವರಣಾಪತ್ರ, ಲೆಕ್ಕಪತ್ರ ಅಥವಾ ವರದಿಯನ್ನು ಯಾವುದೇ ಕಾಲದಲ್ಲಿ ತರಿಸಿಕೊಳ್ಳಬಹುದು ಮತ್ತು ಅಂಥ ಪ್ರತಿಯೊಂದು ಕೋರಿಕೆಯನ್ನು ಅನುಚಿತ ವಿಳಂಬವಿಲ್ಲದೆ ಸಮಿತಿಯು ಪಾಲಿಸತಕ್ಕದ್ದು.

**74. ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಮತ್ತು ವಿವರಪಟ್ಟಿಕೆಗಳು, ವರದಿಗಳು, ಮುಂತಾದವುಗಳನ್ನು ಒದಗಿಸುವಂತೆ ಆಯುಕ್ತರನ್ನು ಅಗತ್ಯಪಡಿಸಬಹುದು.–** (1) (3)ನೇ ಉಪಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ಯಾವುದೇ ಕಾಲದಲ್ಲಿ ಆಯುಕ್ತರನ್ನು,–

(ಎ) ಆಯುಕ್ತರಾಗಿ ಅವರ ಬಳಿ ಇರುವ ಅಥವಾ ನಿಯಂತ್ರಣದಲ್ಲಿರುವ ಅಥವಾ ಅವರ ಕಛೇರಿಯಲ್ಲಿ ಅಥವಾ ಅವರ ಅಧೀನದಲ್ಲಿರುವ ನಗರಪಾಲಿಕೆಯ ಯಾರೇ ಅಧಿಕಾರಿಯ ಅಥವಾ ನೌಕರನ ಕಛೇರಿಯಲ್ಲಿ ದಾಖಲಾದ ಅಥವಾ ಕಡತಕ್ಕೆ ಸೇರಿಸಿದ ಯಾವುದೇ ದಾಖಲೆ, ಪತ್ರ ವ್ಯವಹಾರ, ನಕ್ಷೆ ಅಥವಾ ಇತರ ದಸ್ತಾವೇಜನ್ನು ಹಾಜರುಪಡಿಸುವಂತೆ;

(ಬಿ) ಈ ಅಧಿನಿಯಮದ ಅನುಷ್ಠಾನಕ್ಕೆ ಸಂಬಂಧಪಟ್ಟ ಯಾವುದೇ ವಿಷಯಕ್ಕೆ ಸಂಬಂಧಪಡುವ ಅಥವಾ ಸಂಬಂಧಿಸಿದ ಯಾವುದೇ ವಿವರಪಟ್ಟಿಕೆ, ನಕ್ಷೆ, ಅಂದಾಜುಪಟ್ಟಿ, ವಿವರಣಾಪತ್ರ, ಲೆಕ್ಕಪತ್ರ ಅಥವಾ ಅಂಕಿ ಅಂಶಗಳನ್ನು ಒದಗಿಸುವಂತೆ;

(ಸಿ) ಈ ಅಧಿನಿಯಮದ ಅನುಷ್ಠಾನಕ್ಕೆ ಸಂಬಂಧಪಡುವ ಅಥವಾ ಸಂಬಂಧಿಸಿದ ಯಾವುದೇ ವಿಷಯದ ಮೇಲೆ ತಾವೇ ಸ್ವತಃ ವರದಿಯನ್ನು ಒದಗಿಸುವಂತೆ ಅಥವಾ ಅವರ ಯಾರೇ ಅಧೀನ ಅಧಿಕಾರಿಯಿಂದ ವರದಿಯನ್ನು ತರಿಸಿಕೊಂಡು ಅದರ ಮೇಲೆ ತಮ್ಮ ಸ್ವಂತ ಅಭಿಪ್ರಾಯದೊಂದಿಗೆ ಒದಗಿಸುವಂತೆ ಅಗತ್ಯಪಡಿಸಬಹುದು.

(2) ಇದರಲ್ಲಿ ಇನ್ನು ಮುಂದೆ ಉಪಬಂಧಿಸಿರುವಂತೆ ಹೊರತು, ಅಂಥ ಪ್ರತಿಯೊಂದು ಕೋರಿಕೆಯನ್ನು ಅನುಚಿತ ವಿಳಂಬವಿಲ್ಲದೆ ಆಯುಕ್ತರು ಪಾಲಿಸತಕ್ಕದ್ದು ಮತ್ತು ಅಂಥ ಕೋರಿಕೆಗೆ ಅನುಗುಣವಾಗಿ ಆಯುಕ್ತರು ಮಾಡಿದ ಯಾವುದೇ ಆದೇಶವನ್ನು ಪಾಲಿಸುವುದು ನಗರಪಾಲಿಕೆಯ ಪ್ರತಿಯೊಬ್ಬ ಅಧಿಕಾರಿಯ ಮತ್ತು ನೌಕರನ ಕರ್ತವ್ಯವಾಗಿರತಕ್ಕದ್ದು:

ಪರಂತು, ಮೇಲೆ ತಿಳಿಸಿದಂತೆ ಅಂಥ ಕಡ್ಡಾಯ ಕೋರಿಕೆಯನ್ನು ಮಾಡಿದ ಮೇಲೆ, ಆಯುಕ್ತರು ಅದನ್ನು ಕೂಡಲೇ ಪಾಲಿಸುವುದು ನಗರಪಾಲಿಕೆಯ ಅಥವಾ ಸಾರ್ವಜನಿಕರ ಹಿತಾಸಕ್ತಿಯ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡುತ್ತದೆಂದು ಘೋಷಿಸಿದರೆ, ಮತ್ತು ಆ ಪ್ರಶ್ನೆಯನ್ನು ಮೇಯರ್‌ರವರಿಗೆ ಒಪ್ಪಿಸಬೇಕೆಂದು ಅಗತ್ಯಪಡಿಸಿದರೆ, ಸಂದರ್ಭಾನುಸಾರ ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ಆ ಪ್ರಶ್ನೆಯನ್ನು ಮೇಯರ್‌ರವರಿಗೆ ಒಪ್ಪಿಸತಕ್ಕದ್ದು ಮತ್ತು ಮೇಯರ್‌ರವರ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(3) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಆಯುಕ್ತರು ತಮ್ಮ ಬಳಿ ಇರುವ ಅಥವಾ ನಿಯಂತ್ರಣದಲ್ಲಿರುವ ಮತ್ತು ಸರ್ಕಾರದೊಂದಿಗೆ ನಡೆಸಿದ ಪತ್ರವ್ಯವಹಾರದ ವಸ್ತು ವಿಷಯವಾಗಿರುವ ಯಾವುದೇ ದಾಖಲೆ, ಪತ್ರ ವ್ಯವಹಾರ ಅಥವಾ ಇತರ ದಸ್ತಾವೇಜನ್ನು, ನಗರಪಾಲಿಕೆಯ ಹಿತದೃಷ್ಟಿಯಿಂದ ಹಾಜರುಪಡಿಸುವುದು ಅಗತ್ಯವೆಂದು ಪರಿಗಣಿಸಿದ ಸಂದರ್ಭಗಳಲ್ಲಿ ಹೊರತು ಅವರು ಅವುಗಳನ್ನು ಹಾಜರುಪಡಿಸತಕ್ಕದ್ದಲ್ಲ ಅಥವಾ ಹಾಜರುಪಡಿಸುವಂತೆ ನಗರಪಾಲಿಕೆಯು, ಸ್ಥಾಯೀ ಸಮಿತಿಯು ಅಥವಾ ಇತರ ಯಾವುದೇ ಸಮಿತಿಯು, ಮೇಯರ್‌ರವರು ಅಥವಾ ಉಪಮೇಯರ್‌ರವರು ಆಯುಕ್ತರನ್ನು ಕೇಳತಕ್ಕದ್ದಲ್ಲ.

**75. ಇತರ ಸ್ಥಳೀಯ ಪ್ರಾಧಿಕಾರಗಳೊಂದಿಗೆ ಜಂಟಿ ವ್ಯವಹಾರ.–** (1) ನಗರಪಾಲಿಕೆಯು ಒಂದು ಸ್ಥಳೀಯ ಪ್ರಾಧಿಕಾರದೊಂದಿಗೆ ಅಥವಾ ಸ್ಥಳೀಯ ಪ್ರಾಧಿಕಾರಗಳ ಕೂಟದೊಂದಿಗೆ,–

(ಎ) ಅವು ಯಾವ ಉದ್ದೇಶಗಳಲ್ಲಿ ಜಂಟಿಯಾಗಿ ಹಿತಾಸಕ್ತಿ ಹೊಂದಿವೆಯೋ ಆ ಯಾವುವೇ ಉದ್ದೇಶಗಳಿಗಾಗಿ ಆಯಾಯ ನಿಕಾಯಗಳ ಪೈಕಿಯಿಂದ ಒಂದು ಜಂಟಿ ಸಮಿತಿಯನ್ನು ನೇಮಿಸುವಲ್ಲಿ ಮತ್ತು ಅಂತಹ ಸಮಿತಿಯ ಅಧ್ಯಕ್ಷರನ್ನು ನೇಮಿಸುವಲ್ಲಿ;

(ಬಿ) ಯಾವುದೇ ಜಂಟಿ ಕಾಮಗಾರಿಯ ನಿರ್ಮಾಣ ಮತ್ತು ಅದರ ಮುಂದಿನ ನಿರ್ವಹಣೆಗಾಗಿ ಅಂಥ ಪ್ರತಿಯೊಂದು ನಿಕಾಯವನ್ನು ಬದ್ಧಗೊಳಿಸುವ ನಿಬಂಧನೆಗಳನ್ನು ರೂಪಿಸುವ ಅಧಿಕಾರಗಳನ್ನು ಮತ್ತು ಅಂಥ ನಿಕಾಯಗಳಲ್ಲಿ ಯಾವುದೇ ನಿಕಾಯವು ಚಲಾಯಿಸಬಹುದಾದಂಥ ಯಾವುದೇ ಅಧಿಕಾರವನ್ನು ಅಂಥ ಯಾವುದೇ ಸಮಿತಿಗೆ ನೀಡುವಲ್ಲಿ; ಮತ್ತು

(ಸಿ) ಯಾವ ಉದ್ದೇಶಕ್ಕಾಗಿ ಸಮಿತಿಯನ್ನು ನೇಮಿಸಲಾಗಿದೆಯೋ ಆ ಉದ್ದೇಶಕ್ಕೆ ಸಂಬಂಧಿಸಿದಂತೆ ಅಂಥ ಯಾವುದೇ ಸಮಿತಿಗಳ ವ್ಯವಹರಣೆಗಳನ್ನು ವಿನಿಯಮಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸುವಲ್ಲಿ ಮತ್ತು ಮಾರ್ಪಡಿಸುವಲ್ಲಿ

– ಸೇರಬಹುದು ಮತ್ತು ಸರ್ಕಾರವು ಸೇರುವಂತೆ ಅಗತ್ಯಪಡಿಸಿದರೆ ಸೇರತಕ್ಕದ್ದು.

(2) ನಗರಪಾಲಿಕೆಯು ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ (1)ನೇ ಉಪ–ಪ್ರಕರಣದ ಉಪಬಂಧಗಳ ಮೇರೆಗೆ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದ ಸಹಮತಿಯನ್ನು ಕೋರಿದಾಗ ಮತ್ತು ಅಂಥ ಇತರ ಸ್ಥಳೀಯ ಪ್ರಾಧಿಕಾರವು ಸಹಮತಿಯನ್ನು ನೀಡಲು ನಿರಾಕರಿಸಿದಾಗ, ಸರ್ಕಾರವು ಮೇಲೆ ಹೇಳಿದ ವಿಷಯದಲ್ಲಿ ಅಂಥ ಇತರ ಸ್ಥಳೀಯ ಪ್ರಾಧಿಕಾರದ ಸಹಮತಿಯನ್ನು ನೀಡುವಂತೆ ಅಗತ್ಯಪಡಿಸಿ ತಾನು ಸೂಕ್ತವೆಂದು ಭಾವಿಸಬಹುದಾದಂತಹ ಆದೇಶಗಳನ್ನು ಹೊರಡಿಸಬಹುದು ಮತ್ತು ಅಂಥ ಇತರ ಸ್ಥಳೀಯ ಪ್ರಾಧಿಕಾರವು ಅಂಥ ಆದೇಶಗಳನ್ನು ಪಾಲಿಸತಕ್ಕದ್ದು.

(3) ನಗರಪಾಲಿಕೆಯ ಮತ್ತು ಈ ಪ್ರಕರಣದ ಮೇರೆಗೆ ನಗರಪಾಲಿಕೆಯೊಂದಿಗೆ ಸೇರಿರುವ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದ ನಡುವೆ ಯಾವುದೇ ಭಿನ್ನಾಭಿಪ್ರಾಯ ಉಂಟಾದರೆ ಆ ವಿಷಯವನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಅದರ ಮೇಲಿನ ಸರ್ಕಾರದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು ಹಾಗೂ ಎರಡೂ ಪಕ್ಷಕಾರರು ಅದಕ್ಕೆ ಬದ್ಧವಾಗಿರತಕ್ಕದ್ದು.

**76. ನಗರಪಾಲಿಕೆಯ ವ್ಯವಹರಣೆಗಳು, ಮುಂತಾದವುಗಳು, ಅದರ ಸದಸ್ಯರ ಅನರ್ಹತೆ, ಇತ್ಯಾದಿಗಳಿಂದಾಗಿ ನಿರರ್ಥಕಗೊಳ್ಳತಕ್ಕದ್ದಲ್ಲ.–** (1) ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಕಾರ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ವ್ಯವಹರಣೆಯನ್ನು,–

(ಎ) ನಗರಪಾಲಿಕೆಯಲ್ಲಿ ಅಥವಾ ಯಾವುದೇ ಸ್ಥಾಯಿ ಸಮಿತಿಯಲ್ಲಿ ಯಾವುದೇ ಖಾಲೀ ಸ್ಥಾನ ಇರುವ ಅಥವಾ ಅದರ ರಚನೆಯಲ್ಲಿ ಯಾವುದೇ ನ್ಯೂನತೆ ಇರುವ; ಅಥವಾ

(ಬಿ) ಪ್ರಕರಣದ ಗುಣಾವಗುಣಗಳಿಗೆ ಬಾಧಕವಾಗದಂಥ ಕಾರ್ಯ ಅಥವಾ ವ್ಯವಹರಣೆಯಲ್ಲಿ ಯಾವುದೇ ದೋಷ ಅಥವಾ ಅಕ್ರಮತೆ ಇರುವ

– ಕಾರಣ ಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ.

(2) ಕೌನ್ಸಿಲರ್ ಆಗಿ, ಮೇಯರ್ ಆಗಿ ಅಥವಾ ಉಪಮೇಯರ್ ಆಗಿ ಅಥವಾ ಈ ಅಧಿನಿಯಮದ ಮೇರೆಗೆ ನೇಮಕಗೊಂಡ ಯಾವುದೇ ಸ್ಥಾಯೀ ಸಮಿತಿಯ ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯ ಅನರ್ಹತೆಯು ಅಥವಾ ಅವರ ಚುನಾವಣೆಯಲ್ಲಿನ ಅಥವಾ ನೇಮಕದಲ್ಲಿನ ನ್ಯೂನತೆಯು ಅಂಥ ವ್ಯಕ್ತಿಯು ಪಾಲ್ಗೊಂಡಿದ್ದ ನಗರಪಾಲಿಕೆಯ ಅಥವಾ ಯಾವುದೇ ಸ್ಥಾಯೀ ಸಮಿತಿಯ ಯಾವುದೇ ಕಾರ್ಯವನ್ನು ಅಥವಾ ವ್ಯವಹರಣೆಯನ್ನು ನಿರರ್ಥಕಗೊಳಿಸುವುದೆಂದು ಭಾವಿಸತಕ್ಕದ್ದಲ್ಲ ಪರಂತು, ಅಂಥ ಕಾರ್ಯದ ಅಥವಾ ವ್ಯವಹರಣೆಗಳ ಪಕ್ಷಕಾರರಾಗಿರುವ ವ್ಯಕ್ತಿಗಳಲ್ಲಿ ಬಹುತೇಕರು ಆ ಕಾರ್ಯ ಮಾಡಲು ಹಕ್ಕುಳ್ಳವರು ಆಗಿದ್ದಿರಬೇಕು.

**77. ವ್ಯವಹರಣೆಗಳನ್ನು ದಾಖಲಿಸುವುದು.–** ನಗರಪಾಲಿಕೆಯ ಮತ್ತು ಸ್ಥಾಯೀ ಸಮಿತಿಗಳ ಸಭೆಗಳ ವ್ಯವಹರಣೆಯನ್ನು ಕೌನ್ಸಿಲ್ ಕಾರ್ಯದರ್ಶಿಯವರು ದಾಖಲು ಮಾಡತಕ್ಕದ್ದು ಮತ್ತು ಸ್ಥಿರೀಕರಣಕ್ಕಾಗಿ ಮುಂದಿನ ಸಭೆಯ ಮುಂದೆ ಇಡತಕ್ಕದ್ದು.

**78. ಸಭೆಗಳ ವ್ಯವಹರಣೆಗಳು ತದ್ವಿರುದ್ಧವಾಗಿರುವುದು ರುಜುವಾತಾಗುವವರೆಗೆ ಸರಿಯಾದವುಗಳು ಮತ್ತು ಸಿಂಧುವಾದವುಗಳು ಆಗಿರತಕ್ಕದ್ದು.–** ತದ್ವಿರುದ್ಧವಾಗಿರುವುದು ರುಜುವಾತಾಗುವವರೆಗೆ, ಈ ಅಧಿನಿಯಮದ ಅಥವಾ ನಿಯಮಗಳಿಗೆ ಅನುಸಾರವಾಗಿ ಯಾವ ಸಭೆಯ ವ್ಯವಹರಣೆಗಳಿಗೆ ಸಂಬಂಧಿಸಿದಂತೆ ನಡವಳಿಯನ್ನು ಮಾಡಲಾಗಿದೆಯೋ ಮತ್ತು ಅದಕ್ಕೆ ಸಹಿ ಮಾಡಲಾಗಿದೆಯೋ ನಗರಪಾಲಿಕೆಯ ಅಥವಾ ಸ್ಥಾಯೀ ಸಮಿತಿಯ ಅಂಥ ಪ್ರತಿಯೊಂದು ಸಭೆಯನ್ನು ಕ್ರಮಬದ್ಧವಾಗಿ ಕರೆಯಲಾಗಿದೆ ಮತ್ತು ನಡೆಸಲಾಗಿದೆ ಮತ್ತು ಅದು ಎಲ್ಲ ನ್ಯೂನತೆಗಳಿಂದ ಹಾಗೂ ಅಕ್ರಮತೆಗಳಿಂದ ಮುಕ್ತವಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಆ ಸಭೆಯ ಎಲ್ಲ ಸದಸ್ಯರು ಕ್ರಮಬದ್ಧವಾಗಿ ಅರ್ಹರಾಗಿದ್ದಾರೆಂದು ಭಾವಿಸತಕ್ಕದ್ದು ಮತ್ತು ಆ ವ್ಯವಹರಣೆಗಳು ಸ್ಥಾಯೀ ಸಮಿತಿಯ ವ್ಯವಹರಣೆಗಳಾಗಿದ್ದಲ್ಲಿ ಅಂಥ ಸ್ಥಾಯೀ ಸಮಿತಿಯು ಕ್ರಮಬದ್ಧವಾಗಿ ರಚಿತವಾಗಿದೆ ಮತ್ತು ನಡವಳಿಯಲ್ಲಿ ಉಲ್ಲೇಖಿಸಲಾದ ವಿಷಯಗಳ ಬಗ್ಗೆ ವ್ಯವಹರಿಸಲು ಅದು ಅಧಿಕಾರ ಹೊಂದಿತ್ತು ಎಂದು ಭಾವಿಸತಕ್ಕದ್ದು.

**79. ಚರ್ಚೆಯಲ್ಲಿ ಹಾಜರಿರಲು ಮತ್ತು ಭಾಗವಹಿಸಲು ಆಯುಕ್ತರಿಗಿರುವ ಹಕ್ಕು, ಆದರೆ ನಿರ್ಣಯವನ್ನು ಮಂಡಿಸಲು ಅಥವಾ ಮತ ನೀಡಲು ಹಕ್ಕು ಇರತಕ್ಕದ್ದಲ್ಲ.–** (1) ಆಯುಕ್ತರು ನಗರಪಾಲಿಕೆಯ ಅಥವಾ ಯಾವುದೇ ಸ್ಥಾಯೀ ಸಮಿತಿಯ ಸಭೆಗಳಿಗೆ ಹಾಜರಾಗಲು ಮತ್ತು ಚರ್ಚೆಯಲ್ಲಿ ಭಾಗವಹಿಸಲು ಹಕ್ಕನ್ನು ಹೊಂದಿರತಕ್ಕದ್ದು ಆದರೆ ಯಾವುದೇ ನಿರ್ಣಯವನ್ನು ಮಂಡಿಸಲು ಅಥವಾ ಮತ ನೀಡಲು ಹಕ್ಕನ್ನು ಹೊಂದಿರತಕ್ಕದ್ದಲ್ಲ.

(2) ನಗರಪಾಲಿಕೆಯ ಅಥವಾ ಸ್ಥಾಯಿ ಸಮಿತಿಯ ಯಾವುದೇ ಸಭೆಗೆ ಹಾಜರಾಗುವಂತೆ ಮೇಯರ್‌ರವರು ಅಗತ್ಯಪಡಿಸಿದರೆ ಅವರು ಹಾಗೆ ಮಾಡಬಹುದು.

**80. ಕೌನ್ಸಿಲರುಗಳು ಅವರು ಆರ್ಥಿಕ ಹಿತಾಸಕ್ತಿ ಹೊಂದಿರುವಂಥ ಪ್ರಶ್ನೆಗಳ ಮೇಲಿನ ಚರ್ಚೆಯಲ್ಲಿ ಭಾಗವಹಿಸದಿರುವುದು ಮತ್ತು ಮತ ನೀಡದಿರುವುದು.–** (1) ಯಾರೇ ಕೌನ್ಸಿಲರ್‌ನು, ನಗರಪಾಲಿಕೆಯ ಅಥವಾ ಸ್ಥಾಯೀ ಸಮಿತಿಯ ಸಭೆಯಲ್ಲಿ ಪರಿಶೀಲನೆಗಾಗಿ ಬರುವ ಯಾವುದೇ ಪ್ರಶ್ನೆಯು, ಯಾವ ಪ್ರಶ್ನೆಯಲ್ಲಿ ಸಾರ್ವಜನಿಕರಿಗೆ ಸಾಮಾನ್ಯವಾಗಿ ಅದು ಅನ್ವಯವಾಗುವುದರ ಜೊತೆಗೆ ಸ್ವತಃ ತಾನು ಅಥವಾ ತನ್ನ ಪಾಲುದಾರನು ಯಾವುದೇ ಪ್ರತ್ಯಕ್ಷ ಅಥವಾ ಪರೋಕ್ಷ ಆರ್ಥಿಕ ಹಿತಾಸಕ್ತಿಯನ್ನು ಹೊಂದಿರುವನೋ ಅಂಥ ಪ್ರಶ್ನೆ ಆಗಿದ್ದರೆ ಆ ಪ್ರಶ್ನೆಯ ಮೇಲೆ ಮತ ನೀಡತಕ್ಕದ್ದಲ್ಲ ಅಥವಾ ಅದರ ಚರ್ಚೆಯಲ್ಲಿ ಭಾಗವಹಿಸತಕ್ಕದ್ದಲ್ಲ.

(2) ಮೇಯರ್ ಅಥವಾ ಅಧ್ಯಕ್ಷರು ಯಾರೇ ಕೌನ್ಸಿಲರ್‌ನು ಅಂಥ ಹಿತಾಸಕ್ತಿಯನ್ನು ಹೊಂದಿರುವನೆಂದು ನಂಬಲಾದ ಯಾವುದೇ ವಿಷಯದ ಮೇಲೆ ಮತ ನೀಡದಂತೆ ಅಥವಾ ಅದರ ಚರ್ಚೆಯಲ್ಲಿ ಭಾಗವಹಿಸದಂತೆ ಆ ಕೌನ್ಸಿಲರನನ್ನು ಪ್ರತಿಬಂಧಿಸಬಹುದು ಅಥವಾ ಅವರು ಆ ಚರ್ಚೆಯಾಗುವಾಗ ಗೈರುಹಾಜರಾಗುವಂತೆ ಆ ಕೌನ್ಸಿಲರ್‌ನನ್ನು ಅಗತ್ಯಪಡಿಸಬಹುದು.

(3) ಅಂಥ ಕೌನ್ಸಿಲರ್‌ನು ಮೇಯರ್‌ರವರ ಅಥವಾ ಅಧ್ಯಕ್ಷರ ತೀರ್ಮಾನವನ್ನು ಪ್ರಶ್ನಿಸಬಹುದು. ಆಮೇಲೆ ಮೇಯರ್ ಅಥವಾ ಅಧ್ಯಕ್ಷರು ಪ್ರಶ್ನೆಯನ್ನು ಮತಕ್ಕೆ ಹಾಕತಕ್ಕದ್ದು ಮತ್ತು ಸಭೆಯ ತೀರ್ಮಾನವು ಅಂತಿಮವಾದುದು ಆಗಿರತಕ್ಕದ್ದು.

(4) ಚರ್ಚೆ ನಡೆಯುತ್ತಿರುವ ಯಾವುದೇ ವಿಷಯದಲ್ಲಿ ಮೇಯರ್ ಅಥವಾ ಅಧ್ಯಕ್ಷರು ಅಂಥ ಹಿತಾಸಕ್ತಿಯನ್ನು ಹೊಂದಿರುವುದಾಗಿ ಸಭೆಯಲ್ಲಿ ಹಾಜರಿರುವ ಯಾರೇ ಕೌನ್ಸಿಲರ್‌ನು ಆರೋಪಿಸಿದರೆ ಅಂಥ ಕೌನ್ಸಿಲರ್‌ನು ತಂದ ನಿಲುವಳಿ ಸೂಚನೆಯು ಅಂಗೀಕೃತವಾದರೆ ಆ ಚರ್ಚೆಯು ಆಗುವಾಗ ಆ ಸಭೆಯಿಂದ ಸ್ವತಃ ಗೈರುಹಾಜರಾಗುವಂತೆ ಮೇಯರ್ ಅಥವಾ ಅಧ್ಯಕ್ಷರನ್ನು ಅಗತ್ಯಪಡಿಸಬಹುದು.

(5) (3)ನೇ ಉಪ-ಪ್ರಕರಣದಲ್ಲಿ ತಿಳಿಸಿದ ಪ್ರಶ್ನೆಯ ಮೇಲೆ ಸಂಬಂಧಿಸಿದ ಕೌನ್ಸಿಲರನು ಮತನೀಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು (4)ನೇ ಉಪ ಪ್ರಕರಣದಲ್ಲಿ ತಿಳಿಸಿದ ನಿಲುವಳಿ ಸೂಚನೆಯ ಮೇಲೆ ಸಂಬಂಧಿಸಿದ ಮೇಯರ್ ಅಥವಾ ಅಧ್ಯಕ್ಷರು ಮತ ನೀಡಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

**81. ಸರ್ಕಾರಕ್ಕೆ ಆಡಳಿತ ವರದಿಯನ್ನು ಸಲ್ಲಿಸುವುದು.–** (1) ಪ್ರತಿವರ್ಷದ ಏಪ್ರಿಲ್ ತಿಂಗಳ ಮೊದಲ ದಿನದ ನಂತರ ಆದಷ್ಟು ಬೇಗನೆ ಮತ್ತು ಸರ್ಕಾರವು ಗೊತ್ತುಪಡಿಸಬಹುದಾದಂಥ ದಿನಾಂಕಕ್ಕೆ ತಡವಾಗದಂತೆ ನಗರಪಾಲಿಕೆಯು, ಸರ್ಕಾರವು ನಿರ್ದೇಶಿಸಬಹುದಾದಂಥ ನಮೂನೆಯಲ್ಲಿ ಹಿಂದಿನ ವರ್ಷದ ಸವಿವರವಾದ ಆಡಳಿತ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಅಂಥ ವರದಿಯನ್ನು ಆಯುಕ್ತರು ಸಿದ್ಧಪಡಿಸತಕ್ಕದ್ದು ಮತ್ತು ಆ ವರದಿಯನ್ನು ನಗರಪಾಲಿಕೆಯು ಪರಿಶೀಲಿಸಿ ಅದರ ಮೇಲೆ ತನ್ನ ನಿರ್ಣಯಗಳು ಯಾವುದಾದರೂ ಇದ್ದರೆ ಅವುಗಳೊಂದಿಗೆ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು.

(3) ಆಡಳಿತ ವರದಿಯ ಪ್ರತಿಗಳನ್ನು ನಗರಪಾಲಿಕೆಯ ಕಛೇರಿಯಲ್ಲಿ ಮಾರಾಟಕ್ಕೆ ಇಡತಕ್ಕದ್ದು.

## ಅಧ್ಯಾಯ – VII

### ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರು ಹಾಗೂ ಅವರ ನೇಮಕ ಮತ್ತು ಸೇವಾ ಷರತ್ತುಗಳು

**82. ಇಂಜಿನಿಯರ್, ಆರೋಗ್ಯಾಧಿಕಾರಿ, ಮೊದಲಾದವರ ನೇಮಕ.–** (1) ನಗರಪಾಲಿಕೆಯ ದಕ್ಷ ಕಾರ್ಯನಿರ್ವಹಣೆಗಾಗಿ ಸರ್ಕಾರವು, ಇಂಜಿನಿಯರ್, ಆರೋಗ್ಯಾಧಿಕಾರಿ, ರೆವಿನ್ಯೂ ಅಧಿಕಾರಿ, ಮುಖ್ಯ ಲೆಕ್ಕಾಧಿಕಾರಿ ಮತ್ತು ಕೌನ್ಸಿಲ್ ಕಾರ್ಯದರ್ಶಿಯಾಗಿರಲು ಸೂಕ್ತವೆಂದು ತಾನು ಪರಿಗಣಿಸುವಂಥ ರಾಜ್ಯದ ಸಿವಿಲ್ ಸೇವೆಗಳ ಅಧಿಕಾರಿಗಳನ್ನು ಪ್ರತಿಯೊಂದು ನಗರಪಾಲಿಕೆಗೆ ನೇಮಕಮಾಡತಕ್ಕದ್ದು ಮತ್ತು ಅಂಥ ಅಧಿಕಾರಿಗಳು ನಗರಪಾಲಿಕೆಯಲ್ಲಿ ಆಯಾಯ ವಿಭಾಗಗಳ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಆಯುಕ್ತರಿಗೆ ಅಧೀನರಾಗಿರತಕ್ಕದ್ದು. ಸರ್ಕಾರವು ಒಬ್ಬರು ಅಥವಾ ಹೆಚ್ಚು ಉಪ ಆಯುಕ್ತರುಗಳನ್ನು ಮತ್ತು ಸಹಾಯಕ ಆಯುಕ್ತರುಗಳನ್ನು ನೇಮಕ ಮಾಡಬಹುದು. ಅವರು ನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಅವರು ಆಯುಕ್ತರಿಗೆ ಅಧೀನರಾಗಿರತಕ್ಕದ್ದು.

(2) ಸರ್ಕಾರವು, ಮೇಯರ್ ಅವರೊಡನೆ ಸಮಾಲೋಚಿಸಿ ಸಹಾಯಕ ಆಯುಕ್ತರ ದರ್ಜೆಗೆ ಕಡಿಮೆ ಅಲ್ಲದ ಅಧಿಕಾರಿಯನ್ನು ಕೌನ್ಸಿಲ್ ಕಾರ್ಯದರ್ಶಿಯಾಗಿ ನೇಮಕಮಾಡತಕ್ಕದ್ದು. ಹಾಗೆ ನೇಮಕಗೊಂಡ ಅಧಿಕಾರಿಯು ಸಾಮಾನ್ಯವಾಗಿ ಮೂರು ವರ್ಷಗಳ ಅವಧಿಗೆ ಪ್ರತಿನಿಯೋಜನೆಯ ಮೇಲೆ ಇರತಕ್ಕದ್ದು ಮತ್ತು ನಗರಪಾಲಿಕೆಯು ತನ್ನ ಮೂರನೇ ಎರಡರಷ್ಟು ಸದಸ್ಯರ ಬಹುಮತದಿಂದ ಅವರನ್ನು ಅದಕ್ಕೂ ಮುಂಚಿತವಾಗಿಯೇ ಹಿಂದಕ್ಕೆ ಪಡೆಯಬೇಕೆಂದು ಮತ್ತು ಬೇರೊಬ್ಬ ವ್ಯಕ್ತಿಯನ್ನು ನೇಮಕಮಾಡಬೇಕೆಂದು ಅಪೇಕ್ಷಿಸಿದರೆ ಹಾಗೆ ಮಾಡತಕ್ಕದ್ದು. ನಗರಪಾಲಿಕೆಯ ಮತ್ತು ಸ್ಥಾಯೀ ಸಮಿತಿಗಳ ಪ್ರತಿಯೊಂದು ಸಭೆಗೆ ಹಾಜರಾಗುವುದು ಕೌನ್ಸಿಲ್ ಕಾರ್ಯದರ್ಶಿಯ ಕರ್ತವ್ಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅವರಿಗೆ ವಿಧಿಸಿದಂಥ ಇತರ ಕರ್ತವ್ಯಗಳನ್ನು ಅವರು ನೆರವೇರಿಸತಕ್ಕದ್ದು.

(3) (1)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಅಧಿಕಾರಿಗಳು ನಗರಪಾಲಿಕೆಯ ಪೂರ್ಣಕಾಲಿಕ ಅಧಿಕಾರಿಗಳಾಗಿರತಕ್ಕದ್ದು ಮತ್ತು ಅದರ ಹುದ್ದೆಗಳಿಗೆ ಸಂಬಂಧಪಡದ ಯಾವುದೇ ಕೆಲಸವನ್ನು ಕೈಗೊಳ್ಳತಕ್ಕದ್ದಲ್ಲ.

(4) (1)ನೇ ಮತ್ತು (2)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಪ್ರತಿಯೊಬ್ಬ ಸರ್ಕಾರಿ ಅಧಿಕಾರಿಗೆ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ಸಂಬಳವನ್ನು ನಗರಪಾಲಿಕೆಯು ಸಂದಾಯ ಮಾಡತಕ್ಕದ್ದು. ಅದನ್ನು ನಗರಪಾಲಿಕೆಯ ನಿಧಿಯಿಂದ ಭರಿಸತಕ್ಕದ್ದು ಮತ್ತು ಅವರು ಯಾವ ಸರ್ಕಾರಿ ಸೇವೆಗೆ ಸೇರಿರುವರೋ ಆ ಸೇವೆಗೆ ಅನ್ವಯವಾಗುವ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ನಿಯಮಗಳಿಗೆ ಮತ್ತು ವಿನಿಯಮಗಳಿಗೆ ಅನುಸಾರವಾಗಿ ರಜೆ ಮತ್ತು ಇತರ ಸವಲತ್ತುಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಅಂಥ ನಿಯಮಗಳ ಮತ್ತು ವಿನಿಯಮಗಳ ಮೇರೆಗೆ ಅವರು ಅಥವಾ ಅವರ ಪರವಾಗಿ ಸಂದಾಯ ಮಾಡಬೇಕಾದ ಅವರ ರಜಾ ಭತ್ಯಗಳು, ನಿವೃತ್ತಿ ವೇತನ ಮತ್ತು ಭವಿಷ್ಯ ನಿಧಿ ಬಾಬಿಗೆ ನಗರಪಾಲಿಕೆಯು ಅಂಥ ವಂತಿಗೆಯನ್ನು ನೀಡತಕ್ಕದ್ದು.

**83. ನಗರಪಾಲಿಕೆಯ ಅಧೀನದಲ್ಲಿರುವ ಕೆಲವು ಹುದ್ದೆಗಳಿಗೆ ಕರ್ನಾಟಕ ಪೌರಾಡಳಿತ ಸೇವೆಯಿಂದ ನೇಮಕ ಮಾಡುವುದು.–** (1) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಕರ್ನಾಟಕ ಪೌರಾಡಳಿತ ಸೇವೆಯಲ್ಲಿ ಸೇರಿಸಲಾಗಿರುವ ಪ್ರತಿಯೊಂದು ನಗರಪಾಲಿಕೆಯ ಅಧೀನದಲ್ಲಿರುವಂಥ ಹುದ್ದೆಗಳನ್ನು ಸರ್ಕಾರವು ಕರ್ನಾಟಕ ಪೌರಾಡಳಿತ ಸೇವೆಗೆ ಸೇರಿರುವ ಅಧಿಕಾರಿಗಳನ್ನು ನೇಮಕ ಮಾಡುವ ಮೂಲಕ ಭರ್ತಿಮಾಡತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ಕರ್ನಾಟಕ ಪೌರಾಡಳಿತ ಸೇವೆಯ ಅಧಿಕಾರಿಗಳಿಗೆ, [1][ಅವರಿಗೆ][1] ಅನ್ವಯವಾಗುವ ನೇಮಕಾತಿ ಮತ್ತು ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ಉಪಬಂಧಗಳಿಗೆ ಒಳಪಟ್ಟು, ನಗರಪಾಲಿಕೆಯ ಅಧೀನದಲ್ಲಿನ ಅವರ ಸೇವಾ ಅವಧಿಯವರೆಗೆ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ, ವಿನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳು ಅನ್ವಯವಾಗತಕ್ಕದ್ದು.

1. 1990ರ ಅಧಿನಿಯಮ ಸಂಖ್ಯೆ 14ರ ಮೂಲಕ 2.4.1992 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಅಂತ್ಯದಲ್ಲಿದೆ.

(3) ಸಂಬಳಗಳು, ಭತ್ಯೆಗಳು, ನಿವೃತ್ತಿ ವೇತನ, ಭವಿಷ್ಯನಿಧಿ, ಉಪದಾನಗಳಿಗೆ ಸಂಬಂಧಿಸಿದ ವೆಚ್ಚವನ್ನು ಭರಿಸಲು ಪ್ರತಿಯೊಂದು ನಗರಪಾಲಿಕೆಯು ತನ್ನ ರಾಜಸ್ವದಲ್ಲಿ ಸರ್ಕಾರವು ಆದೇಶದ ಮೂಲಕ ನಿರ್ಧರಿಸಬಹುದಾದಂಥ ಶೇಕಡಾ ಪ್ರಮಾಣವನ್ನು, ಅಂಥ ರೀತಿಯಲ್ಲಿ ಮತ್ತು ಅಂಥ

ಕಾಲಗಳಲ್ಲಿ ವಂತಿಗೆ ನೀಡತಕ್ಕದ್ದು ಮತ್ತು ನಗರ ಪಾಲಿಕೆಯ ಅಧೀನದಲ್ಲಿ ಸೇವೆ ಸಲ್ಲಿಸುತ್ತಿರುವ 82ನೇ ಪ್ರಕರಣದಲ್ಲಿ ಉಲ್ಲೇಖಿಸಿರುವ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳಿಗೆ ಸಂದಾಯ ಮಾಡಬೇಕಾದ ಇತರ ಅವಶ್ಯಕ ವೆಚ್ಚಗಳನ್ನು ಆಯುಕ್ತರು ಭರಿಸತಕ್ಕದ್ದು.

(4) (3)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಮೊಬಲಗನ್ನು ನಗರಪಾಲಿಕೆಯು ಸಂದಾಯ ಮಾಡಲು ತಪ್ಪಿದರೆ, ಸರ್ಕಾರವು ನಗರಪಾಲಿಕೆಯ ನಿಧಿಯ ಅಭಿರಕ್ಷೆಯನ್ನು ಹೊಂದಿರುವ ಅಧಿಕಾರಿಗೆ, ಅಂಥ ಮೊಬಲಗನ್ನು ಸಂದಾಯ ಮಾಡುವಂತೆ ಅಥವಾ ಅವರ ವಶದಲ್ಲಿರುವ ನಗರಪಾಲಿಕೆಯ ನಿಧಿಯ ಶಿಲ್ಕಿನಿಂದ ಆ ಮೊಬಲಗಿನಲ್ಲಿ ಎಷ್ಟನ್ನು ಸಂದಾಯ ಮಾಡಲು ಸಾಧ್ಯವೋ ಅಷ್ಟು ಮೊಬಲಗನ್ನು ಸಂದಾಯ ಮಾಡುವಂತೆ ನಿರ್ದೇಶಿಸಬಹುದು.

**84. ನಗರಪಾಲಿಕೆಯ ಸಿಬ್ಬಂದಿ ವರ್ಗದಲ್ಲಿನ ಇತರ ಹುದ್ದೆಗಳಿಗೆ ನೇಮಕ.–** (1) 85ನೇ ಮತ್ತು 86ನೇ ಪ್ರಕರಣಗಳ ಉಪಬಂಧಗಳಿಗೆ ಒಳಪಟ್ಟು, ಕರ್ನಾಟಕ ಪೌರಾಡಳಿತ ಸೇವೆಯ ಕೇಡರ್‌ಗೆ ಸೇರಿರುವ ಹುದ್ದೆಗಳನ್ನು ಹೊರತುಪಡಿಸಿ ನಗರಪಾಲಿಕೆಯ ಸಿಬ್ಬಂದಿ ವರ್ಗದಲ್ಲಿನ ಹುದ್ದೆಗಳಿಗೆ ಮತ್ತು (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಹುದ್ದೆಗಳಿಗೆ ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳು ಮತ್ತು ವಿನಿಯಮಗಳಿಗನುಸಾರವಾಗಿ ಅವರ ಸೇವಾ ಅವಧಿಗೆ ನೇಮಕ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಯಾರೇ ಅಧಿಕಾರಿಯು, ಸರ್ಕಾರಿ ನೌಕರನಾಗಿದ್ದರೆ, ಅವರು ಯಾವ ಸರ್ಕಾರಿ ಸೇವೆಗೆ ಸೇರಿರುವರೋ ಆ ಸೇವೆಗೆ ಅನ್ವಯವಾಗುವ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ನಿಯಮಗಳಿಗೆ ಮತ್ತು ವಿನಿಯಮಗಳಿಗೆ ಅನುಸಾರವಾಗಿ ರಜೆ ಮತ್ತು ಇತರ ಸವಲತ್ತುಗಳಿಗೆ ಅವರು ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಅಂಥ ನಿಯಮಗಳು ಮತ್ತು ವಿನಿಯಮಗಳ ಮೇರೆಗೆ ಅವರು ಅಥವಾ ಅವರ ಪರವಾಗಿ ಸಂದಾಯ ಮಾಡಬೇಕಾಗಬಹುದಾದ ಸಂಬಳ, ರಜೆ ಭತ್ಯಗಳು, ನಿವೃತ್ತಿವೇತನ ಮತ್ತು ಭವಿಷ್ಯನಿಧಿ ಬಾಬಿಗೆ ನಗರಪಾಲಿಕೆಯು ಅಂಥ ವಂತಿಗೆಯನ್ನು ನೀಡತಕ್ಕದ್ದು.

**85. ವಿಶೇಷ ನೇಮಕಗಳು.–** ನಗರಪಾಲಿಕೆಯು,–

(ಎ) ನಗರದಲ್ಲಿ ಯಾವುದೇ ಅಸಾಮಾನ್ಯ ಮೃತ್ಯು ಸಂಭವಿಸಿರುವುದಕ್ಕೆ ಅಥವಾ ಯಾವುದೇ ಅಪಾಯಕಾರಿ ರೋಗವು ಹರಡಿರುವುದಕ್ಕೆ ಅಥವಾ ಹರಡಿರುವುದಾಗಿ ಶಂಕಿಸಿರುವುದಕ್ಕೆ ವಿಶೇಷವಾಗಿ ಗಮನ ನೀಡುವುದರೊಂದಿಗೆ ತನಿಖೆಗಳನ್ನು ನಡೆಸುವುದಕ್ಕೆ ಮತ್ತು ನಿವಾರಕ ಅಥವಾ ಪರಿಹಾರಕ ಕ್ರಮಗಳನ್ನು ಸೂಚಿಸುವ ಉದ್ದೇಶಕ್ಕಾಗಿ ವಿಶೇಷ ಆರೋಗ್ಯಾಧಿಕಾರಿಗಳನ್ನು;

(ಬಿ) ನಗರಪಾಲಿಕೆಯು ಕೈಗೊಂಡ ಯಾವುದೇ ಕಾಮಗಾರಿಯ ಯೋಜನೆಯನ್ನು ತಯಾರಿಸುವ, ಕಾರ್ಯಗತಗೊಳಿಸುವ ಅಥವಾ ಮೇಲ್ವಿಚಾರಣೆ ನಡೆಸುವ ಉದ್ದೇಶಕ್ಕಾಗಿ ಇಂಜಿನಿಯರುಗಳನ್ನು, ವಾಸ್ತುಶಿಲ್ಪಿಗಳನ್ನು ಅಥವಾ ನಗರ ಸುಧಾರಣೆ ಅಥವಾ ನಗರ ಯೋಜನಾ ತಜ್ಞರನ್ನು;

(ಸಿ) ಹೊಸ ತೆರಿಗೆಯನ್ನು ಜಾರಿಗೆ ತರುವ ಅಥವಾ ನಗರಪಾಲಿಕೆಯ ಆದಾಯ ನಿರ್ವಹಣೆಗೆ ಸಂಬಂಧಿಸಿದ ಯಾವುದೇ ಕರ್ತವ್ಯವನ್ನು ನಿರ್ವಹಿಸುವ ಉದ್ದೇಶಕ್ಕಾಗಿ ವಿಶೇಷ ರೆವಿನ್ಯೂ ಅಧಿಕಾರಿಗಳನ್ನು,

– ನೇಮಕಮಾಡಬಹುದು:

ಪರಂತು,–

(i) ಸರ್ಕಾರದ ಮಂಜೂರಾತಿ ಇಲ್ಲದೆ ಅಂಥ ಯಾವುದೇ ವಿಶೇಷ ಹುದ್ದೆಯನ್ನು ಸೃಜಿಸತಕ್ಕದ್ದಲ್ಲ.

(ii) ಅಂಥ ಯಾರೇ ಅಧಿಕಾರಿಯ ಹುದ್ದೆಯ ಅವಧಿ, ಸಂಬಳ, ಭತ್ಯಗಳು ಮತ್ತು ಆ ಹುದ್ದೆಗೆ ಅನ್ವಯಿಸುವ ಸೇವಾ ಷರತ್ತುಗಳನ್ನು, ಸರ್ಕಾರದ ಮಂಜೂರಾತಿಗೆ ಒಳಪಟ್ಟು ನಗರಪಾಲಿಕೆಯು ಗೊತ್ತುಪಡಿಸತಕ್ಕದ್ದು ಮತ್ತು ಅದೇ ರೀತಿಯ ಮಂಜೂರಾತಿ ಇಲ್ಲದೆ ಅವುಗಳನ್ನು ವ್ಯತ್ಯಸ್ಥಗೊಳಿಸತಕ್ಕದ್ದಲ್ಲ.

**86. ವಿಶೇಷ ಆರೋಗ್ಯಾಧಿಕಾರಿಗಳನ್ನು ನೇಮಕಮಾಡಲು ಸರ್ಕಾರದ ಅಧಿಕಾರ.–** ನಗರದಲ್ಲಿ ಯಾವುದೇ ಅಸಾಮಾನ್ಯ ಮೃತ್ಯು ಸಂಭವಿಸಿದ ಸಂದರ್ಭದಲ್ಲಿ ಅಥವಾ ಯಾವುದೇ ಅಪಾಯಕಾರಿ ರೋಗವು ಹರಡಿರುವ ಅಥವಾ ಹರಡಿರುವುದಾಗಿ ಶಂಕಿಸಿದ ಸಂದರ್ಭದಲ್ಲಿ, ಸರ್ಕಾರವು ಕೂಡಲೇ ಕ್ರಮಕೈಗೊಳ್ಳುವುದು ಅವಶ್ಯವೆಂದು ತಾನು ಪರಿಗಣಿಸಿದರೆ, ನಗರಪಾಲಿಕೆಯ ನಿಧಿಯ ಸಂಪೂರ್ಣ ಅಥವಾ ಭಾಗಶಃ ವೆಚ್ಚದಲ್ಲಿ ವಿಶೇಷ ಆರೋಗ್ಯಾಧಿಕಾರಿಯನ್ನು ತಾನಾಗಿಯೇ ನೇಮಕ ಮಾಡಬಹುದು:

ಪರಂತು,–

(ಎ) ಅಂಥ ನೇಮಕವು ಆರು ತಿಂಗಳಿಗೆ ಮೀರಿದ್ದಾಗಿರತಕ್ಕದ್ದಲ್ಲ; ಮತ್ತು

(ಬಿ) ಅದಕ್ಕಾಗಿ ನಗರಪಾಲಿಕೆಯು ತಿಂಗಳಿಗೆ ಐದುನೂರು ರೂಪಾಯಿಗಳಿಗಿಂತ ಹೆಚ್ಚಾಗಿ ಸಂದಾಯ ಮಾಡಲು ಬದ್ಧವಾಗಿರತಕ್ಕದ್ದಲ್ಲ.

**87. ಸರ್ಕಾರಿ ನೌಕರರಿಗೆ ಸಂಬಂಧಿಸಿದಂತೆ ವಂತಿಗೆ.–** (1) ನಗರಪಾಲಿಕೆಯ ಅಧೀನದಲ್ಲಿ ಸೇವೆ ಸಲ್ಲಿಸುತ್ತಿರುವ ಅಥವಾ ಸೇವೆ ಸಲ್ಲಿಸಿದ್ದ ಅಧಿಕಾರಿಯನ್ನು ಅಥವಾ ನೌಕರನನ್ನು ಸರ್ಕಾರದ ಸೇವೆಯಿಂದ ಅಥವಾ ಸರ್ಕಾರದ ಸೇವೆಗೆ ವರ್ಗಾಯಿಸಿದರೆ ಅಥವಾ ವರ್ಗಾಯಿಸಿದ್ದರೆ ಅಥವಾ ಅವನನ್ನು ಭಾಗಶಃ ಸರ್ಕಾರದ ಅಧೀನದಲ್ಲಿ ಮತ್ತು ಭಾಗಶಃ ನಗರಪಾಲಿಕೆಯಿಂದ ನಿಯೋಜಿಸಲಾಗಿದ್ದರೆ, ಅವನು ಸರ್ಕಾರಿ ಸೇವೆಯ ಯಾವ ಶಾಖೆಗೆ ಸೇರಿರುವನೋ ಆ ಶಾಖೆಯ ನಿಯಮಗಳು ಮತ್ತು ವಿನಿಯಮಗಳ ಮೇರೆಗೆ ಅವನು ಅಥವಾ ಅವನ ಪರವಾಗಿ ಸಂದಾಯ ಮಾಡಬೇಕಾದ ಅವನ ರಜೆ ಭತ್ಯೆಗಳು, ನಿವೃತ್ತಿವೇತನ ಮತ್ತು ಭವಿಷ್ಯನಿಧಿಯ ಬಾಬಿಗೆ ನಗರಪಾಲಿಕೆಯು ಅಂಥ ವಂತಿಗೆಯನ್ನು ನೀಡತಕ್ಕದ್ದು.

(2) ನಗರಪಾಲಿಕೆಯಿಂದ ನಿಯೋಜಿತನಾದ ಪ್ರತಿಯೊಬ್ಬ ಸರ್ಕಾರಿ ನೌಕರನು, ಅವನು ಸರ್ಕಾರಿ ಸೇವೆಯ ಯಾವ ಶಾಖೆಗೆ ಸೇರಿರುವನೋ ಆ ಶಾಖೆಯ ನಿಯಮಗಳಿಗೆ ಮತ್ತು ವಿನಿಯಮಗಳಿಗೆ ಅನುಸಾರವಾಗಿ ಸಂಬಳ, ರಜೆ ಮತ್ತು ಇತರ ಸವಲತ್ತುಗಳಿಗೆ ಹಕ್ಕುಳ್ಳವನಾಗಿರತಕ್ಕದ್ದು.

**88. ಸಿಬ್ಬಂದಿ ಅನುಸೂಚಿ.–** (1) ಯಾವ ಅಧಿಕಾರಿಗಳ ಮತ್ತು ನೌಕರರ ಪದನಾಮಗಳು ಮತ್ತು ದರ್ಜೆಗಳು ನಗರಪಾಲಿಕೆಯ ಸಿಬ್ಬಂದಿಯಾಗುವರೆಂದು ಆಯುಕ್ತರು ಅಭಿಪ್ರಾಯಪಡುವರೋ ಆ ಅಧಿಕಾರಿಗಳ ಮತ್ತು ನೌಕರರ ಪದನಾಮಗಳನ್ನು ಮತ್ತು ದರ್ಜೆಗಳನ್ನು ವಿವರಿಸುವ,

ಅವರಿಗೆ ಸಂದಾಯ ಮಾಡಬೇಕಾದ ಸಂಬಳಗಳಿಗೆ, ಫೀಜುಗಳಿಗೆ ಮತ್ತು ಭತ್ಯೆಗಳಿಗೆ ಸಂಬಂಧಿಸಿದಂತೆ ಆಯುಕ್ತರು ಪ್ರಸ್ತಾವಗಳನ್ನು ಒಳಗೊಂಡಿರುವ ಒಂದು ಅನುಸೂಚಿಯನ್ನು [1][ತೆರಿಗೆ, ಹಣಕಾಸು ಮತ್ತು ಅಪೀಲುಗಳ][1] [2][ಅಥವಾ ಸಂದರ್ಭಾನುಸಾರ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ][2] ಸ್ಥಾಯೀ ಸಮಿತಿಯ ಮುಂದೆ ಮಂಡಿಸತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದಿರುವ ಅಧಿಸೂಚನೆ ಲಭ್ಯವಾಗಿಲ್ಲ.

2. 2010 ರ ಅಧಿನಿಯಮ ಸಂಖ್ಯೆ 36 ರ ಮೂಲಕ 30.7.2010 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಸ್ಥಾಯೀ ಸಮಿತಿಯು, ಅಂಥ ಅನುಸೂಚಿಯನ್ನು ಅನುಮೋದಿಸಬಹುದು ಅಥವಾ ತಾನು ಸೂಕ್ತವೆಂದು ಆಲೋಚಿಸುವಂತೆ ಅದನ್ನು ತಿದ್ದುಪಡಿ ಮಾಡಬಹುದು ಮತ್ತು ಅದರ ಬಗ್ಗೆ ತನ್ನ ಷರಾಗಳು ಯಾವುದಾದರೂ ಇದ್ದರೆ, ಅವುಗಳೊಂದಿಗೆ ನಗರಪಾಲಿಕೆಯ ಮುಂದೆ ಅದನ್ನು ಇಡತಕ್ಕದ್ದು.

(3) ನಗರಪಾಲಿಕೆಯು ತಾನು ಸೂಕ್ತವೆಂದು ಆಲೋಚಿಸುವಂಥ ಮಾರ್ಪಾಟುಗಳೊಂದಿಗೆ ಅಥವಾ ಮಾರ್ಪಾಟುಗಳಿಲ್ಲದೆ ಅಂಥ ಅನುಸೂಚಿಗೆ ಮಂಜೂರಾತಿ ನೀಡತಕ್ಕದ್ದು ಮತ್ತು ಆಯುಕ್ತರ ಮತ್ತು ಸ್ಥಾಯೀ ಸಮಿತಿಯ ಕೋರಿಕೆಯ ಮೇಲೆ ಅದನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಬಹುದು:

ಪರಂತು, ತಿಂಗಳ ಗರಿಷ್ಠ ಸಂಬಳವು, [1][ಒಂಬೈನೂರು][1] ರೂಪಾಯಿಗಳಿಗೆ ಮೀರಿದರೆ ಯಾವುದೇ ಹೊಸ ಹುದ್ದೆಯನ್ನು ಸರ್ಕಾರದ ಮಂಜೂರಾತಿ ಇಲ್ಲದೆ ಸೃಜಿಸತಕ್ಕದ್ದಲ್ಲ.

1. 1978 ರ ಅಧಿನಿಯಮ ಸಂಖ್ಯೆ 24 ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಯಾರೇ ಅಧಿಕಾರಿಯನ್ನು ಅಥವಾ ನೌಕರನನ್ನು, ಅವನು ಕರ್ನಾಟಕ ಪೌರಾಡಳಿತ ಸೇವೆಯ ಸದಸ್ಯನಾಗಿದ್ದ ಹೊರತು, ಅಥವಾ 82ನೇ ಪ್ರಕರಣದ, 85ನೇ ಪ್ರಕರಣದ ಅಥವಾ 86ನೇ ಪ್ರಕರಣದ ಮೇರೆಗೆ ನೇಮಕಗೊಂಡಿದ್ದ ಹೊರತು ಅಥವಾ ಅವನ ಹುದ್ದೆಯನ್ನು ಮತ್ತು ಉಪಲಬ್ಧಿಗಳನ್ನು (1) ನೇ ಉಪಪ್ರಕರಣದ ಮೇರೆಗೆ ಮಂಜೂರು ಮಾಡಿದ ಅನುಸೂಚಿಯಲ್ಲಿ ಸೇರಿಸಿದ್ದ ಹೊರತು, ಅವನನ್ನು ನಗರಪಾಲಿಕೆಯ ಸಿಬ್ಬಂದಿಯನ್ನಾಗಿ ತೆಗೆದುಕೊಳ್ಳತಕ್ಕದ್ದಲ್ಲ.

**89. ನೇಮಕಕ್ಕೆ ಹುದ್ದೆಗಳ ಮೀಸಲಾತಿ.–** ನೇಮಕಗಳನ್ನು ಮಾಡುವಾಗ, ನೇಮಕ ಪ್ರಾಧಿಕಾರವು, ರಾಜ್ಯದ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇಮಕಾತಿಗೆ ಅನ್ವಯವಾಗಬಹುದಾದಂಥದ್ದೇ ರೀತಿಯಲ್ಲಿ ಮತ್ತು ಅದೇ ಪ್ರಮಾಣದಲ್ಲಿ ಅನುಸೂಚಿತ ಜಾತಿಗಳಿಗೆ, ಅನುಸೂಚಿತ ಪಂಗಡಗಳಿಗೆ ಮತ್ತು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ವರ್ಗಗಳ ನಾಗರಿಕರಿಗೆ, ಸಾಕಷ್ಟು ಸಂಖ್ಯೆಯ ಹುದ್ದೆಗಳನ್ನು ಮೀಸಲಿಡತಕ್ಕದ್ದು.

**90. ನಗರಪಾಲಿಕೆಯ ಅಧಿಕಾರಿಗಳಿಗೆ ಮತ್ತು ಇತರ ನೌಕರರಿಗೆ ದಂಡನೆ.–** (1) ನಗರಪಾಲಿಕೆಯ ಪ್ರತಿಯೊಬ್ಬ ಅಧಿಕಾರಿಯು ಅಥವಾ ನಗರಪಾಲಿಕೆಯ ಇತರ ನೌಕರನು, ಇಲಾಖೆಯ ಯಾವುದೇ ನಿಯಮಗಳ ಅಥವಾ ವಿನಿಮಯಗಳ ಅಥವಾ ಶಿಸ್ತಿನ ಯಾವುದೇ ಉಲ್ಲಂಘನೆಗಾಗಿ ಅಥವಾ ಅಜಾಗರೂಕತೆ, ಅನರ್ಹತೆ, ಕರ್ತವ್ಯ ನಿರ್ಲಕ್ಷ್ಯ ಅಥವಾ ಇತರ ದುರ್ವರ್ತನೆಗಾಗಿ ನಿಯಮಿಸಬಹುದಾದಂಥ ಪ್ರಾಧಿಕಾರದಿಂದ, ತನ್ನ ವೇತನ ಬಡ್ತಿಗಳನ್ನು ಅಥವಾ ಮುಂಬಡ್ತಿಯನ್ನು ತಡೆಹಿಡಿಯುವುದಕ್ಕೆ ಅಥವಾ ವಾಗ್ದಂಡನೆ ವಿಧಿಸುವುದಕ್ಕೆ, ದರ್ಜೆಯಲ್ಲಿ ಇಳಿಸುವುದಕ್ಕೆ, ಕಡ್ಡಾಯ ನಿವೃತ್ತಿ ಮಾಡುವುದಕ್ಕೆ, ಸೇವೆಯಿಂದ ತೆಗೆದುಹಾಕುವುದಕ್ಕೆ ಅಥವಾ ವಜಾ ಮಾಡುವುದಕ್ಕೆ ಗುರಿಯಾಗತಕ್ಕದ್ದು:

ಪರಂತು, ಮೇಲೆ ಹೇಳಿದಂಥ ಯಾರೇ ಅಧಿಕಾರಿಯನ್ನು ಅಥವಾ ಇತರ ನೌಕರನನ್ನು, ಅವನನ್ನು ನೇಮಕ ಮಾಡಿದಂಥ ಪ್ರಾಧಿಕಾರಕ್ಕೆ ಅಧೀನವಾದ ಯಾವುದೇ ಪ್ರಾಧಿಕಾರವು, ಅವನನ್ನು ದರ್ಜೆಯಿಂದ ಕೆಳಗೆ ಇಳಿಸತಕ್ಕದ್ದಲ್ಲ, ಕಡ್ಡಾಯವಾಗಿ ನಿವೃತ್ತಿಗೊಳಿಸತಕ್ಕದ್ದಲ್ಲ, ಸೇವೆಯಿಂದ ತೆಗೆದುಹಾಕತಕ್ಕದ್ದಲ್ಲ ಅಥವಾ ವಜಾ ಮಾಡತಕ್ಕದ್ದಲ್ಲ:

ಮತ್ತೂ ಪರಂತು, ನಿಯಮಗಳ ಮೂಲಕ ನಿಯಮಿಸಬಹುದಾದಂಥ ವರ್ಗಗಳಿಗೆ ಅಥವಾ ಪ್ರವರ್ಗಗಳಿಗೆ ಸೇರಿದ ನಗರಪಾಲಿಕೆಯ ನೌಕರರು ಆ ನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕಾರದಿಂದ ಜುಲ್ಮಾನೆ ವಿಧಿಸುವುದಕ್ಕೂ ಸಹ ಗುರಿಯಾಗತಕ್ಕದ್ದು.

(2) ಅಂಥ ಯಾರೇ ಅಧಿಕಾರಿಯನ್ನು ಅಥವಾ ನೌಕರನನ್ನು ಅವನ ಬಗ್ಗೆ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಸೂಕ್ತ ಅವಕಾಶ ಕೊಟ್ಟ ಹೊರತು (1)ನೇ ಉಪಪ್ರಕರಣದ ಮೇರೆಗೆ ದಂಡನೆಗೆ ಗುರಿಪಡಿಸತಕ್ಕದ್ದಲ್ಲ:

ಪರಂತು,–

(ಎ) ಅಧಿಕಾರಿಯ ಅಥವಾ ಇತರ ನೌಕರನ ಯಾವ ವರ್ತನೆಯು ಕ್ರಿಮಿನಲ್ ಆರೋಪದ ಮೇಲೆ ಅವನು ಅಪರಾಧಿಯೆಂದು ನಿರ್ಣೀತನಾಗುವುದಕ್ಕೆ ಕಾರಣವಾಗಿದೆಯೋ, ಆ ವರ್ತನೆಯ ಕಾರಣದ ಮೇಲೆ ಅವನನ್ನು ಸೇವೆಯಿಂದ ತೆಗೆದು ಹಾಕಿರುವಲ್ಲಿ ಅಥವಾ ವಜಾ ಮಾಡಿರುವಲ್ಲಿ; ಅಥವಾ

(ಬಿ) ಅಂಥ ಅಧಿಕಾರಿಯನ್ನು ಅಥವಾ ಇತರ ನೌಕರನನ್ನು ಸೇವೆಯಿಂದ ತೆಗೆದುಹಾಕಲು ಅಥವಾ ವಜಾ ಮಾಡಲು ಅಧಿಕಾರ ಹೊಂದಿರುವ ಪ್ರಾಧಿಕಾರಕ್ಕೆ, ಆ ಪ್ರಾಧಿಕಾರವು ಲಿಖಿತದಲ್ಲಿ ದಾಖಲು ಮಾಡಬೇಕಾದ ಕಾರಣಗಳಿಗಾಗಿ ಆ ವ್ಯಕ್ತಿಗೆ ಕಾರಣ ತೋರಿಸಲು ಅವಕಾಶ ಕೊಡುವುದು ಕಾರ್ಯ ಸಾಧ್ಯವಲ್ಲ ಎಂದು ಮನದಟ್ಟಾದಲ್ಲಿ

– ಈ ಉಪಪ್ರಕರಣವು ಅನ್ವಯವಾಗತಕ್ಕದ್ದಲ್ಲ.

(3) ಯಾರೇ ಅಧಿಕಾರಿಗೆ ಅಥವಾ ಇತರ ನೌಕರನಿಗೆ (2)ನೇ ಉಪಪ್ರಕರಣದ ಮೇರೆಗೆ ಕಾರಣ ತೋರಿಸಲು ಅವಕಾಶ ನೀಡುವುದು ಕಾರ್ಯಸಾಧ್ಯವೇ ಎಂಬ ಪ್ರಶ್ನೆಯು ಉದ್ಭವಿಸಿದಾಗ, ಅದರ ಮೇಲೆ, ಅಂಥ ಅಧಿಕಾರಿಯನ್ನು ಅಥವಾ ಇತರ ನೌಕರನನ್ನು ಸೇವೆಯಿಂದ ತೆಗೆದುಹಾಕಲು ಅಥವಾ ವಜಾ ಮಾಡಲು ಅಧಿಕಾರ ಹೊಂದಿರುವ ಪ್ರಾಧಿಕಾರಿಯ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(4) ಈ ಪ್ರಕರಣದ ಮೇರೆಗೆ ಯಾವ ಅಧಿಕಾರಿಗೆ ಅಥವಾ ಇತರ ನೌಕರನಿಗೆ ದಂಡನೆಯನ್ನು ವಿಧಿಸಲಾಗಿದೆಯೋ ಆ ಯಾರೇ ಅಧಿಕಾರಿಯು ಅಥವಾ ಇತರ ನೌಕರನು ನಿಯಮಿಸಬಹುದಾದಂಥ ಅಧಿಕಾರಿಗೆ ಅಥವಾ ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.

**91. ನೌಕರರಿಗೆ ಅನ್ವಯವಾಗುವ ಸೇವಾ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ಸರ್ಕಾರದ ಅಧಿಕಾರ.–** (1) ಸರ್ಕಾರವು ಈ ಕೆಳಕಂಡ ವಿಷಯಗಳಿಗೆ ನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದು, ಎಂದರೆ:–

(ಎ) ಈ ಅಧ್ಯಾಯದ ಮೇರೆಗೆ ನೇಮಕಗೊಂಡ ಅಧಿಕಾರಿಗಳ ಮತ್ತು ಇತರ ನೌಕರರ ಹುದ್ದೆಯ ಅವಧಿ, ಸಂಬಳಗಳು ಮತ್ತು ಭತ್ಯೆಗಳು, ಭವಿಷ್ಯನಿಧಿ, ನಿವೃತ್ತಿ ವೇತನ, ಉಪದಾನ, ಗೈರುಹಾಜರಿ ರಜೆ ಮತ್ತು ಇತರ ಸೇವಾ ಷರತ್ತುಗಳು;

(ಬಿ) 90ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ದಂಡನೆಯನ್ನು ವಿಧಿಸುವಾಗ ಅನುಸರಿಸಬೇಕಾದ ಪ್ರಕ್ರಿಯೆ, ಅಂಥ ದಂಡನೆಯನ್ನು ವಿಧಿಸುವುದಕ್ಕೆ ಮೊದಲು ಇಲಾಖಾ ವಿಚಾರಣೆಗಳನ್ನು ಬಾಕಿ ಇಟ್ಟು ಅಮಾನತುಗೊಳಿಸುವುದು ಮತ್ತು ಅಂಥ ಅಮಾನತುಗಳನ್ನು ಆದೇಶಿಸಬಹುದಾದ ಪ್ರಾಧಿಕಾರ; ಆ ಪ್ರಕರಣದ (4)ನೇ ಉಪಪ್ರಕಣದ ಮೇರೆಗೆ ಯಾವ ಅಧಿಕಾರಿಗೆ ಅಥವಾ ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸಬಹುದೋ ಆ ಅಧಿಕಾರಿ ಅಥವಾ ಪ್ರಾಧಿಕಾರ;

(ಸಿ) ನಗರಪಾಲಿಕೆಯ ಅಧೀನದಲ್ಲಿರುವ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ನೇಮಕಗೊಂಡ ವ್ಯಕ್ತಿಗಳ ನೇಮಕ ಮತ್ತು ಸೇವಾಷರತ್ತುಗಳನ್ನು ವಿನಿಯಮಿಸುವ ಉದ್ದೇಶಕ್ಕಾಗಿ ಪ್ರಾಸಂಗಿಕವಾದ ಅಥವಾ ಅವಶ್ಯವಾದ ಯಾವುದೇ ಇತರ ವಿಷಯ ಮತ್ತು ನಿಯಮಗಳ ಮೂಲಕ ಉಪಬಂಧಿಸಬೇಕೆಂದು ಸರ್ಕಾರವು ಅಭಿಪ್ರಾಯಪಡುವಂಥ ಯಾವುದೇ ಇತರ ವಿಷಯ.

[1][**91ಎ. ನೌಕರರ ವರ್ಗಾವಣೆ.–** (1) ಈ ಅಧಿನಿಯಮದಲ್ಲಿ ಅಥವಾ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯಸರ್ಕಾರವು ನಗರಪಾಲಿಕೆಯ ಯಾರೇ ಅಧಿಕಾರಿಯನ್ನು ಅಥವಾ ನೌಕರನನ್ನು ರಾಜ್ಯ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಮೇರೆಗೆ ರಚಿತವಾದ ಅಥವಾ ರಚಿತವಾಗಿದೆ ಎಂದು ಭಾವಿಸಬಹುದಾದ ಯಾವುದೇ ಇತರ ನಗರಪಾಲಿಕೆಯಲ್ಲಿನ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದಲ್ಲಿನ ಅಥವಾ ಸರ್ಕಾರದಲ್ಲಿನ ಸಂವಾದಿ ಹುದ್ದೆಗೆ ವರ್ಗಾವಣೆ ಮಾಡಬಹುದು.

(2) (1)ನೇ ಉಪಪ್ರಕಣದ ಮೇರೆಗೆ ವರ್ಗಾವಣೆಗೊಂಡ ಅಧಿಕಾರಿಯು ಅಥವಾ ನೌಕರನು ಈ ಅಧಿನಿಯಮದ ಮೇರೆಗೆ ಅಥವಾ ಸಂವಿಧಾನದ 309ನೇ ಅನುಚ್ಛೇದದ ಮೇರೆಗೆ ರಚಿಸಲಾದ ಯಾವುದೇ ನಿಯಮಕ್ಕೆ ಅಥವಾ ಮಾಡಿದ ಇತರ ಉಪಬಂಧಕ್ಕೆ ಒಳಪಟ್ಟು, ಅವನು ಹಾಗೆ ಯಾವ ನಗರಪಾಲಿಕೆಯಿಂದ ವರ್ಗಾವಣೆಗೊಂಡಿರುವನೋ ಆ ನಗರಪಾಲಿಕೆಯ ಅಧೀನದಲ್ಲಿ ಅವನು ಪಡೆಯುತ್ತಿದ್ದಂಥದ್ದೇ ಪರಿಶ್ರಮಧನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು ಮತ್ತು ನಿವೃತ್ತಿ ವೇತನ, ಉಪದಾನ ಮತ್ತು ಭವಿಷ್ಯನಿಧಿಗಳಿಗೆ ಮತ್ತು ಅಂಥ ಇತರ ವಿಷಯಗಳಿಗೆ ಸಂಬಂಧಿಸಿದಂತೆ ಅವೇ ಸೇವಾ ಷರತ್ತುಗಳಿಗೆ ಮತ್ತು ಅವೇ ನಿಬಂಧನೆಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಅವೇ ಹಕ್ಕುಗಳಿಗೆ ಮತ್ತು ಸವಲತ್ತುಗಳಿಗೆ ಹಕ್ಕುಳ್ಳವನಾಗಿರತಕ್ಕದ್ದು.][1]

1. 1981 ರ ಅಧಿನಿಯಮ ಸಂಖ್ಯೆ 40 ರ ಮೂಲಕ 12.8.1981 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ – VIII

## ಅತ್ಯಾವಶ್ಯಕ ಸೇವೆಗಳು

**92. ಅತ್ಯಾವಶ್ಯಕ ಸೇವೆಗಳು ಇತ್ಯಾದಿಗಳನ್ನು ಘೋಷಿಸುವುದು.–** (1) ನಗರಪಾಲಿಕೆಯು ತನ್ನ ಸೇವೆಗಳಲ್ಲಿನ ಯಾವ ವರ್ಗಗಳನ್ನು ಅತ್ಯಾವಶ್ಯಕ ಸೇವೆಗಳೆಂದು ಪರಿಗಣಿಸುವುದು ಅವಶ್ಯಕವೆಂದು ಭಾವಿಸುವುದೋ ಅಂಥ ಸೇವಾ ವರ್ಗಗಳನ್ನು ಕಾಲಕಾಲಕ್ಕೆ ಘೋಷಿಸಬಹುದು.

(2) ಅತ್ಯಾವಶ್ಯಕ ಸೇವೆಯ ಯಾರೇ ಸದಸ್ಯನು,–

(ಎ) ತನ್ನ ಕರ್ತವ್ಯಗಳನ್ನು ನಿರ್ವಹಿಸಲು ತನ್ನನ್ನು ಅಸಮರ್ಥನನ್ನಾಗಿಸಿರುವ ಕಾಯಿಲೆಯ ಅಥವಾ ಅಪಘಾತಗಳ ಸಂದರ್ಭದಲ್ಲಿ ಅಥವಾ ಆಯುಕ್ತರು ಅಥವಾ ಅಂಥ ಅಧಿಕಾರಿಯು ಸಾಕಷ್ಟೆಂದು ಒಪ್ಪಿಕೊಂಡಿರುವ ಇತರ ಕಾರಣದ ಹೊರತು, ಆಯುಕ್ತರಿಗೆ ಕನಿಷ್ಠ ಎರಡು ತಿಂಗಳ ಲಿಖಿತ ನೋಟೀಸನ್ನು ಕೊಡದೆಯೆ ಆಯುಕ್ತರ ಅಥವಾ ಈ ಬಗ್ಗೆ ಅವರು ಅಧಿಕೃತಗೊಳಿಸಿದ ಯಾರೇ ಅಧಿಕಾರಿಯ ಲಿಖಿತ ಅನುಮತಿ ಇಲ್ಲದೆ ತನ್ನ ಹುದ್ದೆಗೆ ರಾಜೀನಾಮೆ ನೀಡತಕ್ಕದ್ದಲ್ಲ, ತನ್ನ ಕರ್ತವ್ಯಗಳಿಂದ ಹಿಂದೆ ಸರಿಯತಕ್ಕದ್ದಲ್ಲ ಅಥವಾ ಗೈರುಹಾಜರಾಗತಕ್ಕದ್ದಲ್ಲ; ಅಥವಾ

(ಬಿ) ತನ್ನ ಕರ್ತವ್ಯಗಳನ್ನು ನೆರವೇರಿಸಲು ನಿರ್ಲಕ್ಷಿಸತಕ್ಕದ್ದಲ್ಲ ಅಥವಾ ನಿರಾಕರಿಸತಕ್ಕದ್ದಲ್ಲ ಅಥವಾ ಅವುಗಳನ್ನು ನೆರವೇರಿಸುವ ರೀತಿಯು ಅದಕ್ಷವಾದುದೆಂದು ಆಯುಕ್ತರು ಅಥವಾ ಅಂತಹ ಅಧಿಕಾರಿಯು ಅಭಿಪ್ರಾಯಪಟ್ಟರೆ ಆ ರೀತಿಯಲ್ಲಿ ಉದ್ದೇಶಪೂರ್ವಕವಾಗಿ ಅವುಗಳನ್ನು ನೆರವೇರಿಸತಕ್ಕದ್ದಲ್ಲ.

**93. ತುರ್ತುಪರಿಸ್ಥಿತಿಯನ್ನು ಘೋಷಿಸಲು ಸರ್ಕಾರದ ಅಧಿಕಾರ.–** ಅತ್ಯಾವಶ್ಯಕ ಸೇವೆಗಳಲ್ಲಿ ಯಾವುದೇ ಆಗಲಿ ನೆರವೇರುವುದು, ನಿಂತುಹೋಗುವುದು ಅಥವಾ ಸಮಾಪ್ತಿಯಾಗುವುದು ನಗರಪಾಲಿಕೆಯಲ್ಲಿರುವ ಸಮುದಾಯದ ಸುರಕ್ಷತೆಗೆ ಅಥವಾ ಆರೋಗ್ಯಕ್ಕೆ ಅಥವಾ ಸಮುದಾಯದ ಬದುಕಿಗೆ ಅತ್ಯಾವಶ್ಯವಾದ ಸೇವೆಗಳ ನಿರ್ವಹಣೆಗೆ ಪ್ರತಿಕೂಲವಾಗುತ್ತದೆಂದು ಸರ್ಕಾರವು ಭಾವಿಸಿದರೆ, ಅದು ನಗರದಲ್ಲಿ ತುರ್ತುಪರಿಸ್ಥಿತಿ ಅಸ್ತಿತ್ವದಲ್ಲಿದೆ ಎಂದು ಅಧಿಸೂಚನೆಯ ಮೂಲಕ ಘೋಷಿಸಬಹುದು ಮತ್ತು ಆ ಕಾರಣದಿಂದಾಗಿ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಅತ್ಯವಶ್ಯಕ ಸೇವೆಗಳ ಯಾರೇ ಸದಸ್ಯನು ಮತ್ತು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಗಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಅಥವಾ ಯಾವುದೇ ಒಪ್ಪಂದದಲ್ಲಿ ಏನೇ ಇದ್ದರೂ,–

(ಎ) ತನ್ನ ಕರ್ತವ್ಯಗಳನ್ನು ನಿರ್ವಹಿಸಲು ತನ್ನನ್ನು ಅನರ್ಹನನ್ನಾಗಿಸಿದ ಕಾಯಿಲೆಯ ಅಥವಾ ಅಪಘಾತದ ಸಂದರ್ಭದಲ್ಲಿ ಹೊರತು, ತನ್ನ ಕರ್ತವ್ಯಗಳಿಂದ ಹಿಂದೆ ಸರಿಯತಕ್ಕದ್ದಲ್ಲವೆಂದು ಅಥವಾ ಸ್ವತಃ ಗೈರುಹಾಜರಾಗತಕ್ಕದ್ದಲ್ಲವೆಂದು; ಅಥವಾ

(ಬಿ) ತನ್ನ ಕರ್ತವ್ಯಗಳನ್ನು ನೆರವೇರಿಸಲು ನಿರ್ಲಕ್ಷಿಸತಕ್ಕದ್ದಲ್ಲವೆಂದು ಅಥವಾ ನಿರಾಕರಿಸತಕ್ಕದ್ದಲ್ಲವೆಂದು ಅಥವಾ ಅವುಗಳನ್ನು ನೆರವೇರಿಸುವ ರೀತಿಯು ಅದಕ್ಷವಾದುದೆಂದು ಈ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿಯು ಅಭಿಪ್ರಾಯಪಟ್ಟರೆ ಅವುಗಳನ್ನು ಉದ್ದೇಶಪೂರ್ವಕವಾಗಿ ಆ ರೀತಿಯಲ್ಲಿ ನೆರವೇರಿಸತಕ್ಕದ್ದಲ್ಲವೆಂದು

– ಸಹ ಘೋಷಿಸಬಹುದು.

## ಅಧ್ಯಾಯ – IX

### ಸರ್ಕಾರದ ಅಧಿಕಾರ

**94. ದಾಖಲೆಗಳನ್ನು ತರಿಸಿಕೊಳ್ಳಲು ಮತ್ತು ಪರಿಶೀಲನೆ ಮಾಡಿಸಲು ಸರ್ಕಾರದ ಅಧಿಕಾರ.–** (1) ಸರ್ಕಾರವು ಯಾವುದೇ ಕಾಲದಲ್ಲಿ,–

(ಎ) ಯಾವುದೇ ದಾಖಲೆ, ವ್ಯವಹರಣೆ, ಪತ್ರವ್ಯವಹಾರ, ನಕ್ಷೆ ಅಥವಾ ಇತರ ದಸ್ತಾವೇಜನ್ನು ಹಾಜರುಪಡಿಸುವಂತೆ;

(ಬಿ) ನಗರಪಾಲಿಕೆಯ ಅಥವಾ ಯಾವುದೇ ಪೌರ ಪ್ರಾಧಿಕಾರಗಳ ವ್ಯವಹರಣೆಗಳು, ಕರ್ತವ್ಯಗಳು ಅಥವಾ ಕಾಮಗಾರಿಗಳಿಗೆ ಸಂಬಂಧಪಟ್ಟ ಯಾವುದೇ ವಿವರಪಟ್ಟಿಕೆ, ನಕ್ಷೆ, ಅಂದಾಜು ಪತ್ರ, ವಿವರಣಾಪತ್ರ, ಲೆಕ್ಕಪತ್ರ ಅಥವಾ ಅಂಕಿಅಂಶಗಳನ್ನು ಒದಗಿಸುವಂತೆ;

(ಸಿ) ಯಾವುದೇ ವರದಿಯನ್ನು ಒದಗಿಸುವಂತೆ ಅಥವಾ ಪಡೆದು ಒದಗಿಸುವಂತೆ

– ನಗರಪಾಲಿಕೆಯನ್ನು ಅಥವಾ ಆಯುಕ್ತರನ್ನು ಅಗತ್ಯಪಡಿಸಬಹುದು.

[1][(2) ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಈ ಬಗ್ಗೆ ಸರ್ಕಾರದಿಂದ ಅಧಿಕೃತಗೊಂಡ ಸರ್ಕಾರದ ಯಾರೇ ಅಧಿಕಾರಿಯು,–

(ಎ) ಯಾವುದೇ ನಗರಪಾಲಿಕೆಯ ಅಥವಾ ಅದರ ನಿಯಂತ್ರಣದಲ್ಲಿರುವ ಅಥವಾ ವ್ಯವಸ್ಥಾಪನೆಯಲ್ಲಿರುವ ಯಾವುದೇ ಸಂಸ್ಥೆಯ ಅಧಿಭೋಗದಲ್ಲಿರುವ ಯಾವುದೇ ಸ್ಥಿರಸ್ವತ್ತನ್ನು ಅಥವಾ ಅದರ ಅಧೀನದಲ್ಲಿ ಅಥವಾ ನಿರ್ದೇಶನದಲ್ಲಿ ಪ್ರಗತಿಯಲ್ಲಿರುವ ಯಾವುದೇ ಕಾಮಗಾರಿಯನ್ನು, ಪ್ರವೇಶಿಸಲು ಮತ್ತು ಪರಿಶೀಲಿಸಲು ಅಥವಾ ಪ್ರವೇಶಿಸುವಂತೆ ಮತ್ತು ಪರಿಶೀಲಿಸುವಂತೆ ಮಾಡಲು;

(ಬಿ) ಯಾವುದೇ ನಗರಪಾಲಿಕೆಯ ಅಥವಾ ಯಾವುದೇ ಸಮಿತಿಯ ವ್ಯವಹರಣೆಯಿಂದ ಅಥವಾ ನಗರಪಾಲಿಕೆಯ ಸ್ವಾಧೀನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಪುಸ್ತಕದಿಂದ ಅಥವಾ ದಸ್ತಾವೇಜಿನಿಂದ ಯಾವುದೇ ಉದ್ಧೃತ ಭಾಗವನ್ನು ತರಿಸಿಕೊಳ್ಳಲು;

(ಸಿ) ಒಂದು ನಗರಪಾಲಿಕೆಯು ಮಾಡಲಿರುವ ಅಥವಾ ಮಾಡುತ್ತಿರುವ ಯಾವುದೇ ಕಾರ್ಯದ ಸಂಬಂಧದಲ್ಲಿ ಯಾವುದೇ ಆಕ್ಷೇಪಣೆ ಇದೆಯೆಂದು ತನಗೆ ಕಂಡುಬಂದರೆ ಅಂಥ ಆಕ್ಷೇಪಣೆಯನ್ನು ಅಥವಾ ಆತ ಒದಗಿಸಲು ಸಾಧ್ಯವಿರುವ ಹಾಗೂ ನಗರಪಾಲಿಕೆಯು ಕೆಲವೊಂದು ಕೆಲಸವನ್ನು ಮಾಡುವುದನ್ನು ಅವಶ್ಯಗೊಳಿಸುತ್ತದೆ ಎಂದು ಆತನಿಗೆ ಕಂಡುಬರುವ ಯಾವುದೇ ಮಾಹಿತಿಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೆಂದು ಮತ್ತು ಯುಕ್ತ ಕಾಲದೊಳಗೆ ಅಂಥ ಕಾರ್ಯವನ್ನು ಮಾಡುವುದರಿಂದ ವಿಮುಖವಾಗದೆ ಇರಲು ಮತ್ತು ಅಂಥ ಕಾರ್ಯವನ್ನು ಮಾಡದಿರಲು ಅದರ ಕಾರಣಗಳನ್ನು ತಿಳಿಸಿ ತನಗೆ ಲಿಖಿತ ಉತ್ತರ ನೀಡುವಂತೆ ನಗರಪಾಲಿಕೆಯನ್ನು ಅಗತ್ಯಪಡಿಸಲು,

– ಅಧಿಕಾರ ಹೊಂದಿರತಕ್ಕದ್ದು.

(3) (2)ನೇ ಉಪ–ಪ್ರಕರಣದ ಮೇರೆಗೆ ಅಧಿಕೃತನಾದ ಅಧಿಕಾರಿಗೆ ಎಲ್ಲಾ ಯುಕ್ತಕಾಲದಲ್ಲಿ ನಗರಪಾಲಿಕೆಯ ಆವರಣಗಳಿಗೆ ಮತ್ತು ಸ್ವತ್ತುಗಳಿಗೆ ಪ್ರವೇಶಾವಕಾಶ ನೀಡಲು ಮತ್ತು ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಅವರಿಗೆ ಸಾಧ್ಯವಾಗಿಸಲು ಪರಿಶೀಲಿಸುವುದು ಅವಶ್ಯವೆಂದು ಅವರು ಪರಿಗಣಿಸಬಹುದಾದಂಥ ಎಲ್ಲಾ ದಾಖಲೆಗಳು, ಲೆಕ್ಕಪತ್ರಗಳು ಮತ್ತು ಇತರ ದಸ್ತಾವೇಜುಗಳನ್ನು ಅವರಿಗೆ ಒದಗಿಸಲು ನಗರಪಾಲಿಕೆಯು ಮತ್ತು ಪ್ರತಿಯೊಂದು ಪೌರಸಭಾ ಪ್ರಾಧಿಕಾರವು ಮತ್ತು ನಗರಪಾಲಿಕೆಯ ಎಲ್ಲ ಅಧಿಕಾರಿಗಳು ಮತ್ತು ನಗರಪಾಲಿಕೆಯ ಇತರ ನೌಕರರು ಬದ್ಧರಾಗಿರತಕ್ಕದ್ದು.

(4) (2)ನೇ ಉಪ–ಪ್ರಕರಣದ ಮೇರೆಗೆ ಅಧಿಕೃತಗೊಂಡ ಅಧಿಕಾರಿಯು, ಅಂಥ ಪರಿಶೀಲನೆಯ ತರುವಾಯ, ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಬಹುದು.][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ 2ನೇ ಉಪಪ್ರಕರಣಕ್ಕೆ ಬದಲಾಗಿ 2 ರಿಂದ 4ನೇ ಉಪಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.

**95. ನಗರಪಾಲಿಕೆಯಲ್ಲಿ ವಿಲೇಯಾಗದೆ ಬಾಕಿ ಇರುವ ವಿಷಯಗಳಿಗೆ ಸಂಬಂಧಿಸಿದಂತೆ ಕ್ರಮಕೈಗೊಳ್ಳಲು ಸರ್ಕಾರದ ಅಧಿಕಾರ.–** (1) ಸರ್ಕಾರವು, ನಗರಪಾಲಿಕೆಯಲ್ಲಿ ಬಾಕಿ ಇರುವ ವ್ಯವಹಾರಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಯಾವುದೇ ಕಾಲದಲ್ಲಿ ಆಯುಕ್ತರಿಂದ ತರಿಸಿಕೊಳ್ಳಬಹುದು ಮತ್ತು ಅಂಥ ದಾಖಲೆಗಳನ್ನು ಸ್ವೀಕರಿಸಿದ ನಂತರ, ಅದು, ಅವುಗಳನ್ನು ಪರಿಶೀಲಿಸಬಹುದು.

(2) ಅಂತಹ ಪರೀಶೀಲನೆಯ ನಂತರ ಮತ್ತು ಅದು ಅವಶ್ಯವೆಂದು ಭಾವಿಸುವಂಥ ವಿಚಾರಣೆ ಮಾಡಿದ ತರುವಾಯ, ಯಾವುದೇ ವಿಷಯವನ್ನು ನಗರಪಾಲಿಕೆಯ ಮುಂದೆ ತಂದ ದಿನಾಂಕದಿಂದ ಮೂರು ತಿಂಗಳಿಗೂ ಹೆಚ್ಚು ಕಾಲ ನಗರಪಾಲಿಕೆಯಲ್ಲಿ ಅದು ಬಾಕಿ ಇದೆಯೋ ಅಥವಾ ಸ್ಥಾಯೀ ಸಮಿತಿಯ ಮುಂದೆ ಅದನ್ನು ಇಟ್ಟ ತರುವಾಯ ಅರವತ್ತು ದಿನಗಳಿಗೂ ಹೆಚ್ಚುಕಾಲ ಅದರ ಬಳಿ ಬಾಕಿ ಇದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಯ ಆಡಳಿತದ ಹಿತದೃಷ್ಟಿಯಿಂದ ಜರೂರಾಗಿ ತೀರ್ಮಾನ ತೆಗೆದುಕೊಳ್ಳುವುದು ಅವಶ್ಯವಾಗಿದೆ ಎಂದು ಕಂಡುಬಂದರೆ, ಆಗ, ಸರ್ಕಾರವು ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ,–

(i) ಹದಿನೈದು ದಿನಗಳಿಗೆ ಕಡಿಮೆ ಇಲ್ಲದ ನೋಟೀಸನ್ನು ನಗರಪಾಲಿಕೆಗೆ ಕೊಟ್ಟ ತರುವಾಯ ಅಂಥ ವಿಷಯಕ್ಕೆ ಸಂಬಂಧಿಸಿದಂತೆ ತಾನು ಅವಶ್ಯವೆಂದು ಪರಿಗಣಿಸುವಂಥ ಆದೇಶಗಳನ್ನು ಹೊರಡಿಸಬಹುದು; ಅಥವಾ

(ii) ಸ್ಥಾಯೀ ಸಮಿತಿಯ ಮುಂದೆ ಬಾಕಿ ಇರುವ ವಿಷಯವನ್ನು ನಗರಪಾಲಿಕೆಗೆ ಒಪ್ಪಿಸಿರುವುದಾಗಿ ಭಾವಿಸತಕ್ಕದ್ದು ಮತ್ತು ಆ ಆಧಾರದ ಮೇಲೆ ಅದನ್ನು ವಿಲೇಮಾಡತಕ್ಕದೆಂದು ನಿರ್ದೇಶಿಸಬಹುದು:

ಪರಂತು, ನಗರಪಾಲಿಕೆಯಲ್ಲಿ ಬಾಕಿ ಇರುವ ಸಾರ್ವಜನಿಕ ಮಹತ್ವದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಅಂಥ ಯಾವುದೇ ನೋಟೀಸು ಅಗತ್ಯವಾಗತಕ್ಕದ್ದಲ್ಲ ಮತ್ತು ಆ ವಿಷಯವು ಸಾರ್ವಜನಿಕ ಮಹತ್ವದ್ದೇ ಅಥವಾ ಅಲ್ಲವೇ ಎಂಬ ಬಗ್ಗೆ ಸರ್ಕಾರದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(3) ಈ ಪ್ರಕರಣದ ಮೇರೆಗೆ ಸರ್ಕಾರವು ಹೊರಡಿಸಿದ ಪ್ರತಿಯೊಂದು ಆದೇಶವನ್ನು ಆಯುಕ್ತರಿಗೆ ಕಳುಹಿಸಿಕೊಡತಕ್ಕದ್ದು. ಅವರು ಅಂಥ ಆದೇಶವು ನಗರಪಾಲಿಕೆಯ ನಿರ್ಣಯವಾಗಿದ್ದಿದ್ದರೆ ಹೇಗೋ ಹಾಗೆ ಅಂಥ ಆದೇಶವನ್ನು ಶೀಘ್ರವಾಗಿ ಜಾರಿಗೊಳಿಸತಕ್ಕದ್ದು.

**96. ಕ್ರಮ ಕೈಗೊಳ್ಳುವಂತೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** 94ನೇ ಮತ್ತು 95ನೇ ಪ್ರಕರಣಗಳ ಮೇರೆಗೆ ಪಡೆದುಕೊಂಡ ಯಾವುದೇ ಮಾಹಿತಿಯನ್ನು ಅಥವಾ ವರದಿಯನ್ನು ಸ್ವೀಕರಿಸಿದ ಮೇಲೆ ಅಥವಾ ಅನ್ಯಥಾ ಸರ್ಕಾರವು,–

(ಎ) ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಯಾವುದೇ ನಗರಪಾಲಿಕೆಯ ಪ್ರಾಧಿಕಾರಿಯ ಮೇಲೆ ವಿಧಿಸಿದ ಯಾವುದೇ ಕರ್ತವ್ಯವನ್ನು ನೆರವೇರಿಸಿಲ್ಲವೆಂದು ಅಥವಾ ಅಪರಿಪೂರ್ಣ, ಅದಕ್ಷ ಅಥವಾ ಸೂಕ್ತವಲ್ಲದ ರೀತಿಯಲ್ಲಿ ನೆರವೇರಿಸಲಾಗಿದೆ ಎಂದು; ಅಥವಾ

(ಬಿ) ಅಂಥ ಯಾವುದೇ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿ ಸಾಕಷ್ಟು ಹಣಕಾಸು ಏರ್ಪಾಟು ಮಾಡಿಲ್ಲವೆಂದು,

– ಅಭಿಪ್ರಾಯಪಟ್ಟರೆ, ಸರ್ಕಾರವು ಹದಿನೈದು ದಿನಗಳಿಗೆ ಕಡಿಮೆ ಇಲ್ಲದ ನೋಟೀಸನ್ನು ಕೊಟ್ಟ ತರುವಾಯ, ಆದೇಶದ ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಸಲಾಗುವ ಅವಧಿಯೊಳಗೆ, ಸಂದರ್ಭಾನುಸಾರ, ಆ ಕರ್ತವ್ಯವನ್ನು ಸರಿಯಾಗಿ ನೆರವೇರಿಸುವುದಕ್ಕಾಗಿ ತನಗೆ ತೃಪ್ತಿಕರವಾದ ವ್ಯವಸ್ಥೆಗಳನ್ನು ಮಾಡುವಂತೆ ಅಥವಾ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿ ತನಗೆ ತೃಪ್ತಿಕರವಾದ ಹಣಕಾಸಿನ ಏರ್ಪಾಟು ಮಾಡುವಂತೆ ನಗರಪಾಲಿಕೆಗೆ ಅಥವಾ ಆಯುಕ್ತರಿಗೆ ನಿರ್ದೇಶಿಸಬಹುದು ಮತ್ತು ನಗರಪಾಲಿಕೆಯು ಅಥವಾ ಆಯುಕ್ತರು ಅಂತಹ ಆದೇಶಗಳನ್ನು ಪಾಲಿಸತಕ್ಕದ್ದು:

ಪರಂತು, ಜರೂರು ಸಂದರ್ಭಗಳಲ್ಲಿ ಯಾವುದೇ ನೋಟೀಸಿನ ಅವಶ್ಯಕತೆ ಇರತಕ್ಕದ್ದಲ್ಲ.

**97. ಕರ್ತವ್ಯ ಲೋಪವಾದಾಗ ಕ್ರಮಕೈಗೊಳ್ಳುವುದಕ್ಕಾಗಿ ನಗರಪಾಲಿಕೆಯ ವೆಚ್ಚದಲ್ಲಿ ಅಧಿಕಾರಿಯನ್ನು ನೇಮಕಮಾಡಲು ಸರ್ಕಾರದ ಅಧಿಕಾರ.–** (1) 96ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಆದೇಶದ ಮೂಲಕ ಗೊತ್ತುಪಡಿಸಿದ ಅವಧಿಯೊಳಗೆ, ಆ ಪ್ರಕರಣದ ಮೇರೆಗೆ ನಿರ್ದೇಶಿಸಿದ ಯಾವುದೇ ಕ್ರಮವನ್ನು ಕ್ರಮಬದ್ಧವಾಗಿ ಕೈಗೊಳ್ಳದಿದ್ದರೆ, ಸರ್ಕಾರವು ಆದೇಶದ ಮೂಲಕ,–

(ಎ) ಹಾಗೆ ನಿರ್ದೇಶಿಸಿದ ಕ್ರಮವನ್ನು ಕೈಗೊಳ್ಳಲು ಸರ್ಕಾರದ ಒಬ್ಬ ಅಧಿಕಾರಿಯನ್ನು ನೇಮಕಮಾಡಬಹುದು;

(ಬಿ) ಅವರಿಗೆ ಸಂದಾಯ ಮಾಡಬೇಕಾದ ಪರಿಶ್ರಮಧನವನ್ನು ಗೊತ್ತುಪಡಿಸಬಹುದು; ಮತ್ತು

(ಸಿ) ಅಂಥ ಪರಿಶ್ರಮಧನವನ್ನು ಮತ್ತು ಅಂಥ ಕ್ರಮವನ್ನು ಕೈಗೊಳ್ಳಲು ತಗಲುವ ಖರ್ಚನ್ನು ನಗರಪಾಲಿಕೆಯ ನಿಧಿಯಿಂದ ಭರಿಸತಕ್ಕದ್ದೆಂದು ಮತ್ತು ಅವಶ್ಯವಾದರೆ ಈ ಅಧಿನಿಯಮದ Xನೇ ಅಧ್ಯಾಯದ ಮೂಲಕ ಅಧಿಕೃತಗೊಳಿಸಿದ ಯಾವುದೇ ಒಂದು ಅಥವಾ ಹೆಚ್ಚು ತೆರಿಗೆಗಳನ್ನು ಈ ಅಧಿನಿಯಮದಲ್ಲಿ ಹೇಳಲಾದ ಯಾವುದೇ ಗರಿಷ್ಠ ಮಿತಿಯನ್ನು ಮೀರದ ಹಾಗೆ ವಿಧಿಸತಕ್ಕದ್ದೆಂದು ಅಥವಾ ಹೆಚ್ಚಿಸಿತಕ್ಕದ್ದೆಂದು ನಿರ್ದೇಶಿಸಬಹುದು.

(2) ಮೇಲೆ ಹೇಳಿದಂತೆ ನಿರ್ದೇಶಿಸಿದ ಕ್ರಮವನ್ನು ಕೈಗೊಳ್ಳುವ ಉದ್ದೇಶಕ್ಕಾಗಿ, (1)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಅಧಿಕಾರಿಯು ಅವಶ್ಯವಾಗುವಂಥ ಕರಾರುಗಳನ್ನು ಮಾಡಿಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಯಾವುದೇ ಪೌರ ಪ್ರಾಧಿಕಾರಕ್ಕೆ ಪ್ರದತ್ತವಾದ ಮತ್ತು (1)ನೇ ಉಪ–ಪ್ರಕರಣದ ಮೇರೆಗೆ ಹೊರಡಿಸಲಾದ ಆದೇಶದಲ್ಲಿ ಈ ಬಗ್ಗೆ ನಿರ್ದಿಷ್ಟಪಡಿಸಿದ ಯಾವುವೇ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಅವರು ಪೌರ ಪ್ರಾಧಿಕಾರಿಯಾಗಿದ್ದಿದ್ದರೆ ಹೇಗೋ ಹಾಗೆ ಈ ಅಧಿನಿಯಮದ ಮೇರೆಗೆ ರಕ್ಷಣೆಗೆ ಹಕ್ಕುಳ್ಳವರಾಗಿರತಕ್ಕದ್ದು.

(3) ಸರ್ಕಾರವು ಸದರಿ ತೆರಿಗೆಗಳಲ್ಲಿ ಯಾವುದನ್ನಾದರೂ ವಿಧಿಸುವಂತೆ ಅಥವಾ ಹೆಚ್ಚಿಸುವಂತೆ ನಿರ್ದೇಶಿಸುವುದರ ಜೊತೆಗೆ ಅಥವಾ ಹಾಗೆ ನಿರ್ದೇಶಿಸುವುದಕ್ಕೆ ಬದಲಾಗಿ ಅಧಿಸೂಚನೆಯ ಮೂಲಕ ಅದರ ಆದೇಶಗಳನ್ನು ಜಾರಿಗೊಳಿಸಲು ಅಗತ್ಯವೆಂದು ತಾನು ಅಭಿಪ್ರಾಯಪಡುವಂಥ ಯಾವುದೇ ಮೊತ್ತವನ್ನು ಅಥವಾ ಹಣವನ್ನು 'ಡಿಬೆಂಚರ್' ಮೂಲಕ ಹಾಗೂ ಸದರಿ ಎಲ್ಲ ಅಥವಾ ಯಾವುದೇ ತೆರಿಗೆಗಳ ಭದ್ರತೆಯ ಮೇಲೆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಬಡ್ಡಿಯ ದರದಲ್ಲಿ ಮತ್ತು ಮರುಸಂದಾಯದ ಕಾಲಕ್ಕೆ ಸಂಬಂಧಿಸಿದ ನಿಬಂಧನೆಗಳ ಮೇಲೆ ಮತ್ತು ಅನ್ಯಥಾ ಸಾಲವಾಗಿ ಪಡೆಯಬಹುದೆಂದು ನಿರ್ದೇಶಿಸಬಹುದು.

(4) 154 ರಿಂದ 165ರ ವರೆಗಿನ ಪ್ರಕರಣದ ಉಪಬಂಧಗಳು ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಈ ಪ್ರಕರಣಕ್ಕನುಸಾರವಾಗಿ ಎತ್ತಲಾದ ಯಾವುದೇ ಸಾಲಕ್ಕೆ ಅನ್ವಯವಾಗತಕ್ಕದ್ದು.

**98. ನಿರ್ಣಯದ ಪ್ರತಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು ಮತ್ತು ನಿರ್ಣಯವನ್ನು ಹಾಗೂ ಆದೇಶಗಳನ್ನು ರದ್ದುಗೊಳಿಸಲು ಸರ್ಕಾರದ ಅಧಿಕಾರ.–** (1) ನಗರಪಾಲಿಕೆಯ ಎಲ್ಲ ನಿರ್ಣಯಗಳ ಪ್ರತಿಗಳನ್ನು ಆಯುಕ್ತರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ನಗರಪಾಲಿಕೆಯ ಅಥವಾ ಯಾವುದೇ ಇತರ ಪ್ರಾಧಿಕಾರದ ಅಥವಾ ಅದಕ್ಕೆ ಅಧೀನರಾದ ಅಧಿಕಾರಿಯ ಯಾವುದೇ ನಿರ್ಣಯವನ್ನು ಅಥವಾ ಆದೇಶವನ್ನು ಜಾರಿಗೊಳಿಸುವುದು ಅಥವಾ ನಗರಪಾಲಿಕೆಯು ಅಥವಾ ಅದರ ಪರವಾಗಿ ಮಾಡಲಿರುವ ಅಥವಾ ಮಾಡಲಾಗುತ್ತಿರುವ ಯಾವುದೇ ಕಾರ್ಯವನ್ನು ಮಾಡುವುದು ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಪ್ರದತ್ತವಾದ ಅಧಿಕಾರಗಳ ಉಲ್ಲಂಘನೆಯಾಗುತ್ತದೆಂದು ಅಥವಾ ಅವುಗಳನ್ನು ಮೀರುತ್ತದೆ ಎಂದು ಅಥವಾ ಶಾಂತಿಭಂಗವನ್ನು ಉಂಟುಮಾಡುವ ಅಥವಾ ಸಾರ್ವಜನಿಕರಿಗೆ ಅಥವಾ ವ್ಯಕ್ತಿಗಳ ಯಾವುದೇ ವರ್ಗಕ್ಕೆ ಅಥವಾ ನಿಕಾಯಕ್ಕೆ ಕ್ಷತಿ ಅಥವಾ ಕಿರುಕುಳವನ್ನು ಉಂಟುಮಾಡುವ ಸಂಭವವಿದೆ ಎಂದು ಅಥವಾ ನಗರಪಾಲಿಕೆಯ ಹಿತಾಸಕ್ತಿಗೆ ಬಾಧಕವನ್ನುಂಟು ಮಾಡುತ್ತದೆ ಎಂದು ಸರ್ಕಾರವು ಅಭಿಪ್ರಾಯಪಟ್ಟರೆ, ಅದು,–

(ಎ) ನಿರ್ಣಯವನ್ನು ಅಥವಾ ಆದೇಶವನ್ನು ಪೂರ್ಣವಾಗಿ ಅಥವಾ ಭಾಗಶಃ ಏಕೆ ರದ್ದುಗೊಳಿಸಬಾರದು; ಅಥವಾ

(ಬಿ) ಸಂಬಂಧಪಟ್ಟ ಯಾವುದೇ ಉಪವಿಧಿಯನ್ನು ಅಥವಾ ವಿನಿಯಮವನ್ನು ಪೂರ್ಣವಾಗಿ ಅಥವಾ ಭಾಗಶಃ ಏಕೆ ನಿರಸನಗೊಳಿಸಬಾರದು

– ಎಂಬುದಕ್ಕೆ ಹದಿನೈದು ದಿನಗಳಿಗೆ ಕಡಿಮೆ ಇಲ್ಲದಂಥ ನಿರ್ದಿಷ್ಟಪಡಿಸಲಾಗುವ ದಿನಾಂಕದೊಳಗೆ ಕಾರಣ ತೋರಿಸಲು ನಗರಪಾಲಿಕೆಗೆ ನೋಟೀಸನ್ನು ಕೊಟ್ಟ ತರುವಾಯ, ಲಿಖಿತ ಆದೇಶದ ಮೂಲಕ ಅಂಥ ನಿರ್ಣಯದ ಅಥವಾ ಆದೇಶದ ಜಾರಿಯನ್ನು ಅಮಾನತಿನಲ್ಲಿಡಬಹುದು ಅಥವಾ ಯಾವುದೇ ಅಂಥ ಕಾರ್ಯ ಮಾಡುವುದನ್ನು ನಿಷೇಧಿಸಬಹುದು.

(3) ನಗರಪಾಲಿಕೆಯಿಂದ ಸ್ವೀಕರಿಸಿದ ಉತ್ತರ ಯಾವುದಾದರೂ ಇದ್ದರೆ, ಅದನ್ನು ಪರಿಗಣಿಸಿದ ಮೇಲೆ ಮತ್ತು ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಸರ್ಕಾರವು ನಿರ್ಣಯವನ್ನು ಅಥವಾ ಆದೇಶವನ್ನು ರದ್ದುಗೊಳಿಸುವ ಅಥವಾ ಉಪ-ವಿಧಿಯನ್ನು ಅಥವಾ ವಿನಿಯಮವನ್ನು ನಿರಸನಗೊಳಿಸುವ ಆದೇಶಗಳನ್ನು ಮಾಡಬಹುದು ಮತ್ತು ಅದನ್ನು ನಗರಪಾಲಿಕೆಗೆ ತಿಳಿಸಬಹುದು.

(4) ಸರ್ಕಾರವು ಯಾವುದೇ ಕಾಲದಲ್ಲಿ ನಗರಪಾಲಿಕೆಯು ಮಾಡಿಕೊಂಡ ಮುಂದಿನ ನಿವೇದನೆಯ ಮೇಲೆ ಅಥವಾ ಅನ್ಯಥಾ (3)ನೇ ಉಪಪ್ರಕರಣದ ಮೇರೆಗೆ ಮಾಡಿದ ಆದೇಶವನ್ನು ಪರಿಷ್ಕರಿಸಬಹುದು, ಮಾರ್ಪಾಟು ಮಾಡಬಹುದು ಅಥವಾ ರದ್ದುಪಡಿಸಬಹುದು.

**99. ನಗರಪಾಲಿಕೆಯನ್ನು [1][ವಿಸರ್ಜಿಸಲು][1] ಸರ್ಕಾರದ ಅಧಿಕಾರ.–** (1) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ನಗರಪಾಲಿಕೆಯ ಮೇಲೆ ವಿಧಿಸಿದ ಅಥವಾ ಅದು ಕೈಗೊಂಡ ಯಾವುದೇ ಕರ್ತವ್ಯಗಳನ್ನು ನೆರವೇರಿಸಲು ಅದು ಸಕ್ಷಮವಾಗಿಲ್ಲ ಅಥವಾ ಅವುಗಳನ್ನು ನೆರವೇರಿಸುವುದರಲ್ಲಿ ತಪ್ಪಿದೆ ಅಥವಾ ಅದು ಅದರ ಅಧಿಕಾರಗಳನ್ನು ಮೀರುತ್ತದೆ ಅಥವಾ ದುರುಪಯೋಗಪಡಿಸಿಕೊಳ್ಳುತ್ತದೆ ಎಂದು ಅಥವಾ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೇರೆಗೆ ಸರ್ಕಾರವು ಕೊಟ್ಟ ನಿರ್ದೇಶನಗಳನ್ನು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸಲು ವಿಫಲವಾಗಿದೆ ಅಥವಾ ನಗರಪಾಲಿಕೆಯ ಹಿತಾಸಕ್ತಿಗಳಿಗೆ ಬಾಧಕವಾಗುವ ರೀತಿಯಲ್ಲಿ ಕೆಲಸ ಮಾಡುತ್ತಿದೆ ಎಂದು ಸರ್ಕಾರವು ಅಭಿಪ್ರಾಯಪಟ್ಟರೆ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅದಕ್ಕಾಗಿಯ ಕಾರಣಗಳ ನಿರೂಪಣೆಯ ಜೊತೆಗೆ, ಆದೇಶವನ್ನು ಪ್ರಕಟಿಸುವ ಮೂಲಕ, ಸಂದರ್ಭಾನುಸಾರ ನಗರಪಾಲಿಕೆಯು ಸಕ್ಷಮವಾದುದಾಗಿಲ್ಲ ಎಂದು ಅಥವಾ ತಪ್ಪಿದೆ ಎಂದು ಅಥವಾ ಅದರ ಅಧಿಕಾರಗಳನ್ನು ಮೀರಿದೆ ಅಥವಾ ದುರುಪಯೋಗಪಡಿಸಿಕೊಂಡಿದೆ ಎಂದು ಅಥವಾ ಅದಕ್ಕೆ ಕೊಟ್ಟ ನಿರ್ದೇಶನಗಳನ್ನು ಕಾರ್ಯಗತಗೊಳಿಸುವಲ್ಲಿ ವಿಫಲವಾಗಿದೆ ಎಂದು ಅಥವಾ ನಗರಪಾಲಿಕೆಯ ಹಿತಾಸಕ್ತಿಗಳಿಗೆ ಬಾಧಕವಾಗುವಂಥ ರೀತಿಯಲ್ಲಿ ಕೆಲಸ ಮಾಡಿದೆ ಎಂದು ಘೋಷಿಸಬಹುದು ಮತ್ತು ನಗರಪಾಲಿಕೆಯನ್ನು [1][ವಿಸರ್ಜನೆ][1]ಗೊಳಿಸಬಹುದು:

ಪರಂತು, ಮೇಲೆ ಹೇಳಿದಂತೆ [1][ವಿಸರ್ಜನೆಯ][1] ಆದೇಶವನ್ನು ಮಾಡುವುದಕ್ಕೆ ಮೊದಲು ಅಂಥ ಆದೇಶವನ್ನು ಏಕೆ ಮಾಡಬಾರದು ಎಂಬುದಕ್ಕೆ ಕಾರಣ ತೋರಿಸಲು ನಗರಪಾಲಿಕೆಗೆ ಯುಕ್ತ ಅವಕಾಶವನ್ನು ಕೊಡತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) (1)ನೇ ಉಪ-ಪ್ರಕರಣದ ಮೇರೆಗಿನ ಆದೇಶದ ಮೂಲಕ ನಗರಪಾಲಿಕೆಯನ್ನು [1][ವಿಸರ್ಜನೆ][1] ಮಾಡಿದಾಗ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು,-

(ಎ) ನಗರಪಾಲಿಕೆಯ ಎಲ್ಲ ಕೌನ್ಸಿಲರುಗಳು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು (8)ನೇ ಉಪಪ್ರಕರಣದ ಮೇರೆಗೆ ಚುನಾವಣೆಗೆ ಸ್ಪರ್ಧಿಸಲು ತಮ್ಮ ಅರ್ಹತೆಗೆ ಬಾಧಕವಾಗದಂತೆ ಅಂಥ ಕೌನ್ಸಿಲರುಗಳಾಗಿ ಪದಧಾರಣ ಮಾಡುವುದು ನಿಂತುಹೋಗತಕ್ಕದ್ದು;

(ಬಿ) ನಗರಪಾಲಿಕೆಯನ್ನು [1][ವಿಸರ್ಜಿಸಿರುವ][1] ಅವಧಿಯಲ್ಲಿ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಮೇರೆಗೆ ನಗರಪಾಲಿಕೆಗೆ ಮತ್ತು ನಗರಪಾಲಿಕೆಯ ಸ್ಥಾಯೀ ಸಮಿತಿಗಳಿಗೆ ಪ್ರದತ್ತವಾದ ಎಲ್ಲ ಅಧಿಕಾರಗಳನ್ನು ಮತ್ತು ವಿಧಿಸಿದ ಎಲ್ಲ ಕರ್ತವ್ಯಗಳನ್ನು ಈ ಬಗ್ಗೆ ಸರ್ಕಾರವು ನೇಮಕಮಾಡಿದ ಆಡಳಿತಾಧಿಕಾರಿಯು ಚಲಾಯಿಸತಕ್ಕದ್ದು ಮತ್ತು ನೆರವೇರಿಸತಕ್ಕದ್ದು;

(ಸಿ) ನಗರಪಾಲಿಕೆಯಲ್ಲಿ ನಿಹಿತವಾಗಿರುವ ಎಲ್ಲ ಸ್ವತ್ತು, ಅದನ್ನು ಪುನರ್‌ರಚಿಸುವವರೆಗೆ ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಆಡಳಿತಾಧಿಕಾರಿಯು ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಎಂದು ಸರ್ಕಾರವು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶನವನ್ನು ಕೊಟ್ಟಿರುವಾಗ, ಸರ್ಕಾರವು ಆದೇಶದ ಮೂಲಕ, ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ಮಾಸಿಕ ಸಂಬಳ ಮತ್ತು ಭತ್ಯಗಳನ್ನು ನಗರಪಾಲಿಕೆಯ ನಿಧಿಗಳಿಂದ ಅವರಿಗೆ ಸಂದಾಯ ಮಾಡತಕ್ಕದ್ದು ಮತ್ತು ಸರ್ಕಾರದ ಅಧೀನದಲ್ಲಿನ ಸೇವಾ ಷರತ್ತುಗಳ ಮೂಲಕ ಅಗತ್ಯಪಡಿಸಬಹುದಾದಂತೆ ಸಂದರ್ಭಾನುಸಾರ, ಅವರು ಅಥವಾ ಅವರ ಪರವಾಗಿ ಸಂದಾಯ ಮಾಡಬೇಕಾದ ಅಧಿಕಾರಿಯ ರಜೆ ಭತ್ಯೆಗಳು, ನಿವೃತ್ತಿ ವೇತನ ಮತ್ತು ಭವಿಷ್ಯನಿಧಿಗಳ ಬಾಬಿಗೆ ಅಂಥ ವಂತಿಗೆಯನ್ನು ನಗರಪಾಲಿಕೆಯು ನೀಡತಕ್ಕದ್ದು.

(4) ನಗರಪಾಲಿಕೆಯನ್ನು [1][ವಿಸರ್ಜಿಸಿರುವ][1] ಅವಧಿಯಲ್ಲಿ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ ನಗರಪಾಲಿಕೆಯ ಮೇಯರ್‌ಗೆ ಮಾಡಿರುವ ಉಲ್ಲೇಖಗಳನ್ನು (2)ನೇ ಉಪ-ಪ್ರಕರಣದ (ಬಿ) ಖಂಡದ ಮೇರೆಗೆ ನೇಮಕಗೊಂಡ ಆಡಳಿತಾಧಿಕಾರಿಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

1. 1994 ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(5) ನಗರಪಾಲಿಕೆಯನ್ನು [1][ವಿಸರ್ಜಿಸಿರುವ][1] ಅವಧಿಯಲ್ಲಿ ಆಡಳಿತಾಧಿಕಾರಿಯು ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸುವಾಗ ಸಾರ್ವಜನಿಕ ಹಿತಾಸಕ್ತಿಯನ್ನು ಒಳಗೊಂಡಿರುವ ಕಾರ್ಯನೀತಿಯ ವಿಷಯದಲ್ಲಿ ಸರ್ಕಾರವು ಆದೇಶದ ಮೂಲಕ ನಿಗದಿಪಡಿಸಬಹುದಾದಂಥ ನಿರ್ದೇಶನಗಳಿಂದ ಮಾರ್ಗದರ್ಶನ ಪಡೆಯತಕ್ಕದ್ದು ಮತ್ತು ನಿರ್ದೇಶನವು ಸಾರ್ವಜನಿಕ ಹಿತಾಸಕ್ತಿಯನ್ನು ಒಳಗೊಂಡಿರುವ ಕಾರ್ಯನೀತಿಯ ವಿಷಯಕ್ಕೆ ಸಂಬಂಧಪಡುತ್ತದೆಯೇ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಸರ್ಕಾರದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(6) ಸರ್ಕಾರವು ಅಧಿಸೂಚನೆ ಮೂಲಕ ಈ ಅಧಿನಿಯಮದ ಮೇರೆಗೆ ಕೌನ್ಸಿಲರುಗಳಾಗಲು ಅರ್ಹರಾಗಿರತಕ್ಕ ಹದಿನೈದಕ್ಕೆ ಕಡಿಮೆ ಇಲ್ಲದ ಮತ್ತು ಇಪ್ಪತ್ತೈದಕ್ಕೆ ಹೆಚ್ಚಿಲ್ಲದ ವ್ಯಕ್ತಿಗಳನ್ನೊಳಗೊಂಡ ಒಂದು ಸಲಹಾ ಸಮಿತಿಯನ್ನು ಆಡಳಿತಾಧಿಕಾರಿಗೆ ನೆರವಾಗಲು ನೇಮಕಮಾಡಬಹುದು.

[1][(7) xxx][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(8) ನಗರಪಾಲಿಕೆಯನ್ನು ವಿಸರ್ಜಿಸಿದಾಗ, ಅಂಥ ವಿಸರ್ಜನೆಯ ದಿನಾಂಕದಿಂದ ಆರು ತಿಂಗಳುಗಳು ಮುಕ್ತಾಯವಾಗುವುದಕ್ಕೆ ಮೊದಲು ಈ ಅಧಿನಿಯಮದ ಮೇರೆಗೆ ಉಪಬಂಧಿಸಿದ ರೀತಿಯಲ್ಲಿ ಅದನ್ನು ಪುನರ್‌ರಚಿಸತಕ್ಕದ್ದು:

ಪರಂತು, ವಿಸರ್ಜಿತ ನಗರಪಾಲಿಕೆಯು ಯಾವ ಅವಧಿಗೆ ಮುಂದುವರಿಯಬಹುದಾಗಿತ್ತೋ ಆ ಉಳಿದ ಅವಧಿಯು ಆರು ತಿಂಗಳುಗಳಿಗಿಂತ ಕಡಿಮೆಯಾಗಿದ್ದರೆ, ಅಂಥ ಅವಧಿಗೆ ನಗರಪಾಲಿಕೆಯನ್ನು ರಚಿಸುವುದಕ್ಕೆ ಈ ಪ್ರಕರಣದ ಮೇರೆಗೆ ಚುನಾವಣೆ ನಡೆಸುವ ಅಗತ್ಯವಿರತಕ್ಕದ್ದಲ್ಲ.

(9) ಒಂದು ನಗರಪಾಲಿಕೆಯನ್ನು, ಅದರ ಅವಧಿಯು ಪೂರ್ಣಗೊಳ್ಳುವುದಕ್ಕೆ ಮುಂಚೆ ವಿಸರ್ಜಿಸಿದ ತರುವಾಯ ರಚಿಸಿದಲ್ಲಿ, ವಿಸರ್ಜಿತ ನಗರಪಾಲಿಕೆಯು ಅದನ್ನು ಹಾಗೆ ವಿಸರ್ಜಿಸಿರದಿದ್ದರೆ ಯಾವ ಅವಧಿಗೆ ಮುಂದುವರೆಯಬಹುದಾಗಿತ್ತೋ ಆ ಉಳಿದ ಅವಧಿಗೆ ಮಾತ್ರ ಮುಂದುವರೆಯತಕ್ಕದ್ದು.][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(10) (1)ನೇ ಉಪಪ್ರಕರಣದ ಮೇರೆಗೆ ನಗರಪಾಲಿಕೆಯನ್ನು [1][ವಿಸರ್ಜಿಸಿದ][1] ಆದೇಶವನ್ನು [2][xxx][2] ಅದಕ್ಕೆ ಕಾರಣಗಳ ನಿರೂಪಣೆಯ ಜೊತೆಗೆ, ಅದನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಎರಡೂ ಸದನಗಳ ಮುಂದೆ ಇಡತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**100. ಕೆಲವು ಸಂದರ್ಭಗಳಲ್ಲಿ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಅಧಿಕಾರ.–** (1) (ಎ) ಈ ಅಧಿನಿಯಮದ ಮೇರೆಗೆ ನಗರಪಾಲಿಕೆಗೆ ಸಾಮಾನ್ಯ ಚುನಾವಣೆಗಳನ್ನು ಅಥವಾ ಅದರ ಕುರಿತ ತತ್ಪರಿಣಾಮವಾದ ಯಾವುದೇ ವ್ಯವಹರಣೆಗಳನ್ನು ಸಕ್ಷಮ ನ್ಯಾಯಾಲಯದ ಅಥವಾ ಪ್ರಾಧಿಕಾರದ ಆದೇಶದ ಮೂಲಕ ತಡೆಹಿಡಿದಿರುವಾಗಲೆಲ್ಲಾ;

(ಬಿ) ಎಲ್ಲ ಅಥವಾ ಮೂರನೇ ಎರಡಕ್ಕಿಂತ ಹೆಚ್ಚು ಕೌನ್ಸಿಲರುಗಳ ಚುನಾವಣೆಯನ್ನು ಸಕ್ಷಮ ನ್ಯಾಯಾಲಯವು ಅಥವಾ ಪ್ರಾಧಿಕಾರವು ಅಸಿಂಧು ಎಂದು ಘೋಷಿಸಿರುವಾಗಲೆಲ್ಲಾ;

[1][(ಸಿ) xxx][1]

1. 1994ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಡಿ) ಎಲ್ಲ ಅಥವಾ ಮೂರನೇ ಎರಡಕ್ಕಿಂತ ಹೆಚ್ಚು ಕೌನ್ಸಿಲರುಗಳು ರಾಜೀನಾಮೆ ನೀಡಿರುವಾಗಲೆಲ್ಲಾ

– ಸರ್ಕಾರವು, ಅಧಿಸೂಚನೆಯ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಿಸತಕ್ಕದ್ದು ಮತ್ತು ಅಂತಹುದೇ ಅಧಿಸೂಚನೆಯ ಮೂಲಕ ಅಂಥ ನೇಮಕದ ಅವಧಿಯನ್ನು [1][ಉತ್ತರಾನ್ವಯವಾಗಿಯೇ ಆಗಲಿ ಅಥವಾ ಪೂರ್ವಾನ್ವಯವಾಗಿಯೇ ಆಗಲಿ ವಿಸ್ತರಿಸಬಹುದು ಅಥವಾ][1] ಮೊಟಕುಗೊಳಿಸಬಹುದು. [2][ಆದರೆ, ಅಂಥ ನೇಮಕಗಳ ಒಟ್ಟು ಅವಧಿಯು ಆರು ತಿಂಗಳುಗಳನ್ನು ಮೀರತಕ್ಕದ್ದಲ್ಲ.][2]

1. 1981 ರ ಅಧಿನಿಯಮ ಸಂಖ್ಯೆ 40 ರ ಮೂಲಕ 1.6.1977 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಪ್ರಕರಣದ ಮೇರೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿದ ಮೇಲೆ, ಅಂಥ ನೇಮಕದ ಅವಧಿಯಲ್ಲಿ, ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧಗಳನ್ನು ಕಾರ್ಯಗತಗೊಳಿಸುವ ಜವಾಬ್ದಾರಿ ಹೊತ್ತಿರುವ ನಗರಪಾಲಿಕೆಯು, ನಗರಪಾಲಿಕೆಯ ಸ್ಥಾಯೀ ಸಮಿತಿಗಳು ಮತ್ತು ಮೇಯರ್, ಉಪ ಮೇಯರ್ ಮತ್ತು ಆಯುಕ್ತರನ್ನು ಹೊರತುಪಡಿಸಿ ಇತರ ಪ್ರಾಧಿಕಾರಿಗಳು ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಅವರಿಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಚಲಾಯಿಸುವುದು ಮತ್ತು ವಿಧಿಸಲಾದ ಯಾವುವೇ ಕರ್ತವ್ಯಗಳನ್ನು ಅಥವಾ ಪ್ರಕಾರ್ಯಗಳನ್ನು ನೆರವೇರಿಸುವುದು ಮತ್ತು ನಿರ್ವಹಿಸುವುದು ನಿಂತುಹೋಗತಕ್ಕದ್ದು ಮತ್ತು ಆಡಳಿತಾಧಿಕಾರಿಯು ಅಂಥ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಎಲ್ಲ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(3) 99ನೇ ಪ್ರಕರಣದ (3), (4) ಮತ್ತು (5)ನೇ ಉಪ-ಪ್ರಕರಣದ ಉಪಬಂಧಗಳು (1)ನೇ ಉಪ-ಪ್ರಕರಣದ ಮೇರೆಗೆ ನೇಮಕಗೊಂಡ ಆಡಳಿತಾಧಿಕಾರಿಗೆ ಸಂಬಂಧಿಸಿದಂತೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**[1][101. xxx][1]**

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**102. ಪುನರೀಕ್ಷಣೆ.–** ಸರ್ಕಾರವು, ಯಾವುದೇ ಆದೇಶದ ಅಥವಾ ವ್ಯವಹರಣೆಯ ಸರಿತನ, ಕಾನೂನುಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ತಾನು ಮನದಟ್ಟುಮಾಡಿಕೊಳ್ಳುವ ಉದ್ದೇಶಕ್ಕಾಗಿ ನಗರಪಾಲಿಕೆಯ, ಸ್ಥಾಯೀ ಸಮಿತಿಯ, ಆಯುಕ್ತರ ಅಥವಾ ನಗರಪಾಲಿಕೆಗೆ ಅಧೀನನಾದ ಯಾರೇ ಅಧಿಕಾರಿಯ ಯಾವುದೇ ವ್ಯವಹರಣೆಗಳ ದಾಖಲೆಗಳನ್ನು ತರಿಸಿಕೊಳ್ಳಬಹುದು ಮತ್ತು ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ, ಅದಕ್ಕೆ ಸಂಬಂಧಿಸಿದಂತೆ ತಾನು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಮಾಡಬಹುದು ಮತ್ತು ಅದನ್ನು ಪಾಲಿಸತಕ್ಕದ್ದು.

## ಅಧ್ಯಾಯ – X

## ತೆರಿಗೆ ವಿಧಿಸುವುದು

### ತೆರಿಗೆಗಳನ್ನು ಲೆಕ್ಕಹಾಕುವುದು

**103. ವಿಧಿಸಬಹುದಾದ ತೆರಿಗೆಗಳು.–** ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು, ನಗರಪಾಲಿಕೆಯು,–

[1][(ಎ) xxx]][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಬಿ) [1][ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ದರಗಳನ್ನು ಮೀರದ ದರಗಳಲ್ಲಿ][1] ಈ ಕೆಳಕಂಡ ತೆರಿಗೆಗಳಲ್ಲಿ ಯಾವುದೇ ಒಂದು ಅಥವಾ ಹೆಚ್ಚು ತೆರಿಗೆಗಳನ್ನು ವಿಧಿಸತಕ್ಕದ್ದು,–

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(i) ನಗರದೊಳಗೆ ಇರುವ [1][ಕಟ್ಟಡಗಳು ಅಥವಾ ಖಾಲಿ ಭೂಮಿ ಅಥವಾ ಅವೆರಡರ] ಮೇಲೆ ತೆರಿಗೆ (ಇದರಲ್ಲಿ ಇನ್ನುಮುಂದೆ ಸ್ವತ್ತು ತೆರಿಗೆ ಎಂದು ಉಲ್ಲೇಖಿಸಲಾಗಿದೆ);

1. 2003 ರ ಅಧಿನಿಯಮ ಸಂಖ್ಯೆ 32ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(ii) & (iii) xxx][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(iv) xxx][1]

1. 1979 ರ ಅಧಿನಿಯಮ ಸಂಖ್ಯೆ 21ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(v) xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(vi) ಜಾಹೀರಾತಿನ ಮೇಲೆ ತೆರಿಗೆ;

(vii) ಹೆಚ್ಚುವರಿ ಸ್ಟಾಂಪ್ ಸುಂಕದ ರೂಪದಲ್ಲಿ ಕೆಲವು ಸ್ವತ್ತು ವರ್ಗಾವಣೆಗಳ ಮೇಲೆ ಸುಂಕ;

[1][(viii) xxx][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(ix) xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ಪರಂತುಕ xxx][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**103ಎ.** xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**103ಬಿ. ಮೂಲ ಸೌಲಭ್ಯ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ ಉಪಕರವನ್ನು ವಿಧಿಸುವುದು.–** (1) ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರ (1957 ರ ಕರ್ನಾಟಕ ಅಧಿನಿಯಮ 35) 19ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನಗರಪಾಲಿಕೆಯು, ಆ ಅಧಿನಿಯಮದ ಮೇರೆಗೆ ವಿಧಿಸಿದ ತೆರಿಗೆಯ ಜೊತೆಗೆ, ನಗರದ ಒಳಗೆ ರಸ್ತೆಗಳ ಮೇಲೆ ಸಂಚಾರಕ್ಕೆ ಬಳಸಲು ಸೂಕ್ತವಾದ ಪ್ರತಿಯೊಂದು ಮೋಟಾರು ವಾಹನದ ಮೇಲೆ ನಿಯಮಿಸಬಹುದಾದಂತೆ ಪ್ರತಿ ವರ್ಷಕ್ಕೆ ಐದು ನೂರು ರೂಪಾಯಿಗಳಿಗೆ ಮೀರದಂಥ ದರದಲ್ಲಿ, ಮೂಲ ಸೌಲಭ್ಯ ಉಪಕರವನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು ಮತ್ತು ಮೋಟಾರು ವಾಹನಗಳ ಬೇರೆ ಬೇರೆ ವರ್ಗಗಳಿಗೆ ಬೇರೆ ಬೇರೆ ದರಗಳನ್ನು ನಿಯಮಿಸಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ **"ಮೋಟಾರು ವಾಹನ"** ಎಂಬುದು ಮೋಟಾರು ವಾಹನಗಳ ಅಧಿನಿಯಮ, 1988ರಲ್ಲಿ (1988ರ ಕೇಂದ್ರ ಅಧಿನಿಯಮ 59) ಅದಕ್ಕೆ ನೀಡಿರುವ ಅರ್ಥವನ್ನೇ ಹೊಂದಿರತಕ್ಕದ್ದು.

(2) ನಗರಪಾಲಿಕೆಯು, 103ನೇ ಪ್ರಕರಣದ ಮೇರೆಗೆ ವಿಧಿಸಿದ ಸ್ವತ್ತು ತೆರಿಗೆಯ ಜೊತೆಗೆ, ಘನ ತ್ಯಾಜ್ಯ ವಸ್ತು ಸಂಗ್ರಹಣೆ, ಸಾಗಣೆ ಮತ್ತು ವಿಲೆ ಮಾಡುವ ಉದ್ದೇಶಕ್ಕಾಗಿ ನಿಯಮಿಸಬಹುದಾದಂತೆ, ಪ್ರತಿ ತಿಂಗಳಿಗೆ ಒಂದು ಸಾವಿರ ರೂಪಾಯಿಗಳಿಗೆ ಮೀರದಂಥ ದರದಲ್ಲಿ ನಗರದಲ್ಲಿನ ಕಟ್ಟಡಗಳ ಅಥವಾ ಭೂಮಿಗಳ ಅಥವಾ ಅವೆರಡರ ಪ್ರತಿಯೊಬ್ಬ ಮಾಲೀಕನ ಅಥವಾ ಅಧಿಭೋಗದಾರನ ಮೇಲೆ ಘನತ್ಯಾಜ್ಯ ವಸ್ತು ನಿರ್ವಹಣಾ ಉಪಕರವನ್ನು ವಿಧಿಸಬಹುದು ಮತ್ತು ಬೇರೆ ಬೇರೆ ವರ್ಗಗಳ ಭೂಮಿಗಳ ಅಥವಾ ಕಟ್ಟಡಗಳ ಅಥವಾ ಬೇರೆ ಬೇರೆ ಪ್ರದೇಶಗಳ ಸಂಬಂಧದಲ್ಲಿ ಬೇರೆ ಬೇರೆ ದರಗಳನ್ನು ನಿಯಮಿಸಬಹುದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ, ಘನ ತ್ಯಾಜ್ಯ ವಸ್ತು ಎಂಬುದು, ಹೊಲಸು, ಹೊಲಸುಪದಾರ್ಥ, ಕಸಕಡ್ಡಿ, ಊರಿನ ರೊಚ್ಚು, ಉದ್ಯಮಗಳ ಕೊಳಚೆ ನೀರು, ಉದ್ಯಮ ತ್ಯಾಜ್ಯ ವಸ್ತು, ಆಸ್ಪತ್ರೆಗಳ ತ್ಯಾಜ್ಯ ವಸ್ತು ಮತ್ತು ಸಾರ್ವಜನಿಕ ಆರೋಗ್ಯಕ್ಕೆ ಹಾನಿಯುಂಟು ಮಾಡುವ ಯಾವುವೇ ಇತರ ತ್ಯಾಜ್ಯ ವಸ್ತುವನ್ನು ಒಳಗೊಳ್ಳುತ್ತದೆ.

(3) (1) ಮತ್ತು (2)ನೇ ಉಪಪ್ರಕರಣಗಳ ಮೇರೆಗೆ ವಿಧಿಸಿದ ಉಪಕರವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ನಿರ್ಧರಣೆ ಮಾಡತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು.

(4) 61ಎ, 62 ಮತ್ತು 444ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಈ ಪ್ರಕರಣದ ಮೇರೆಗೆ ಉಪಕರ ವಿಧಿಸುವುದರಿಂದ ಮತ್ತು ನಿರ್ಧರಣೆಯಿಂದ ಬಾಧಿತನಾದ ಯಾರೇ ವ್ಯಕ್ತಿಯು, ಅಂಥ ಉಪಕರದ ನಿರ್ಧರಣೆಯ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ನಿಯಮಿಸಲಾದ ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು, ಆ ಪ್ರಾಧಿಕಾರದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(5) ನಿಯಮಿಸಲಾದ ಪ್ರಾಧಿಕಾರವು, ಅಪೀಲುದಾರನಿಗೆ ಮತ್ತು ನಗರಪಾಲಿಕೆಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ನಂತರ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸಬಹುದು.

(6) ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು, ಈ ಪ್ರಕರಣದ ಮೇರೆಗೆ ನಗರಪಾಲಿಕೆಗೆ ಸಂದಾಯ ಮಾಡಬೇಕಾದ ಉಪಕರವನ್ನು, ನಗರಪಾಲಿಕೆಯು ಈ ಸಂಬಂಧದಲ್ಲಿ ಗೊತ್ತುಪಡಿಸಬಹುದಾದಂಥ ಏಜೆನ್ಸಿಯ ಮೂಲಕ ಸಂಗ್ರಹಿಸಬಹುದು.][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**104**. xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**105**. xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**106. ನೋಟೀಸಿನೊಂದಿಗೆ ನಿರ್ಣಯದ ಪ್ರಕಟಣೆ.–** ನಗರಪಾಲಿಕೆಯು, ಸಾಮಾನ್ಯ ಸಭೆಯಲ್ಲಿ ಅಂಗೀಕರಿಸಿದ ನಿರ್ಣಯಗಳ ಮೂಲಕ 103ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ತೆರಿಗೆಯನ್ನು ವಿಧಿಸತಕ್ಕದ್ದು ಮತ್ತು ಅಂಥ ನಿರ್ಣಯದಲ್ಲಿ, ತೆರಿಗೆಗೆ ಗುರಿಯಾಗತಕ್ಕ ವ್ಯಕ್ತಿಗಳ ಅಥವಾ ಸ್ವತ್ತುಗಳ ವರ್ಗಗಳನ್ನು ಮತ್ತು ತೆರಿಗೆ ವಿಧಿಸತಕ್ಕಂಥ ಮೊಬಲಗನ್ನು ಅಥವಾ ದರವನ್ನು ನಿರ್ದಿಷ್ಟಪಡಿಸತಕ್ಕದ್ದು. ಅಂಥ ನಿರ್ಣಯವನ್ನು ಅಂಗೀಕರಿಸಿದ ಮೇಲೆ ನಗರಪಾಲಿಕೆಯು, ಅಂಥ ನಿರ್ಣಯದ ನೋಟೀಸನ್ನು ತನ್ನ ಕಚೇರಿಯ ಸೂಚನಾ ಫಲಕದಲ್ಲಿ ಮತ್ತು ಸ್ಥಳೀಯ ವೃತ್ತ ಪತ್ರಿಕೆಗಳಲ್ಲಿ ಜಾಹೀರಾತಿನ ಮೂಲಕ ಪ್ರಕಟಿಸತಕ್ಕದ್ದು. ಅಂಥ ನೋಟೀಸಿನ ಪ್ರಕಟಣೆಯು, ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳಿಗನುಸಾರವಾಗಿ ತೆರಿಗೆಯನ್ನು ವಿಧಿಸಲಾಗಿದೆ ಎಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು.][1]

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ 106ನೇ ಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ.

**107. ಹಾಲಿ ಇರುವ ಯಾವುದೇ ತೆರಿಗೆಯನ್ನು ಅಮಾನತುಗೊಳಿಸಲು, ಕಡಿಮೆ ಮಾಡಲು ಅಥವಾ ರದ್ದುಗೊಳಿಸಲು ಅಧಿಕಾರ.–** (1) ನಗರಪಾಲಿಕೆಯು, 146ನೇ ಪ್ರಕರಣದ ಪರಂತುಕದ (ಬಿ) ಖಂಡದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಯಾವುದೇ ಕಾಲದಲ್ಲಿ ಸಾಕಷ್ಟು ಕಾರಣಕ್ಕಾಗಿ ಹಾಲಿ ಇರುವ ಯಾವುದೇ ತೆರಿಗೆಯನ್ನು ಅಮಾನತುಗೊಳಿಸಬಹುದು, ಮಾರ್ಪಾಟು ಮಾಡಬಹುದು ಅಥವಾ ರದ್ದುಗೊಳಿಸಬಹುದು.

(2) ತೆರಿಗೆಗಳನ್ನು ವಿಧಿಸುವುದಕ್ಕೆ ಸಂಬಂಧಪಟ್ಟ ಈ ಅಧ್ಯಾಯದ ಉಪಬಂಧಗಳು ಆದಷ್ಟು ಮಟ್ಟಿಗೆ ಯಾವುದೇ ತೆರಿಗೆಯ ಅಮಾನತಿಗೆ, ಮಾರ್ಪಾಟಿಗೆ ಅಥವಾ ರದ್ದಿಯಾತಿಗೆ ಅನ್ವಯವಾಗತಕ್ಕದ್ದು.

[1][**108. ಸ್ವತ್ತು ತೆರಿಗೆಯ ವಿವರಣೆ ಮತ್ತು ವರ್ಗ.–** (1) ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೇರೆಗೆ ವಿನಾಯಿತಿಗೊಳಿಸಿದ್ದ ಹೊರತು ನಗರದೊಳಗೆ ಇರುವ ಎಲ್ಲ [2][ಕಟ್ಟಡಗಳ ಅಥವಾ ಖಾಲಿ ಭೂಮಿಯ ಅಥವಾ ಅವರೆಡರ][2] ಮೇಲೆ ಪ್ರತಿವರ್ಷ ಸ್ವತ್ತು ತೆರಿಗೆಯನ್ನು ವಿಧಿಸತಕ್ಕದ್ದು.

1. 2001ರ ಅಧಿನಿಯಮ ಸಂಖ್ಯೆ 31ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ 108 ಮತ್ತು 109ನೇ ಪ್ರಕರಣಗಳಿಗೆ ಬದಲಾಗಿ 108, 109 ಮತ್ತು 109ಎ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ.
2. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಸ್ವತ್ತು ತೆರಿಗೆಯನ್ನು,–

(ಎ) ವಾಣಿಜ್ಯ ಕಟ್ಟಡಗಳ ಸಂಬಂಧದಲ್ಲಿ ತೆರಿಗೆಗೆ ಗುರಿಯಾಗತಕ್ಕ ಭೂಮಿಸಹಿತವಾದ ಕಟ್ಟಡದ ಬಂಡವಾಳ ಮೌಲ್ಯದ ಶೇಕಡಾ 0.5ಕ್ಕಿಂತ (ಒಂದು ಸಾವಿರಕ್ಕೆ ಐದು ರೂಪಾಯಿಗಳು) ಕಡಿಮೆ ಇಲ್ಲದಂಥ ಮತ್ತು ಶೇಕಡಾ [1][ಎರಡ][1] ಕ್ಕಿಂತ ಹೆಚ್ಚಿಲ್ಲದಂಥ ಶೇಕಡಾ ಪ್ರಮಾಣದಲ್ಲಿ;

(ಬಿ) ವಾಸದ ಕಟ್ಟಡ ಮತ್ತು ವಾಣಿಜ್ಯೇತರ ಕಟ್ಟಡಗಳ ಸಂಬಂಧದಲ್ಲಿ ತೆರಿಗೆಗೆ ಗುರಿಯಾಗತಕ್ಕ, ಭೂಮಿಸಹಿತವಾದ ಕಟ್ಟಡದ ಬಂಡವಾಳ ಮೌಲ್ಯದ ಶೇಕಡಾ 0.3 ಕ್ಕಿಂತ (ಒಂದು ಸಾವಿರಕ್ಕೆ ಮೂರು ರೂಪಾಯಿಗಳು) ಕಡಿಮೆ ಇಲ್ಲದ ಮತ್ತು [2][ಶೇಕಡಾ ಒಂದಕ್ಕಿಂತ (ಒಂದು ಸಾವಿರಕ್ಕೆ ಹತ್ತು ರೂಪಾಯಿಗಳು)][2] ಹೆಚ್ಚಿಲ್ಲದಂಥ ಶೇಕಡಾ ಪ್ರಮಾಣದಲ್ಲಿ;

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ (2)ನೇ ಉಪಪ್ರಕರಣವನ್ನು ಪ್ರತ್ಯಾಯೋಜಿಸಲಾಗಿದೆ, (ಎ) ಮತ್ತು (ಬಿ) ಖಂಡಗಳು 16.6.2003 ರಿಂದ ಜಾರಿಗೆ ಬಂದಿರುವುದಾಗಿ ಮತ್ತು (ಸಿ) ಖಂಡವು 19.11.2001 ರಿಂದ ಜಾರಿಗೆ ಬಂದಿದೆಯೆಂದು ಭಾವಿಸತಕ್ಕದ್ದು.
2. 2005 ರ ಅಧಿನಿಯಮ ಸಂಖ್ಯೆ 5 ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಖಾಲಿ ಭೂಮಿಯ ಸಂಬಂಧದಲ್ಲಿ,–

**(i)**ಒಂದು ಸಾವಿರ ಚದರ ಮೀಟರಿಗಿಂತ ಹೆಚ್ಚಿಲ್ಲದ ಭೂಮಿಗೆ, ತೆರಿಗೆಗೆ ಗುರಿಯಾಗತಕ್ಕ ಭೂಮಿಯ ಬಂಡವಾಳ ಮೌಲ್ಯದ ಶೇಕಡಾ 0.1 ಕ್ಕಿಂತ (ಒಂದು ಲಕ್ಷಕ್ಕೆ ಒಂದು ನೂರು ರೂಪಾಯಿಗಳು) ಕಡಿಮೆ ಇಲ್ಲದ ಮತ್ತು ಶೇಕಡಾ 0.2 ಕ್ಕಿಂತ (ಒಂದು ಲಕ್ಷಕ್ಕೆ ಎರಡು ನೂರು ರೂಪಾಯಿಗಳು) ಹೆಚ್ಚಿಲ್ಲದ ದರದಲ್ಲಿ,

**(ii)** ಒಂದು ಸಾವಿರ ಚದರ ಮೀಟರಿಗಿಂತ ಹೆಚ್ಚು ಆದರೆ ನಾಲ್ಕು ಸಾವಿರ ಚದರ ಮೀಟರಿಗಿಂತ ಹೆಚ್ಚಿಲ್ಲದ ಅಳತೆಯ ಭೂಮಿಗೆ, ತೆರಿಗೆಗೆ ಗುರಿಯಾಗತಕ್ಕ ಭೂಮಿಯ ಬಂಡವಾಳ ಮೌಲ್ಯದ ಶೇಕಡಾ 0.025 ಕ್ಕಿಂತ (ಒಂದು ಲಕ್ಷಕ್ಕೆ ಇಪ್ಪತ್ತೈದು ರೂಪಾಯಿಗಳು) ಕಡಿಮೆ ಇಲ್ಲದ ಮತ್ತು ಶೇಕಡಾ 0.05 ಕ್ಕಿಂತ (ಒಂದು ಲಕ್ಷಕ್ಕೆ ಐವತ್ತು ರೂಪಾಯಿಗಳು) ಹೆಚ್ಚಿಲ್ಲದ ದರದಲ್ಲಿ,

**(iii)** ನಾಲ್ಕು ಸಾವಿರ ಚದರ ಮೀಟರಿಗಿಂತ ಹೆಚ್ಚಿನ ಅಳತೆಯ ಭೂಮಿಗೆ, ತೆರಿಗೆಗೆ ಗುರಿಯಾಗತಕ್ಕ ಭೂಮಿಯ ಬಂಡವಾಳ ಮೌಲ್ಯದ ಶೇಕಡಾ 0.01ಕ್ಕಿಂತ (ಒಂದು ಲಕ್ಷಕ್ಕೆ ಹತ್ತು ರೂಪಾಯಿಗಳು) ಕಡಿಮೆ ಇಲ್ಲದ ಮತ್ತು ಶೇಕಡಾ 0.02 ಕ್ಕಿಂತ (ಒಂದು ಲಕ್ಷಕ್ಕೆ ಇಪ್ಪತ್ತು ರೂಪಾಯಿಗಳು) ಹೆಚ್ಚಿಲ್ಲದ ದರದಲ್ಲಿ

– ವಿಧಿಸತಕ್ಕದ್ದು.][1]

1. 2003ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ (2)ನೇ ಉಪಪ್ರಕರಣದ (ಸಿ) ಖಂಡವನ್ನು ಪ್ರತ್ಯಾಯೋಜಿಸಲಾಗಿದೆ.

(3) (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಗರಿಷ್ಠ ಮತ್ತು ಕನಿಷ್ಠ ದರಗಳಿಗೆ ಒಳಪಟ್ಟು, ಸ್ಥಳ, ಕಟ್ಟಡ ನಿರ್ಮಾಣದ ಬಗೆ, [1][ಖಾಲಿ ಭೂಮಿ][1]ಯ ಅಥವಾ ಕಟ್ಟಡದ ಬಳಕೆಯ ಸ್ವರೂಪ, [1][ಖಾಲಿ ಭೂಮಿ][1]ಯ ವಿಸ್ತೀರ್ಣ, ಕಟ್ಟಡದ ಮೇಲ್ಭಾಯದ ವಿಸ್ತೀರ್ಣ, ಕಟ್ಟಡ ಎಷ್ಟು ವರ್ಷ ಹಳೆಯದು ಎಂಬುದನ್ನು ಮತ್ತು ನಿಯಮಿಸಬಹುದಾದಂಥ ಇತರೆ ಮಾನದಂಡಗಳನ್ನು ಗಣನೆಗೆ ತೆಗೆದುಕೊಂಡು, ತೆರಿಗೆಗೆ ಗುರಿಯಾಗತಕ್ಕ ಕಟ್ಟಡಗಳ ಅಥವಾ [1][ಖಾಲಿ ಭೂಮಿಗಳ ಅಥವಾ ಅವೆರಡರ][1] ಬಂಡವಾಳ ಮೌಲ್ಯದ ಅಂಥ ಶೇಕಡಾ ಪ್ರಮಾಣದಲ್ಲಿ ನಗರಪಾಲಿಕೆಯು ಸ್ವತ್ತು ತೆರಿಗೆಯನ್ನು ನಿಗದಿಪಡಿಸಬಹುದು:

ಪರಂತು, ಹಾಗೆ ನಿಗದಿಪಡಿಸಿದ ಶೇಕಡಾ ಪ್ರಮಾಣವು ಬೇರೆ ಬೇರೆ ಪ್ರದೇಶಗಳಲ್ಲಿ ಮತ್ತು ಕಟ್ಟಡಗಳ ಮತ್ತು ಖಾಲಿ ಭೂಮಿಗಳ ಬೇರೆ ಬೇರೆ ವರ್ಗಗಳಿಗೆ, ಬೇರೆ ಬೇರೆಯಾಗಿರಬಹುದು:

[2][ಮತ್ತು ಪರಂತು, ಒಂದು ಕಟ್ಟಡಕ್ಕೆ ಹೊಂದಿಕೊಂಡಿರುವ ಭೂಮಿಗೆ ಸ್ವತ್ತು ತೆರಿಗೆಯಿಂದ ವಿನಾಯಿತಿಯನ್ನು ನೀಡತಕ್ಕದ್ದು.][2]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಮತ್ತು 2005 ರ ಅಧಿನಿಯಮ ಸಂಖ್ಯೆ 5 ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][**ವಿವರಣೆ**:– XXX][1]

1. 2003ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**108ಎ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸಂಬಂಧಿಸಿದಂತೆ ಆಸ್ತಿ ತೆರಿಗೆ ವಿಧಿಸುವುದು ಮತ್ತು ಲೆಕ್ಕಹಾಕುವುದು.**– (1) ಈ ಅಧಿನಿಯಮದಲ್ಲಿ ತದ್ವಿರುದ್ಧವಾದುದು ಏನೇ ಇದ್ದರೂ, ಈ ಅಧಿನಿಯಮದ ಮೇರೆಗೆ ಉಪಬಂಧಿಸಿದ ವಿನಾಯಿತಿಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶದ ನಗರದೊಳಗೆ ಇರುವ ಎಲ್ಲಾ ಕಟ್ಟಡಗಳಿಗೆ ಅಥವಾ ಖಾಲಿ ಭೂಮಿಗಳಿಗೆ ಅಥವಾ ಅವೆರಡಕ್ಕೂ ಪ್ರತಿವರ್ಷವೂ ಈ ಮುಂದಿನ ರೀತಿಯಲ್ಲಿ ಆಸ್ತಿ ತೆರಿಗೆಯನ್ನು ವಿಧಿಸತಕ್ಕದ್ದು.

(2) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು, 106ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವಂತೆ ಅಂಗೀಕರಿಸಿದ ನಿರ್ಣಯದ ಮೂಲಕ, ಕಟ್ಟಡಕ್ಕೆ, ಖಾಲಿ ಭೂಮಿಗೆ ಅಥವಾ ಅವೆರಡಕ್ಕೂ ತೆರಿಗೆ ವಿಧಿಸಬಹುದಾದ ವಾರ್ಷಿಕ ಮೌಲ್ಯದ ಶೇಕಡ 20ಕ್ಕೆ ಕಡಿಮೆಯಿಲ್ಲದ ಮತ್ತು ಶೇಕಡ 25ಕ್ಕೆ ಹೆಚ್ಚಲ್ಲದ ಶೇಕಡಾ ಪ್ರಮಾಣದಲ್ಲಿ ಸ್ವತ್ತು ತೆರಿಗೆಯನ್ನು ವಿಧಿಸತಕ್ಕದ್ದು. ಒಂದು ಕಟ್ಟಡಕ್ಕೆ, ಖಾಲಿ ಭೂಮಿಗೆ ಅಥವಾ ಅವೆರಡಕ್ಕೂ ತೆರಿಗೆ ವಿಧಿಸಬಹುದಾದ ವಾರ್ಷಿಕ ಮೌಲ್ಯವನ್ನು, ಕಟ್ಟಡದ, ಖಾಲಿ ಭೂಮಿಯ ಅಥವಾ ಅವೆರಡರ ಒಟ್ಟು ನಿರ್ಮಿತ ವಿಸ್ತೀರ್ಣದೊಂದಿಗೆ ಸಂವಾದಿ "ಘಟಕ ಯೂನಿಟ್ ವಿಸ್ತೀರ್ಣ ಮೌಲ್ಯ" ವನ್ನು ಗುಣಿಸುವ ಮೂಲಕ ಬಂದ ಗುಣಲಬ್ಧವನ್ನು ಹತ್ತು ತಿಂಗಳುಗಳಿಗೆ, ಮತ್ತು ಕಟ್ಟಡವು ಎಷ್ಟು ಹಳೆಯದು ಎಂಬ ಆಧಾರದ ಮೇಲೆ ನಿಯಮಿಸಬಹುದಾದಂಥ ದರದಲ್ಲಿ ಸವಕಳಿಯನ್ನು ಕಳೆದು ಲೆಕ್ಕ ಹಾಕತಕ್ಕದ್ದು.

**ವಿವರಣೆ**.– ಈ ಪ್ರಕರಣದ ಉದ್ದೇಶಕ್ಕಾಗಿ, "ಯೂನಿಟ್ ವಿಸ್ತೀರ್ಣ ಮೌಲ್ಯ" ಎಂದರೆ, ಸ್ಥಳ, ಕಟ್ಟಡ ನಿರ್ಮಾಣದ ಬಗೆ, ಖಾಲಿ ಭೂಮಿಯು ಅಥವಾ ಕಟ್ಟಡವು ಯಾವ ಬಳಕೆಗಾಗಿ ಇದೆಯೋ ಆ ಬಳಕೆಯ ಸ್ವರೂಪ, ಖಾಲಿ ಭೂಮಿಯ ವಿಸ್ತೀರ್ಣ, ಕಟ್ಟಡ ನಿರ್ಮಿತ ವಿಸ್ತೀರ್ಣ, ಕಟ್ಟಡ ಎಷ್ಟು ವರ್ಷ ಹಳೆಯದ್ದು, ವಸತಿಯೇತರ ಕಟ್ಟಡದಲ್ಲಿ ವಾಹನಗಳ ನಿಲುಗಡೆಗೆ ಶುಲ್ಕ ವಿಧಿಸಲಾಗುವುದೋ ಆ ವಾಹನ ನಿಲುಗಡೆ ವಿಸ್ತೀರ್ಣ ಮತ್ತು ನಿಯಮಿಸಬಹುದಾದಂಥ ಇತರ ಮಾನದಂಡಗಳನ್ನು ಗಮನದಲ್ಲಿಟ್ಟುಕೊಂಡು ಸಮೂಹ ಮೌಲ್ಯ ನಿರ್ಣಯ ವಿಧಾನ ಅಥವಾ ಸ್ಥಿರಾಸ್ತಿ ಮಾರುಕಟ್ಟೆ ಮಾಹಿತಿ ಅಥವಾ ಯಾವುದೇ ಈ ಎಲ್ಲಾ ಮೂಲಗಳಿಂದ ಅಥವಾ ಈ ಮೂಲಗಳ ಸಂಯೋಜನೆಯ ಮೂಲಕ, ತಾನು ಪರ್ಯಾಪ್ತ ಮತ್ತು ಸಮಂಜಸವೆಂದು ಪರಿಗಣಿಸಬಹುದಾದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ನಿರ್ಧರಿಸಿದ ಸರಾಸರಿ ಮಾರುಕಟ್ಟೆ ದರದ ಆಧಾರದ ಮೇಲೆ ಪ್ರತಿ ತಿಂಗಳಿಗೆ ಪ್ರತಿ ಚದರಡಿಯಿಂದ ನಿರೀಕ್ಷಿಸಲಾದ ಆದಾಯದ ಸರಾಸರಿ ದರ. ವಲಯಗಳನ್ನಾಗಿ ವರ್ಗೀಕರಿಸಿದ ವಿವಿಧ ಪ್ರದೇಶಕ್ಕೆ ಅಥವಾ ಬೀದಿಗೆ, ಖಾಲಿ ಭೂಮಿಯು ಅಥವಾ ಕಟ್ಟಡವು ಯಾವ ಬಳಕೆಗಾಗಿ ಇದೆಯೋ ಆ ಬಳಕೆಯ ವಿವಿಧ ಸ್ವರೂಪಕ್ಕೆ ಕಟ್ಟಡಗಳ ಮತ್ತು ಖಾಲಿ ಭೂಮಿಗಳ ವಿವಿಧ ವರ್ಗಗಳಿಗೆ ಬೇರೆಬೇರೆ ದರಗಳನ್ನು ನಿಗದಿಪಡಿಸಬಹುದು:

ಪರಂತು, "ಯೂನಿಟ್ ವಿಸ್ತೀರ್ಣ ಮೌಲ್ಯ" ದಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಮತ್ತು ಈ ಬಗ್ಗೆ ಯಾವುದೇ ಮನವಿಯನ್ನು ಸಲ್ಲಿಸುವುದಕ್ಕೆ ಅಥವಾ ಸಲಹೆಗಳನ್ನು ನೀಡುವುದಕ್ಕೆ ಒಂದು ಅವಕಾಶವನ್ನು ನೀಡುವುದಕ್ಕಾಗಿ, ಅದನ್ನು ಈ ಹಿಂದೆಯೇ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ್ದ ಹೊರತು, ಅಂಥ ಯಾವುದೇ ಯೂನಿಟ್ ವಿಸ್ತೀರ್ಣ ಮೌಲ್ಯವೂ ಜಾರಿಗೆ ಬರತಕ್ಕದ್ದಲ್ಲ:

ಮತ್ತೂ ಪರಂತು, ಒಂದು ಕಟ್ಟಡಕ್ಕೆ ಹೊಂದಿಕೊಂಡಿರುವ ಮತ್ತು ಅಂಥ ಕಟ್ಟಡವು ಆವರಿಸಿರುವ ವಿಸ್ತೀರ್ಣದ ಮೂರರಷ್ಟನ್ನು ಮೀರದ ವಿಸ್ತೀರ್ಣದ ಭೂಮಿಗೆ ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡತಕ್ಕದ್ದು:

ಮತ್ತೂ ಪರಂತು, ಅಧಿಸೂಚಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಮತ್ತು ಅಂಥ ಸನ್ನಿವೇಶಗಳಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು,–

(ಎ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯಿಂದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಿಂದ ಕೊಳಚೆ ಪ್ರದೇಶವೆಂದು ಘೋಷಿಸಲ್ಪಟ್ಟಿರುವ ಒಂದು ಪ್ರದೇಶದಲ್ಲಿರುವ 300 ಚದರಡಿಗಿಂತಲೂ ಕಡಿಮೆ ವಿಸ್ತೀರ್ಣದ ನಿರ್ಮಿತ ಪ್ರದೇಶದ; ಮತ್ತು

(ಬಿ) ನಿವಾಸೇತರ ಕಟ್ಟಡದಲ್ಲಿ ವಾಹನ ನಿಲುಗಡೆ ಸ್ಥಳವಾಗಿ ಬಳಸುತ್ತಿರುವ ಮತ್ತು ಅದರ ಮಾಲೀಕ ಅಥವಾ ಅಧಿಭೋಗದಾರನು ಅದನ್ನು ಬಳಸುತ್ತಿರುವುದಕ್ಕಾಗಿ ಶುಲ್ಕ ವಿಧಿಸಲಾಗುತ್ತಿರುವ ಸ್ಥಳದ;

(ಸಿ) ಅವರು ಸೂಕ್ತವೆಂದು ಭಾವಿಸಬಹುದಾದಂಥ ಕಟ್ಟಡ ಅಥವಾ ನಿರ್ಮಿತಿಯ ಯಾವುವೇ ಇತರ ವರ್ಗಗಳ

– ಸಂಬಂಧದಲ್ಲಿ, ವಲಯ ವರ್ಗೀಕರಣವನ್ನು ಗಣನೆಗೆ ತೆಗೆದುಕೊಳ್ಳದೆ, (2)ನೇ ಉಪ ಪ್ರಕರಣದ ಮೇರೆಗಿನ ತೆರಿಗೆಗೆ ಬದಲಾಗಿ ಒಂದು ಇಡಿಗಂಟು ಮೊತ್ತವನ್ನು ವಾರ್ಷಿಕ ತೆರಿಗೆಯನ್ನಾಗಿ ನಿಗದಿಪಡಿಸಬಹುದು.

(3) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು, ಸರ್ಕಾರಿ ಭೂಮಿಯಲ್ಲಿ, ಯಾವುದೇ ಸ್ಥಳೀಯ ಸಂಸ್ಥೆಗೆ, ಯಾವುದೇ ಶಾಸನಬದ್ಧ ಸಂಸ್ಥೆಗೆ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ಸಂಘ ಸಂಸ್ಥೆಗೆ ಸೇರಿದ ಭೂಮಿಯಲ್ಲಿ, ಕಾನೂನು ಬಾಹಿರವಾಗಿ ನಿರ್ಮಿಸಿದ

ಕಟ್ಟಡವನ್ನು ಹೊರತುಪಡಿಸಿ, ಕಟ್ಟಡ ಉಪ ವಿಧಿಗಳು ಉಪಬಂಧಗಳನ್ನು ಉಲ್ಲಂಘಿಸಿ ಕಟ್ಟಿರುವ ಅಥವಾ ಅನಧಿಕೃತ ಲೇಔಟ್‌ನಲ್ಲಿ ಅಥವಾ ರೆವಿನ್ಯೂ ಭೂಮಿಯಲ್ಲಿ ಕಟ್ಟಿರುವ ಕಟ್ಟಡವು ಸೇರಿದಂತೆ ಪ್ರತಿಯೊಂದು ಕಟ್ಟಡಕ್ಕೆ, ಖಾಲಿ ಭೂಮಿಗೆ ಅಥವಾ ಅವೆರಡಕ್ಕೂ ಅಥವಾ ಅಧಿಭೋಗ ಪ್ರಮಾಣ ಪತ್ರ ಅಥವಾ ಕಟ್ಟಡ ನಿರ್ಮಾಣ ಮುಕ್ತಾಯ ಪ್ರಮಾಣಪತ್ರವನ್ನು ನೀಡದೆಯೇ ವಾಸಕ್ಕೆ ಬಳಸುತ್ತಿರುವ ಕಟ್ಟಡಕ್ಕೆ ಸ್ವತ್ತು ತೆರಿಗೆಯನ್ನು ವಿಧಿಸಬಹುದು ಮತ್ತು ಅದನ್ನು ವಸೂಲು ಮಾಡಬಹುದು. ಅಂಥ ಕಟ್ಟಡಗಳಿಂದ ವಸೂಲು ಮಾಡಿದ ಸ್ವತ್ತು ತೆರಿಗೆಯ ಲೆಕ್ಕವನ್ನು ಒಂದು ಪ್ರತ್ಯೇಕ ರಿಜಿಸ್ಟರಿನಲ್ಲಿ ಇಡತಕ್ಕದ್ದು:

ಪರಂತು, ಈ ಪ್ರಕರಣದ ಮೇರೆಗೆ ಅಂಥ ಕಟ್ಟಡಗಳಿಗೆ ಸ್ವತ್ತು ತೆರಿಗೆಯನ್ನು ವಿಧಿಸುವುದು ಮತ್ತು ಅದನ್ನು ವಸೂಲು ಮಾಡುವುದು, ಮಾಡಿದ ಯಾವುದೇ ಉಲ್ಲಂಘನೆಯನ್ನು ಸಕ್ರಮಗೊಳಿಸಲು ಯಾವುದೇ ಹಕ್ಕನ್ನಾಗಲಿ ಅಥವಾ ಅಂಥ ಕಟ್ಟಡಕ್ಕೆ ಹಕ್ಕುಸ್ವಾಮ್ಯ, ಒಡೆತನ ಅಥವಾ ಕಾನೂನಿನ ಸ್ಥಾನಮಾನವನ್ನಾಗಲಿ ದೊರಕಿಸಿ ಕೊಡುವುದಿಲ್ಲ. ಅಂಥ ಕಟ್ಟಡಗಳು ಕಾನೂನಿನ ಉಲ್ಲಂಘನೆಗಾಗಿ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧಗಳನ್ವಯ ಯಾವುದೇ ಕ್ರಮಕ್ಕೆ ಗುರಿಯಾಗಲು ಯಾವಾಗಲೂ ಬದ್ಧವಾಗಿರತಕ್ಕದ್ದು.

(4) ನಿವಾಸದ ಉದ್ದೇಶಕ್ಕಾಗಿ ಬಳಸುತ್ತಿರುವ ಸ್ವಂತ ವಾಸದ ಕಟ್ಟಡದ ಸಂಬಂಧದಲ್ಲಿ ಮತ್ತು ನಗರ ಪಾಲಿಕೆಯ ಶಿಫಾರಸ್ಸಿನ ಮೇಲೆ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ನಿವಾಸೇತರ ಉದ್ದೇಶಕ್ಕಾಗಿ ಸ್ವಂತಕ್ಕೆ ಬಳಸುತ್ತಿರುವಂಥ ಕಟ್ಟಡದ ವರ್ಗದ ಸಂಬಂಧದಲ್ಲಿ ಸಂದಾಯ ಮಾಡತಕ್ಕ ಸ್ವತ್ತು ತೆರಿಗೆಯನ್ನು ಶೇಕಡಾ ಐವತ್ತರಷ್ಟು ಇಳಿಸತಕ್ಕದ್ದು.

(5) 107, 110, 111, 112ನೇ ಪ್ರಕರಣಗಳಲ್ಲಿ 112ಎ ಪ್ರಕರಣದ (5), (6) ಮತ್ತು (7)ನೇ ಉಪ ಪ್ರಕರಣಗಳಲ್ಲಿ ಮತ್ತು 112ಬಿ, 112ಡಿ ಮತ್ತು 113ನೇ ಪ್ರಕರಣಗಳಲ್ಲಿ ಇರುವ ಉಪಬಂಧಗಳು ಈ ಪ್ರಕರಣದ ಉಪಬಂಧಗಳಿಗೆ ಅವು ಅಸಂಗತವಾಗದೇ ಇರುವಷ್ಟರ ಮಟ್ಟಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಯಥೋಚಿತ ಬದಲಾವಣೆಗಳೊಂದಿಗೆ ಅನ್ವಯವಾಗತಕ್ಕದ್ದು:

ಪರಂತು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ತೆರಿಗೆನಿರ್ಧರಣೆ ಮಾಡಿದ ಸ್ವತ್ತುಗಳ ಸಂಬಂಧದಲ್ಲಿ ರಾಜ್ಯ ಸರ್ಕಾರವು ಪ್ರತ್ಯೇಕ ಕಾರ್ಯವಿಧಾನವನ್ನು, ನಮೂನೆಯನ್ನು ಅಥವಾ ರಿಜಿಸ್ಟರನ್ನು ನಿಯಮಿಸಬಹುದು. ತೆರಿಗೆನಿರ್ಧರಣೆ ಮಾಡಲಾದ ಬೇರೆ ಬೇರೆ ವರ್ಗದ ಸ್ವತ್ತಿಗೆ ಬೇರೆ ಬೇರೆ ರಿಜಿಸ್ಟರುಗಳನ್ನು ನಿಯಮಿಸಬಹುದು.

(6) ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಮೂಲತಃ ಹೊಣೆಗಾರನಾದ ವ್ಯಕ್ತಿಯು, ತೆರಿಗೆಯನ್ನು ಎರಡು ಸಮನಾದ ಕಂತುಗಳಲ್ಲಿ ಪಾವತಿ ಮಾಡತಕ್ಕದ್ದು. ಮೊದಲನೆಯ ಕಂತನ್ನು ಪ್ರತಿ ಆರ್ಥಿಕ ವರ್ಷದ ಮೇ 30 ರೊಳಗೆ ಮತ್ತು ಎರಡನೇ ಕಂತನ್ನು ನವೆಂಬರ್ 29ರೊಳಗೆ ಪಾವತಿ ಮಾಡತಕ್ಕದ್ದು. ಆದಾಗ್ಯೂ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಮೂಲತಃ ಹೊಣೆಗಾರನಾದ ಮಾಲೀಕನು ಅಥವಾ ಅಧಿಭೋಗದಾರನು ಅಥವಾ ವ್ಯಕ್ತಿಯು ಒಂದೇ ಕಂತಿನಲ್ಲಿ ಸಂದಾಯ ಮಾಡುವುದನ್ನೂ ಆಯ್ಕೆ ಮಾಡಿಕೊಳ್ಳಬಹುದು:

ಪರಂತು, 2008-09ನೇ ವರ್ಷಕ್ಕೆ ಸಂಬಂಧಪಟ್ಟಂತೆ ಮೊದಲನೆಯ ಕಂತನ್ನು ಕರ್ನಾಟಕ ನಗರಪಾಲಿಕೆಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ಪಾವತಿ ಮಾಡತಕ್ಕದ್ದು ಮತ್ತು ಎರಡನೆಯ ಕಂತನ್ನು ಅದರ ನಂತರದ ಮೂವತ್ತು ದಿನಗಳೊಳಗಾಗಿ ಪಾವತಿ ಮಾಡತಕ್ಕದ್ದು:

ಮತ್ತೂ ಪರಂತು, ತೆರಿಗೆಯನ್ನು ಪಾವತಿ ಮಾಡಲು ಹೊಣೆಗಾರನಾದ ಮಾಲೀಕನು ಅಥವಾ ಅಧಿಭೋಗದಾರನು ಪ್ರತಿ ವರ್ಷದ ಪ್ರಾರಂಭದ ದಿನಾಂಕದಿಂದ ಒಂದು ತಿಂಗಳೊಳಗೆ ಅಥವಾ 2008-09ನೇ ವರ್ಷಕ್ಕೆ ಸಂಬಂಧಿಸಿದಂತೆ 2009 ರ ಕರ್ನಾಟಕ ನಗರಪಾಲಿಕೆಗಳ (ತಿದ್ದುಪಡಿ) ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ತಿಂಗಳೊಳಗೆ ವಿವರ ಪತ್ರವನ್ನು ಸಲ್ಲಿಸಿದರೆ ಮತ್ತು ಇಡೀ ವರ್ಷದ ಸ್ವತ್ತು ತೆರಿಗೆಯನ್ನು ಸಹ ಪಾವತಿ ಮಾಡಿದರೆ, ಆತನು ಸಂದಾಯ ಮಾಡತಕ್ಕ ತೆರಿಗೆಯ ಮೇಲೆ ಶೇಕಡಾ ಐದರಷ್ಟು ರಿಯಾಯತಿಯನ್ನು ಆತನಿಗೆ ನೀಡತಕ್ಕದ್ದು:

ಮತ್ತೂ ಪರಂತು, ರಾಜ್ಯ ಸರ್ಕಾರವು ನಗರಪಾಲಿಕೆಯ ಶಿಫಾರಸ್ಸಿನ ಮೇಲೆ, ಅಧಿಸೂಚನೆಯ ಮೂಲಕ, 2008-09 ಹಾಗೂ 2009-2010ನೇ ಹಣಕಾಸು ವರ್ಷಗಳಿಗೆ ಸಂಬಂಧಿಸಿದಂತೆ ದಂಡವಿಲ್ಲದೆ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಮತ್ತು ಶೇಕಡ 5ರ ರಿಯಾಯಿತಿ ಸೌಲಭ್ಯವನ್ನು ಪಡೆಯಲು ಕಾಲಪರಿಮಿತಿಯನ್ನು ವಿಸ್ತರಿಸಬಹುದು:

ಮತ್ತೂ ಪರಂತು, ನಿಯಮಿಸಬಹುದಾದಂತೆ ತೆರಿಗೆ ವಿವರ ಪತ್ರಗಳನ್ನು ಅಲ್ಲೊಂದು ಇಲ್ಲೊಂದರಂತೆ ಆಯ್ಕೆ ಮಾಡಿ ಪರಿಶೀಲಿಸುವುದಕ್ಕೆ ಒಳಪಟ್ಟು, 2008-09ನೇ ವರ್ಷದಲ್ಲಿ ಮೊದಲಬಾರಿಗೆ ಸಲ್ಲಿಸಿದ ತೆರಿಗೆ ವಿವರ ಪತ್ರವು ಪ್ರತಿಯೊಂದು ಬ್ಲಾಕ್ ವರ್ಷಕ್ಕೆ ಅನ್ವಯಿಸುವ ತೆರಿಗೆಯ ಪಾವತಿಗೆ ಆಧಾರವಾಗಿರತಕ್ಕದ್ದು.

(7) ಯಾರೇ ಮಾಲೀಕನು ಅಥವಾ ಅಧಿಭೋಗದಾರನು (8)ನೇ ಉಪಪ್ರಕರಣದ ಮೇರೆಗೆ ಯಾವುದೇ ವಿವರ ಪತ್ರವನ್ನು ಸಲ್ಲಿಸುವ ಮೊದಲು ಲೆಕ್ಕ ಹಾಕಲಾದ ಅರ್ಧವಾರ್ಷಿಕ ತೆರಿಗೆಯನ್ನು ಮುಂಚಿತವಾಗಿಯೇ ಪಾವತಿ ಮಾಡತಕ್ಕದ್ದು ಅಥವಾ ಆತನು ಸತ್ಯವಾದುದು ಮತ್ತು ಪೂರ್ಣವಾದುದು ಎಂದು ಘೋಷಿಸಿ ಸಲ್ಲಿಸಿದ ವಿವರ ಪತ್ರದ ಆಧಾರದ ಮೇಲೆ ವರ್ಷಕ್ಕೆ ಪಾವತಿ ಮಾಡಬೇಕಾದ ಸ್ವತ್ತು ತೆರಿಗೆಯ ಪೂರ್ಣ ಮೊಬಲಗನ್ನು ಪಾವತಿ ಮಾಡತಕ್ಕದ್ದು.

(8) 112ಎ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರವು ಈ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಹೊಣೆಗಾರನಾದ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಿಗೆ ಅಥವಾ ಈ ಸಂಬಂಧದಲ್ಲಿ ಅವರು ಅಧಿಕೃತಗೊಳಿಸಿದ ಅಧಿಕಾರಿಗೆ ಅಥವಾ ಏಜನ್ಸಿಗೆ ಪ್ರತಿ ವರ್ಷವು ಸಲ್ಲಿಸತಕ್ಕ ವಿವರಪತ್ರದ ನಮೂನೆಯನ್ನು ಮತ್ತು ರೀತಿಯನ್ನು ನಿಯಮಿಸಬಹುದು.

(9) ಯಾವುದೇ ಕಟ್ಟಡದ ಅಥವಾ ಖಾಲಿ ಭೂಮಿಯ ಅಥವಾ ಅವೆರಡರ ಮಾಲೀಕನು ಅಥವಾ ಅಧಿಭೋಗದಾರನು ವಿವರ ಪತ್ರವನ್ನು ಸಲ್ಲಿಸುವುದಕ್ಕೆ ಅಥವಾ ಈ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆಯ ನಿರ್ಧರಣೆಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಆಯುಕ್ತರು ಯೂನಿಟ್ ವಿಸ್ತೀರ್ಣ ಮೌಲ್ಯವನ್ನು ಮತ್ತು ಅದರ ಮೇಲೆ ಪಾವತಿ ಮಾಡಬೇಕಾದ ತೆರಿಗೆಯನ್ನು ನಿರ್ಧರಿಸಲು ಮಾರ್ಗಸೂಚಿಗಳನ್ನು ಕಾಲಕಾಲಕ್ಕೆ ಹೊರಡಿಸತಕ್ಕದ್ದು.

(10) ಮಾಲೀಕನು ಅಥವಾ ಅಧಿಭೋಗದಾರನು ಸಲ್ಲಿಸಿದ ಪ್ರತಿಯೊಂದು ವಿವರಕ್ಕೆ ಸಂಬಂಧಿಸಿದಂತೆ ನಿಯಮಿಸಿದ ರೀತಿಯಲ್ಲಿ ಸಲ್ಲಿಸಿದ ವಿವರ ಪತ್ರಗಳನ್ನು ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಅಲ್ಲೊಂದು ಇಲ್ಲೊಂದರಂತೆ ಪರಿಶೀಲನೆ ಮಾಡಲು ಕೈಗೆತ್ತಿಕೊಳ್ಳಬಹುದಾದ ಅಥವಾ ಪರಿಶೀಲನೆ ಮಾಡಲು ಅಧೀನ ಅಧಿಕಾರಿಯನ್ನು ಅಧಿಕೃತಗೊಳಿಸಬಹುದಾದ ಸಂದರ್ಭಗಳನ್ನು ಹೊರತುಪಡಿಸಿ, ತೆರಿಗೆ ನಿರ್ಧರಣೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದು:

ಪರಂತು, ಆಯುಕ್ತರು, ಮಾಲೀಕನು ಅಥವಾ ಅಧಿಭೋಗದಾರನು ತೆರಿಗೆಯನ್ನು ತಪ್ಪಿಸಿಕೊಳ್ಳುತ್ತಿದ್ದಾನೆಂದು ಸ್ವತಃ ಅಥವಾ ಬೇರೆ ರೀತಿಯಲ್ಲಿ, ನಂಬಲು ಕಾರಣವಿದ್ದರೆ, ಅವರು ಅಂಥ ಕಟ್ಟಡವನ್ನು ತಪಾಸಣೆ ಮಾಡಿಸಬಹುದು ಮತ್ತು ತೆರಿಗೆಯನ್ನು ನಿರ್ಧರಿಸಬಹುದು.

(11) ಸಲ್ಲಿಸಿದ, ಇಷ್ಟಾನುಸಾರ ಆಯ್ದ ವಿವರ ಪತ್ರವನ್ನು ಪರಿಶೀಲಿಸುವ ಉದ್ದೇಶಕ್ಕಾಗಿ ಅಥವಾ ಯಾವುದೇ ಕಟ್ಟಡಕ್ಕೆ ಅಥವಾ ಭೂಮಿಗಳಿಗೆ ಅಥವಾ ಅವೆರಡಕ್ಕೆ ಸಂಬಂಧಿಸಿದಂತೆ (8)ನೇ ಉಪಪ್ರಕರಣದ ಮೇರೆಗೆ ಅಗತ್ಯಪಡಿಸಿದಂತೆ ವಿವರ ಪತ್ರವನ್ನು ಸಲ್ಲಿಸದಿರುವ ಪ್ರಕರಣಗಳಲ್ಲಿ ಆಯುಕ್ತರು ಅಥವಾ ಈ ಬಗ್ಗೆ ಅವರು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನೋಟೀಸನ್ನು ನೀಡಿದ ತರುವಾಯ, ಯಾವುದೇ ಭೂಮಿ ಅಥವಾ ಕಟ್ಟಡವನ್ನು ಪ್ರವೇಶಿಸಬಹುದು, ಪರೀಕ್ಷಿಸಬಹುದು, ಸಮೀಕ್ಷಿಸಬಹುದು ಅಥವಾ ಅಳತೆ ಮಾಡಬಹುದು ಮತ್ತು ಅಗತ್ಯಪಡಿಸಿದ ಅವಶ್ಯ ಮಾಹಿತಿಯನ್ನು ಮಾಲೀಕನು ಅಥವಾ ಅಧಿಭೋಗದಾರನು ಒದಗಿಸಲು ಬದ್ಧನಾಗಿರತಕ್ಕದ್ದು ಹಾಗೂ ಅಂಥ ಪರಿಶೀಲನೆಯ ಮತ್ತು ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ, ಅವರು (5)ನೇ ಉಪಪ್ರಕರಣಕ್ಕೆ ಒಳಪಟ್ಟು ಸ್ವತ್ತಿನ ತೆರಿಗೆ ನಿರ್ಧರಣೆ ಮಾಡತಕ್ಕದ್ದು. ಹಾಗೂ ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಆದೇಶದ ಒಂದು ಪ್ರತಿಯನ್ನು ಕಳುಹಿಸತಕ್ಕದ್ದು. ಯಾವುದೇ ಕಟ್ಟಡದ ಅಥವಾ ಖಾಲಿ ಭೂಮಿಯ ಒಳಕ್ಕೆ ಅಥವಾ ಅದಕ್ಕೆ ಸೂರ್ಯೋದಯದಿಂದ ಸೂರ್ಯಾಸ್ತದ ಒಳಗೆ ಪ್ರವೇಶಿಸತಕ್ಕದ್ದು.

(12) ಆವರಣವನ್ನು ಪರಿಶೀಲಿಸಲು ಅಧಿಕೃತ ಅಧಿಕಾರಿಯು ಪ್ರವೇಶಿಸುವುದಕ್ಕೆ ಅವಕಾಶ ನೀಡಲು ಅಧಿಭೋಗದಾರನು ನಿರಾಕರಿಸಿದರೆ, ಆ ಅಧಿಕಾರಿಯು ಅವನಿಗೆ ಸಮಂಜಸ ಅವಕಾಶವನ್ನು ನೀಡಿದ ತರುವಾಯ ಹಾಗೆ ನಿರಾಕರಿಸಿದ್ದನ್ನು ದಾಖಲಿಸತಕ್ಕದ್ದು ಮತ್ತು ತನ್ನ ಉತ್ತಮ ವಿವೇಚನೆಯ ಪ್ರಕಾರ ಸ್ವತ್ತಿನ ತೆರಿಗೆ ನಿರ್ಧರಣೆ ಮಾಡತಕ್ಕದ್ದು:

ಪರಂತು, ವಾಸಕ್ಕಾಗಿ ಬಳಸುತ್ತಿರುವ ಕಟ್ಟಡಗಳಾಗಿದ್ದರೆ, ಅಲ್ಲಿ ವಾಸಿಸುತ್ತಿರುವವರ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳಿಗೆ ಸೂಕ್ತ ಗೌರವವನ್ನು ನೀಡತಕ್ಕದ್ದು ಮತ್ತು ಮಹಿಳೆಯು ವಾಸ್ತವಿಕವಾಗಿ ವಾಸಿಸುತ್ತಿರುವ ಯಾವುದೇ ಕೋಣೆಯನ್ನು, ಆಕೆಯು ಅಲ್ಲಿಂದ ಹೊರಕ್ಕೆ ಹೋಗುವುದಾದರೆ ಹೋಗಬಹುದೆಂದು ತಿಳಿಸಿದ್ದ ಹೊರತು ಮತ್ತು ಹೊರಕ್ಕೆ ಹೋಗಲು ಆಕೆಗೆ ಪ್ರತಿಯೊಂದು ಸಮಂಜಸ ಸೌಲಭ್ಯ ಒದಗಿಸಿದ್ದ ಹೊರತು ಪ್ರವೇಶಿಸತಕ್ಕದ್ದಲ್ಲ.

(13) ಸಲ್ಲಿಸಿರುವ ಯಾವ ವಿವರ ಪತ್ರವನ್ನು ತೆರಿಗೆ ನಿರ್ಧರಣೆ ಆಗಿದೆ ಎಂದು ಭಾವಿಸಲಾಗಿದೆಯೋ ಅದನ್ನು ಇಷ್ಟಾನುಸಾರ ಆಯ್ದು ಪರಿಶೀಲನೆ ಮಾಡಿದಾಗ ಆ ವಿವರ ಪತ್ರವು ಸರಿಯಿಲ್ಲವೆಂದು ಅಥವಾ ಅದರಲ್ಲಿ ಕಡಿಮೆ ತೆರಿಗೆ ನಿರ್ಧರಣೆ ಮಾಡಲಾಗಿದೆಯೆಂದು, ತತ್ಪರಿಣಾಮವಾಗಿ ತೆರಿಗೆಯಿಂದ ತಪ್ಪಿಸಿಕೊಂಡಂತಾಗಿದೆಯೆಂದು ಅಧಿಕೃತ ಅಧಿಕಾರಿಯು ನಂಬಲು ಕಾರಣಗಳಿದ್ದಲ್ಲಿ,–

(ಎ) ದಾಖಲೆಯಲ್ಲಿ ಲಭ್ಯವಿರುವ ಮಾಹಿತಿಯ ಆಧಾರದ ಮೇಲೆ ಮತ್ತು ವಾಸ್ತವಿಕವಾಗಿ ಪರಿಶೀಲಿಸಿದ ನಂತರ, ಈ ಪ್ರಕರಣದ ಮೇರೆಗೆ ಉಪಬಂಧಿಸಿರುವ ರೀತಿಯಲ್ಲಿ ಆ ಸ್ವತ್ತಿನ ಮರು ತೆರಿಗೆ ನಿರ್ಧರಣೆ ಮಾಡಬಹುದು;

(ಬಿ) ಮರುನಿರ್ಧರಣೆ ಮಾಡಿದ ತೆರಿಗೆಯು, ಈ ಹಿಂದೆ ವಿವರಪತ್ರದೊಂದಿಗೆ ಸಲ್ಲಿಸಿದ್ದ ತೆರಿಗೆಗಿಂತಲೂ ಶೇಕಡಾ 5 ಕ್ಕಿಂತ ಹೆಚ್ಚಾಗಿದ್ದಲ್ಲಿ, ತಪ್ಪಿಸಿಕೊಂಡ ತೆರಿಗೆಯನ್ನು, ಹಾಗೆ ತಪ್ಪಿಸಿಕೊಂಡ ತೆರಿಗೆಯ ಎರಡರಷ್ಟಕ್ಕೆ ಸಮನಾದ ಮೊಬಲಗಿಗಿಂತ ಕಡಿಮೆ ಅಲ್ಲದ ದಂಡದೊಂದಿಗೆ ಹಾಗೂ ಪಾವತಿ ಮಾಡಿದ್ದ ಹಾಗೂ ಪಾವತಿ ಮಾಡಬೇಕಾಗಿದ್ದ ತೆರಿಗೆಯ ವ್ಯತ್ಯಾಸದ ಮೊಬಲಗಿನ ಮೇಲೆ ವಾರ್ಷಿಕ ಶೇಕಡ 24ರಂತೆ ಲೆಕ್ಕಹಾಕಿದ ಬಡ್ಡಿ ಸಹಿತ ಪಾವತಿ ಮಾಡತಕ್ಕದ್ದು;

(ಸಿ) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಈ ಪ್ರಕರಣದ ಮೇರೆಗೆ ಪರಿಶೀಲನೆ ಅಥವಾ ಮರು ನಿರ್ಧರಣೆಯನ್ನು ಮಾಡಿದ ತರುವಾಯ, ಮರು ತೆರಿಗೆ ನಿರ್ಧರಣೆಯ ನೋಟೀಸನ್ನು, ಅದನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ, ಲಿಖಿತದಲ್ಲಿ ಅದರ ವಿರುದ್ಧ ಕಾರಣ ತೋರಿಸಲು ತೆರಿಗೆದಾರನಿಗೆ ಒಂದು ಅವಕಾಶವನ್ನು ನೀಡಿದ ತರುವಾಯ ಆ ತೆರಿಗೆಯನ್ನು ಸಂದಾಯ ಮಾಡುವಂತೆ ತಗಾದೆ ಮಾಡಿ ಸೂಚನೆಯನ್ನು ನೀಡತಕ್ಕದ್ದು;

(ಡಿ) ನಿರ್ಧರಿಸಿದ ಸ್ವತ್ತು ತೆರಿಗೆಯನ್ನು ಮತ್ತು ವಿಧಿಸಿದ ದಂಡವನ್ನು ಮಾಲೀಕನು ಅಥವಾ ಅಧಿಭೋಗದಾರನು ಒಪ್ಪಿಕೊಳ್ಳಬಹುದು ಅಥವಾ ಈ ಉಪಪ್ರಕರಣದ ಮೇರೆಗಿನ ನೋಟೀಸಿನ ಪ್ರತಿಯನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗಾಗಿ ಆಯುಕ್ತರಿಗೆ ಅಥವಾ ಅಧಿಕೃತ ಅಧಿಕಾರಿಗೆ ಆಕ್ಷೇಪಣೆಯನ್ನು ಸಲ್ಲಿಸಬಹುದು;

(ಇ) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಆಕ್ಷೇಪಣೆಗಳನ್ನು ಪರಿಗಣಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಸಲ್ಲಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ ಅಂಥ ತೆರಿಗೆ ನಿರ್ಧರಣೆಯನ್ನು ಸ್ಥಿರೀಕರಿಸಿರುವ ಅಥವಾ ಪರಿಷ್ಕರಿಸಿರುವ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಆ ಆದೇಶದ ಒಂದು ಪ್ರತಿಯನ್ನು ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಕಳುಹಿಸತಕ್ಕದ್ದು.

(14) ಈ ಪ್ರಕರಣದ ಮೇರೆಗಿನ ತೆರಿಗೆ ನಿರ್ಧರಣೆಯನ್ನು ಅಥವಾ ತೆರಿಗೆ ಮರು ನಿರ್ಧರಣೆಯನ್ನು ಈ ಮುಂದಿನ ಕಾಲಮಿತಿಗಳ ನಂತರ ಮಾಡತಕ್ಕದ್ದಲ್ಲ, ಎಂದರೆ:–

(i) ಈ ಪ್ರಕರಣದ ಮೇರೆಗೆ ತೆರಿಗೆ ವಿವರ ಪತ್ರವನ್ನು ಸಲ್ಲಿಸಿದ ನಂತರ ಮೂರು ವರ್ಷಗಳು ಕಳೆದಮೇಲೆ;

(ii) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯ ಅಭಿಪ್ರಾಯದ ಪ್ರಕಾರ ತೆರಿಗೆ ಮರು ನಿರ್ಧರಣೆ ಮಾಡಿರುವುದನ್ನು ಸಮರ್ಥಿಸುವ ವಾಸ್ತವಾಂಶಗಳು ಸಾಕಷ್ಟು ಇವೆ ಎಂಬುದು ಅವರ ಗಮನಕ್ಕೆ ಬಂದ ತರುವಾಯ ಮೂರು ವರ್ಷಗಳು ಕಳೆದ ಮೇಲೆ, ಇದರಲ್ಲಿ ಯಾವುದು ನಂತರವೋ ಆ ಅವಧಿ ಕಳೆದ ನಂತರ.

(15) ಈ ಅಧಿನಿಯಮದ ಮೇರೆಗೆ ಸಂದರ್ಭಾನುಸಾರ ತೆರಿಗೆ ನಿರ್ಧರಣೆಗೆ ಅಥವಾ ತೆರಿಗೆ ಮರು ನಿರ್ಧರಣೆಗೆ ನಿರ್ದಿಷ್ಟಪಡಿಸಿರುವ ಕಾಲಮಿತಿಯನ್ನು ಲೆಕ್ಕ ಹಾಕುವಾಗ ತೆರಿಗೆ ನಿರ್ಧರಣೆಯ ಅಥವಾ ಇತರ ವ್ಯವಹರಣೆಗಳ ವಿರುದ್ಧ ಸಲ್ಲಿಸಿದ ಯಾವುದೇ ಅಪೀಲಿನ ವಿಲೆಗಾಗಿ ಅಪೀಲು ಪ್ರಾಧಿಕಾರವು, ನ್ಯಾಯಾಧಿಕರಣವು ಅಥವಾ ಸಕ್ಷಮ ನ್ಯಾಯಾಲಯವು ತೆಗೆದುಕೊಂಡ ಅವಧಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

(16) (2) ನೇ ಉಪಪ್ರಕರಣಕ್ಕೆ ಒಳಪಟ್ಟು ಈ ಪ್ರಕರಣದ ಮೇರೆಗೆ ನಿರ್ಧರಿಸಿದ ಮತ್ತು ವಿಧಿಸಿದ ಸ್ವತ್ತು ತೆರಿಗೆಯು, 2008–09ನೇ ಹಣಕಾಸಿನ ವರ್ಷದಿಂದ ಪ್ರಾರಂಭಿಸಿ ಮೂರು ವರ್ಷಗಳಿಗೆ ಒಂದು ಬಾರಿ ಶೇಕಡಾ 15 ರಷ್ಟು ಹೆಚ್ಚಿಸಿ ಪರಿಷ್ಕರಿಸುವುದಕ್ಕೆ ಗುರಿಯಾಗತಕ್ಕದ್ದು:

ಪರಂತು, ನಗರಪಾಲಿಕೆಯು ಅಂಥ ಸ್ವತ್ತು ತೆರಿಗೆಯನ್ನು ಮೂರು ವರ್ಷಗಳಿಗೊಮ್ಮೆ ಶೇಕಡಾ 30ರ ವರೆಗೆ ಹೆಚ್ಚಿಸಬಹುದು ಮತ್ತು ಬೇರೆ ಬೇರೆ ಪ್ರದೇಶಗಳಿಗೆ ಮತ್ತು ಕಟ್ಟಡಗಳ ಮತ್ತು ಭೂಮಿಗಳ ಬೇರೆ ಬೇರೆ ವರ್ಗಗಳಿಗೆ ಬೇರೆಬೇರೆ ದರಗಳಲ್ಲಿ ತೆರಿಗೆ ಹೆಚ್ಚಿಸಬಹುದು:

ಮತ್ತೂ ಪರಂತು, ಮೂರು ವರ್ಷಗಳ ಬ್ಲಾಕ್ ಅವಧಿಯಲ್ಲಿ ಈ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆ ನಿರ್ಧರಣೆ ಮಾಡದಿರುವುದು ಯಾವ ಕಟ್ಟಡಕ್ಕೆ ಸಂಬಂಧಿಸಿದಂತೆ ಯಾವುದೇ ಸೇರ್ಪಡೆ, ಬಳಕೆಯಲ್ಲಿ ಬದಲಾವಣೆ, ಮಾರ್ಪಾಡು ಅಥವಾ ಪರಿವರ್ತನೆ ಮಾಡಲಾಗಿದೆಯೋ ಆ ಯಾವುದೇ ಕಟ್ಟಡಕ್ಕೆ

ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದಲ್ಲ. ಮಾಲೀಕನು ಅಥವಾ ಅಧಿಭೋಗದಾರನು ಅಂಥ ಬದಲಾವಣೆಗಳನ್ನು ಅವು ಪೂರ್ಣಗೊಂಡ ದಿನಾಂಕ ಅಥವಾ ಅದರ ಅಧಿಭೋಗಕ್ಕೆ ಬಂದ ದಿನಾಂಕ ಇವುಗಳಲ್ಲಿ ಯಾವುದು ಮೊದಲೋ ಆ ದಿನಾಂಕದಿಂದ ಆರು ತಿಂಗಳ ಒಳಗಾಗಿ ಪರಿಷ್ಕೃತ ತೆರಿಗೆ ವಿವರ ಪಟ್ಟಿಕೆ ಮತ್ತು ತೆರಿಗೆಯೊಂದಿಗೆ ವರದಿ ಮಾಡತಕ್ಕದ್ದು:

ಮತ್ತೂ ಪರಂತು, ಈ ಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ ಸ್ವತ್ತು ತೆರಿಗೆಯನ್ನು ಇನ್ನೂ ಮುಂಚಿತವಾಗಿಯೇ ಪರಿಷ್ಕರಿಸುವಂತೆ ನಿರ್ದೇಶನ ನೀಡಲು ರಾಜ್ಯ ಸರ್ಕಾರಕ್ಕೆ ಇರುವ ಅಧಿಕಾರಕ್ಕೆ ಬಾಧಕ ಉಂಟುಮಾಡುತ್ತದೆ ಎಂದು ಭಾವಿಸತಕ್ಕದ್ದಲ್ಲ.

(17) ಆಯುಕ್ತರು, ವಲಯಗಳ ವರ್ಗೀಕರಣ, ಯುನಿಟ್ ವಿಸ್ತೀರ್ಣ ಮೌಲ್ಯ ಮತ್ತು ಸ್ವತ್ತಿನ ವರ್ಗದ ಬಗ್ಗೆ ಬರುವ ಯಾವುವೇ ಸಂಶಯಗಳನ್ನು ಪರಿಹರಿಸುವ ಅಧಿಕಾರವನ್ನು ಹೊಂದಿರತಕ್ಕದ್ದು. ಈ ಸಂಬಂಧದಲ್ಲಿ ಆಯುಕ್ತರ ತೀರ್ಮಾನವು ಅಂತಿಮವಾಗಿರತಕ್ಕದ್ದು.][1]

1. 2009 ರ ಅಧಿನಿಯಮ ಸಂಖ್ಯೆ 2 ರ ಮೂಲಕ 13.1.2009 ರಿಂದ ಜಾರಿಗೆ ಬರುವಂತೆ 108ಎ ಪ್ರಕರಣವನ್ನು ಸೇರಿಸಲಾಗಿದೆ.

**109. ಸ್ವತ್ತು ತೆರಿಗೆಯ ನಿರ್ಧರಣೆಯ ವಿಧಾನ.**– (1) ತೆರಿಗೆಗೆ ಗುರಿಯಾಗತಕ್ಕ ಕಟ್ಟಡದ ಬಂಡವಾಳ ಮೌಲ್ಯವನ್ನು, [1][ಕಟ್ಟಡವು ಆವರಿಸಿಕೊಂಡಿರುವ ಭೂಮಿ ಸಹಿತ][1] ನಿರ್ಧರಣೆ ಮಾಡತಕ್ಕದ್ದು. ತೆರಿಗೆಗೆ ಗುರಿಯಾಗತಕ್ಕ ಅಂಥ ಭೂಮಿಯ ಬಂಡವಾಳ ಮೌಲ್ಯವನ್ನು ಕರ್ನಾಟಕ ಸ್ಟ್ಯಾಂಪು ಅಧಿನಿಯಮದ, 1957ರ 45ಬಿ ಪ್ರಕರಣದ ಮೇರೆಗೆ [2][ಪ್ರಕಟಿಸಿದ ಸ್ವತ್ತುಗಳ ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿಗಳನ್ನು][2] ಗಮನದಲ್ಲಿರಿಸಿಕೊಂಡು ನಿರ್ಧರಣೆ ಮಾಡತಕ್ಕದ್ದು. [3][ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು,][3] ತೆರಿಗೆಗೆ ಗುರಿಯಾಗತಕ್ಕ ಕಟ್ಟಡದ ಬಂಡವಾಳ ಮೌಲ್ಯವು, ಕರ್ನಾಟಕ ಸ್ಟ್ಯಾಂಪು ಅಧಿನಿಯಮ, 1957ರ 45ಬಿ ಪ್ರಕರಣದ ಮೇರೆಗೆ ಪ್ರಕಟಿಸಿದ ಸ್ವತ್ತುಗಳ ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿಗಳ [4][ಶೇಕಡಾ ಐವತ್ತಕ್ಕೆ ಸಮನಾದ][4] ತೆರಿಗೆಯಲ್ಲಿ, ತೆರಿಗೆ ನಿರ್ಧರಣೆ ಸಮಯದಲ್ಲಿ ಕಾಲಕಾಲಕ್ಕೆ ಸರ್ಕಾರವು ಅಧಿಸೂಚಿಸಬಹುದಾದಂಥ ಸವಕಳಿಯನ್ನು ಕಳೆದ ನಂತರ ಬರುವ ಮೌಲ್ಯ ಆಗಿರತಕ್ಕದ್ದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

3. 2005 ರ ಅಧಿನಿಯಮ ಸಂಖ್ಯೆ 5 ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

4. 2005 ರ ಅಧಿನಿಯಮ ಸಂಖ್ಯೆ 5 ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ತೆರಿಗೆಗೆ ಗುರಿಯಾಗತಕ್ಕ ಖಾಲಿ ಭೂಮಿಯ ಮೌಲ್ಯವು, ಕರ್ನಾಟಕ ಸ್ಟ್ಯಾಂಪು ಅಧಿನಿಯಮ, 1957ರ 45ಬಿ ಪ್ರಕರಣದ ಮೇರೆಗೆ ಸರ್ಕಾರವು ಅಧಿಸೂಚಿಸಿದ ಭೂಮಿಯ, [1][ಪ್ರಕಟಿಸಿದ ಸ್ವತ್ತುಗಳ ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿಗಳ][1] [2][ಶೇಕಡಾ ಐವತ್ತಕ್ಕೆ ಸಮ][2]ನಾಗಿರತಕ್ಕದ್ದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 2005 ರ ಅಧಿನಿಯಮ ಸಂಖ್ಯೆ 5 ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1]**[109ಎ. ಸ್ವತ್ತು ತೆರಿಗೆಯನ್ನು ಹೆಚ್ಚಿಸುವುದು.**– 108 ಮತ್ತು 109ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಅವುಗಳಲ್ಲಿ ಯಾವುದೇ ಉಪಬಂಧದ ಮೇರೆಗೆ ನಿರ್ಧರಣೆ ಮಾಡಿದ ಮತ್ತು ವಿಧಿಸಿದ ಸ್ವತ್ತು ತೆರಿಗೆಯನ್ನು ಆ ತರುವಾಯದ ಪ್ರತಿಯೊಂದು ವರ್ಷವೂ ನಿರ್ಧರಣೆ ಮಾಡತಕ್ಕದ್ದಲ್ಲ. ಆದರೆ, 2005–2006ನೇ ಹಣಕಾಸು ವರ್ಷದಿಂದ ಪ್ರಾರಂಭಿಸಿ ತೆರಿಗೆಯು ಪ್ರತಿ ಮೂರು ವರ್ಷಕ್ಕೊಮ್ಮೆ ಶೇಕಡಾ ಹದಿನೈದರಷ್ಟು ಹೆಚ್ಚಾಗಿರತಕ್ಕದ್ದು:

ಪರಂತು, ನಗರಪಾಲಿಕೆಯು, ಮೂರು ವರ್ಷಗಳಿಗೊಮ್ಮೆ ಶೇಕಡಾ ಮೂವತ್ತರಷ್ಟರವರೆಗೆ ಅಂಥ ಸ್ವತ್ತು ತೆರಿಗೆಯನ್ನು ಹೆಚ್ಚಿಸಬಹುದು ಮತ್ತು ಬೇರೆ ಬೇರೆ ಪ್ರದೇಶಗಳಿಗೆ ಮತ್ತು ಕಟ್ಟಡಗಳ ಮತ್ತು ಭೂಮಿಗಳ ಬೇರೆ ಬೇರೆ ವರ್ಗಗಳಿಗೆ ಬೇರೆ ಬೇರೆ ದರದಲ್ಲಿ ತೆರಿಗೆಯನ್ನು ಹೆಚ್ಚಿಸಬಹುದು:

ಮತ್ತೂ ಪರಂತು, ಈ ಪ್ರಕರಣದ ಮೇರೆಗೆ ಮೂರು ವರ್ಷಗಳ ಬ್ಲಾಕ್ ಅವಧಿಯಲ್ಲಿ ಸ್ವತ್ತು ತೆರಿಗೆ ನಿರ್ಧರಣೆ ಮಾಡದೇ ಇರುವುದು, ಯಾವ ಕಟ್ಟಡಕ್ಕೆ ಸಂಬಂಧಿಸಿದಂತೆ ಯಾವುದೇ ವಿಸ್ತರಣೆ, ಮಾರ್ಪಾಟು ಅಥವಾ ಬದಲಾವಣೆ ಮಾಡಲಾಗಿದೆಯೋ ಆ ಕಟ್ಟಡಕ್ಕೆ ಅನ್ವಯವಾಗತಕ್ಕದ್ದಲ್ಲ:

ಮತ್ತೂ ಪರಂತು, ಈ ಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ಸ್ವತ್ತು ತೆರಿಗೆಯನ್ನು ಇನ್ನೂ ಮುಂಚಿತವಾಗಿ ಪರಿಷ್ಕರಿಸುವಂತೆ ನಿರ್ದೇಶನ ನೀಡಲು ರಾಜ್ಯ ಸರ್ಕಾರಕ್ಕೆ ಇರುವ ಅಧಿಕಾರಕ್ಕೆ ಬಾಧಕ ಉಂಟು ಮಾಡುತ್ತದೆ ಎಂದು ಭಾವಿಸತಕ್ಕದಲ್ಲ.][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಮತ್ತು 2005ರ ಅಧಿನಿಯಮ ಸಂಖ್ಯೆ 5ರ ಮೂಲಕ 1.4.2005 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**110. ಸಾಮಾನ್ಯ ವಿನಾಯತಿ.**– [1][(1)][1] ಈ ಕೆಳಕಂಡ ಕಟ್ಟಡಗಳಿಗೆ ಮತ್ತು ಭೂಮಿಗಳಿಗೆ ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡತಕ್ಕದ್ದು:–

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.

(ಎ) ಸಾರ್ವಜನಿಕ ಆರಾಧನೆಗಾಗಿ ಪ್ರತ್ಯೇಕವಾಗಿಟ್ಟ ಮತ್ತು ಹಾಗೆ ವಾಸ್ತವವಾಗಿ ಬಳಸುತ್ತಿರುವ ಅಥವಾ ಯಾವ ಇತರ ಉದ್ದೇಶಗಳಿಗೂ ಬಳಸದಿರುವ ಸ್ಥಳಗಳು;

(ಬಿ) ಯಾವ ಛತ್ರಗಳಲ್ಲಿ ಇರುವುದಕ್ಕಾಗಿ ಬಾಡಿಗೆಯನ್ನು ವಿಧಿಸುವುದಿಲ್ಲವೋ ಆ ಛತ್ರಗಳು ಮತ್ತು ಯಾವ ಛತ್ರಗಳಲ್ಲಿ ಇರುವುದಕ್ಕಾಗಿ ವಿಧಿಸಿದ ಬಾಡಿಗೆಯನ್ನು ಧರ್ಮಾರ್ಥ ಉದ್ದೇಶಗಳಿಗಾಗಿ ಬಳಸಲಾಗುತ್ತಿದೆಯೋ ಆ ಛತ್ರಗಳು;

(ಸಿ) ನಿರಾಶ್ರಿತರಿಗೆ ಅಥವಾ ಪ್ರಾಣಿಗಳಿಗೆ ಆಶ್ರಯ ಕೊಡುವ ಧರ್ಮಾರ್ಥ ಉದ್ದೇಶಕ್ಕಾಗಿ ಬಳಸುತ್ತಿರುವ ಸ್ಥಳಗಳು ಮತ್ತು ಅನಾಥಾಲಯಗಳು, ಕಿವುಡರು ಮತ್ತು ಮೂಕರಿಗಾಗಿ ಗೃಹಗಳು ಮತ್ತು ಶಾಲೆಗಳು, ವೃದ್ಧರಿಗೆ ಮತ್ತು ಪತಿತ ಮಹಿಳೆಯರಿಗಾಗಿ ಆಶ್ರಮಗಳು ಮತ್ತು ಸರ್ಕಾರವು ಅನುಮೋದಿಸಿದಂಥ ಲೋಕೋಪಕಾರಿ ರೀತಿಯಲ್ಲಿ ನಡೆಸಲಾಗುತ್ತಿರುವ ಅದೇ ರೀತಿಯ ಸಂಸ್ಥೆಗಳು;

(ಡಿ) 1961ರ ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮದ ಮತ್ತು 1958ರ ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮದ (1958ರ ಕೇಂದ್ರ ಅಧಿನಿಯಮ 24) ಮೇರೆಗೆ ಸಂರಕ್ಷಿತವಾದಂಥ ಪ್ರಾಚೀನ ಸ್ಮಾರಕಗಳು ಅಥವಾ ವಾಸದ ಗೃಹಗಳಾಗಿ ಅಥವಾ ಸರ್ಕಾರಿ ಕಛೇರಿಗಳಾಗಿ ಬಳಸದೇ ಇರುವ ಅವುಗಳ ಭಾಗಗಳು;

(ಇ) ಧರ್ಮಾರ್ಥ ಆಸ್ಪತ್ರೆಗಳು ಮತ್ತು ಔಷಧಾಲಯಗಳು, ಆದರೆ ಅವುಗಳಿಗೆ ಲಗತ್ತಾದ ವಾಸಗೃಹಗಳು ಒಳಗೊಳ್ಳುವುದಿಲ್ಲ;

(ಎಫ್) ಕಾಲಕಾಲಕ್ಕೆ ಸರ್ಕಾರವು ಅಧಿಸೂಚಿಸಬಹುದಾದ ರೈಲ್ವೆ ಆಡಳಿತಗಳು ನಿರ್ವಹಿಸುತ್ತಿರುವಂಥ ಆಸ್ಪತ್ರೆಗಳು ಮತ್ತು ಔಷಧಾಲಯಗಳು, ಆದರೆ ಅವುಗಳಿಗೆ ಲಗತ್ತಾದ ವಾಸಗೃಹಗಳು ಒಳಗೊಳ್ಳುವುದಿಲ್ಲ;

(ಜಿ) 394ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೇರೆಗೆ ಆಯುಕ್ತರು ಪ್ರಕಟಿಸಿದ ಪಟ್ಟಿಯಲ್ಲಿ ಸೇರಿರುವ ಸ್ಮಶಾನ ಮತ್ತು ಸುಡುಗಾಡುಗಳು;

(ಹೆಚ್) ಉಚಿತ ಮನೋರಂಜನಾ ಉದ್ದೇಶಗಳಿಗಾಗಿ ಪ್ರತ್ಯೇಕವಾಗಿಟ್ಟ ಸರ್ಕಾರಿ ಭೂಮಿಗಳು ಮತ್ತು ಯಾವ ಸರ್ಕಾರಿ ಭೂಮಿಯಿಂದ ಯಾವುದೇ ಆದಾಯ ಬರುವುದಿಲ್ಲವೆಂದು ಸರ್ಕಾರವು ಅಭಿಪ್ರಾಯಪಟ್ಟು, ಅಧಿಸೂಚಿಸಬಹುದೋ ಅಂಥ ಎಲ್ಲ ಇತರ ಸರ್ಕಾರಿ ಭೂಮಿಗಳು;

(ಐ) (ಎ) ಲಾಭಕ್ಕಾಗಿ ಸ್ಥಾಪಿಸಿರದ ಅಥವಾ ನಡೆಸದಿರುವ ವಿದ್ಯಾರ್ಥಿ ನಿಲಯಗಳಿಗಾಗಿ,

(ಬಿ) ಮನ್ನಣೆ ಪಡೆದ ಶೈಕ್ಷಣಿಕ ಸಂಸ್ಥೆಗಳು ಶೈಕ್ಷಣಿಕ ಉದ್ದೇಶಗಳಿಗಾಗಿ,

(ಸಿ) 1926ರ ಕಾರ್ಮಿಕ ಸಂಘಗಳ ಅಧಿನಿಯಮದ ಮೇರೆಗೆ ನೋಂದಾಯಿತವಾದ ಕಾರ್ಮಿಕ ಸಂಘಗಳಿಗಾಗಿ ಮತ್ತು ಅಂಥ ಸಂಘಕ್ಕೆ ಸೇರಿದ ಕಛೇರಿಗಳಿಗಾಗಿ

– ಅನನ್ಯವಾಗಿ ಬಳಸುತ್ತಿರುವ ಕಟ್ಟಡ ಅಥವಾ ಭೂಮಿಗಳು;

(ಜೆ) ಸರ್ಕಾರದ ಉದ್ದೇಶಗಳಿಗಾಗಿ ಬಳಸುತ್ತಿರುವ ಮತ್ತು ವಸತಿ ಅಥವಾ ವಾಣಿಜ್ಯ ಉದ್ದೇಶಗಳಿಗಾಗಿ ಬಳಸದಿರುವ ಅಥವಾ ಬಳಸಲು ಉದ್ದೇಶಿಸದಿರುವ, ಕೇಂದ್ರ ಸರ್ಕಾರಕ್ಕೆ ಅಥವಾ ಯಾವುದೇ ರಾಜ್ಯಸರ್ಕಾರಕ್ಕೆ ಸೇರಿದ ಕಟ್ಟಡಗಳು ಅಥವಾ ಭೂಮಿಗಳು;

(ಕೆ) ಯಾವುದೇ ಮಂಜೂರಾತಿಗೆ, ಹಂಚಿಕೆಗೆ ಅಥವಾ ಗುತ್ತಿಗೆಗೆ ಅನುಸಾರವಾಗಿ ಯಾರೇ ವ್ಯಕ್ತಿಗೆ, ಯಾವ ಕಟ್ಟಡಗಳ ಅಥವಾ ಭೂಮಿಗಳ ಸ್ವಾಧೀನವನ್ನು ಒಪ್ಪಿಸಿಲ್ಲವೊ, [1][ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987 ರ ಮೇರೆಗೆ ರಚಿಸಿದ ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರ][1]ಕ್ಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ, ಕರ್ನಾಟಕ ಗೃಹಮಂಡಲಿಗೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಸೇರಿರುವ ಆ ಕಟ್ಟಡಗಳು ಅಥವಾ ಭೂಮಿಗಳು;

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎಲ್) ಸರ್ಕಾರದ ರೆವಿನ್ಯೂ ಲೆಕ್ಕಗಳಲ್ಲಿ ಕೃಷಿ ಉದ್ದೇಶಗಳಿಗಾಗಿ ಬಳಸುತ್ತಿರುವ ಭೂಮಿಯೆಂದು ನೋಂದಾಯಿತವಾಗಿರುವ ಮತ್ತು ಬೆಳೆಗಳ ಸಾಗುವಳಿಗಾಗಿ ವಾಸ್ತವವಾಗಿ ಬಳಸುತ್ತಿರುವ ಭೂಮಿ:

ಪರಂತು, (ಎ), (ಸಿ) ಮತ್ತು (ಇ) ಖಂಡಗಳಲ್ಲಿ ಒಳಗೊಂಡಿರುವುದು ಯಾವುದೂ, ಯಾವ ಕಟ್ಟಡಕ್ಕೆ ಅಥವಾ [1][ಖಾಲಿ ಭೂಮಿ][1]ಗೆ ಯಾವ ವ್ಯಕ್ತಿಯು ಬಾಡಿಗೆ ಸಂದಾಯ ಮಾಡಬೇಕಾಗಿದೆಯೋ ಅಥವಾ ಸದರಿ ಖಂಡಗಳಲ್ಲಿ ಉಲ್ಲೇಖಿಸಿರುವ ಉದ್ದೇಶಗಳಿಗಾಗಿ, ಅದನ್ನು ಯಾವ ವ್ಯಕ್ತಿಯು ಬಳಸುತ್ತಿರುವನೋ ಆ ಕಟ್ಟಡಕ್ಕೆ ಅಥವಾ ಖಾಲಿ ಭೂಮಿಗೆ, ಸ್ವತ್ತು ತೆರಿಗೆಯಿಂದ ವಿನಾಯಿತಿ ನೀಡಿದೆ ಎಂದು ಭಾವಿಸತಕ್ಕದ್ದಲ್ಲ:

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಮತ್ತೂ ಪರಂತು, (ಜೆ) ಖಂಡದ ಉದ್ದೇಶಕ್ಕಾಗಿ, ಯಾವುದೇ ಕಟ್ಟಡವನ್ನು ಅಥವಾ [1][ಖಾಲಿ ಭೂಮಿ][1]ಯನ್ನು ಸರ್ಕಾರದ ಉದ್ದೇಶಗಳಿಗಾಗಿ ಬಳಸಲಾಗುತ್ತಿದೆಯೇ ಹೊರತು ವಸತಿಯ ಅಥವಾ ವಾಣಿಜ್ಯ ಉದ್ದೇಶಗಳಿಗಾಗಿ ಬಳಸುತ್ತಿಲ್ಲ ಅಥವಾ ಬಳಸಲು ಉದ್ದೇಶಿಸಿಲ್ಲ ಎಂದು ಸರ್ಕಾರವು ಅಥವಾ ಸರ್ಕಾರದಿಂದ ಕ್ರಮಬದ್ಧವಾಗಿ ಅಧಿಕೃತನಾದ ಯಾರೇ ಅಧಿಕಾರಿಯು ನೀಡಿದ ಪ್ರಮಾಣಪತ್ರಕ್ಕೆ ನಗರಪಾಲಿಕೆಯು ಬದ್ಧವಾಗಿರತಕ್ಕದ್ದು.

1. 2001 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(2) ಈ ಪ್ರಕರಣದ ಮೇರೆಗೆ ವಿನಾಯಿತಿಗಳನ್ನು ಮಂಜೂರು ಮಾಡಿದ್ದರೂ, ನಾಗರಿಕ ಸೌಕರ್ಯಗಳನ್ನು ಒದಗಿಸುವುದಕ್ಕಾಗಿ ಮತ್ತು ಸಾಮಾನ್ಯ ಅಥವಾ ವಿಶೇಷ ಸೇವೆಗಳನ್ನು ಸಲ್ಲಿಸುವುದಕ್ಕಾಗಿ ನಿಯಮಿಸಬಹುದಾದಂಥ ದರಗಳಲ್ಲಿ ನಗರಪಾಲಿಕೆಯು ಸೇವಾ ಶುಲ್ಕಗಳನ್ನು ವಸೂಲು ಮಾಡುವುದಕ್ಕೆ ಅವಕಾಶ ಇರತಕ್ಕದ್ದು.][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**111. ಸ್ವತ್ತು ತೆರಿಗೆಯು ಸ್ವತ್ತು ಮತ್ತು ಚರಸ್ವತ್ತುಗಳ ಮೇಲೆ ಮೊದಲ ಭಾರವಾಗಿರತಕ್ಕದ್ದು.–** ಕಟ್ಟಡ ಮತ್ತು ಭೂಮಿಗಳ ಮೇಲಿನ ಸ್ವತ್ತು ತೆರಿಗೆಯು, ಅದರ ಮೇಲೆ ಸರ್ಕಾರಕ್ಕೆ ಬಾಕಿ ಇರುವ ಭೂಕಂದಾಯ ಯಾವುದಾದರೂ ಇದ್ದರೆ, ಅದನ್ನು ಮುಂಚಿತವಾಗಿಯೇ ಪಾವತಿ ಮಾಡುವುದಕ್ಕೆ ಒಳಪಟ್ಟು, ಸದರಿ ಕಟ್ಟಡಗಳ ಅಥವಾ ಭೂಮಿಗಳ ಮೇಲೆ ಮತ್ತು ಅಂಥ ಕಟ್ಟಡಗಳ ಅಥವಾ ಭೂಮಿಗಳ ಒಳಗೆ ಅಥವಾ ಅವುಗಳ ಮೇಲೆ ಕಂಡುಬರುವ ಮತ್ತು ಅಂಥ ತೆರಿಗೆಗೆ ಗುರಿಯಾಗಬಹುದಾದ ವ್ಯಕ್ತಿಗೆ ಸೇರಿರುವ ಚರಸ್ವತ್ತು ಯಾವುದಾದರೂ ಇದ್ದರೆ ಅವುಗಳ ಮೇಲೆ ಮೊದಲ ಭಾರವಾಗಿರತಕ್ಕದ್ದು.

**112. ಸ್ವತ್ತು ತೆರಿಗೆಯು ಯಾರಿಂದ ಮತ್ತು ಯಾವಾಗ ಸಂದಾಯವಾಗಬೇಕು.–** (1) (2)ನೇ ಉಪ-ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸ್ವತ್ತು ತೆರಿಗೆಯು ಮೂಲತಃ,–

(ಎ) ಆವರಣಗಳು, ಸರ್ಕಾರದ ಅಥವಾ ನಗರಪಾಲಿಕೆಯ ನಿಕಟ ಸ್ವಾಧೀನದಲ್ಲಿದ್ದರೆ, ಅವುಗಳ ವಾಸ್ತವಿಕ ಅಧಿಭೋಗದಾರನಿಂದ:

[1][ಪರಂತು, ಸರ್ಕಾರದ ಒಡೆತನದಲ್ಲಿರುವ ಮತ್ತು ಬಾಡಿಗೆ ಪಾವತಿಯ ಮೇಲೆ ಯಾರೇ ವ್ಯಕ್ತಿಯ ಸ್ವಾಧೀನದಲ್ಲಿರುವ ಆವರಣಗಳಿಗೆ ಸಂಬಂಧಿಸಿದಂತೆ, ಬಾಕಿ ಇರುವ ಸ್ವತ್ತು ತೆರಿಗೆಯನ್ನು ಸರ್ಕಾರವು ಪಾವತಿ ಮಾಡತಕ್ಕದ್ದು:

ಮತ್ತೂ ಪರಂತು, ನಗರಪಾಲಿಕೆಯ ಒಡೆತನದಲ್ಲಿರುವ ಮತ್ತು ಬಾಡಿಗೆಯ ಪಾವತಿಯ ಮೇಲೆ ಯಾರೇ ವ್ಯಕ್ತಿಯ ಸ್ವಾಧೀನದಲ್ಲಿರುವ ಆವರಣಗಳಿಗೆ ಸಂಬಂಧಿಸಿದಂತೆ, ಯಾವುದೇ ಸ್ವತ್ತು ತೆರಿಗೆಯನ್ನು ಪಾವತಿ ಮಾಡತಕ್ಕದ್ದಲ್ಲ;][1]

1. 1978ರ ಅಧಿನಿಯಮ ಸಂಖ್ಯೆ 24 ರ ಮೂಲಕ 29.9.1978 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) ಆವರಣಗಳು ಹಾಗೆ ಸ್ವಾಧೀನದಲ್ಲಿಲ್ಲದಿದ್ದರೆ,–

(i) ಆವರಣಗಳನ್ನು ಬಾಡಿಗೆಗೆ ಕೊಟ್ಟಿದ್ದರೆ, ಬಾಡಿಗೆಗೆ ಕೊಟ್ಟವನಿಂದ;

(ii) ಆವರಣಗಳನ್ನು ಒಳಬಾಡಿಗೆಗೆ ಕೊಟ್ಟಿದ್ದರೆ ಮೊದಲು ಬಾಡಿಗೆಗೆ ಕೊಟ್ಟವನಿಂದ;

(iii) ಅವುಗಳನ್ನು ಬಾಡಿಗೆಗೆ ಕೊಟ್ಟಿರದಿದ್ದರೆ, ಯಾವ ವ್ಯಕ್ತಿಯಲ್ಲಿ ಆ ಆವರಣಗಳನ್ನು ಬಾಡಿಗೆಗೆ ಕೊಡುವ ಹಕ್ಕು ನಿಹಿತವಾಗಿದೆಯೋ ಆ ವ್ಯಕ್ತಿಯಿಂದ

– ಪಾವತಿಯಾಗಕ್ಕದ್ದು.

(2) ಬಾಡಿಗೆದಾರನಿಗೆ ಯಾವುದೇ ಭೂಮಿಯನ್ನು ಒಂದು ವರ್ಷಕ್ಕೆ ಮೀರಿದ ಯಾವುದೇ ಅವಧಿಗಾಗಿ ಬಾಡಿಗೆಗೆ ಕೊಟ್ಟಿದ್ದರೆ ಮತ್ತು ಅಂಥ ಬಾಡಿಗೆದಾರನು ಅಥವಾ ಅಂಥ ಬಾಡಿಗೆದಾರನಿಂದ ಯಾವುದೇ ರೀತಿಯಲ್ಲಿ ಸ್ವಾಮ್ಯವನ್ನು ಪಡೆದಿರುವ ಯಾರೇ ವ್ಯಕ್ತಿಯು ಆ ಭೂಮಿಯ ಮೇಲೆ ಕಟ್ಟಡವನ್ನು ಕಟ್ಟಿದ್ದರೆ, ಸದರಿ ಭೂಮಿಯ ಮೇಲೆ ಮತ್ತು ಅದರ ಮೇಲೆ ಕಟ್ಟಿದ ಕಟ್ಟಡದ ಮೇಲೆ, ನಿರ್ಧರಣೆ ಮಾಡಿದ ಸ್ವತ್ತು ತೆರಿಗೆಯನ್ನು ಆ ಬಾಡಿಗೆದಾರನು ಅಥವಾ ಆ ವ್ಯಕ್ತಿಯು, ಆ ಆವರಣಗಳು ಸದರಿ ಬಾಡಿಗೆದಾರನ ಅಥವಾ ಆ ವ್ಯಕ್ತಿಯ ಸ್ವಾಧೀನದಲ್ಲಿ ಇರಲಿ ಅಥವಾ ಇಲ್ಲದಿರಲಿ ಮೂಲತಃ ಸಂದಾಯ ಮಾಡತಕ್ಕದ್ದು.

(3) ಸ್ವತ್ತು ತೆರಿಗೆಯನ್ನು, ಪ್ರತಿಯೊಂದು [1][ವರ್ಷ][1]ದ ಪ್ರಾರಂಭದ ತರುವಾಯ [1][ತೊಂಬತ್ತು ದಿನಗಳ][1] ಒಳಗಾಗಿ ಮೂಲತಃ ಹೊಣೆಗಾರನಾದ ವ್ಯಕ್ತಿಯು ಪಾವತಿ ಮಾಡತಕ್ಕದ್ದು.

1. 2001ರ ಅಧಿನಿಯಮ ಸಂಖ್ಯೆ 31ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(4) (3)ನೇ ಉಪಪ್ರಕರಣಕ್ಕೆ ಅನುಸಾರವಾಗಿ ಪಾವತಿ ಮಾಡಲು ತಪ್ಪಿದರೆ, ತೆರಿಗೆ ಪಾವತಿ ಮಾಡಲು ಹೊಣೆಗಾರನಾದ ವ್ಯಕ್ತಿಯು (3)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾದ ತರುವಾಯ, ಪಾವತಿಯಾಗದೆ ಉಳಿದಿರುವ ತೆರಿಗೆಯ ಮೊಬಲಗಿನ ಮೇಲೆ ತಿಂಗಳಿಗೆ ಶೇಕಡಾ ಎರಡರ ದರದಲ್ಲಿ ದಂಡವನ್ನು ಪಾವತಿ ಮಾಡತಕ್ಕದ್ದು.][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ (4) ರಿಂದ (7) ರವರೆಗಿನ ಉಪಪ್ರಕರಣಗಳನ್ನು ಬಿಟ್ಟುಬಿಡಲಾಗಿದೆ ಮತ್ತು 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ (4)ನೇ ಉಪಪ್ರಕರಣವನ್ನು ಸೇರಿಸಲಾಗಿದೆ.

[1][**112ಎ. ಸ್ವತ್ತು ತೆರಿಗೆಯ ನಿರ್ಧರಣೆ.–** (1) ಈ ಅಧಿನಿಯಮದ ಮೇರೆಗೆ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಹೊಣೆಗಾರನಾಗಿರುವ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು, ಆಯುಕ್ತರಿಗೆ ಅಥವಾ ಈ ಸಂಬಂಧದಲ್ಲಿ ಅವರು ಅಧಿಕೃತಗೊಳಿಸಿದ ಅಧಿಕಾರಿಗೆ (ಇಲ್ಲಿ ಇನ್ನು ಮುಂದೆ ಅಧಿಕೃತ ಅಧಿಕಾರಿಯೆಂದು ಉಲ್ಲೇಖಿಸಲಾಗಿದೆ) IIIನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಅಂಥ ಅವಧಿಯೊಳಗೆ ಮತ್ತು ಅಂಥ ರೀತಿಯಲ್ಲಿ ಮತ್ತು ಅಂಥ ನಮೂನೆಯಲ್ಲಿ ವಿವರ ಪಟ್ಟಿಕೆಯನ್ನು ಪ್ರತಿವರ್ಷ ಸಲ್ಲಿಸತಕ್ಕದ್ದು:

ಪರಂತು, ತೆರಿಗೆಯನ್ನು ಪಾವತಿ ಮಾಡಲು ಹೊಣೆಗಾರನಾಗಿರುವ ಮಾಲೀಕನು ಅಥವಾ ಅಧಿಭೋಗದಾರನು ವಿವರ ಪಟ್ಟಿಕೆಯನ್ನು ಸಲ್ಲಿಸಿದರೆ ಮತ್ತು ಬಾಕಿ ಇರುವ ತೆರಿಗೆಯನ್ನು, ವರ್ಷದ ಪ್ರಾರಂಭದ ಮೊದಲನೇ ದಿನಾಂಕದಿಂದ ಒಂದು ತಿಂಗಳೊಳಗೆ ಪಾವತಿ ಮಾಡಿದರೆ, ಆತನು ಪಾವತಿ ಮಾಡಬೇಕಾದ ತೆರಿಗೆಯ ಮೇಲೆ ಶೇಕಡಾ ಐದರಷ್ಟು ರಿಯಾಯಿತಿಯನ್ನು ಆತನಿಗೆ ನೀಡತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಯಾವುದೇ ವಿವರಪಟ್ಟಿಕೆಯನ್ನು ಯಾರೇ ಮಾಲೀಕನು ಅಥವಾ ಅಧಿಭೋಗದಾರನು, ಸಲ್ಲಿಸುವ ಮೊದಲು, ಅಂಥ ವಿವರಪಟ್ಟಿಕೆಯ ಆಧಾರದ ಮೇಲೆ ಪಾವತಿ ಮಾಡಬೇಕಾದ ಸ್ವತ್ತು ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ಪಾವತಿ ಮಾಡತಕ್ಕದ್ದು ಮತ್ತು ಅಂಥ ತೆರಿಗೆಯನ್ನು ಪಾವತಿ ಮಾಡಿದ್ದಕ್ಕೆ ತೃಪ್ತಿಕರ ರುಜುವಾತನ್ನು ವಿವರ ಪಟ್ಟಿಕೆಯ ಜೊತೆಯಲ್ಲಿ ಒದಗಿಸತಕ್ಕದ್ದು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ ಹಾಗೆ ಪಾವತಿ ಮಾಡಬೇಕಾದ ತೆರಿಗೆಯನ್ನು, ಅಂಥ ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ಬಾಕಿ ಇರುವ ಸ್ವತ್ತು ತೆರಿಗೆ ಎಂಬುದಾಗಿ ಭಾವಿಸತಕ್ಕದ್ದು. ಅಂತಿಮ ನಿರ್ಧರಣೆಯನ್ನು ಮಾಡಿದ ತರುವಾಯ, ಹಾಗೆ ಪಾವತಿ ಮಾಡಲಾದ ಸ್ವತ್ತು ತೆರಿಗೆಯ ಮೊಬಲಗನ್ನು, ಅಂತಿಮವಾಗಿ ತೆರಿಗೆ ನಿರ್ಧರಣೆ ಮಾಡಿದ ಸ್ವತ್ತು ತೆರಿಗೆಯ ಸಂಬಂಧದಲ್ಲಿ ಪಾವತಿ ಮಾಡಲಾಗಿದೆಯೆಂದು ಭಾವಿಸತಕ್ಕದ್ದು.

(3) (1)ನೇ ಉಪಪ್ರಕರಣದ ಮೇರೆಗೆ ಸಲ್ಲಿಸಿದ ಯಾವುದೇ ವಿವರ ಪಟ್ಟಿಕೆಯು ಸರಿಯಾಗಿದೆ ಮತ್ತು ಪೂರ್ಣವಾಗಿದೆಯೆಂದು ಆಯುಕ್ತರಿಗೆ ಅಥವಾ ಅಧಿಕೃತ ಅಧಿಕಾರಿಗೆ ಮನದಟ್ಟಾದರೆ, ಅವನು ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಸ್ವತ್ತು ತೆರಿಗೆಯ ನಿರ್ಧರಣೆ ಮಾಡತಕ್ಕದ್ದು ಮತ್ತು ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ತೆರಿಗೆ ನಿರ್ಧರಣೆಯ ಆದೇಶದ ಪ್ರತಿಯನ್ನು ಕಳುಹಿಸತಕ್ಕದ್ದು. ಈ ಉಪಪ್ರಕರಣದ ಮೇರೆಗಿನ ತೆರಿಗೆ ನಿರ್ಧರಣೆಯನ್ನು, (1)ನೇ ಉಪಪ್ರಕರಣದ ಮೇರೆಗೆ ವಿವರ ಪಟ್ಟಿಕೆಯನ್ನು ಸಲ್ಲಿಸಿದ ದಿನಾಂಕದಿಂದ ಒಂದು ವರ್ಷದೊಳಗೆ ಮಾಡಿ ಮುಗಿಸತಕ್ಕದ್ದು.

(4) ಯಾರೇ ಮಾಲೀಕನು ಅಥವಾ ಅಧಿಭೋಗದಾರನು (1)ನೇ ಉಪಪ್ರಕರಣದ ಮೇರೆಗೆ ಅಗತ್ಯಪಡಿಸಿದಂತೆ ವಿವರಪಟ್ಟಿಕೆಯನ್ನು ಸಲ್ಲಿಸಲು ವಿಫಲನಾದರೆ [1][ಅಥವಾ (2)ನೇ ಉಪಪ್ರಕರಣದ ಮೇರೆಗೆ ಅಗತ್ಯಪಡಿಸಿದಂತೆ ಆತನು ಪಾವತಿ ಮಾಡಬೇಕಾದ ಸ್ವತ್ತು ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ಪಾವತಿ ಮಾಡಲು ವಿಫಲನಾದರೆ][1] ಅಥವಾ ಅಪೂರ್ಣವಾದ ಅಥವಾ ಸರಿಯಲ್ಲದ ವಿವರ ಪಟ್ಟಿಕೆಯನ್ನು ಸಲ್ಲಿಸಿದರೆ, ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಭೂಮಿಯ ಮತ್ತು ಕಟ್ಟಡದ ಪರಿವೀಕ್ಷಣೆಯನ್ನು ಮಾಡಿಸತಕ್ಕದ್ದು ಮತ್ತು ಅವಶ್ಯವೆಂದು ಭಾವಿಸುವಂಥ ಸ್ಥಳೀಯ ವಿಚಾರಣೆ ಮಾಡಿಸತಕ್ಕದ್ದು ಮತ್ತು ಅಂಥ ಪರಿವೀಕ್ಷಣೆಯ ಹಾಗೂ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಆತನು ಸ್ವತ್ತು ತೆರಿಗೆಯ ನಿರ್ಧರಣೆ ಮಾಡತಕ್ಕದ್ದು ಮತ್ತು ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ತೆರಿಗೆ ನಿರ್ಧರಣೆಯ ಆದೇಶದ ಪ್ರತಿಯನ್ನು ಕಳುಹಿಸತಕ್ಕದ್ದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(5) (3) ಅಥವಾ (4)ನೇ ಉಪಪ್ರಕರಣದ ಮೇರೆಗೆ ಸ್ವತ್ತು ತೆರಿಗೆ ನಿರ್ಧರಣೆಯನ್ನು ಮಾಡುವಾಗ, ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು, ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನಿರ್ಧರಣೆ ಮಾಡಿದ ಸ್ವತ್ತು ತೆರಿಗೆಯ ಜೊತೆಗೆ,–

[1][(ಎ) ಸ್ವತ್ತು ತೆರಿಗೆಯ ಮೊಬಲಗನ್ನು ಪಾವತಿ ಮಾಡಲು ಮತ್ತು ವಿವರ ಪಟ್ಟಿಕೆಯನ್ನು ಸಲ್ಲಿಸಲು ತಪ್ಪಿದ ಸಂದರ್ಭದಲ್ಲಿ, ನಿರ್ಧರಿಸಿದ ಮತ್ತು ಬಾಕಿ ಇರುವ ಸ್ವತ್ತು ತೆರಿಗೆಯ ಮೊಬಲಗಿನ ಮೇಲೆ ಪ್ರತಿ ತಿಂಗಳಿಗೆ ಶೇಕಡಾ ಎರಡರ ದರದಲ್ಲಿ;][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) ಗೊತ್ತಿದ್ದೂ ಅಪೂರ್ಣವಾದ ಅಥವಾ ಸರಿಯಾಗಿಲ್ಲದ ವಿವರಪಟ್ಟಿಕೆಯನ್ನು ಸಲ್ಲಿಸಿದ ಸಂದರ್ಭದಲ್ಲಿ, ನಿರ್ಧರಣೆ ಮಾಡಿದ ಸ್ವತ್ತು ತೆರಿಗೆಯ ಮತ್ತು ವಿವರ ಪಟ್ಟಿಕೆಯೊಂದಿಗೆ ಪಾವತಿ ಮಾಡಿದ ಸ್ವತ್ತು ತೆರಿಗೆಯ ವ್ಯತ್ಯಾಸದ ಮೊಬಲಗಿನ ಎರಡರಷ್ಟನ್ನು ಮೀರದಂತೆ;

[1][(ಸಿ) ಸ್ವತ್ತು ತೆರಿಗೆಯ ಪೂರ್ಣ ಮೊಬಲಗನ್ನು ಪಾವತಿ ಮಾಡಿದ ತರುವಾಯ ವಿವರಪಟ್ಟಿಕೆಯನ್ನು ಸಲ್ಲಿಸಲು ವಿಫಲನಾದ ಸಂದರ್ಭದಲ್ಲಿ ಒಂದು ನೂರು ರೂಪಾಯಿಗಳು][1]

– ದಂಡವನ್ನು ಪಾವತಿ ಮಾಡುವಂತೆ ಸಹ ನಿರ್ದೇಶಿಸಬಹುದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(6) ನಿರ್ಧರಣೆ ಮಾಡಿದ ಸ್ವತ್ತು ತೆರಿಗೆ ಮತ್ತು ವಿಧಿಸಿದ ದಂಡ ಯಾವುದಾದರೂ ಇದ್ದರೆ, ಅದನ್ನು ಮಾಲೀಕನು ಅಥವಾ ಅಧಿಭೋಗದಾರನು ಒಪ್ಪಿಕೊಳ್ಳಬಹುದು ಅಥವಾ (3) ಅಥವಾ (4)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಆದೇಶದ ಪ್ರತಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ಆಯುಕ್ತರಿಗೆ ಅಥವಾ ಅಧಿಕೃತ ಅಧಿಕಾರಿಗೆ ಆಕ್ಷೇಪಣೆಯನ್ನು ಸಲ್ಲಿಸಬಹುದು.

(7) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಆಕ್ಷೇಪಣೆಗಳನ್ನು ಪರಿಗಣಿಸತಕ್ಕದ್ದು ಮತ್ತು ಅಂಥ ತೆರಿಗೆ ನಿರ್ಧರಣೆಯನ್ನು ಮತ್ತು ದಂಡ ಯಾವುದಾದರೂ ಇದ್ದರೆ ಅದನ್ನು ಸ್ಥಿರೀಕರಿಸಿರುವ ಅಥವಾ ಪರಿಷ್ಕರಿಸಿರುವ ಆಕ್ಷೇಪಣೆಗಳನ್ನು ಸಲ್ಲಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ, ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಆದೇಶದ ಪ್ರತಿಯನ್ನು ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಕಳುಹಿಸತಕ್ಕದ್ದು.

(8) ಯಾವುದೇ [1][ಕಟ್ಟಡದ ಅಥವಾ ಖಾಲಿ ಭೂಮಿಯ][1] ಮಾಲೀಕನು ಅಥವಾ ಅಧಿಭೋಗದಾರನು ವಿವರ ಪಟ್ಟಿಕೆಯನ್ನು ಸಲ್ಲಿಸಲು ಮತ್ತು ಈ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆ ನಿರ್ಧರಣೆಗೆ ಅನುಕೂಲ ಕಲ್ಪಿಸುವುದಕ್ಕಾಗಿ, ತೆರಿಗೆಗೆ ಗುರಿಯಾಗತಕ್ಕ ಸ್ವತ್ತಿನ ಬಂಡವಾಳ ಮೌಲ್ಯವನ್ನು ಮತ್ತು ಅದರ ಮೇಲೆ ಪಾವತಿ ಮಾಡಬೇಕಾದ ಸ್ವತ್ತು ತೆರಿಗೆಯನ್ನು ನಿರ್ಧರಿಸುವುದಕ್ಕಾಗಿ ನಗರಪಾಲಿಕೆಯು ಕಾಲಕಾಲಕ್ಕೆ ಮಾರ್ಗಸೂಚಿಗಳನ್ನು ಹೊರಡಿಸತಕ್ಕದ್ದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**112ಬಿ. ಸ್ವತ್ತು ತೆರಿಗೆಯ ರಿಜಿಸ್ಟರನ್ನು ಸಿದ್ಧಪಡಿಸುವುದು ಮತ್ತು ಪ್ರಕಟಿಸುವುದು.–** (1) ನಗರದಲ್ಲಿನ ಕಟ್ಟಡಗಳ ಅಥವಾ ಭೂಮಿಗಳ ಅಥವಾ ಅವೆರಡರ ಸಂಬಂಧದಲ್ಲಿನ ಸ್ವತ್ತು ತೆರಿಗೆಯ ರಿಜಿಸ್ಟರನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ರೀತಿಯಲ್ಲಿ ನಿರ್ವಹಿಸತಕ್ಕದ್ದು.

[1][(2) xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಯಾರೇ ವ್ಯಕ್ತಿಯು ಸಲ್ಲಿಸಿದ ಅರ್ಜಿಯ ಮೇಲೆ ಮತ್ತು ನಗರಪಾಲಿಕೆಯು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಶುಲ್ಕವನ್ನು ಪಾವತಿ ಮಾಡುವುದಕ್ಕೆ ಒಳಪಟ್ಟು, ಅಧಿಕೃತ ಅಧಿಕಾರಿಯು ವ್ಯಕ್ತಿಗೆ ಸೂಕ್ತ ಸಮಯದಲ್ಲಿ ಸ್ವತ್ತು ತೆರಿಗೆಯ ರಿಜಿಸ್ಟರನ್ನು ಪರಿಶೀಲಿಸಲು ಅನುಮತಿ ನೀಡಬಹುದು ಅಥವಾ ರಿಜಿಸ್ಟರಿನಲ್ಲಿ ಮಾಡಿದ ನಮೂದುಗಳ ಪ್ರಮಾಣೀಕೃತ ಉದ್ಧೃತ ಪ್ರತಿಯನ್ನು ಅಥವಾ ಅದರ ಪ್ರಮಾಣಿತ ಪ್ರತಿಗಳನ್ನು ನೀಡಬಹುದು.

(4) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು, ಕಟ್ಟಡದ ಅಥವಾ ಭೂಮಿಗಳ ಪ್ರತಿಯೊಬ್ಬ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ, ಕಟ್ಟಡಗಳ ಅಥವಾ ಭೂಮಿಗಳ ಅಥವಾ ಅವೆರಡರ ಎಲ್ಲ ವಿವರಗಳನ್ನು ಒಳಗೊಂಡ ಮತ್ತು ಅಂಥ ಕಟ್ಟಡಗಳ ಅಥವಾ ಭೂಮಿಯ ಅಥವಾ ಅವೆರಡಕ್ಕೆ ಸಂಬಂಧಿಸಿದಂತೆ ಪಾವತಿ ಮಾಡಬೇಕಾದ ಸ್ವತ್ತು ತೆರಿಗೆಯ ಪ್ರಮಾಣಪತ್ರವನ್ನು ನೀಡಬಹುದು.

**112ಸಿ. ಕಾನೂನು ಬಾಹಿರ ಕಟ್ಟಡದ ಮೇಲೆ ದಂಡ ವಿಧಿಸುವುದು.–** (1) ಯಾರೇ ಆಗಲಿ,–

(i) ಈ ಅಧಿನಿಯಮದ ಮೇರೆಗೆ ಅನುಮತಿಯನ್ನು ಪಡೆಯದೇ ಅಥವಾ ಅಂಥ ಅನುಮತಿಗೆ ಸಂಬಂಧಿಸಿದ ಯಾವುದೇ ಷರತ್ತನ್ನು ಉಲ್ಲಂಘಿಸಿ ತನ್ನ ಭೂಮಿಯ ಮೇಲೆ; ಅಥವಾ

(ii) ಪಟ್ಟಣ ಮತ್ತು ಗ್ರಾಮಾಂತರ ಯೋಜನೆಗೆ ಸಂಬಂಧಿಸಿದ, ಸುಸಂಗತ ಕಾನೂನಿನ ಮೇರೆಗೆ ಅನುಮೋದನೆ ಪಡೆಯದೆ ರಚಿತವಾದ, ಅವನಿಗೆ ಸೇರಿದ ನಿವೇಶನದ ಮೇಲೆ, ಅಥವಾ

(iii) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ಉಪವಿಧಿಯ ಯಾವುದೇ ಉಪಬಂಧವನ್ನು ಅಥವಾ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಅಂಥ ನಿಯಮಗಳ ಅಥವಾ ಉಪವಿಧಿಯ ಮೇರೆಗೆ, ಕಾನೂನು ಬದ್ದವಾಗಿ ನೀಡಿದ ಯಾವುದೇ ನಿರ್ದೇಶನವನ್ನು ಅಥವಾ ಮಾಡಿದ ಯಾವುದೇ ಕೋರಿಕೆಯನ್ನು ಉಲ್ಲಂಘಿಸಿ ತನ್ನ ಭೂಮಿಯ ಮೇಲೆ

– ಯಾವುದೇ ಕಟ್ಟಡವನ್ನು ಅಥವಾ ಕಟ್ಟಡದ ಭಾಗವನ್ನು ಕಾನೂನುಬಾಹಿರವಾಗಿ ನಿರ್ಮಿಸಿದರೆ ಅಥವಾ ಪುನರ್‌ನಿರ್ಮಿಸಿದರೆ, ಅದು ಅಂಥ ಕಾನೂನು ಬಾಹಿರ ನಿರ್ಮಾಣವಾಗಿ ಉಳಿದಿರುವಷ್ಟು ಅವಧಿಯವರೆಗೆ ಅಂಥ ಕಟ್ಟಡದ ಮೇಲೆ ವಿಧಿಸಬೇಕಾದ ಸ್ವತ್ತು ತೆರಿಗೆಯ ಎರಡರಷ್ಟಕ್ಕೆ ಸಮನಾದ ದಂಡವನ್ನು, ಅಂಥ ಕಾನೂನು ಬಾಹಿರ ನಿರ್ಮಾಣಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧ ಯಾವುದೇ ವ್ಯವಹರಣೆಗಳನ್ನು ಹೂಡುವುದಕ್ಕೆ ಪ್ರತಿಕೂಲವಾಗದಂತೆ, ಅವನು ಪ್ರತಿವರ್ಷ ಪಾವತಿ ಮಾಡಲು ಬದ್ಧನಾಗಿರತಕ್ಕದ್ದು:

ಪರಂತು, ಅಂಥ ದಂಡ ವಿಧಿಸಿರುವುದನ್ನು ಮತ್ತು ಸಂಗ್ರಹಿಸಿರುವುದನ್ನು, ಅಂಥ ಕಾನೂನು ಬಾಹಿರ ನಿರ್ಮಾಣವನ್ನು ಅಥವಾ ಪುನರ್ ನಿರ್ಮಾಣವನ್ನು ಸಕ್ರಮಗೊಳಿಸುವುದೆಂದು ಅರ್ಥೈಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಮೇರೆಗೆ ಪಾವತಿ ಮಾಡಬೇಕಾದ ದಂಡವನ್ನು ನಿಯಮಿಸಬಹುದಾದ ಅಂಥ ಪ್ರಾಧಿಕಾರಿಯು ಮತ್ತು ಅಂಥ ರೀತಿಯಲ್ಲಿ ನಿರ್ಧರಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು ಮತ್ತು ಹಾಗೆ ಪಾವತಿ ಮಾಡಬೇಕಾದ ದಂಡವನ್ನು, ಬಾಕಿ ಇರುವ ಸ್ವತ್ತು ತೆರಿಗೆ ಎಂದು ಭಾವಿಸತಕ್ಕದ್ದು.

(3) 61ಎ, 62 ಅಥವಾ 444ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, (2)ನೇ ಉಪಪ್ರಕರಣದ ಮೇರೆಗೆ ದಂಡ ವಿಧಿಸುವಿಕೆಯ ನಿರ್ಧಾರದಿಂದ ತೊಂದರೆಗೊಳಗಾದ ಯಾರೇ ವ್ಯಕ್ತಿಯು, ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ನಿಯಮಿಸಿದ ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸಬಹುದು, ಆ ಬಗ್ಗೆ ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(4) ನಿಯಮಿಸಲಾದ ಪ್ರಾಧಿಕಾರವು, ಅಪೀಲುದಾರನಿಗೆ ಮತ್ತು ನಗರಪಾಲಿಕೆಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸಬಹುದು.

**112ಡಿ. ಭೂಮಿಗಳ ಮತ್ತು ಕಟ್ಟಡಗಳ ಸರ್ವೆ ಮಾಡುವುದು ಮತ್ತು ಸ್ವತ್ತು ರಿಜಿಸ್ಟರನ್ನು ಸಿದ್ಧಪಡಿಸುವುದು.–** (1) ಆಯುಕ್ತರು, ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು, ಸ್ವತ್ತು ತೆರಿಗೆಯ ನಿರ್ಧರಣೆಯ ದೃಷ್ಟಿಯಿಂದ, ನಗರದೊಳಗಿನ ಕಟ್ಟಡಗಳನ್ನು ಅಥವಾ ಭೂಮಿಗಳನ್ನು ಅಥವಾ ಅವೆರಡರನ್ನು ಸರ್ವೆ ಮಾಡಲು ನಿರ್ದೇಶಿಸತಕ್ಕದ್ದು ಮತ್ತು ಹಾಗೇ ಸರ್ವೆ ಮಾಡಲು ಮತ್ತು ಸ್ವತ್ತು ರಿಜಿಸ್ಟರನ್ನು ಸಿದ್ಧಪಡಿಸಲು ಯಾರೇ ಅರ್ಹ ವ್ಯಕ್ತಿಯ ಅಥವಾ ಏಜೆನ್ಸಿಯ ಸೇವೆಗಳನ್ನು ಪಡೆಯಬಹುದು.

(2) ಸ್ವತ್ತು ರಿಜಿಸ್ಟರನ್ನು ಕಟ್ಟಡಗಳ ಅಥವಾ ಭೂಮಿಗಳ ಅಥವಾ ಅವೆರಡರ ಸಂಬಂಧದಲ್ಲಿ IIIನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂಥ ರೀತಿಯಲ್ಲಿ ಮತ್ತು ಅಂಥ ವಿವರಗಳನ್ನು ಒಳಗೊಂಡಂತೆ ನಿರ್ವಹಿಸತಕ್ಕದ್ದು.

(3) ಯಾವುದೇ ಕಟ್ಟಡಗಳಿಗೆ ಅಥವಾ ಭೂಮಿಗಳಿಗೆ ಅಥವಾ ಅವೆರಡಕ್ಕೂ ಸಂಬಂಧಿಸಿದಂತೆ ಸ್ವತ್ತು ರಿಜಿಸ್ಟರನ್ನು ಸಿದ್ಧಪಡಿಸುವ ಅಥವಾ ಸ್ವತ್ತು ತೆರಿಗೆಯ ನಿರ್ಧರಣೆಯ ಉದ್ದೇಶಕ್ಕಾಗಿ, ಆಯುಕ್ತರು ಅಥವಾ ಈ ಬಗ್ಗೆ ಅವರು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ಅಂಥ ಪರಿವೀಕ್ಷಣೆ ಮಾಡುವುದಕ್ಕೂ ಮೊದಲು ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನೋಟೀಸನ್ನು ಕೊಟ್ಟ ತರುವಾಯ, ಯಾವುದೇ ಭೂಮಿಯನ್ನು ಅಥವಾ ಕಟ್ಟಡವನ್ನು ಪ್ರವೇಶಿಸಬಹುದು, ಪರಿವೀಕ್ಷಣೆ ಮಾಡಬಹುದು, ಸರ್ವೆ ಮಾಡಬಹುದು ಅಥವಾ ಅಳತೆ ಮಾಡಬಹುದು ಮತ್ತು ಮಾಲೀಕನು ಅಥವಾ ಅಧಿಭೋಗದಾರನು, ಈ ಉದ್ದೇಶಕ್ಕಾಗಿ ಅಗತ್ಯಪಡಿಸಿದ ಅವಶ್ಯಕ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು:

ಪರಂತು, ಯಾವುದೇ ಕಟ್ಟಡ ಅಥವಾ ಭೂಮಿಯ ಒಳಗೆ ಮತ್ತು ಮೇಲೆ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ ಪ್ರವೇಶಿಸತಕ್ಕದ್ದು:

ಮತ್ತೂ ಪರಂತು, ಮಾನವ ವಾಸಕ್ಕಾಗಿ ಬಳಸುತ್ತಿರುವ ಕಟ್ಟಡಗಳಾಗಿದ್ದರೆ, ಅಲ್ಲಿ ವಾಸಿಸುತ್ತಿರುವವರ ಸಾಮಾಜಿಕ ಹಾಗೂ ಧಾರ್ಮಿಕ ಬದ್ಧತೆಗಳಿಗೆ ಸೂಕ್ತ ಗೌರವವನ್ನು ನೀಡತಕ್ಕದ್ದು ಮತ್ತು ಮಹಿಳೆಯು ವಾಸ್ತವಿಕವಾಗಿ ವಾಸಿಸುತ್ತಿರುವ ಯಾವುದೇ ಕೋಣೆಯನ್ನು, ಆಕೆಯು ಆ ಕೋಣೆಯಿಂದ ಹೊರಕ್ಕೆ ಹೋಗುವುದಾದರೆ ಹೋಗಬಹುದೆಂದು ತಿಳಿಸಿದ್ದ ಹೊರತು, ಆಕೆಗೆ ತಿಳಿಸುವವರೆಗೆ ಮತ್ತು ಹೊರಕ್ಕೆ ಹೋಗಲು ಸಮಂಜಸ ಸೌಲಭ್ಯವನ್ನು ನೀಡುವವರೆಗೆ ಪ್ರವೇಶಿಸತಕ್ಕದ್ದಲ್ಲ.][1]

1. 2001ರ ಅಧಿನಿಯಮ ಸಂಖ್ಯೆ 31ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ 112ಎ ಯಿಂದ 112ಡಿ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

[1][**113. ಸ್ವತ್ತು ತೆರಿಗೆ ಪಾವತಿ ಮಾಡುವುದಕ್ಕಾಗಿ ತಗಾದೆ ನೋಟೀಸು ಮತ್ತು ಅಂಥ ತಗಾದೆ ನೋಟೀಸಿನ ವಿರುದ್ಧ ಅಪೀಲು.–** (1) 112ಎ ಪ್ರಕರಣದ (5)ನೇ ಉಪ ಪ್ರಕರಣದ ಮೇರೆಗೆ ವಿಧಿಸತಕ್ಕ ದಂಡವನ್ನು ಒಳಗೊಂಡಂತೆ ಸ್ವತ್ತು ತೆರಿಗೆಯನ್ನು ಅದು ಬಾಕಿಯಾದ ತರುವಾಯವೂ ಪಾವತಿ ಮಾಡದಿದ್ದರೆ, ಅದನ್ನು ಪಾವತಿ ಮಾಡಲು ಹೊಣೆಗಾರನಾದ ವ್ಯಕ್ತಿಗೆ ನಗರಪಾಲಿಕೆಯು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ತಗಾದೆ ನೋಟೀಸನ್ನು ಜಾರಿ ಮಾಡಿಸಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಯಾವ ವ್ಯಕ್ತಿಗೆ ತಗಾದೆ ನೋಟೀಸನ್ನು ಜಾರಿಮಾಡಲಾಗಿದೆಯೋ ಆ ವ್ಯಕ್ತಿಯು ಅಂಥ ತಗಾದೆ ನೋಟೀಸನ್ನು ಜಾರಿ ಮಾಡಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ,–

(ಎ) ನೋಟೀಸಿನಲ್ಲಿ ತಗಾದೆ ಮಾಡಿದ ಮೊತ್ತವನ್ನು ಸಂದಾಯ ಮಾಡದಿದ್ದರೆ, ಅಥವಾ

(ಬಿ) ತಗಾದೆಯ ವಿರುದ್ಧ (3)ನೇ ಉಪಪ್ರಕರಣದ ಮೇರೆಗೆ ಅಪೀಲು ಸಲ್ಲಿಸದಿದ್ದರೆ,

– ಆತನನ್ನು ತಪ್ಪತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನಂತರ ಅಂಥ ಮೊತ್ತವನ್ನು ನಿಯಮಿಸಬಹುದಾದಂಥ ದಂಡದ ಜೊತೆಗೆ ಮತ್ತು ಅಂಥ ರೀತಿಯಲ್ಲಿ ವಸೂಲ್ಮಾಡತಕ್ಕದ್ದು.

(3) 61ಎ ಅಥವಾ 62 ಅಥವಾ 444ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ, (1)ನೇ ಉಪಪ್ರಕರಣದ ಮೇರೆಗೆ ಜಾರಿ ಮಾಡಿದ ತಗಾದೆ ನೋಟೀಸಿನಲ್ಲಿರುವ ಕ್ಲೇಮಿನ ಬಗ್ಗೆ ವಿವಾದಿಸುವ ಯಾರೇ ವ್ಯಕ್ತಿಯು, ಅಂಥ ನೋಟೀಸನ್ನು ಜಾರಿ ಮಾಡಿದ ತರುವಾಯ ಮೂವತ್ತು ದಿನಗಳೊಳಗೆ ನಿಯಮಿಸಬಹುದಾದಂಥ ರೀತಿಯಲ್ಲಿ, ಅಂಥ ನಿಬಂಧನೆಗಳಿಗೊಳಪಟ್ಟು ಮತ್ತು ಅಂಥ ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**114. ವರ್ಗಾವಣೆಯ ನೋಟೀಸನ್ನು ಕೊಡುವುದು ವರ್ಗಾವಣೆ ಮಾಡಿದವನ ಮತ್ತು ವರ್ಗಾವಣೆ ಪಡೆದವನ ಹೊಣೆಗಾರಿಕೆ.–** (1) ಯಾವುವೇ ಆವರಣಗಳ ಮೇಲೆ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಮೂಲತಃ ಹೊಣೆಗಾರನಾಗಿರುವ ಯಾರೇ ವ್ಯಕ್ತಿಗೆ ಅಂಥ ಆವರಣಗಳಿಗೆ ಅಥವಾ ಅವುಗಳ ಮೇಲೆ ಇರುವ ಸ್ವಾಮ್ಯವನ್ನು ವರ್ಗಾವಣೆ ಮಾಡಿದಾಗಲೆಲ್ಲಾ, ಯಾರ ಸ್ವಾಮ್ಯವನ್ನು ವರ್ಗಾಯಿಸಲಾಗಿದೆಯೋ ಆ ವ್ಯಕ್ತಿಯು, ಮತ್ತು ಯಾರಿಗೆ ಅದನ್ನು ವರ್ಗಾಯಿಸಲಾಗಿದೆಯೋ ಆ ವ್ಯಕ್ತಿಯು, ಆಯುಕ್ತರಿಗೆ, ಅಂಥ ವರ್ಗಾವಣೆಯ ನೋಟೀಸನ್ನು, ವರ್ಗಾವಣೆಯ ಲಿಖಿತವನ್ನು ಬರೆದುಕೊಟ್ಟ ತರುವಾಯ ಮೂರು ತಿಂಗಳುಗಳ ಒಳಗೆ ಅಥವಾ ಅದು ನೋಂದಾಯಿತವಾಗಿದ್ದರೆ ಅದರ ನೋಂದಣಿಯ ತರುವಾಯ ಅಥವಾ ಯಾವುದೇ ಲಿಖಿತವನ್ನು ಬರೆದುಕೊಟ್ಟಿಲ್ಲದಿದ್ದರೆ ವರ್ಗಾವಣೆಯು ಪರಿಣಾಮಕಾರಿಯಾದ ತರುವಾಯ ಕೊಡತಕ್ಕದ್ದು.

(2) ಮೇಲೆ ಹೇಳಿದಂತೆ ಮೂಲತಃ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯ ಮರಣದ ಸಂದರ್ಭದಲ್ಲಿ ಮೃತನ ಸ್ವಾಮ್ಯವು ಯಾವ ವ್ಯಕ್ತಿಗೆ, ವಾರಸುದಾರನೆಂದು ಅಥವಾ ಅನ್ಯಥಾ ವರ್ಗಾವಣೆಯಾಗತಕ್ಕದೋ ಆ ವ್ಯಕ್ತಿಯು, ಮೃತನು ಮರಣವಾದಂದಿನಿಂದ ಒಂದು ವರ್ಷದೊಳಗಾಗಿ ಆಯುಕ್ತರಿಗೆ ಅಂಥ ವರ್ಗಾವಣೆಯ ಬಗ್ಗೆ ನೋಟೀಸನ್ನು ಕೊಡತಕ್ಕದ್ದು.

[1][(3) ಅಂಥ ವರ್ಗಾವಣೆಯು ಅಂಥ ನೋಟೀಸಿನ ಮೂಲಕ ಆಯುಕ್ತರ ಅಥವಾ ಅಧಿಕೃತ ಅಧಿಕಾರಿಯ ಗಮನಕ್ಕೆ ಬಂದಾಗಲೆಲ್ಲ, ವರ್ಗಾವಣೆ ಪಡೆದವನ ಹೆಸರನ್ನು ಸ್ವತ್ತು ತೆರಿಗೆ ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದು.][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(4) ಆಯುಕ್ತರಿಗೆ ಅಂಥ ನೋಟೀಸನ್ನು ಕೊಡದೆ ಮೇಲೆ ಹೇಳಿದಂತೆ ವರ್ಗಾವಣೆ ಮಾಡುವ ಪ್ರತಿಯೊಬ್ಬ ವ್ಯಕ್ತಿಯು, ಅಂಥ ನೋಟೀಸನ್ನು ಕೊಡದ ನಿರ್ಲಕ್ಷ್ಯಕ್ಕಾಗಿ, ಅವನು ಗುರಿಯಾಗಬಹುದಾದಂಥ ಯಾವುದೇ ಇತರ ಹೊಣೆಗಾರಿಕೆಯ ಜೊತೆಗೆ, ವರ್ಗಾವಣೆ ಮಾಡಿದ ಆವರಣಗಳ ಮೇಲೆ ನಿರ್ಧರಣೆ ಮಾಡಿದ ಸ್ವತ್ತು ತೆರಿಗೆ ಪಾವತಿ ಮಾಡುವುದಕ್ಕೆ ಅವನು ನೋಟಿಸನ್ನು ಕೊಡುವವರೆಗೆ ಅಥವಾ ವರ್ಗಾವಣೆಯು ನಗರಪಾಲಿಕೆಯ ರಿಜಿಸ್ಟರುಗಳಲ್ಲಿ ದಾಖಲಾಗುವವರೆಗೆ ಹೊಣೆಗಾರನಾಗಿರುವುದು ಮುಂದುವರಿಯತಕ್ಕದ್ದು, ಆದರೆ ಈ ಪ್ರಕರಣದಲ್ಲಿರುವುದು ಯಾವುದೂ,–

(ಎ) ಸದರಿ ತೆರಿಗೆಯನ್ನು ಪಾವತಿ ಮಾಡುವುದಕ್ಕಾಗಿ ವರ್ಗಾವಣೆ ಪಡೆದವನ ಹೊಣೆಗಾರಿಕೆಗೆ; ಅಥವಾ

(ಬಿ) 111ನೇ ಪ್ರಕರಣದ ಮೇರೆಗೆ ನಗರಪಾಲಿಕೆಯ ಹಿಂದಿನ ಭಾರಕ್ಕೆ, ಬಾಧಕವನ್ನುಂಟು ಮಾಡುತ್ತದೆಂದು ನಿರ್ಣಯಿಸತಕ್ಕದ್ದಲ್ಲ.

(5) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಮೈಸೂರು ನಗರಾಭಿವೃದ್ಧಿ ವಿಶ್ವಸ್ಥ ಮಂಡಲಿಗೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಅಥವಾ ಕರ್ನಾಟಕ ಗೃಹ ಮಂಡಲಿಗೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಸೇರಿದ ಯಾವ ಕಟ್ಟಡದ ಅಥವಾ ಭೂಮಿಯ ಸ್ವಾಧೀನತೆಯನ್ನು ಯಾವುದೇ ಮಂಜೂರಾತಿಗೆ, ಹಂಚಿಕೆಗೆ ಅಥವಾ ಗುತ್ತಿಗೆಯ ಅನುಸಾರವಾಗಿ, ಸಂಬಂಧಪಟ್ಟ ಮಂಡಳಿಯು ಅಥವಾ ಸ್ಥಳೀಯ ಪ್ರಾಧಿಕಾರವು ಯಾರೇ ವ್ಯಕ್ತಿಗೆ ವಹಿಸಿಕೊಟ್ಟಿದೆಯೋ, ಆ ಯಾವುವೇ ಕಟ್ಟಡದ ಅಥವಾ ಭೂಮಿಯ ಸಂಬಂಧದಲ್ಲಿ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಮೂಲತಃ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯ ಹಕ್ಕು ಸ್ವಾಮ್ಯದ ವರ್ಗಾವಣೆಯನ್ನು ಸಂಬಂಧಪಟ್ಟ ಮಂಡಲಿಯೊಂದಿಗೆ ಅಥವಾ ಸ್ಥಳೀಯ ಪ್ರಾಧಿಕಾರದೊಂದಿಗೆ ಸಮಾಲೋಚಿಸದೇ ನಗರಪಾಲಿಕೆಯ ರಿಜಿಸ್ಟರುಗಳಲ್ಲಿ ದಾಖಲು ಮಾಡತಕ್ಕದ್ದಲ್ಲ.

[1][**114ಎ. ಆಯುಕ್ತರಿಂದ ಪುನರೀಕ್ಷಣೆ.–** ಆಯುಕ್ತರು, ತಾನಾಗಿಯೇ ಆಗಲಿ ಅಥವಾ ಅನ್ಯಥಾ ಅವಶ್ಯವೆಂದು ಪರಿಗಣಿಸುವಂಥ ವಿಚಾರಣೆ ಮಾಡಿದ ತರುವಾಯ 114ನೇ ಪ್ರಕರಣದ ಮೇರೆಗೆ ಹಕ್ಕುಸ್ವಾಮ್ಯದ ಯಾವುದೇ ವರ್ಗಾವಣೆಯನ್ನು, ನಗರಪಾಲಿಕೆಯ ರಿಜಿಸ್ಟರಿನಲ್ಲಿ, ಮೋಸದಿಂದ, ತಪ್ಪು ನಿರೂಪಣೆಯಿಂದ ಅಥವಾ ವಾಸ್ತವ ಸಂಗತಿಗಳನ್ನು ಬಚ್ಚಿಟ್ಟು ಅಥವಾ ಸುಳ್ಳು, ಸರಿಯಲ್ಲದ ಅಥವಾ ಅಪೂರ್ಣ ಸಾಮಗ್ರಿಗಳನ್ನು ಒದಗಿಸಿ ದಾಖಲ್ಮಾಡಿಸಲಾಗಿದೆಯೆಂದು ಮನವರಿಕೆಯಾದರೆ, ಅವರು, ಹಾಗೆ ಹಕ್ಕು ಸ್ವಾಮ್ಯದ ವರ್ಗಾವಣೆಯನ್ನು ದಾಖಲಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಯೊಳಗೆ ಆ ಪ್ರಕರಣವನ್ನು ತೆರೆಯಬಹುದು ಮತ್ತು ಅದಕ್ಕೆ ಸಂಬಂಧಪಟ್ಟಂತೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಮಾಡಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು, ಅದರಿಂದ ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಡದ ಹೊರತು ಮಾಡತಕ್ಕದ್ದಲ್ಲ.][1]

1. 1995 ರ ಅಧಿನಿಯಮ ಸಂಖ್ಯೆ 14 ರ ಮೂಲಕ 3.5.1995 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**115. ಕಟ್ಟಡ ನಿರ್ಮಾಣ ಅಥವಾ ಪುನರ್‌ನಿರ್ಮಾಣದ ಅಥವಾ ಕಟ್ಟಡವನ್ನು ಕೆಡವಿ ಹಾಕುವುದರ ಬಗ್ಗೆ ನೋಟೀಸು ಕೊಡುವುದು ಮಾಲೀಕರ ಹೊಣೆಗಾರಿಕೆ.–** (1) [1][xxx][1] ನಗರದಲ್ಲಿ ಯಾವುದೇ ಕಟ್ಟಡವನ್ನು ನಿರ್ಮಾಣ ಮಾಡಿದರೆ ಅಥವಾ ಪುನರ್‌ನಿರ್ಮಾಣ ಮಾಡಿದರೆ ಮಾಲೀಕನು ಕಟ್ಟಡವನ್ನು ಕಟ್ಟಿ ಮುಗಿಸಿದ ದಿನಾಂಕ ಅಥವಾ ಸ್ವಾಧೀನಕ್ಕೆ ತೆಗೆದುಕೊಂಡ ದಿನಾಂಕ ಇವುಗಳಲ್ಲಿ ಯಾವುದು ಮೊದಲೋ ಆ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆ ಬಗ್ಗೆ ಆಯುಕ್ತರಿಗೆ ನೋಟೀಸನ್ನು ಕೊಡತಕ್ಕದ್ದು.

[1][(ಬಿ) xxx][1]

[1][(ಸಿ) xxx][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) [1][xxx][1] ನಗರದಲ್ಲಿನ ಯಾವುದೇ ಕಟ್ಟಡವನ್ನು ಕೆಡವಿ ಹಾಕಿದರೆ ಅಥವಾ ನಾಶಪಡಿಸಿದರೆ, ಮಾಲೀಕನು ಆ ಬಗ್ಗೆ ಆಯುಕ್ತರಿಗೆ ನೋಟೀಸನ್ನು ಕೊಡುವವರೆಗೆ ಕಟ್ಟಡವನ್ನು ಕೆಡವಿಹಾಕಿರದಿದ್ದರೆ ಅಥವಾ ನಾಶಗೊಳಿಸಿರದಿದ್ದರೆ ಅವನು ಯಾವ ಸ್ವತ್ತು ತೆರಿಗೆಗೆ ಗುರಿಯಾಗಿರುತ್ತಿದ್ದನೋ ಆ ಸ್ವತ್ತು ತೆರಿಗೆಯನ್ನು ಪಾವತಿ ಮಾಡಲು ಹೊಣೆಗಾರನಾಗಿರತಕ್ಕದ್ದು.

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(ಬಿ) xxx][1]

[1][(ಸಿ) xxx][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**116.** xxx][1]

1. 2001 ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**117. ಮಾಹಿತಿಯನ್ನು ಕೇಳಲು ಮತ್ತು ಆವರಣಗಳ ಒಳಗೆ ಪ್ರವೇಶಿಸಲು ಮತ್ತು ನೋಟೀಸು ಕೊಡುವುದರಲ್ಲಿನ ಲೋಪವನ್ನು ಕ್ಷಮಿಸಲು ಆಯುಕ್ತರ ಅಧಿಕಾರ.–** (1) ಸ್ವತ್ತು ತೆರಿಗೆಯ ನಿರ್ಧರಣೆಯ ಉದ್ದೇಶಕ್ಕಾಗಿ, ಆಯುಕ್ತರು, ಸರ್ಕಾರಕ್ಕೆ, ರೈಲ್ವೆ ಆಡಳಿತಕ್ಕೆ ಅಥವಾ ಕಂಪನಿಗೆ ನೋಟೀಸನ್ನು ಜಾರಿ ಮಾಡಿರುವಲ್ಲಿ, ನೋಟೀಸನ್ನು ಜಾರಿಮಾಡಿದ ತರುವಾಯದ ದಿನಾಂಕದಿಂದ ಮೂವತ್ತು ದಿವಸಗಳೊಳಗಾಗಿ ಮತ್ತು ಇತರ ಸಂದರ್ಭಗಳಲ್ಲಿ ಅಂಥ ಜಾರಿಯ ತರುವಾಯದ ದಿನಾಂಕದಿಂದ ಹದಿನಾಲ್ಕು ದಿವಸಗಳೊಳಗಾಗಿ, ಯಾವುದೇ ಕಟ್ಟಡದ ಅಥವಾ ಭೂಮಿಯ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಆ ಕಟ್ಟಡಕ್ಕೆ ಅಥವಾ ಭೂಮಿಗೆ ಪಾವತಿ ಮಾಡಬೇಕಾದ ಬಾಡಿಗೆಯ, ಆ ಕಟ್ಟಡದ ನಿರ್ಮಾಣ ವೆಚ್ಚದ ಮತ್ತು ಭೂಮಿಯ ಅಳತೆಗಳ ಕುರಿತ ವಿವರಪಟ್ಟಿಕೆಗಳನ್ನು ಮತ್ತು ಆಯುಕ್ತರು ಅಗತ್ಯ ಪಡಿಸಬಹುದಾದಂಥ ಇತರ ಮಾಹಿತಿಯನ್ನು ತಮಗೆ ಒದಗಿಸುವಂತೆ ನೋಟೀಸಿನ ಮೂಲಕ ಕೇಳಬಹುದು

ಮತ್ತು ಯಾವ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಅಂಥ ಯಾವುದೇ ನೋಟೀಸನ್ನು ಜಾರಿಮಾಡಲಾಗಿದೆಯೋ, ಆ ಮಾಲೀಕನು ಅಥವಾ ಅಧಿಭೋಗದಾರನು ಅದನ್ನು ಪಾಲಿಸಲು ಮತ್ತು ತನಗೆ ತಿಳಿದಿರುವಷ್ಟರ ಮಟ್ಟಿಗೆ ಹಾಗೂ ತಾನು ನಂಬಿರುವಷ್ಟರಮಟ್ಟಿಗೆ ಸತ್ಯವಾದ ವಿವರಪಟ್ಟಿಕೆಯನ್ನು ನೀಡಲು ಬದ್ಧನಾಗಿರತಕ್ಕದ್ದು.

(2) ಮೇಲೆ ಹೇಳಿದ ಉದ್ದೇಶಕ್ಕಾಗಿ ಆಯುಕ್ತರು, ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಇಪ್ಪತ್ತನಾಲ್ಕು ಗಂಟೆಗಳ ನೋಟೀಸನ್ನು ಕೊಟ್ಟ ತರುವಾಯ ಯಾವುದೇ ಕಟ್ಟಡವನ್ನು ಅಥವಾ ಭೂಮಿಯನ್ನು ಪ್ರವೇಶಿಸಬಹುದು, ಪರೀಕ್ಷಿಸಬಹುದು, ಸರ್ವೆ ಮಾಡಬಹುದು ಮತ್ತು ಅಳತೆ ಮಾಡಬಹುದು.

(3) ಆಯುಕ್ತರು 113, 114, 115 ಅಥವಾ 116ನೇ ಪ್ರಕರಣಗಳ ಮೇರೆಗೆ ನೋಟೀಸನ್ನು ಕೊಡುವಲ್ಲಿ ಆದ ಲೋಪಗಳನ್ನು ತಮ್ಮ ವಿವೇಚನೆಯಂತೆ ಅಂಥ ಪ್ರತಿಯೊಂದು ಕ್ಷಮೆಗೆ ಕಾರಣಗಳನ್ನು ಲಿಖಿತದಲ್ಲಿ ನೀಡಿ ಕ್ಷಮಿಸಬಹುದು.

[1][**118 ರಿಂದ 127.– xxx**][1]

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**128 ರಿಂದ 133.– xxx**][1]

1. 1979 ರ ಅಧಿನಿಯಮ ಸಂಖ್ಯೆ 21 ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**134. ಜಾಹೀರಾತಿನ ಮೇಲೆ ತೆರಿಗೆ.–** ಯಾವುದೇ ಭೂಮಿಯ, ಕಟ್ಟಡದ, ಗೋಡೆಯ ಅಥವಾ ರಚನೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಯಾವುದೇ ಜಾಹೀರಾತನ್ನು ಇಟ್ಟಿರುವ, ಪ್ರದರ್ಶಿಸುವ, ಅಳವಡಿಸುವ ಅಥವಾ ಉಳಿಸಿಕೊಂಡಿರುವ ಅಥವಾ ಯಾವುದೇ ರೀತಿಯಲ್ಲಾಗಲಿ ಯಾವುದೇ ಸಾರ್ವಜನಿಕ ಇಲ್ಲವೇ ಖಾಸಗಿ ಸ್ಥಳದಲ್ಲಾಗಲಿ ಸಾರ್ವಜನಿಕರ ದೃಷ್ಟಿಗೆ ಬೀಳುವಂತೆ ಯಾವುದೇ ಜಾಹೀರಾತನ್ನು ಪ್ರದರ್ಶಿಸುವ ಪ್ರತಿಯೊಬ್ಬ ವ್ಯಕ್ತಿಯು, ಹಾಗೆ ಇಟ್ಟಿರುವ, ಪ್ರದರ್ಶಿಸಿದ, ಅಳವಡಿಸಿದ, ಉಳಿಸಿಕೊಂಡಿರುವ ಅಥವಾ ಸಾರ್ವಜನಿಕ ದೃಷ್ಟಿಗೆ ಬೀಳುವಂತೆ ಪ್ರದರ್ಶಿಸಿರುವ ಪ್ರತಿಯೊಂದು ಜಾಹೀರಾತಿನ ಮೇಲೆ ಸರ್ಕಾರದ ಅನುಮೋದನೆಯೊಂದಿಗೆ ನಗರಪಾಲಿಕೆಯು ನಿರ್ಣಯದ ಮೂಲಕ ನಿರ್ಧರಿಸಬಹುದಾದಂತೆ ಲೆಕ್ಕ ಹಾಕಿದಂಥ ದರಗಳಲ್ಲಿ ಮತ್ತು ಅಂಥ ರೀತಿಯಲ್ಲಿ ಮತ್ತು ಅಂಥ ವಿನಾಯಿತಿಗಳಿಗೊಳಪಟ್ಟು ತೆರಿಗೆಯನ್ನು ಪಾವತಿ ಮಾಡತಕ್ಕದ್ದು:

ಪರಂತು, ಆ ದರಗಳು ಯಾವಾಗಲೂ ಈ ಬಗ್ಗೆ ಸರ್ಕಾರವು ವಿಧಿಸಿದ ಗರಿಷ್ಠ ಮತ್ತು ಕನಿಷ್ಠ ಮಿತಿಗಳಿಗೆ ಒಳಪಟ್ಟಿರತಕ್ಕದ್ದು:

ಮತ್ತೂ ಪರಂತು,–

(ಎ) ಸಾರ್ವಜನಿಕ ಸಭೆಯ ಅಥವಾ ಮಹಾನಗರಪಾಲಿಕೆಯ; ಅಥವಾ

(ಬಿ) ಯಾವುದೇ ಶಾಸನ ರಚನಾ ನಿಕಾಯದ ಚುನಾವಣೆಯ; ಅಥವಾ

(ಸಿ) ಅಂಥ ಚುನಾವಣೆಗೆ ಸಂಬಂಧಿಸಿದಂತೆ ಉಮೇದುವಾರಿಕೆಯ

– ಯಾವುದೇ ಜಾಹೀರಾತು ಅಥವಾ ನೋಟೀಸಿನ ಮೇಲೆ ಈ ಪ್ರಕರಣದ ಮೇರೆಗೆ ಯಾವುದೇ ತೆರಿಗೆಯನ್ನು ವಿಧಿಸತಕ್ಕದ್ದಲ್ಲ:

ಮತ್ತೂ ಪರಂತು, ಗಗನ ಚುಂಬಿ ಜಾಹೀರಾತು ಅಲ್ಲದ, ಮತ್ತು,–

(ಎ) ಯಾವುದೇ ಕಟ್ಟಡದ ಕಿಟಕಿಯೊಳಗೆ ಪ್ರದರ್ಶಿಸಿರುವಂಥ, ಅಥವಾ

(ಬಿ) ಯಾವ ಭೂಮಿಯ ಅಥವಾ ಕಟ್ಟಡದ ಮೇಲೆ ಅಥವಾ ಮೇಲ್ಭಾಗದಲ್ಲಿ ಅಂಥ ಜಾಹೀರಾತನ್ನು ಪ್ರದರ್ಶಿಸಲಾಗಿದೆಯೋ ಆ ಯಾವುದೇ ಭೂಮಿಯೊಳಗೆ ಅಥವಾ ಕಟ್ಟಡದೊಳಗೆ ನಡೆಸಲಾಗುತ್ತಿರುವ ವ್ಯಾಪಾರ ಅಥವಾ ವ್ಯವಹಾರಕ್ಕೆ ಅಥವಾ ಅಂಥ ಭೂಮಿಯ ಅಥವಾ ಕಟ್ಟಡದ ಅಥವಾ ಅದರಲ್ಲಿನ ಯಾವುದೇ ವಸ್ತುಗಳ ಯಾವುದೇ ಮಾರಾಟಕ್ಕೆ ಅಥವಾ ಬಾಡಿಗೆಗೆ ನೀಡುವುದಕ್ಕೆ ಅಥವಾ ಅಂಥ ಭೂಮಿಯ ಅಥವಾ ಕಟ್ಟಡದ ಮೇಲೆ ಅಥವಾ ಅದರಲ್ಲಿ ನಡೆಸಲಾಗುವ ಯಾವುದೇ ಮಾರಾಟಕ್ಕೆ, ಮನರಂಜನೆಗೆ ಅಥವಾ ಸಭೆಗೆ ಸಂಬಂಧಿಸಿದಂಥ; ಅಥವಾ

(ಸಿ) ಯಾವ ಭೂಮಿಯ ಅಥವಾ ಕಟ್ಟಡದ ಮೇಲೆ ಅಥವಾ ಮೇಲ್ಭಾಗದಲ್ಲಿ ಜಾಹೀರಾತನ್ನು ಪ್ರದರ್ಶಿಸಲಾಗಿದೆಯೋ ಆ ಭೂಮಿಯ ಅಥವಾ ಕಟ್ಟಡದ ಹೆಸರಿಗೆ ಅಥವಾ ಅಂಥ ಭೂಮಿಯ ಅಥವಾ ಕಟ್ಟಡದ ಮಾಲೀಕನ ಅಥವಾ ಅಧಿಭೋಗದಾರನ ಹೆಸರಿಗೆ ಸಂಬಂಧಪಟ್ಟಂಥ; ಅಥವಾ

(ಡಿ) ಯಾವುದೇ ರೈಲ್ವೆಯ ವ್ಯವಹಾರಗಳಿಗೆ ಸಂಬಂಧಪಟ್ಟಂಥ; ಅಥವಾ

(ಇ) ಯಾವುದೇ ರೈಲ್ವೆ ನಿಲ್ದಾಣದೊಳಗೆ ಅಥವಾ ಯಾವುದೇ ಬೀದಿಯ ಎದುರಿಗಿರುವಂಥ ಗೋಡೆಯ ಅಥವಾ ಸ್ವತ್ತಿನ ಮೇಲ್ಮೈನ ಯಾವುದೇ ಭಾಗವನ್ನು ಹೊರತುಪಡಿಸಿ ರೈಲ್ವೆಯ ಯಾವುದೇ ಗೋಡೆಯ ಅಥವಾ ಇತರ ಸ್ವತ್ತಿನ ಮೇಲೆ ಪ್ರದರ್ಶಿಸಿರುವಂಥ

– ಯಾವುದೇ ಜಾಹೀರಾತಿನ ಮೇಲೆ ಅಂಥ ಯಾವುದೇ ತೆರಿಗೆಯನ್ನು ವಿಧಿಸತಕ್ಕದ್ದಲ್ಲ.

**ವಿವರಣೆ 1.–** ಈ ಪ್ರಕರಣದಲ್ಲಿ 'ರಚನೆ' ಎಂಬ ಪದವು ಜಾಹೀರಾತಿನಂತೆ ಅಥವಾ ಜಾಹೀರಾತು ಮಾಧ್ಯಮವಾಗಿ ಬಳಸಲಾದ ಚಕ್ರಗಳ ಮೇಲಿರುವ ಯಾವುದೇ ಚಲಿಸುವ ಫಲಕವನ್ನು ಒಳಗೊಳ್ಳತಕ್ಕದ್ದು.

**ವಿವರಣೆ 2.–** ಈ ಪ್ರಕರಣದಲ್ಲಿ 'ಗಗನಚುಂಬಿ' ಜಾಹೀರಾತು ಎಂದರೆ, ಯಾವುದೇ ಸಾರ್ವಜನಿಕ ಸ್ಥಳದಲ್ಲಿನ ಒಂದು ಜಾಗದಿಂದ ಆಕಾಶದ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಕಾಣುವಂಥ ಯಾವುದೇ ಭೂಮಿಯ, ಕಟ್ಟಡದ, ಗೋಡೆಯ, ಅಥವಾ ರಚನೆಯ ಅಥವಾ ಅದರ ಯಾವುದೇ ಭಾಗದ ಮೇಲೆ ಅಥವಾ ಮೇಲ್ಭಾಗದಲ್ಲಿ ಸಂಪೂರ್ಣವಾಗಿ ಅಥವಾ ಭಾಗಶಃ ಇರುವ ಯಾವುದೇ ಸ್ಥಂಬ, ಕಂಬ, ನಿಲುಗಂಬ, ಚೌಕಟ್ಟು ಅಥವಾ ಇತರ ಆಸರೆಯ ಮೇಲೆ ನಿಂತಿರುವ ಅಥವಾ ಅದಕ್ಕೆ ಲಗತ್ತಾದ ಯಾವುದೇ ಜಾಹೀರಾತು ಮತ್ತು ಅದು ಅಂಥ ಯಾವುದೇ ಸ್ಥಂಬ, ಕಂಬ, ನಿಲುಗಂಬ, ಚೌಕಟ್ಟು ಅಥವಾ ಇತರ ಆಸರೆಯ ಎಲ್ಲ ಮತ್ತು ಪ್ರತಿಯೊಂದು ಭಾಗವನ್ನೂ ಒಳಗೊಳ್ಳುತ್ತದೆ. "ಗಗನಚುಂಬಿ ಜಾಹೀರಾತು" ಎಂಬ ಪದವು, ಯಾವುದೇ ಭೂಮಿಯ, ಕಟ್ಟಡದ, ರಚನೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಅಥವಾ ಯಾವುದೇ ಸಾರ್ವಜನಿಕ ಸ್ಥಳದ ಮೇಲೆ ಅಥವಾ ಮೇಲ್ಭಾಗದಲ್ಲಿ ಯಾವುದೇ ಜಾಹೀರಾತಿನ ಉದ್ದೇಶಗಳಿಗಾಗಿ ಸಂಪೂರ್ಣವಾಗಿ ಅಥವಾ ಭಾಗಶಃ ಬಳಸಲಾದ ಯಾವುದೇ ಬಲೂನು, ಪ್ಯಾರಾಚೂಟ್ ಅಥವಾ ಅಂಥದೇ ಸಾಧನವನ್ನು ಸಹ ಒಳಗೊಳ್ಳತಕ್ಕದ್ದು, ಆದರೆ,–

(ಎ) ಯಾವುದೇ ಜಾಹೀರಾತಿನ ಉದ್ದೇಶಕ್ಕಾಗಿ ಸಂಪೂರ್ಣವಾಗಿ ಅಥವಾ ಭಾಗಶಃ ಅಳವಡಿಸಿಕೊಂಡ ಅಥವಾ ಬಳಸಿಕೊಂಡ ಹೊರತು, ಯಾವುದೇ ಧ್ವಜಸ್ತಂಭ, ಕಂಬ, ವ್ಯಾನ್ ಅಥವಾ ವಾಯುದಿಕ್ಸೂಚಿ; ಅಥವಾ

(ಬಿ) ಯಾವುದೇ ಕಟ್ಟಡದ ಗೋಡೆಗೆ ಅಥವಾ ಪ್ಯಾರಾಪೆಟ್ ಗೋಡೆಗೆ ಅಥವಾ ಅದರ ತುದಿಯ ಮೇಲೆ ಅಥವಾ ಯಾವುದೇ ಗೋಡೆಯ ಕಾರ್ನಿಸು ಅಥವಾ ತಡೆವರಸೆಯ ಮೇಲೆ ಅಥವಾ ಮೇಲ್ಛಾವಣಿಯ ಅಂಚಿಗೆ ಸುಭದ್ರವಾಗಿ ಅಳವಡಿಸಿದ ಯಾವುದೇ ಚಿಹ್ನೆ ಅಥವಾ ಯಾವುದೇ ಫಲಕ, ಚೌಕಟ್ಟು ಅಥವಾ ಇತರ ಸಾಧನ:

ಪರಂತು, ಅಂಥ ಫಲಕ, ಚೌಕಟ್ಟು ಅಥವಾ ಇತರ ಸಾಧನವು ಸಪಾಟಾದ ಮೇಲ್ಮೈನದಾಗಿರತಕ್ಕದ್ದು ಮತ್ತು ರಂಧ್ರ ಕೊರೆದು ಮಾಡಿದ ಚಿತ್ರ ಕೆಲಸವಾಗಿರತಕ್ಕದ್ದಲ್ಲ ಮತ್ತು ಯಾವ ಗೋಡೆಗೆ ಅಥವಾ ಪ್ಯಾರಾಪೆಟ್ ಗೋಡೆಗೆ ಅಥವಾ ಅಂಚಿಗೆ ಅಥವಾ ಅದಕ್ಕೆ ಎದುರಾಗಿ ಅಥವಾ ಅದರ ಮೇಲೆ ಅದನ್ನು ಅಳವಡಿಸಲಾಗಿದೆಯೋ ಅಥವಾ ಅದು ನಿಂತಿದೆಯೋ, ಆ ಯಾವುದೇ ಗೋಡೆಯ ಅಥವಾ ಪ್ಯಾರಾಪೆಟ್ ಗೋಡೆಯ ಅಥವಾ ಅಂಚಿನ ಯಾವುದೇ ಭಾಗದ ಮೇಲೆ ಅದು ಒಂದು ಮೀಟರಿಗಿಂತ ಹೆಚ್ಚು ಎತ್ತರಕ್ಕೆ ವಿಸ್ತರಿಸಿರತಕ್ಕದ್ದಲ್ಲ:

(ಸಿ) ಯಾವ ಭೂಮಿಯ ಅಥವಾ ಕಟ್ಟಡದ ಮೇಲೆ ಅಥವಾ ಮೇಲ್ಭಾಗದಲ್ಲಿ ಜಾಹೀರಾತನ್ನು ಪ್ರದರ್ಶಿಸಲಾಗಿದೆಯೋ ಆ ಭೂಮಿಯ ಅಥವಾ ಕಟ್ಟಡದ ಹೆಸರಿಗೆ ಅಥವಾ ಅಂಥ ಭೂಮಿಯ ಅಥವಾ ಕಟ್ಟಡದ ಮಾಲೀಕನ ಅಥವಾ ಅಧಿಭೋಗದಾರನ ಹೆಸರಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತು; ಅಥವಾ

(ಡಿ) ರೈಲ್ವೆ ವ್ಯವಹಾರಕ್ಕೆ ಅನನ್ಯವಾಗಿ ಸಂಬಂಧಿಸಿದ ಮತ್ತು ಯಾವುದೇ ರೈಲ್ವೆ, ರೈಲ್ವೆ ನಿಲ್ದಾಣ, ಪ್ರಾಂಗಣ, ಪ್ಲಾಟ್‌ಫಾರಂ ಅಥವಾ ರೈಲ್ವೆಗೆ ಸೇರಿದ ನಿಲ್ದಾಣಕ್ಕೆ ಹೋಗುವ ದಾರಿ ಇವುಗಳ ಮೇಲೆ ಅಥವಾ ಮೇಲ್ಭಾಗದಲ್ಲಿ ಸಂಪೂರ್ಣವಾಗಿ ಹಾಕಲಾದ ಮತ್ತು ಯಾವುದೇ ಬೀದಿಗೆ ಅಥವಾ ಸಾರ್ವಜನಿಕ ಸ್ಥಳದಲ್ಲಿ ಬೀಳದ ಹಾಗೆ ಹಾಕಲಾದ ಯಾವುದೇ ಜಾಹೀರಾತು; ಅಥವಾ

(ಇ) ಮಾರಾಟ ಮಾಡಬೇಕಾದ ಅಥವಾ ಬಾಡಿಗೆಗೆ ಕೊಡಬೇಕಾದ ಭೂಮಿ ಅಥವಾ ಕಟ್ಟಡಗಳ ಬಗ್ಗೆ, ಅಂಥ ಭೂಮಿಯ ಅಥವಾ ಕಟ್ಟಡಗಳ ಮೇಲೆ ಹಾಕಲಾದ ಯಾವುದೇ ನೋಟೀಸು

– ಒಳಗೊಳ್ಳತಕ್ಕದ್ದಲ್ಲ.

**ವಿವರಣೆ 3.**– ಈ ಪ್ರಕರಣದ ಉದ್ದೇಶಕ್ಕಾಗಿ 'ಸಾರ್ವಜನಿಕ ಸ್ಥಳ' ಎಂದರೆ, ಅದನ್ನು ವಾಸ್ತವವಾಗಿ ಸಾರ್ವಜನಿಕರು ಬಳಸುತ್ತಿರಲಿ ಅಥವಾ ಬಳಸದಿರಲಿ ಅಥವಾ ಉಪಭೋಗಿಸುತ್ತಿರಲಿ ಅಥವಾ ಉಪಭೋಗಿಸದಿರಲಿ, ಸಾರ್ವಜನಿಕರ ಬಳಕೆಗೆ ಮತ್ತು ಉಪಭೋಗಕ್ಕೆ ಮುಕ್ತವಾಗಿರುವ ಆ ಯಾವುದೇ ಸ್ಥಳ.

**135. ಆಯುಕ್ತರ ಲಿಖಿತ ಅನುಮತಿಯಿಲ್ಲದ ಜಾಹೀರಾತುಗಳ ನಿಷೇಧ.**– (1) 134ನೇ ಪ್ರಕರಣದ ಮೇರೆಗೆ ತೆರಿಗೆ ವಿಧಿಸುವುದನ್ನು ನಗರಪಾಲಿಕೆಯು ನಿರ್ಧರಿಸಿದ ತರುವಾಯ ಆಯುಕ್ತರ ಲಿಖಿತ ಅನುಮತಿ ಇಲ್ಲದೆ ನಗರದೊಳಗಿನ ಯಾವುದೇ ಭೂಮಿಯ, ಕಟ್ಟಡದ, ಗೋಡೆಯ, ಜಾಹೀರಾತು ಫಲಕಗಳ ಅಥವಾ ರಚನೆಯ ಮೇಲೆ ಅಥವಾ ಅದರ ಮೇಲ್ಭಾಗದಲ್ಲಿ ಯಾವುದೇ ಜಾಹೀರಾತನ್ನು ನಿರ್ಮಿಸತಕ್ಕದ್ದಲ್ಲ, ಪ್ರದರ್ಶಿಸತಕ್ಕದ್ದಲ್ಲ, ಅಳವಡಿಸತಕ್ಕದ್ದಲ್ಲ ಅಥವಾ ಇಡತಕ್ಕದ್ದಲ್ಲ ಅಥವಾ ಯಾವುದೇ ಸ್ಥಳದಲ್ಲಿ ಯಾವುದೇ ರೀತಿಯಲ್ಲೇ ಆಗಲಿ ಪ್ರದರ್ಶಿಸತಕ್ಕದ್ದಲ್ಲ.

(2) ಆಯುಕ್ತರು,–

(i) ಜಾಹೀರಾತು ನಗರಪಾಲಿಕೆಯು ರಚಿಸಿದ ಯಾವುದೇ ಉಪವಿಧಿಯನ್ನು ಉಲ್ಲಂಘಿಸಿದರೆ; ಅಥವಾ

(ii) ಜಾಹೀರಾತಿಗೆ ಸಂಬಂಧಿಸಿದಂತೆ ತೆರಿಗೆ ಯಾವುದಾದರೂ ಬಾಕಿ ಇದ್ದು ಅದನ್ನು ಪಾವತಿ ಮಾಡಿರದಿದ್ದರೆ,

– ಅಂಥ ಅನುಮತಿಯನ್ನು ಕೊಡತಕ್ಕದ್ದಲ್ಲ.

(3) (2)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಜಾಹೀರಾತು ತೆರಿಗೆಗೆ ಗುರಿಯಾಗಬಹುದಾದ ಜಾಹೀರಾತಿನ ಸಂದರ್ಭದಲ್ಲಿ, ಆಯುಕ್ತರು, ಯಾವ ಅವಧಿಗೆ ತೆರಿಗೆಯ ಪಾವತಿಯು ಸಂಬಂಧಪಟ್ಟಿದೆಯೋ ಆ ಯಾವುದೇ ಅವಧಿಗೆ ಅನುಮತಿಯನ್ನು ಕೊಡತಕ್ಕದ್ದು ಮತ್ತು ಅಂಥ ಅನುಮತಿಗೆ ಸಂಬಂಧಿಸಿದಂತೆ ಯಾವುದೇ ಫೀಜನ್ನು ವಿಧಿಸತಕ್ಕದ್ದಲ್ಲ:

ಪರಂತು, ಈ ಪ್ರಕರಣದ ಉಪಬಂಧಗಳು, ರೈಲ್ವೆ ವ್ಯವಹಾರಕ್ಕೆ ಸಂಬಂಧಪಟ್ಟಂತೆ ರೈಲ್ವೆಯ ಆವರಣಗಳಲ್ಲಿ ನಿರ್ಮಿಸಿದ, ಪ್ರದರ್ಶಿಸಿದ, ಅಳವಡಿಸಿದ, ಹಾಕಲಾದ ಯಾವುದೇ ಜಾಹೀರಾತಿಗೆ ಅನ್ವಯಿಸತಕ್ಕದ್ದಲ್ಲ.

**136. ಕೆಲವು ಸಂದರ್ಭಗಳಲ್ಲಿ ಆಯುಕ್ತರ ಅನುಮತಿಯು ಅನೂರ್ಜಿತವಾಗತಕ್ಕದ್ದು.**– 135ನೇ ಪ್ರಕರಣದ ಮೇರೆಗೆ ಕೊಡಲಾದ ಅನುಮತಿಯು ಈ ಕೆಳಕಂಡ ಸಂದರ್ಭಗಳಲ್ಲಿ, ಎಂದರೆ:–

(ಎ) ಜಾಹೀರಾತು, ನಗರಪಾಲಿಕೆಯು ರಚಿಸಿದ ಯಾವುದೇ ಉಪವಿಧಿಯನ್ನು ಉಲ್ಲಂಘಿಸಿದರೆ;

(ಬಿ) ನಗರಪಾಲಿಕೆಯ ಇಂಜಿನಿಯರನ ನಿರ್ದೇಶನದ ಮೇರೆಗೆ ಜಾಹೀರಾತನ್ನು ಸುಭದ್ರವಾಗಿ ನಿಲ್ಲಿಸುವ ಉದ್ದೇಶಕ್ಕಾಗಿ ಅಲ್ಲದೆ ಆ ಜಾಹೀರಾತಿಗೆ ಯಾವುದೇ ಹೆಚ್ಚಿನದನ್ನು ಸೇರಿಸಿದರೆ;

(ಸಿ) ಜಾಹೀರಾತಿನಲ್ಲಿ ಅಥವಾ ಅದರ ಯಾವುದೇ ಭಾಗದಲ್ಲಿ ಯಾವುದೇ ಮುಖ್ಯ ಬದಲಾವಣೆಯನ್ನು ಮಾಡಿದರೆ;

(ಡಿ) ಆಕಸ್ಮಿಕವಾಗಿ ಅಲ್ಲದೆ ಅನ್ಯಥಾ ಜಾಹೀರಾತು ಅಥವಾ ಅದರ ಯಾವುದೇ ಭಾಗವು ಕೆಳಗೆ ಬಿದ್ದರೆ;

(ಇ) ಯಾವ ಕಟ್ಟಡದ, ಗೋಡೆಯ ಅಥವಾ ರಚನೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಆ ಜಾಹೀರಾತನ್ನು ನಿರ್ಮಿಸಲಾಗಿದೆಯೋ, ಪ್ರದರ್ಶಿಸಲಾಗಿದೆಯೋ, ಅಳವಡಿಸಲಾಗಿದೆಯೋ ಅಥವಾ ಇಡಲಾಗಿದೆಯೋ ಆ ಯಾವುದೇ ಕಟ್ಟಡಕ್ಕೆ, ಗೋಡೆಗೆ ಅಥವಾ ರಚನೆಗೆ ಅಥವಾ ಅದರಲ್ಲಿ ಯಾವುದೇ ಅಂಥ ಸೇರ್ಪಡೆ ಅಥವಾ ಬದಲಾವಣೆ ಮಾಡಿದರೆ, ಅಂಥ ಸೇರ್ಪಡೆಯಿಂದ ಅಥವಾ ಬದಲಾವಣೆಯಿಂದ ಜಾಹೀರಾತಿನ ಅಥವಾ ಅದರ ಯಾವುದೇ ಭಾಗದ ಸ್ಥಾನಪಲ್ಲಟವಾಗುವುದಾದರೆ; ಮತ್ತು

(ಎಫ್) ಯಾವ ಕಟ್ಟಡದ, ಗೋಡೆಯ ಅಥವಾ ರಚನೆ ಮೇಲೆ ಅಥವಾ ಮೇಲ್ಭಾಗದಲ್ಲಿ ಜಾಹೀರಾತನ್ನು ನಿರ್ಮಿಸಲಾಗಿದೆಯೋ, ಪ್ರದರ್ಶಿಸಲಾಗಿದೆಯೋ, ಅಳವಡಿಸಲಾಗಿದೆಯೋ ಅಥವಾ ಇಡಲಾಗಿದೆಯೋ ಆ ಕಟ್ಟಡವನ್ನು, ಗೋಡೆಯನ್ನು ಅಥವಾ ರಚನೆಯನ್ನು ಕೆಡವಿಹಾಕಿದರೆ ಅಥವಾ ನಾಶಪಡಿಸಿದರೆ

– ಅನೂರ್ಜಿತವಾಗತಕ್ಕದ್ದು.

**137. ಮಾಲೀಕನು ಅಥವಾ ಅಧಿಭೋಗದಲ್ಲಿರುವ ವ್ಯಕ್ತಿಯು ಜವಾಬ್ದಾರನಾಗಿರುವುದಾಗಿ ಭಾವಿಸತಕ್ಕದ್ದು.–** ಯಾವುದೇ ಜಾಹೀರಾತನ್ನು 134ನೇ ಪ್ರಕರಣದ ಅಥವಾ 135ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಅಥವಾ ಜಾಹೀರಾತನ್ನು ಯಾವ ಅವಧಿಗೆ ಇಡಲು, ಪ್ರದರ್ಶಿಸಲು, ಅಳವಡಿಸಿಲು ಅಥವಾ ಉಳಿಸಿಕೊಳ್ಳಲು ಲಿಖಿತದಲ್ಲಿ ಅನುಮತಿ ನೀಡಲಾಗಿದೆಯೋ ಆ ಅನುಮತಿಯು ಮುಕ್ತಾಯವಾದ ಅಥವಾ ಅನೂರ್ಜಿತವಾದ ತರುವಾಯ, ಯಾವುದೇ ಭೂಮಿಯ, ಕಟ್ಟಡದ, ಗೋಡೆಯ, ಜಾಹೀರಾತು ಫಲಕದ ಅಥವಾ ರಚನೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಇಟ್ಟರೆ, ಪ್ರದರ್ಶಿಸಿದರೆ, ಅಳವಡಿಸಿದರೆ ಅಥವಾ ಉಳಿಸಿಕೊಂಡರೆ ಅಂಥ ಭೂಮಿಯ ಕಟ್ಟಡದ, ಗೋಡೆಯ, ಜಾಹೀರಾತು ಜಾಹೀರಾತು ಫಲಕದ ಅಥವಾ ರಚನೆಯ ಮಾಲೀಕನನ್ನು ಅಥವಾ ಅದರ ಅಧಿಭೋಗದಲ್ಲಿರುವ ವ್ಯಕ್ತಿಯನ್ನು, ಆತನು ತಾನು ನಿಯೋಜಿಸಿರದ ಅಥವಾ ತನ್ನ ನಿಯಂತ್ರಣದಲ್ಲಿ ಇರದ ವ್ಯಕ್ತಿಯು ಅಂಥ ಉಲ್ಲಂಘನೆಯನ್ನು ಮಾಡಿದ್ದಾನೆಂದು ಅಥವಾ ತನ್ನ ಪರೋಕ್ಷ ಸಮ್ಮತಿಯಿಲ್ಲದೆ ಅದನ್ನು ಮಾಡಲಾಗಿದೆ ಎಂದು ರುಜುವಾತುಪಡಿಸಿದ ಹೊರತು, ಆ ಉಪಬಂಧಗಳನ್ನು ಉಲ್ಲಂಘಿಸಿ, ಅಂಥ ಜಾಹೀರಾತನ್ನು ಇಟ್ಟಿರುವ, ಪ್ರದರ್ಶಿಸಿರುವ, ಅಳವಡಿಸಿರುವ ಅಥವಾ ಉಳಿಸಿಕೊಂಡಿರುವ ವ್ಯಕ್ತಿ ಎಂಬುದಾಗಿ ಭಾವಿಸತಕ್ಕದ್ದು.

**138. ಅನಧಿಕೃತ ಜಾಹೀರಾತನ್ನು ತೆಗೆದುಹಾಕುವುದು.–** 134ನೇ ಪ್ರಕರಣದ ಅಥವಾ 135ನೇ ಪ್ರಕರಣದ ಉಪಬಂಧಗಳಿಗೆ ತದ್ವಿರುದ್ಧವಾಗಿ ಅಥವಾ ಯಾವುದೇ ಅವಧಿಗೆ ಜಾಹೀರಾತನ್ನು ನಿರ್ಮಿಸಲು, ಪ್ರದರ್ಶಿಸಲು ಅಳವಡಿಸಲು ಅಥವಾ ಇಡಲು ನೀಡಲಾದ ಲಿಖಿತ ಅನುಮತಿಯು ಮುಕ್ತಾಯವಾದ ಅಥವಾ ಅನೂರ್ಜಿತವಾದ ತರುವಾಯ, ಯಾವುದೇ ಜಾಹೀರಾತನ್ನು ಇಟ್ಟರೆ, ಪ್ರದರ್ಶಿಸಿದರೆ, ಅಳವಡಿಸಿದರೆ ಅಥವಾ ಉಳಿಸಿಕೊಂಡರೆ, ಆಯುಕ್ತರು ಲಿಖಿತ ನೋಟೀಸನ್ನು ಕೊಡುವ ಮೂಲಕ, ಯಾವ ಭೂಮಿಯ, ಕಟ್ಟಡದ, ಗೋಡೆಯ, ಜಾಹೀರಾತು ಫಲಕದ ಅಥವಾ ರಚನೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಅದನ್ನು ಇಡಲಾಗಿದೆಯೋ, ಪ್ರದರ್ಶಿಸಲಾಗಿದೆಯೋ, ಅಳವಡಿಸಲಾಗಿದೆಯೋ ಅಥವಾ ಉಳಿಸಿಕೊಳ್ಳಲಾಗಿದೆಯೋ, ಆ ಯಾವುದೇ ಭೂಮಿಯ, ಕಟ್ಟಡದ, ಗೋಡೆಯ, ಜಾಹೀರಾತು ಫಲಕದ ಅಥವಾ ರಚನೆಯ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಂಥ ಜಾಹೀರಾತನ್ನು ಕೆಳಗೆ ಇಳಿಸುವಂತೆ ಅಥವಾ ತೆಗೆದುಹಾಕುವಂತೆ, ಅಗತ್ಯಪಡಿಸಬಹುದು ಮತ್ತು ಯಾವುದೇ ಕಟ್ಟಡ, ಭೂಮಿ ಅಥವಾ ಸ್ವತ್ತನ್ನು ಪ್ರವೇಶಿಸಬಹುದು ಮತ್ತು ಜಾಹೀರಾತನ್ನು ತೆಗೆದುಹಾಕಿಸಬಹುದು.

**139. ಜಾಹೀರಾತಿನ ಮೇಲೆ ತೆರಿಗೆ ಸಂಗ್ರಹಣೆ.–** ಆಯುಕ್ತರು 134ನೇ ಪ್ರಕರಣದ ಮೇರೆಗೆ ಜಾಹೀರಾತಿನ ಮೇಲೆ ವಿಧಿಸಬಹುದಾದ ಯಾವುದೇ ತೆರಿಗೆಯ ಸಂಗ್ರಹಣೆಯನ್ನು ಉಪವಿಧಿಗಳಲ್ಲಿ ಉಪಬಂಧಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಒಂದು ಬಾರಿಗೆ ಒಂದು ವರ್ಷಕ್ಕೆ ಮೀರದ ಯಾವುದೇ ಅವಧಿಗೆ ಗುತ್ತಿಗೆಗೆ ಕೊಡಬಹುದು.

[1][**140. ಸ್ಥಿರಸ್ವತ್ತುಗಳ ವರ್ಗಾವಣೆಯ ಮೇಲೆ ಸುಂಕ.–** ಸ್ಥಿರಸ್ವತ್ತಿನ ವರ್ಗಾವಣೆಯ ಮೇಲೆ ಸುಂಕವನ್ನು, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮೂಲಕ ದೊಡ್ಡ ನಗರ ಪ್ರದೇಶದ ಎಲ್ಲೆಗಳೊಳಗೆ ಇರುವ ಎಲ್ಲಾ ಸ್ಥಿರ ಸ್ವತ್ತಿನ ಮಾರಾಟ, ದಾನ, ಅಡಮಾನ, ವಿನಿಮಯ ಅಥವಾ ಶಾಶ್ವತ ಗುತ್ತಿಗೆಯ ಲಿಖಿತ ಪತ್ರಗಳ ಮೇಲೆ ಶೇಕಡಾ ಎರಡರ ದರದಲ್ಲಿ ಸರ್ ಚಾರ್ಜ್ ರೂಪದಲ್ಲಿ ವಿಧಿಸತಕ್ಕದ್ದು.][1]

1. 2003ರ ಅಧಿನಿಯಮ ಸಂಖ್ಯೆ 8 ರ ಮೂಲಕ 1.4.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**141. ಸ್ವತ್ತು ವರ್ಗಾವಣೆ ಸುಂಕವನ್ನು ಆರಂಭಿಸಿದ ಮೇಲೆ ಅನ್ವಯವಾಗುವ ಉಪಬಂಧಗಳು.– ಸ್ವತ್ತು** ವರ್ಗಾವಣೆಯ ಮೇಲೆ ಸುಂಕ ವಿಧಿಸುವುದನ್ನು ಆರಂಭಿಸಿದ ಮೇಲೆ,–

(ಎ) 1957ರ ಕರ್ನಾಟಕ ಸ್ಟಾಂಪ್ ಅಧಿನಿಯಮದ 28ನೇ ಪ್ರಕರಣವನ್ನು, ಅದು ನಗರದೊಳಗೆ ಮತ್ತು ಹೊರಗೆ ಇರುವ ಸ್ವತ್ತಿಗೆ ಸಂಬಂಧಿಸಿದಂತೆ, ಪ್ರತ್ಯೇಕವಾಗಿ ವಿವರಗಳನ್ನು ನಿರ್ದಿಷ್ಟವಾಗಿ ನಿರೂಪಿಸಲು ಅಗತ್ಯಪಡಿಸಿದ್ದಿದ್ದರೆ ಹೇಗೋ ಹಾಗೆ ಓದಿಕೊಳ್ಳತಕ್ಕದ್ದು;

(ಬಿ) ಸದರಿ ಅಧಿನಿಯಮದ 64ನೇ ಪ್ರಕರಣವನ್ನು, ಅದು ನಗರಪಾಲಿಕೆ ಹಾಗೂ ಸರ್ಕಾರವನ್ನು ಉಲ್ಲೇಖ ಮಾಡಿದ್ದರೆ ಹೇಗೋ ಹಾಗೆ ಓದಿಕೊಳ್ಳತಕ್ಕದ್ದು.

**142. ವರ್ಗಾವಣೆ ಸುಂಕದ ನಿರ್ಧರಣೆ ಮತ್ತು ಸಂಗ್ರಹಣೆಯ ಬಗ್ಗೆ ನಿಯಮಗಳನ್ನು ರಚಿಸಲು ಅಧಿಕಾರ.–** ಸರ್ಕಾರವು, ವರ್ಗಾವಣೆ ಸುಂಕದ ಸಂಗ್ರಹಣೆ, ನಗರಪಾಲಿಕೆಗೆ ಅದರ ಸಂದಾಯ ಹಾಗೂ ಅದರ ಸಂಗ್ರಹಣೆಗಾಗಿ ಸರ್ಕಾರವು ವಹಿಸಿದ ಯಾವುದೇ ವೆಚ್ಚಗಳನ್ನು ಕಳೆಯುವುದನ್ನು ವಿನಿಯಮಿಸುವುದಕ್ಕಾಗಿ ಈ ಅಧಿನಿಯಮಕ್ಕೆ ಅಸಂಗತವಲ್ಲದ ನಿಯಮಗಳನ್ನು ರಚಿಸಬಹುದು.

**143. ತೆರಿಗೆ ನಿರ್ಧರಣೆಯಿಂದ ತಪ್ಪಿಸಿಕೊಂಡ ಸಂದರ್ಭದಲ್ಲಿ ತೆರಿಗೆ ನಿರ್ಧರಣೆ ಮಾಡಲು ಅಧಿಕಾರ.–** ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳಲ್ಲಿ, ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ, ಈ ಅಧ್ಯಾಯದ ಮೇರೆಗೆ ವಿಧಿಸಬಹುದಾದ ಯಾವುವೇ ತೆರಿಗೆಯನ್ನು ಅಥವಾ ಫೀಜುಗಳನ್ನು ಪಾವತಿ ಮಾಡಲು ಹೊಣೆಗಾರನಾದ ಯಾರೇ ವ್ಯಕ್ತಿಯು, ಯಾವುದೇ ಕಾರಣಕ್ಕಾಗಿ ಯಾವುದೇ ಅರ್ಧ ವರ್ಷದಲ್ಲಿ ಅಥವಾ ವರ್ಷದಲ್ಲಿ ತೆರಿಗೆ ನಿರ್ಧರಣೆಯಿಂದ ತಪ್ಪಿಸಿಕೊಂಡಿದ್ದರೆ, ಆಯುಕ್ತರು, ಅಂಥ ವ್ಯಕ್ತಿಯು ಯಾವ ದಿನಾಂಕದಂದು ತೆರಿಗೆ ನಿರ್ಧರಣೆಗೆ ಒಳಗಾಗಬೇಕಾಗಿತ್ತೋ, ಆ ಯಾವುದೇ ದಿನಾಂಕದಿಂದ ಆರು ವರ್ಷಗಳೊಳಗೆ ಯಾವುದೇ ಕಾಲದಲ್ಲಿ, ಬಾಕಿ ಇರುವ ಆ ತೆರಿಗೆ ಅಥವಾ ಫೀಜಿಗೆ ಅವನನ್ನು ತೆರಿಗೆ ನಿರ್ಧರಣೆಗೆ ಒಳಪಡಿಸಿದ ನೋಟೀಸನ್ನು, ಅವನಿಗೆ ಜಾರಿ ಮಾಡಿದ ದಿನಾಂಕದಿಂದ ಹದಿನೈದು ದಿವಸಗಳ ಒಳಗಾಗಿ, ಬಾಕಿ ಇರುವ ಆ ತೆರಿಗೆಯನ್ನು ಅಥವಾ ಫೀಜನ್ನು ಪಾವತಿ ಮಾಡುವಂತೆ ತಗಾದೆ ಮಾಡಿ, ಅಂಥ ವ್ಯಕ್ತಿಗೆ ಜಾರಿ ಮಾಡಬಹುದು. ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳು, ಯಾವ ಅರ್ಧ ವರ್ಷಕ್ಕೆ ಅಥವಾ ವರ್ಷಕ್ಕೆ ತೆರಿಗೆ ಅಥವಾ ಫೀಜುಗಳು ಸಂಬಂಧಿಸಿವೆಯೋ ಆ ಅರ್ಧ ವರ್ಷದಲ್ಲಿ ಅಥವಾ ವರ್ಷದಲ್ಲಿ ತೆರಿಗೆ ನಿರ್ಧರಣೆಯನ್ನು ಮಾಡಿದ್ದಿದ್ದರೆ ಹೇಗೋ ಹಾಗೆ ಆದಷ್ಟುಮಟ್ಟಿಗೆ ಅನ್ವಯವಾಗತಕ್ಕದ್ದು.

**144. ನಿಗದಿತ ಚಾರ್ಜುಗಳು ಮತ್ತು ತೆರಿಗೆಗಳಿಗೆ ಬದಲಾಗಿ ಅವುಗಳನ್ನು ಪಾವತಿಸಲು ಒಪ್ಪಂದಗಳು.–** (1) ನಗರಪಾಲಿಕೆಯು, ನೀರಿನ ದರವನ್ನು ವಿಧಿಸುವ ಬದಲು ಅಥವಾ ನಿರ್ದಿಷ್ಟ ಪ್ರಕರಣಗಳಲ್ಲಿ ನೀರಿನ ದರವನ್ನು ವಿಧಿಸಲಾಗಿರುವಲ್ಲಿ ನಗರಪಾಲಿಕೆಗೆ ಸೇರಿದ ನೀರನ್ನು ಯಾವುದೇ ಖಾಸಗಿ

ಭೂಮಿಗಳಿಗೆ ಅಥವಾ ಕಟ್ಟಡಗಳಿಗೆ ಅಥವಾ ಅವುಗಳ ಸಂಬಂಧದಲ್ಲಿ ಬಳಸುವುದಕ್ಕಾಗಿ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ, ವಿಧಿಸಿದ ದರವನ್ನು ವಸೂಲಿ ಮಾಡುವುದಕ್ಕೆ ಬದಲಾಗಿ,–

(ಎ) 421ನೇ ಪ್ರಕರಣದ ಮೇರೆಗೆ ಜಾರಿಯಲ್ಲಿರುವ ನಿಯಮಗಳಲ್ಲಿ, ನಿರ್ದಿಷ್ಟಪಡಿಸತಕ್ಕಂಥ ದರಗಳನ್ನು ಮೀರದ ಚಾರ್ಜ್‌ಗಳನ್ನು, ಅಳತೆಯಿಂದ ಖಚಿತಪಡಿಸಿಕೊಂಡಂತೆ, ಬಳಸಲಾದ ಪ್ರಮಾಣಕ್ಕೆ ಅನುಸಾರವಾಗಿ ಅಂಥ ನೀರಿನ ಸರಬರಾಜಿಗೆ ನಿಗದಿಪಡಿಸಬಹುದು; ಅಥವಾ

(ಬಿ) ಯಾರೇ ವ್ಯಕ್ತಿಯು ಹಣಪಾವತಿಯ ಮೇಲೆ ನೀರು ಸರಬರಾಜಿಗಾಗಿ ಸಲ್ಲಿಸಿದ ಅರ್ಜಿಯ ಮೇಲೆ, ಅಂಥ ವ್ಯಕ್ತಿಯೊಂದಿಗೆ ಮಾಡಿಕೊಂಡ ಒಪ್ಪಂದದ ಮೂಲಕ ನಿಗದಿಪಡಿಸತಕ್ಕಂಥ ನಿಬಂಧನೆಗಳ ಮೇಲೆ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ನಿಯತಕಾಲಿಕವಾಗಿ ಆಗಲಿ ಅಥವಾ ಅನ್ಯಥಾ ಆಗಲಿ, ನಗರಪಾಲಿಕೆಗೆ ಸೇರಿದ ನೀರನ್ನು, ಅಂಥ ಪ್ರಮಾಣಗಳಲ್ಲಿ ಅಥವಾ ಅಂಥ ಉದ್ದೇಶಗಳಿಗಾಗಿ (ಗೃಹಬಳಕೆ, ಅಲಂಕಾರ ಅಥವಾ ನೀರಾವರಿ ಅಥವಾ ವ್ಯಾಪಾರ, ತಯಾರಿಕೆ ಅಥವಾ ಯಾವುದೇ ಇತರ ಉದ್ದೇಶಗಳಿಗೆ ಆಗಲಿ) ಆ ವ್ಯಕ್ತಿಗೆ ಸರಬರಾಜು ಮಾಡಲು ವ್ಯವಸ್ಥೆ ಮಾಡಬಹುದು:

ಪರಂತು,–

(i) ಮೀಟರುಗಳು, ಸಂಪರ್ಕ–ಕೊಳವೆಗಳು ಮತ್ತು ಅಂಥ ಸರಬರಾಜಿಗೆ ಅವಶ್ಯಕವಾದ ಮತ್ತು ಪ್ರಾಸಂಗಿಕವಾದ ಎಲ್ಲಾ ಇತರ ಕಾಮಗಾರಿಗಳು ಮತ್ತು ಅಂಥ ಕಾಮಗಾರಿಗಳ ಎಲ್ಲಾ ದುರಸ್ತಿಗಳು, ವಿಸ್ತರಣೆಗಳು ಮತ್ತು ಮಾರ್ಪಾಡುಗಳು ನಗರಪಾಲಿಕೆಯ ನಿಯಂತ್ರಣದಲ್ಲಿರತಕ್ಕದ್ದು ಮತ್ತು ಅದರ ವೆಚ್ಚಗಳನ್ನು ನಿಯಮಗಳಿಗೆ ಅಥವಾ ಉಪವಿಧಿಗಳಿಗೆ ಅಸಂಗತವಾಗದಿರುವಷ್ಟರಮಟ್ಟಿಗೆ ಅಂಥ ಸರಬರಾಜಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಚಾರ್ಜುಗಳಿಗೆ ಅಥವಾ ಪಾವತಿಗಳಿಗೆ ಹೊಣೆಗಾರನಾದ ವ್ಯಕ್ತಿಯು ಭರಿಸತಕ್ಕದ್ದು; ಮತ್ತು

(ii) ನೀರಿನ ಅಂಥ ಸರಬರಾಜನ್ನು, ತತ್ಕಾಲದಲ್ಲಿ ಜಾರಿಯಲ್ಲಿರುವ ಉಪವಿಧಿಗಳಲ್ಲಿ ನಿಯಮಿಸಲಾದಂತೆ ಅದರ ಮಿತಿಗೆ ಅಥವಾ ನಿಲುಗಡೆಗೆ ಸಂಬಂಧಿಸಿದ ಮತ್ತು ಪೋಲು ಅಥವಾ ದುರುಪಯೋಗವನ್ನು ತಡೆಗಟ್ಟುವುದಕ್ಕೆ ಸಂಬಂಧಿಸಿದ ಅಂಥ ಎಲ್ಲ ಷರತ್ತುಗಳಿಗೊಳಪಟ್ಟು, ಮಂಜೂರು ಮಾಡತಕ್ಕದ್ದು ಮತ್ತು ಮಂಜೂರು ಮಾಡಲಾಗಿದೆಯೆಂದು ಭಾವಿಸತಕ್ಕದ್ದು.

(2) ನಗರಪಾಲಿಕೆಯು, ಯಾರೇ ವ್ಯಕ್ತಿಗೆ ಸೇರಿದ ಯಾವುದೇ ವಾಹನದ ಸಂಬಂಧದಲ್ಲಿ ಪಾವತಿ ಮಾಡಬೇಕಾದ ಎಲ್ಲ ಜಕಾತಿಗಳಿಗೆ ಬದಲಾಗಿ, ನಗರಪಾಲಿಕೆಯು ಅನುಮೋದಿಸಿದ ಪ್ರಮಾಣಕ್ಕೆ ಅನುಸಾರವಾಗಿ ನಿಗದಿಪಡಿಸಬೇಕಾದ ಮತ್ತು ಮಾಸಿಕವಾಗಿ, ತ್ರೈಮಾಸಿಕವಾಗಿ ಅಥವಾ ಅರ್ಧ ವಾರ್ಷಿಕವಾಗಿ ಮುಂಗಡವಾಗಿ ಪಾವತಿ ಮಾಡಬೇಕಾದ ಮೊತ್ತಕ್ಕೆ ಅಂಥ ವ್ಯಕ್ತಿಯೊಂದಿಗೆ ಒಂದು ಬಾರಿಗೆ ಒಂದು ವರ್ಷಕ್ಕೆ ಮೀರದ ಅವಧಿಗೆ ಒಪ್ಪಂದ ಮಾಡಿಕೊಳ್ಳಬಹುದು ಮತ್ತು ನಗರದ ಎಲ್ಲೆಗಳೊಳಗೆ ವಾಹನದ ಅಥವಾ ಪ್ರಾಣಿಯ ಮುಕ್ತ ಪ್ರವೇಶಕ್ಕಾಗಿ ಪಾಸನ್ನು ಕೊಡಬಹುದು. ಪರಂತು, ವಿಧಿಸಿದ ಮೊತ್ತವು, ಯಾವ ಅವಧಿಗೆ ಪಾಸನ್ನು ನೀಡಲಾಗಿದೆಯೋ ಆ ಅವಧಿಯಲ್ಲಿ ವಾಹನವು ಪ್ರತಿದಿನಕ್ಕೆ ಒಂದು ಬಾರಿ ಜಕಾತಿಯನ್ನು ಪಾವತಿ ಮಾಡಬೇಕಾಗಿದ್ದಿದ್ದರೆ ಅಂಥ ವ್ಯಕ್ತಿಯು ಪಾವತಿಸಲು ಹೊಣೆಗಾರನಾಗಬಹುದಾಗಿದ್ದಂಥ ಮೊಬಲಗಿನ ಅರ್ಧಕ್ಕಿಂತ ಕಡಿಮೆ ಇರತಕ್ಕದ್ದಲ್ಲ.

(3) (1)ನೇ ಉಪ–ಪ್ರಕರಣದ ಮೇರೆಗೆ ಚಾರ್ಜ್‌ಗಳು, ಪಾವತಿಗಳು ಅಥವಾ ವೆಚ್ಚಗಳಾಗಿ ಬಾಕಿ ಇರುವ ಅಥವಾ 120ನೇ ಪ್ರಕರಣದ ಮೇರೆಗೆ ಇಡಿಗಂಟಾಗಿ ಬಾಕಿ ಇರುವ ನಗರಪಾಲಿಕೆಯು ಕ್ಲೇಮು ಮಾಡಿದ ಪ್ರತಿಯೊಂದು ಮೊತ್ತವನ್ನು ಈ ಅಧ್ಯಾಯದ ಉದ್ದೇಶಗಳಿಗಾಗಿ, ಈ ಅಧ್ಯಾಯದ ಮೇರೆಗೆ ವಸೂಲಿ ಮಾಡಬಹುದಾದ ತೆರಿಗೆಯ ಬಾಬ್ತು ಕ್ಲೇಮು ಮಾಡಿದ ಮೊಬಲಗೆಂಬುದಾಗಿ ಭಾವಿಸತಕ್ಕದ್ದು ಮತ್ತು ಅದು ಅದೇ ರೀತಿಯಲ್ಲಿ ವಸೂಲುಮಾಡಬಹುದಾದುದು ಆಗಿರತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದು ಯಾವುದೂ, ನಗರಪಾಲಿಕೆಯು ಸೂಕ್ತವೆಂದು ಭಾವಿಸಬಹುದಾದಂಥ ದರಗಳಲ್ಲಿ ಮತ್ತು ಅಂಥ ಷರತ್ತುಗಳ ಮೇಲೆ ನಗರಪಾಲಿಕೆಗೆ ಸೇರಿದ, ಆದರೆ ಈ ಅಧಿನಿಯಮದ ಉದ್ದೇಶಗಳಿಗಾಗಿ ಅಗತ್ಯವಿರದ ನೀರಿನ ಯಾವುದೇ ಪ್ರಮಾಣವನ್ನು ನಗರದ ಎಲ್ಲೆಗಳಿಂದಾಚೆಗೆ ಬಳಸುವುದಕ್ಕಾಗಿ ಸರಬರಾಜು ಮಾಡಲು ಯಾರೇ ವ್ಯಕ್ತಿಯೊಂದಿಗೆ ಕರಾರು ಮಾಡಿಕೊಳ್ಳಲು ನಗರಪಾಲಿಕೆಗೆ ಇರುವ ಹಕ್ಕಿಗೆ ಅಥವಾ ಅಧಿಕಾರಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

**145. ಆಕ್ಷೇಪಣಾರ್ಹ ತೆರಿಗೆಗಳನ್ನು ವಿಧಿಸುವುದನ್ನು ತಡೆಹಿಡಿಯಲು ಅಥವಾ ನಿಷೇಧಿಸಲು ಸರ್ಕಾರದ ಅಧಿಕಾರ.**– (1) ನಗರಪಾಲಿಕೆಯು ವಿಧಿಸಬಹುದಾದ ಯಾವುದೇ ತೆರಿಗೆಯ ಅಥವಾ ಫೀಜಿನ ಹೊರೆಯು ನ್ಯಾಯೋಚಿತವಾದುದಾಗಿಲ್ಲವೆಂದು ಅಥವಾ ಅದನ್ನು ಅಥವಾ ಅದರ ಯಾವುದೇ ಭಾಗವನ್ನು ವಿಧಿಸುವುದು ಜನಸಾಮಾನ್ಯರ ಹಿತಾಸಕ್ತಿಗಳಿಗೆ ಆಘಾತಕರವಾದುದೆಂದು ನೀಡಿದ ದೂರಿನ ಮೇಲೆ ಅಥವಾ ಅನ್ಯಥಾ ಯಾವುದೇ ಕಾಲದಲ್ಲಿ ಸರ್ಕಾರಕ್ಕೆ ಹಾಗೆ ಕಂಡುಬಂದರೆ, ಸರ್ಕಾರವು ಈ ಬಗ್ಗೆ ನಿಗದಿಪಡಿಸತಕ್ಕಂಥ ಅವಧಿಯೊಳಗೆ ಸದರಿ ತೆರಿಗೆಗೆ ಅಥವಾ ಫೀಜಿಗೆ ಸಂಬಂಧಿಸಿದಂತೆ ಇದೆಯೆಂದು ಅದಕ್ಕೆ ಕಂಡುಬರುವಂಥ ಯಾವುದೇ ಆಕ್ಷೇಪಣೆಯನ್ನು ನಿವಾರಿಸಲು ಕ್ರಮಗಳನ್ನು ತೆಗೆದುಕೊಳ್ಳಲು ಸದರಿ ನಗರಪಾಲಿಕೆಯನ್ನು ಅಗತ್ಯಪಡಿಸಬಹುದು ಮತ್ತು ಹಾಗೆ ನಿಗದಿಪಡಿಸಿದ ಅವಧಿಯೊಳಗೆ, ಅಂಥ ಅಗತ್ಯತೆಗಳನ್ನು ಸರ್ಕಾರಕ್ಕೆ ಮನದಟ್ಟಾಗುವಂತೆ ಈಡೇರಿಸದಿದ್ದರೆ, ಅದು ಅಂಥ ತೆರಿಗೆಯನ್ನು ಅಥವಾ ಅದರ ಅಂಥ ಭಾಗವನ್ನು ವಿಧಿಸುವುದನ್ನು, ಅದಕ್ಕಿರುವ ಆಕ್ಷೇಪಣೆಯನ್ನು ನಿವಾರಿಸುವವರೆಗೆ ಅಧಿಸೂಚನೆಯ ಮೂಲಕ ತಡೆಹಿಡಿಯಬಹುದು.

(2) ಹಾಗೆ ತಡೆಹಿಡಿದಿರುವುದನ್ನು ಸರ್ಕಾರವು ಅಧಿಸೂಚನೆಯ ಮೂಲಕ ಯಾವುದೇ ಕಾಲದಲ್ಲಿ ರದ್ದುಮಾಡಬಹುದು.

[1][**146. ತೆರಿಗೆಗಳನ್ನು ವಿಧಿಸಲು ನಗರಪಾಲಿಕೆಯನ್ನು ಅಗತ್ಯಪಡಿಸಲು ಸರ್ಕಾರದ ಅಧಿಕಾರ.**– ಸರ್ಕಾರವು ಅಧಿಸೂಚನೆಯ ಮೂಲಕ 103ನೇ ಪ್ರಕರಣದ ಮೇರೆಗೆ ವಿಧಿಸಬಹುದಾದಂಥ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ತೆರಿಗೆಯನ್ನು ಸರ್ಕಾರವು ಸೂಕ್ತವೆಂದು ಪರಿಗಣಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಪ್ರಮಾಣದವರೆಗೆ ವಿಧಿಸುವಂತೆ ನಗರಪಾಲಿಕೆಯನ್ನು ಅಗತ್ಯಪಡಿಸಬಹುದು ಮತ್ತು ನಗರಪಾಲಿಕೆಯು, ಸರ್ಕಾರವು ಅಗತ್ಯಪಡಿಸಿದಂತೆ ತೆರಿಗೆಯನ್ನು ವಿಧಿಸಲು ಮುಂದುವರೆಯತಕ್ಕದ್ದು.][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**147. ಅನುಸೂಚಿ III ರಲ್ಲಿನ ನಿಯಮಗಳು.**– ಅನುಸೂಚಿ III ರಲ್ಲಿ ಒಳಗೊಂಡಿರುವ ನಿಯಮಗಳನ್ನು ಮತ್ತು ಕೋಷ್ಟಕಗಳನ್ನು ಈ ಅಧ್ಯಾಯದ ಭಾಗವೆಂಬಂತೆ ಓದಿಕೊಳ್ಳತಕ್ಕದ್ದು.

[1][148. xxx][1]

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

## ಅಧ್ಯಾಯ – XI

## ಹಣಕಾಸು, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**149. ನಗರಪಾಲಿಕೆಯ ನಿಧಿ.–** ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಮೇರೆಗೆ ನಗರಪಾಲಿಕೆಯು ಅಥವಾ ನಗರಪಾಲಿಕೆಯ ಪರವಾಗಿ ಸ್ವೀಕರಿಸಿದ ಎಲ್ಲಾ ಹಣವನ್ನು, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನಗರಪಾಲಿಕೆಗೆ ಪಾವತಿಯಾದ ಅಥವಾ ಅದು ವಿಧಿಸಿದ ಎಲ್ಲಾ ತೆರಿಗೆಗಳು, ಜಕಾತಿಗಳು ಮತ್ತು ಇತರ ಕರಗಳು, ಜುಲ್ಮಾನೆಗಳು, ಫೀಜುಗಳು, ದಂಡಗಳು, ನಗರಪಾಲಿಕೆಯು ಮಾರಾಟ ಮಾಡಿದ ಭೂಮಿಯ ಅಥವಾ ಇತರ ಸ್ವತ್ತಿನ ಎಲ್ಲ ಉತ್ಪತ್ತಿಗಳು ಮತ್ತು ಅದರ ಭೂಮಿಗಳಿಂದ ಅಥವಾ ಸ್ವತ್ತಿನಿಂದ ಪ್ರಾಪ್ತವಾದ ಎಲ್ಲಾ ಬಾಡಿಗೆಗಳು ಮತ್ತು ಎಲ್ಲಾ ಬಡ್ಡಿಗಳು, ಲಾಭಗಳು ಮತ್ತು ಸರ್ಕಾರದಿಂದ ಅಥವಾ ಖಾಸಗೀ ವ್ಯಕ್ತಿಗಳಿಂದ ದಾನಗಳ ಅಥವಾ ವರ್ಗಾವಣೆಗಳ ಮೂಲಕ ಅಥವಾ ಅನ್ಯಥಾ ಪ್ರಾಪ್ತವಾದ ಎಲ್ಲ ಇತರ ಹಣ ನಗರಪಾಲಿಕೆಯ ನಿಧಿ ಆಗಿರತಕ್ಕದ್ದು ಮತ್ತು ಅದನ್ನು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮತ್ತು ವಿನಿಯಮಗಳ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳಿಗೆ ಅನುಸಾರವಾಗಿ ಧಾರಣ ಮಾಡತಕ್ಕದ್ದು, ವಿನಿಯೋಗಿಸತಕ್ಕದ್ದು ಮತ್ತು ವಿಲೆ ಮಾಡತಕ್ಕದ್ದು.

**150. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ನಗರಪಾಲಿಕೆಯ ಎಲ್ಲಾ ಜಮಾ ಮತ್ತು ಖರ್ಚಿನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ನಮೂನೆಯಲ್ಲಿ ಇಡತಕ್ಕದ್ದು.

(2) ಸರ್ಕಾರವು, ಅದರ ಅಧಿಕಾರಿಗಳ ಪೈಕಿ ಒಬ್ಬ ಅಧಿಕಾರಿಯನ್ನು ನಗರಪಾಲಿಕೆಯ ಮುಖ್ಯ ಲೆಕ್ಕಪರಿಶೋಧಕನನ್ನಾಗಿ ನೇಮಿಸತಕ್ಕದ್ದು. ಅವರು [1][ರಾಜ್ಯ ಲೆಕ್ಕಪತ್ರಗಳ ನಿಯಂತ್ರಕರ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು][1] ನಗರಪಾಲಿಕೆಯ ಲೆಕ್ಕಪತ್ರಗಳ ಪರಿಶೋಧನೆ ನಡೆಸತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ, ನಗರಪಾಲಿಕೆಯ ಲೆಕ್ಕಪತ್ರಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲಾ ಜಮಾ ಮತ್ತು ಖರ್ಚಿನ ಲೆಕ್ಕಗಳನ್ನು ನೋಡಲು ಅವರಿಗೆ ಅವಕಾಶವಿರತಕ್ಕದ್ದು ಮತ್ತು ಯಾವುದೇ ಜಮೆಗೆ ಅಥವಾ ಖರ್ಚಿಗೆ ಸಂಬಂಧಿಸಿದಂತೆ ಅವರು ಅಗತ್ಯಪಡಿಸಬಹುದಾದಂಥ ಯಾವುದೇ ಮಾಹಿತಿಯನ್ನು ಆಯುಕ್ತರು ಅವರಿಗೆ ಒದಗಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 36 ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ನಗರಪಾಲಿಕೆಯ ಮುಖ್ಯ ಲೆಕ್ಕಪರಿಶೋಧಕರು, ವೆಚ್ಚದಲ್ಲಿ ಅಥವಾ ನಗರಪಾಲಿಕೆಗೆ ಬರಬೇಕಾದ ಹಣದ ವಸೂಲಿಯಲ್ಲಿ ಅಥವಾ ನಗರಪಾಲಿಕೆಯ ಲೆಕ್ಕಪತ್ರಗಳಲ್ಲಿ ಅವರು ಯಾವುದೇ ಕಾಲದಲ್ಲಿ ಗಮನಿಸಬಹುದಾದ ಯಾವುದೇ ಸ್ಪಷ್ಟ ಅನೌಚಿತ್ಯ ಅಥವಾ ಅಕ್ರಮತೆಯನ್ನು ನಿಯಮಿಸಿದ ಪೌರ ಪ್ರಾಧಿಕಾರಕ್ಕೆ ವರದಿ ಮಾಡತಕ್ಕದ್ದು ಮತ್ತು ಅಂಥ ವಿಷಯಕ್ಕೆ ಸಂಬಂಧಿಸಿದಂತೆ ನಿಯಮಗಳಲ್ಲಿ ವಿಧಿಸಬಹುದಾದಂಥ ಮಾಹಿತಿಯನ್ನು ಒದಗಿಸತಕ್ಕದ್ದು.

(4) ಸರ್ಕಾರವು ನಿರ್ಧರಿಸಬಹುದಾದಂಥ ಸಂಬಳ ಮತ್ತು ಭತ್ಯಗಳನ್ನು ಅವರಿಗೆ ಸಂದಾಯ ಮಾಡತಕ್ಕದ್ದು ಮತ್ತು ಅವರು ಸರ್ಕಾರದ ಯಾವ ಸೇವಾ ವಿಭಾಗಕ್ಕೆ ಸೇರಿದ್ದಾರೋ ಆ ವಿಭಾಗದ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ನಿಯಮಗಳಿಗೆ ಮತ್ತು ವಿನಿಯಮಗಳಿಗೆ ಅನುಸಾರವಾಗಿ ವಿಶೇಷಾಧಿಕಾರಗಳಿಗೆ ಅವರು ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಅವರು ಅಥವಾ ಅವರ ಪರವಾಗಿ ಅಂಥ ನಿಯಮಗಳ ಮತ್ತು ವಿನಿಯಮಗಳ ಮೇರೆಗೆ ಸಂದಾಯ ಮಾಡಬಹುದಾದಂಥ ರಜೆ ಭತ್ಯೆಗಳು, ನಿವೃತ್ತಿ ವೇತನ ಮತ್ತು ಭವಿಷ್ಯನಿಧಿ ಬಾಬಿಗೆ ಅಂಥ ವಂತಿಗೆಯನ್ನು ನಗರಪಾಲಿಕೆಯ ನಿಧಿಯಿಂದ ಕೊಡತಕ್ಕದ್ದು.

**151. ಹಣಕಾಸು ನಿಯಮಗಳು.–** ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದಂತೆ ಹೊರತು, ನಗರಪಾಲಿಕೆಯ ಹಣಕಾಸು ನಿಯಮಗಳು ನಿಯಮಿಸಿದಂತೆ ಇರತಕ್ಕದ್ದು.

**152. ಬೆಂಗಳೂರು ನಗರದ ನಿವಾಸಿಗಳಿಗೆ ನೀರು ಸರಬರಾಜಿಗಾಗಿ ವಂತಿಗೆ ನೀಡಿಕೆ.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, [1][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು][1] ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮೊದಲು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯೊಂದಿಗೆ ಮಾಡಿಕೊಂಡ ವ್ಯವಸ್ಥೆಗಳಿಗೆ ಅನುಸಾರವಾಗಿ ಬೆಂಗಳೂರು ನಗರದ ಅಂಥ ವರ್ಗದ ನಿವಾಸಿಗಳ ಪ್ರಯೋಜನಕ್ಕಾಗಿ ನೀರು ಸರಬರಾಜು ಮಾಡಲು ಸದರಿ ಮಂಡಲಿಗೆ ಸದರಿ ಮಹಾ ನಗರಪಾಲಿಕೆಯು ಅಂಥ ವಂತಿಗೆಯನ್ನು ಕೊಡತಕ್ಕದ್ದು.

1. 2009 ರ ಅಧಿನಿಯಮ ಸಂಖ್ಯೆ 22 ರ ಮೂಲಕ 4.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಲಾಗಿದೆ ಎಂದು ಭಾವಿಸತಕ್ಕದ್ದು.

**153. ಇತರ ಸ್ಥಳೀಯ ಪ್ರಾಧಿಕಾರಗಳಿಂದ ವೆಚ್ಚಕ್ಕೆ ವಂತಿಗೆ ನೀಡಿಕೆ.–** (1) ನಿಯಮಗಳ ಮೂಲಕ ಅಧಿಕೃತಗೊಳಿಸಿದ ಯಾವುದೇ ಉದ್ದೇಶಕ್ಕಾಗಿ ಸರ್ಕಾರವು ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರವು ವಹಿಸಿದ ವೆಚ್ಚವು ನಗರದ ನಿವಾಸಿಗಳ ಪ್ರಯೋಜನಕ್ಕಾಗಿ ವಹಿಸಿದ್ದಾಗಿದ್ದರೆ ಅಂಥ ವೆಚ್ಚಕ್ಕಾಗಿ ನಗರಪಾಲಿಕೆಯು ವಂತಿಗೆಯನ್ನು ಕೊಡಬಹುದು.

(2) (1)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ವಂತಿಗೆಯನ್ನು ಏಕೆ ಕೊಡಬಾರದು ಎಂಬ ಬಗ್ಗೆ ಸರ್ಕಾರವು ಈ ಬಗ್ಗೆ ನಿಗದಿಪಡಿಸಿದ ಒಂದು ತಿಂಗಳಿಗಿಂತ ಕಡಿಮೆಯಲ್ಲದ ಅವಧಿಯೊಳಗೆ ಕಾರಣ ತೋರಿಸಲು ನಗರಪಾಲಿಕೆಗೆ ಸರ್ಕಾರವು ನಿರ್ದೇಶನ ನೀಡಬಹುದು.

(3) ಸರ್ಕಾರಕ್ಕೆ ಮನದಟ್ಟಾಗುವಂತೆ ಸದರಿ ಅವಧಿಯೊಳಗೆ ಕಾರಣ ತೋರಿಸಲು ನಗರಪಾಲಿಕೆಯು ತಪ್ಪಿದರೆ, ಸರ್ಕಾರವು ಅದು ಹೆಸರಿಸತಕ್ಕಂಥ ವಂತಿಗೆಯನ್ನು ನೀಡುವಂತೆ ನಿರ್ದೇಶಿಸಬಹುದು ಮತ್ತು ಅದಕ್ಕನುಸಾರವಾಗಿ ಅದನ್ನು ಸಂದಾಯ ಮಾಡತಕ್ಕದ್ದು.

**154. ಹಣ ಸಾಲ ಪಡೆಯಲು ನಗರಪಾಲಿಕೆಯ ಅಧಿಕಾರ.–** (1) ನಗರಪಾಲಿಕೆಯು ವಿಶೇಷ ಸಭೆಯಲ್ಲಿ ಅಂಗೀಕರಿಸಿದ ಯಾವುದೇ ನಿರ್ಣಯಕ್ಕೆ ಅನುಸಾರವಾಗಿ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಧಿಕೃತವಾದ ಎಲ್ಲ ಅಥವಾ ಯಾವುದೇ ತೆರಿಗೆಗಳ, ಸುಂಕಗಳ, ಫೀಜುಗಳ ಮತ್ತು ಬಾಕಿಗಳ ಭದ್ರತೆಯ ಮೇಲೆ,–

(ಎ) ಕಾಮಗಾರಿಗಳ ನಿರ್ಮಾಣಕ್ಕಾಗಿ;

(ಬಿ) ಭೂಮಿಗಳ ಮತ್ತು ಕಟ್ಟಡಗಳ ಅರ್ಜನೆಗಾಗಿ; ಅಥವಾ

(ಸಿ) ಸರ್ಕಾರಕ್ಕೆ ಬಾಕಿ ಇರುವ ಯಾವುದೇ ಋಣದ ಸಂದಾಯಕ್ಕಾಗಿ; ಅಥವಾ

(ಡಿ) ಈ ಅಧಿನಿಯಮದ ಅಥವಾ ಹಿಂದೆ ಜಾರಿಯಲ್ಲಿದ್ದ ಯಾವುದೇ ಇತರ ಕಾನೂನಿನ ಮೇರೆಗೆ ಎತ್ತಿದ ಸಾಲವನ್ನು ಮರುಸಂದಾಯ ಮಾಡುವುದಕ್ಕಾಗಿ

– ಅಗತ್ಯವಾಗಬಹುದಾದ ಯಾವುದೇ ಹಣದ ಮೊತ್ತವನ್ನು ಡಿಬೆಂಚರ್ ಮೂಲಕವಾಗಲಿ ಅಥವಾ ಅನ್ಯಥಾ ಸಾಲ ಪಡೆಯಬಹುದು:

ಪರಂತು,–

(i) ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಯಾವುದೇ ಸಾಲವನ್ನು ಎತ್ತತಕ್ಕದ್ದಲ್ಲ; ಮತ್ತು

(ii) ಸಾಲದ ಮೊಬಲಗು, ಬಡ್ಡಿಯ ದರ ಮತ್ತು ಹೊರಡಿಸಿದ ದಿನಾಂಕವೂ ಸೇರಿದಂತೆ ನಿಬಂಧನೆಗಳು, ಮರುಸಂದಾಯದ ಕಾಲ ಮತ್ತು ವಿಧಾನ ಮತ್ತು ಅಂಥವುಗಳು ಸರ್ಕಾರದ ಅನುಮೋದನೆಗೆ ಒಳಪಟ್ಟಿರತಕ್ಕದ್ದು.

(2) (1)ನೇ ಉಪ ಪ್ರಕರಣದ ಮೇರೆಗೆ ಯಾವುದೇ ಹಣದ ಮೊತ್ತವನ್ನು ಸಾಲವಾಗಿ ಪಡೆದಾಗ,–

(ಎ) ಪಡೆದ ಸಾಲದ ಯಾವುದೇ ಭಾಗವನ್ನು ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಯಾವ ಉದ್ದೇಶಕ್ಕಾಗಿ ಅದನ್ನು ಪಡೆಯಲಾಗಿದೆಯೋ ಅದರ ಹೊರತು ಬೇರೆ ಯಾವುದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದಲ್ಲ;

(ಬಿ) (1)ನೇ ಉಪ–ಪ್ರಕರಣದ (ಎ) ಖಂಡದ ಮೇರೆಗೆ ಸಾಲವಾಗಿ ಪಡೆದ ಹಣದ ಮೊತ್ತದ ಯಾವುದೇ ಭಾಗವನ್ನು ಯಾವ ಕಾಮಗಾರಿಗಳ ನಿರ್ಮಾಣಕ್ಕಾಗಿ ಹಣವನ್ನು ಸಾಲ ಪಡೆಯಲಾಗಿತ್ತೋ ಆ ಕಾಮಗಾರಿಗಳಿಗಾಗಿಯೇ ನಿಯೋಜಿತರಾದವರನ್ನು ಹೊರತುಪಡಿಸಿ, ನಗರಪಾಲಿಕೆಯ ಯಾರೇ ಅಧಿಕಾರಿಗಳಿಗೆ ಅಥವಾ ನೌಕರರಿಗೆ ಸಂಬಳಗಳ ಅಥವಾ ಭತ್ಯಗಳ ಸಂದಾಯಕ್ಕೆ ವಿನಿಯೋಗಿಸತಕ್ಕದ್ದಲ್ಲ.

**155. 154ನೇ ಪ್ರಕರಣದ ಮೇರೆಗೆ ಸಾಲವಾಗಿ ಪಡೆದ ಹಣದ ಮರುಸಂದಾಯದ ಕಾಲಾವಧಿ.–** 154ನೇ ಪ್ರಕರಣದ ಮೇರೆಗೆ ಸಾಲವಾಗಿ ಪಡೆದ ಯಾವುದೇ ಹಣದ ಮರುಸಂದಾಯದ ಕಾಲಾವಧಿಯು ಯಾವುದೇ ಸಂದರ್ಭದಲ್ಲಿ ಅರವತ್ತು ವರ್ಷಗಳನ್ನು ಮೀರತಕ್ಕದ್ದಲ್ಲ ಮತ್ತು ಹಿಂದಿನ ಯಾವುದೇ ಸಾಲವನ್ನು ತೀರಿಸುವ ಉದ್ದೇಶಕ್ಕಾಗಿ ಸಾಲವಾಗಿ ಪಡೆದ ಯಾವುದೇ ಹಣದ ಮರುಸಂದಾಯದ ಕಾಲಾವಧಿಯನ್ನು ಸರ್ಕಾರದ ಸ್ಪಷ್ಟ ಮಂಜೂರಾತಿ ಇದ್ದ ಹೊರತು ಅಂಥ ಹಿಂದಿನ ಸಾಲವನ್ನು ಯಾವ ಅವಧಿಗೆ ಮಂಜೂರು ಮಾಡಲಾಗಿತ್ತೋ ಆ ಅವಧಿಯ ಉಳಿದಿರುವ ಭಾಗಕ್ಕೆ ಮೀರಿ ವಿಸ್ತರಿಸತಕ್ಕದ್ದಲ್ಲ.

**156. ಸಾಲ ಪಡೆಯುವ ಅಧಿಕಾರಗಳ ಮಿತಿ.–** ಇದರಲ್ಲಿ ಇನ್ನು ಮುಂದೆ ಏನೇ ಒಳಗೊಂಡಿದ್ದರೂ, ನಗರಪಾಲಿಕೆಯ ಸಾಲ ಪಡೆಯುವ ಅಧಿಕಾರಗಳು, ಬಡ್ಡಿಗಾಗಿ ಮತ್ತು ಇಲ್ಲಿ ಇನ್ನುಮುಂದೆ ಉಪಬಂಧಿಸಿರುವಂತೆ ಋಣತೀರಿಕೆ ನಿಧಿಗಳನ್ನು ನಿರ್ವಹಿಸುವುದಕ್ಕಾಗಿ ಮತ್ತು ಅನ್ಯಥಾ ಸಾಲ ಪಡೆದ ಯಾವುದೇ ಮೊತ್ತದ ಬಡ್ಡಿಗಾಗಿ ಮತ್ತು ಆ ಮೊತ್ತದ ಮರುಸಂದಾಯಕ್ಕಾಗಿ ವಾರ್ಷಿಕವಾಗಿ ಸಂದಾಯ ಮಾಡಬಹುದಾದ ಮೊತ್ತವು ಸರ್ಕಾರದ ಸ್ಪಷ್ಟ ಮಂಜೂರಾತಿಯಿದ್ದ ಹೊರತು, Xನೇ ಅಧ್ಯಾಯದ ಮೇರೆಗೆ ನಿರ್ಧರಿಸಲಾದಂತೆ ಕಟ್ಟಡಗಳ ಮತ್ತು ಭೂಮಿಗಳ ತೆರಿಗೆಗೆ ಒಳಪಡುವ ಮೌಲ್ಯದ ಶೇಕಡ ಹತ್ತರಷ್ಟನ್ನು ಮೀರದ ಹಾಗೆ ಸೀಮಿತವಾಗಿರತಕ್ಕದ್ದು.

**157. ಡಿಬೆಂಚರುಗಳ ನಮೂನೆ ಮತ್ತು ಪರಿಣಾಮ.–** ಈ ಅಧ್ಯಾಯದ ಮೇರೆಗೆ ಹೊರಡಿಸಿದ ಎಲ್ಲಾ ಡಿಬೆಂಚರುಗಳು ಸರ್ಕಾರದ ಪೂರ್ವ ಮಂಜೂರಾತಿ ಪಡೆದು ನಗರಪಾಲಿಕೆಯು ನಿರ್ಧರಿಸಬಹುದಾದಂಥ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅವುಗಳಲ್ಲಿ ವ್ಯಕ್ತಪಡಿಸಿರುವಂಥ ರೀತಿಯಲ್ಲಿ ವರ್ಗಾವಣೆ ಮಾಡುವಂಥವುಗಳು ಆಗಿರತಕ್ಕದ್ದು ಮತ್ತು ಅಂಥ ಯಾವುದೇ ಡಿಬೆಂಚರುಗಳ ಮೂಲಕ ಭದ್ರತೆ ಒದಗಿಸಿದ ಹಣಕ್ಕೆ ಸಂಬಂಧಿಸಿದಂತೆ ದಾವೆ ಹೂಡುವ ಹಕ್ಕು, ಅಂಥ ಕೆಲವು ಡಿಬೆಂಚರುಗಳು ಹಿಂದಿನ ದಿನಾಂಕದಲ್ಲಿದ್ದವು ಎಂಬ ಕಾರಣದಿಂದಾಗಿ ಇತರರಿಗೆ ಯಾವುದೇ ಆದ್ಯತೆ ನೀಡದೆಯೇ ತತ್ಕಾಲದಲ್ಲಿ ಅವುಗಳನ್ನು ಧಾರಣ ಮಾಡಿರುವವರಲ್ಲಿ ನಿಹಿತವಾಗಿರತಕ್ಕದ್ದು.

**158. ಜಂಟಿ ಸ್ವೀಕರ್ತರ ಜೀವಂತ ವಾರಸುದಾರರಿಗೆ ಸಂದಾಯ.–** ಈ ಅಧಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ಡಿಬೆಂಚರ್ ಅಥವಾ ಭದ್ರತೆಯನ್ನು ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳಿಗೆ ಜಂಟಿಯಾಗಿ ಸಂದಾಯ ಮಾಡಬೇಕಾಗಿರುವಲ್ಲಿ, ಮತ್ತು ಅವರಲ್ಲಿ ಒಬ್ಬನು ಅಥವಾ ಅವರಲ್ಲಿ ಯಾರೇ ಮರಣ ಹೊಂದಿದಲ್ಲಿ ಡಿಬೆಂಚರ್ ಅಥವಾ ಭದ್ರತೆಯನ್ನು ಅಂಥ ವ್ಯಕ್ತಿಗಳ ಜೀವಂತ ವಾರಸುದಾರನಿಗೆ ಅಥವಾ ಜೀವಂತ ವಾರಸುದಾರರಿಗೆ ಸಂದಾಯ ಮಾಡತಕ್ಕದ್ದು:

ಪರಂತು, ಈ ಪ್ರಕರಣದಲ್ಲಿರುವುದು ಯಾವುದೂ ಅಂಥ ಜೀವಂತ ವಾರುಸುದಾರನ ಅಥವಾ ಜೀವಂತ ವಾರಸುದಾರರ ವಿರುದ್ಧ ಮೃತ ವ್ಯಕ್ತಿಯ ಪ್ರತಿನಿಧಿಯು ಮಾಡುವ ಯಾವುದೇ ಕ್ಲೇಮಿಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

**159. ಬಡ್ಡಿಗೆ ಅಥವಾ ಲಾಭಾಂಶಕ್ಕೆ ಜಂಟಿಧಾರಕನಿಂದ ಸ್ವೀಕೃತಿ.–** ಈ ಅಧಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ಡಿಬೆಂಚರ್ ಅಥವಾ ಭದ್ರತೆಗೆ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳು ಜಂಟಿಧಾರಕರಾಗಿದ್ದಾಗ, ಅಂಥ ವ್ಯಕ್ತಿಗಳಲ್ಲಿ ಇತರ ಯಾರೇ ವ್ಯಕ್ತಿಯು ನಗರಪಾಲಿಕೆಗೆ ತದ್ವಿರುದ್ಧವಾಗಿ ನೋಟೀಸನ್ನು ಕೊಟ್ಟಿದ್ದ ಹೊರತು, ಅಂಥ ವ್ಯಕ್ತಿಗಳಲ್ಲಿ ಯಾರೇ ಒಬ್ಬ ವ್ಯಕ್ತಿಯು ಅಂಥ ಡಿಬೆಂಚರ್ ಅಥವಾ ಭದ್ರತೆಯ ಸಂಬಂಧದಲ್ಲಿ ಸಂದಾಯ ಮಾಡಬಹುದಾದ ಯಾವುದೇ ಬಡ್ಡಿಗೆ ಅಥವಾ ಲಾಭಾಂಶಕ್ಕೆ ಕ್ರಮಬದ್ಧವಾದ ಸ್ವೀಕೃತಿಯನ್ನು ಕೊಡಬಹುದು.

**160. ಋಣತೀರಿಕೆ ನಿಧಿಗಳ ನಿರ್ವಹಣೆ ಮತ್ತು ಹೂಡಿಕೆ.–** (1) ಹೊರಡಿಸಿದ ಡಿಬೆಂಚರುಗಳ ಮೇಲೆ ಸಾಲವಾಗಿ ಪಡೆದ ಹಣದ ಮರು ಸಂದಾಯಕ್ಕಾಗಿ ಋಣ ತೀರಿಕೆ ನಿಧಿಗಳನ್ನು ನಗರಪಾಲಿಕೆಯು ನಿರ್ವಹಿಸತಕ್ಕದ್ದು ಮತ್ತು ಹೊರಡಿಸಿದ ಡಿಬೆಂಚರುಗಳ ಮೇಲೆ ಸಾಲವಾಗಿ ಪಡೆದ ಎಲ್ಲಾ ಹಣವನ್ನು ಸಾಲಕ್ಕಾಗಿ ನಿಗದಿಪಡಿಸಿದ ಅವಧಿಯೊಳಗೆ ಮರುಸಂದಾಯ ಮಾಡುವುದಕ್ಕೆ ಸಾಕಷ್ಟಾಗುವಂಥ ಮೊತ್ತವನ್ನು ಅಂಥ ಋಣತೀರಿಕೆ ನಿಧಿಗಳಿಗೆ ತ್ರೈಮಾಸಿಕ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು.

(2) ಋಣತೀರಿಕೆ ನಿಧಿಗಳಿಗೆ ಸಂದಾಯ ಮಾಡಿದ ಎಲ್ಲಾ ಹಣವನ್ನು ಸಾಧ್ಯವಾದಷ್ಟು ಬೇಗನೆ ಆಯುಕ್ತರು,–

(ಎ) ಸರ್ಕಾರದ ಅಥವಾ ಭಾರತ ಸರ್ಕಾರದ ಭದ್ರತಾ ಪತ್ರಗಳಲ್ಲಿ, ಅಥವಾ

(ಬಿ) ಸರ್ಕಾರವು ಖಾತರಿ ನೀಡಿದ ಭದ್ರತಾ ಪತ್ರಗಳಲ್ಲಿ

– ಹೂಡತಕ್ಕದ್ದು ಮತ್ತು ಆಯುಕ್ತರ ಮತ್ತು ಸರ್ಕಾರದ ಹಣಕಾಸು ಇಲಾಖೆಯ ಕಾರ್ಯದರ್ಶಿಯವರ ಮತ್ತು ರಾಜ್ಯ ಲೆಕ್ಕಪತ್ರ ಇಲಾಖೆಯ ನಿಯಂತ್ರಕರ ಜಂಟಿ ಹೆಸರುಗಳಲ್ಲಿ ಹೂಡತಕ್ಕದ್ದು. ನಗರಪಾಲಿಕೆಯು ಹೊರಡಿಸಿದ ಡಿಬೆಂಚರುಗಳಿಗೆ ವಾಯಿದೆ ದಿನಾಂಕದಂದು ಸಂದಾಯ ಮಾಡುವ ಉದ್ದೇಶಕ್ಕಾಗಿ

ಅವರು ನ್ಯಾಸಧಾರಿಗಳ ಹಾಗೆ ಅವುಗಳನ್ನು ಧಾರಣ ಮಾಡತಕ್ಕದ್ದು. ಅಂಥ ಪ್ರತಿಯೊಂದು ಹೂಡಿಕೆಯನ್ನು ಆಯುಕ್ತರು ಹದಿನೈದು ದಿನಗಳೊಳಗಾಗಿ ನಗರಪಾಲಿಕೆಗೆ ವರದಿ ಮಾಡತಕ್ಕದ್ದು.

(3) ಅಂಥ ಯಾವುದೇ ಹೂಡಿಕೆಗೆ ಸಂಬಂಧಿಸಿದಂತೆ ಸ್ವೀಕರಿಸಿದ ಎಲ್ಲಾ ಲಾಭಾಂಶಗಳನ್ನು ಮತ್ತು ಇತರ ಮೊತ್ತಗಳನ್ನು ಸ್ವೀಕರಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ ಋಣತೀರಿಕೆ ನಿಧಿಗೆ ಸಂದಾಯ ಮಾಡತಕ್ಕದ್ದು ಮತ್ತು (2) ನೇ ಉಪ–ಪ್ರಕರಣದಲ್ಲಿ ತಿಳಿಸಿದ ರೀತಿಯಲ್ಲಿ ಹೂಡತಕ್ಕದ್ದು.

(4) ಋಣತೀರಿಕೆ ನಿಧಿಯ ಯಾವುದೇ ಭಾಗವನ್ನು ನಗರಪಾಲಿಕೆಯ ಡಿಬೆಂಚರುಗಳಲ್ಲಿ ಹೂಡಿದಾಗ ಅಥವಾ ಮರು ಸಂದಾಯಕ್ಕೆ ನಿಗದಿಪಡಿಸಿದ ಅವಧಿಗೆ ಮೊದಲೇ ಸಾಲದ ಯಾವುದೇ ಭಾಗವನ್ನು ಸಂದಾಯ ಮಾಡಲು ವಿನಿಯೋಗಿಸಿದಾಗ, ಅಂಥ ಡಿಬೆಂಚರುಗಳ ಅಥವಾ ಸಾಲದ ಅಂಥ ಭಾಗದ ಮೇಲೆ ಅನ್ಯಥಾ ಸಂದಾಯವಾಗಬಹುದಾದಂಥ ಬಡ್ಡಿಯನ್ನು ಋಣತೀರಿಕೆ ನಿಧಿಗೆ ಸಂದಾಯ ಮಾಡತಕ್ಕದ್ದು ಮತ್ತು (2)ನೇ ಉಪ–ಪ್ರಕರಣದಲ್ಲಿ ವಿಧಿಸಿದ ರೀತಿಯಲ್ಲಿ ಹೂಡತಕ್ಕದ್ದು.

(5) ಈ ಪ್ರಕರಣದ ಮೇರೆಗೆ ಮಾಡಿದ ಯಾವುದೇ ಹೂಡಿಕೆಯನ್ನು, (2)ನೇ ಉಪ–ಪ್ರಕರಣದ ಉಪಬಂಧಗಳಿಗೊಳಪಟ್ಟು ವ್ಯತ್ಯಸ್ತಗೊಳಿಸಬಹುದು ಅಥವಾ ಬೇರೆ ಕಡೆಗೆ ಬದಲಾಯಿಸಬಹುದು.

**161. ಋಣತೀರಿಕೆ ನಿಧಿಯ ವಿನಿಯೋಗ.–** ಮೇಲೆ ಹೇಳಿದ ನ್ಯಾಸಧಾರಿಗಳು, ಋಣತೀರಿಕೆ ನಿಧಿಯನ್ನು ಅಥವಾ ಅದರ ಯಾವುದೇ ಭಾಗವನ್ನು, ಅಂಥ ನಿಧಿಯನ್ನು ಯಾವ ಸಾಲಕ್ಕಾಗಿ ಅಥವಾ ಸಾಲದ ಭಾಗಕ್ಕಾಗಿ ಸೃಜಿಸಲಾಗಿತ್ತೋ ಅಂಥ ಸಾಲವನ್ನು ಅಥವಾ ಅದರ ಭಾಗವನ್ನು ತೀರಿಸುವುದಕ್ಕಾಗಿ ವಿನಿಯೋಗಿಸಬಹುದು ಮತ್ತು ಅಂಥ ಸಾಲವನ್ನು ಅಥವಾ ಸಾಲದ ಭಾಗವನ್ನು ಸಂಪೂರ್ಣವಾಗಿ ತೀರಿಸುವವರೆಗೆ, ಅದನ್ನು ಯಾವುದೇ ಇತರ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದಲ್ಲ:

ಪರಂತು, 163ನೇ ಪ್ರಕರಣದ ಮೇರೆಗೆ, ಆ ಯಾವುದೇ ಸಾಲವನ್ನು ಅಥವಾ ಅದರ ಭಾಗಗಳನ್ನು ಸಂಚಿತಗೊಳಿಸಿದಾಗ ಸಂಚಿತ ಸಾಲದಲ್ಲಿ ಸೇರಿಸಿದ ಮೂಲ ಸಾಲಗಳ ಮೊಬಲಗಿಗೆ ಪ್ರಮಾಣಾನುಸಾರವಾಗಬಹುದಾದ ಮೂಲ ಸಾಲಗಳ ಋಣತೀರಿಕೆ ನಿಧಿಗಳ ಅಂಥ ಭಾಗವನ್ನು ನ್ಯಾಸಧಾರಿಗಳು ಹಾಗೆ ಸೃಜಿಸಿದ ಸಂಚಿತ ಸಾಲದ ಋಣತೀರಿಕೆ ನಿಧಿಗೆ ವರ್ಗಾಯಿಸತಕ್ಕದ್ದು.

**162. ನ್ಯಾಸಧಾರಿಗಳಿಂದ ವಾರ್ಷಿಕ ವಿವರಣಾಪತ್ರ.–** (1) ಮೇಲೆ ಹೇಳಿದ ನ್ಯಾಸಧಾರಿಗಳು, ಪ್ರತಿ ವರ್ಷದ ಕೊನೆಯಲ್ಲಿ,–

(ಎ) 160ನೇ ಪ್ರಕರಣದ ಮೇರೆಗೆ ವರ್ಷದಲ್ಲಿ ಹೂಡಿದ ಮೊಬಲಗನ್ನು;

(ಬಿ) ವಿವರಣಾ ಪತ್ರವನ್ನು ಸಲ್ಲಿಸುವುದಕ್ಕೆ ಮುಂಚೆ ಮಾಡಿದ ಕೊನೆಯ ಹೂಡಿಕೆಯ ದಿನಾಂಕವನ್ನು;

(ಸಿ) ಆಗ ಅವರಲ್ಲಿದ್ದ ಭದ್ರತಾ ಪತ್ರಗಳ ಒಟ್ಟು ಮೊಬಲಗನ್ನು; ಮತ್ತು

(ಡಿ) ವಿವರಣಾ ಪತ್ರದ ದಿನಾಂಕದವರೆಗೆ 161ನೇ ಪ್ರಕರಣದ ಮೇರೆಗೆ ಸಾಲಗಳ ತೀರಿಕೆಗಾಗಿ ವಿನಿಯೋಗಿಸಿದ ಒಟ್ಟು ಮೊಬಲಗನ್ನು

– ತೋರಿಸುವ ವಿವರಣಾಪತ್ರವನ್ನು ನಗರಪಾಲಿಕೆಗೆ ಸಲ್ಲಿಸತಕ್ಕದ್ದು.

(2) ಪ್ರತಿಯೊಂದು ಅಂಥ ವಿವರಣಾ ಪತ್ರವನ್ನು ನಗರಪಾಲಿಕೆಯ ಮುಂದೆ ಇಡತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.

**163. ಸಾಲಗಳನ್ನು ಸಂಚಿತಗೊಳಿಸಲು ನಗರಪಾಲಿಕೆಯ ಅಧಿಕಾರ.–** (1) ಈ ಅಧ್ಯಾಯದಲ್ಲಿ ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ ನಗರಪಾಲಿಕೆಯು ಅದರ ಎಲ್ಲಾ ಅಥವಾ ಯಾವುದೇ ಸಾಲಗಳನ್ನು ಸಂಚಿತಗೊಳಿಸಬಹುದು ಮತ್ತು ಆ ಉದ್ದೇಶಕ್ಕಾಗಿ ("ನಗರಪಾಲಿಕೆಯ ಸಂಚಿತ ಸಾಲ, 20––––" ಎಂದು ಕರೆಯಲಾಗುವ) ಹೊಸ ಸಾಲಕ್ಕಾಗಿ ಟೆಂಡರ್‌ಗಳನ್ನು ಆಹ್ವಾನಿಸಬಹುದು ಮತ್ತು ನಗರಪಾಲಿಕೆಯ ಡಿಬೆಂಚರ್ ಧಾರಕರನ್ನು ಅಂಥ ಸಾಲದ ಹಂಗಾಮಿ ಪಾವತಿ ಪತ್ರಕ್ಕೆ ಅವರ ಡಿಬೆಂಚರ್‌ಗಳನ್ನು ವಿನಿಮಯ ಮಾಡಿಕೊಳ್ಳಲು ಆಹ್ವಾನಿಸಬಹುದು.

(2) ಯಾವುದೇ ಅಂಥ ಸಂಚಿತ ಸಾಲದ ನಿಬಂಧನೆಗಳು ಮತ್ತು ಅದರ ಹಂಗಾಮಿ ಪಾವತಿ ಪತ್ರದ ನಮೂನೆ ಮತ್ತು ಯಾವ ದರಗಳಲ್ಲಿ ಅಂಥ ಸಂಚಿತ ಸಾಲಕ್ಕೆ ವಿನಿಮಯ ಮಾಡಿಕೊಳ್ಳಬಹುದೋ ಆ ದರಗಳಿಗೆ ಅನುಮತಿ ನೀಡುವುದು ಸರ್ಕಾರದ ಪೂರ್ವಾನುಮೋದನೆಗೆ ಒಳಪಟ್ಟಿರತಕ್ಕದ್ದು.

(3) ಯಾವುದೇ ಅಂಥ ಸಂಚಿತ ಸಾಲ ತೀರಿಕೆಯ ಕಾಲಾವಧಿಯನ್ನು ಸಂಚಿತಗೊಳಿಸಬೇಕಾದ ಯಾವುದೇ ಸಾಲಗಳನ್ನು ಯಾವ ದಿನಾಂಕದೊಳಗೆ ಅನ್ಯಥಾ ಮರುಸಂದಾಯ ಮಾಡಬಹುದಾಗಿತ್ತೋ ಆ ತೀರಾ ಕೊನೆಯ ದಿನಾಂಕವನ್ನು ಮೀರಿ ಸರ್ಕಾರದ ಮಂಜುರಾತಿಯಿಲ್ಲದೆ ವಿಸ್ತರಿಸತಕ್ಕದ್ದಲ್ಲ.

(4) ನಗರಪಾಲಿಕೆಯು, 161ನೇ ಪ್ರಕರಣದ ಮೇರೆಗೆ ಅಂಥ ಋಣತೀರಿಕೆ ನಿಧಿಗೆ ವರ್ಗಾವಣೆ ಮಾಡಿದ ಮೊಬಲಗನ್ನು ಗಮನದಲ್ಲಿಟ್ಟುಕೊಂಡು 160ನೇ ಪ್ರಕರಣದಲ್ಲಿ ಹೇಳಲಾದ ರೀತಿಯಲ್ಲಿ ಋಣತೀರಿಕೆ ನಿಧಿಯಿಂದ ಯಾವುದೇ ಅಂಥ ಸಂಚಿತ ಸಾಲದ ಮರುಸಂದಾಯಕ್ಕೆ ಏರ್ಪಾಡು ಮಾಡತಕ್ಕದ್ದು.

**164. ಬಡ್ಡಿಯ ಸಂದಾಯಕ್ಕೆ ಮತ್ತು ಸಾಲಗಳ ಮರುಸಂದಾಯಕ್ಕೆ, ಇತರ ಸಂದಾಯಕ್ಕಿಂತ ಹೆಚ್ಚು ಆದ್ಯತೆ ನೀಡುವುದು.–** ಸಾಲಗಳ ಮೇಲೆ ಬಡ್ಡಿ ಸಂದಾಯ ಮತ್ತು ಸಾಲಗಳ ಮರುಸಂದಾಯಕ್ಕಾಗಿ ನಗರಪಾಲಿಕೆಯು ಮಾಡಬೇಕಾದ ಎಲ್ಲ ಸಂದಾಯಗಳಿಗೆ ನಗರಪಾಲಿಕೆಯು ಮಾಡಬೇಕಾದ ಎಲ್ಲಾ ಇತರ ಸಂದಾಯಗಳಿಗಿಂತ ಹೆಚ್ಚಿನ ಆದ್ಯತೆ ನೀಡತಕ್ಕದ್ದು.

**165. ಸರ್ಕಾರದಿಂದ ಸಾಲವಾಗಿ ಪಡೆದ ಹಣದ ವಸೂಲಿಗಾಗಿ ನಗರಪಾಲಿಕೆಯ ನಿಧಿಯ ಜಫ್ತಿ.–** (1) ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಅಥವಾ ನಂತರ ನಗರಪಾಲಿಕೆಯು ಸರ್ಕಾರದಿಂದ ಸಾಲವಾಗಿ ಪಡೆದ ಯಾವುದೇ ಹಣವನ್ನು ಅಥವಾ ಅದಕ್ಕೆ ಸಂಬಂಧಿಸಿದಂತೆ ಬಾಕಿಯಿರುವ ಯಾವುದೇ ಬಡ್ಡಿಯನ್ನು ಅಥವಾ ವೆಚ್ಚಗಳನ್ನು ಸಾಲ ಷರತ್ತುಗಳಿಗೆ ಅನುಸಾರವಾಗಿ ಮರುಸಂದಾಯ ಮಾಡದಿದ್ದರೆ ಸರ್ಕಾರವು, ನಗರಪಾಲಿಕೆಯ ನಿಧಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಜಫ್ತಿ ಮಾಡಬಹುದು.

(2) ಅಂಥ ಜಫ್ತಿಯ ನಂತರ, ಜಫ್ತಿ ಮಾಡಿದ ನಿಧಿಯ ಬಗ್ಗೆ ಸರ್ಕಾರದಿಂದ ಈ ಬಗ್ಗೆ ನೇಮಕಗೊಂಡ ಅಧಿಕಾರಿಯ ಹೊರತು ಯಾರೇ ವ್ಯಕ್ತಿಯು, ಯಾವುದೇ ರೀತಿಯಲ್ಲಿ ವ್ಯವಹರಿಸತಕ್ಕದ್ದಲ್ಲ, ಆದರೆ ಅಂಥ ಜಫ್ತಿಯನ್ನು ಮಾಡದೆ ಇದ್ದಿದ್ದರೆ ಅದಕ್ಕೆ ಸಂಬಂಧಿಸಿದಂತೆ ಯಾವುದೇ ಪೌರ ಪ್ರಾಧಿಕಾರ, ಅಧಿಕಾರಿ ಅಥವಾ ನೌಕರನು ಮಾಡಬಹುದಾಗಿದ್ದ ಎಲ್ಲಾ ಕಾರ್ಯಗಳನ್ನು ಆ ಅಧಿಕಾರಿಯು ಮಾಡಬಹುದು ಮತ್ತು ಬಾಕಿಗಳನ್ನು ಮತ್ತು ಅದಕ್ಕೆ ಸಂಬಂಧಿಸಿದಂತೆ ಬಾಕಿಯಿರುವ ಎಲ್ಲಾ ಬಡ್ಡಿಯನ್ನು ಮತ್ತು ವೆಚ್ಚಗಳನ್ನು ಮತ್ತು ಜಫ್ತಿಯಿಂದಾಗಿ ಹಾಗೂ ತರುವಾಯದ ವ್ಯವಹರಣೆಗಳಿಂದಾಗಿ ಉಂಟಾದ ಎಲ್ಲಾ ವೆಚ್ಚಗಳನ್ನು ತೀರಿಸಲು ನಿಧಿಯ ಉತ್ಪತ್ತಿಗಳನ್ನು ವಿನಿಯೋಗಿಸಬಹುದು:

ಪರಂತು, ಯಾವುದೇ ಅಂಥ ಜಪ್ತಿಯು, ಯಾವ ಋಣಕ್ಕಾಗಿ ಜಪ್ತಿ ಮಾಡಿದ ನಿಧಿಗೆ ಈ ಹಿಂದೆ ಕಾನೂನಿಗನುಸಾರವಾಗಿ ಋಣಭಾರ ಹೊರಿಸಲಾಗಿತ್ತೋ, ಆ ಯಾವುದೇ ಋಣವನ್ನು ರದ್ದುಗೊಳಿಸತಕ್ಕದ್ದಲ್ಲ ಅಥವಾ ಅದಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ ಆದರೆ ಅಂಥ ಎಲ್ಲ ಹಿಂದಿನ ಋಣಭಾರಗಳನ್ನು ಸರ್ಕಾರಕ್ಕೆ ಬಾಕಿಯಿರುವ ಋಣಗಳನ್ನು ತೀರಿಸುವುದಕ್ಕೆ ಉತ್ಪತ್ತಿಗಳ ಯಾವುದೇ ಭಾಗವನ್ನು ವಿನಿಯೋಗಿಸುವುದಕ್ಕೆ ಮುಂಚೆ ನಿಧಿಯ ಉತ್ಪತ್ತಿಗಳಿಂದ ಸಂದಾಯ ಮಾಡತಕ್ಕದ್ದು.

**166. ಆಯುಕ್ತರು ಪ್ರತಿ ವರ್ಷ ತಯಾರಿಸಬೇಕಾದ ವೆಚ್ಚ ಮತ್ತು ಆದಾಯದ ಅಂದಾಜುಗಳು.**–ಆಯುಕ್ತರು ಪ್ರತಿ ವರ್ಷದ ಜನವರಿ ಹದಿನೈದರಂದು ಅಥವಾ ಅದಕ್ಕೂ ಮೊದಲು ಮುಂಬರುವ ವರ್ಷದ ಆದಾಯ ಮತ್ತು ವೆಚ್ಚದ ವಿವರವಾದ ಅಂದಾಜನ್ನು ಒಳಗೊಂಡ ಬಜೆಟನ್ನು ತಯಾರಿಸತಕ್ಕದ್ದು ಮತ್ತು ಸ್ಥಾಯೀ ಸಮಿತಿಗೆ ಒಪ್ಪಿಸತಕ್ಕದ್ದು ಮತ್ತು ತೆರಿಗೆ ನಿರ್ಧಾರಣೆಯನ್ನು ವ್ಯತ್ಯಸ್ತಗೊಳಿಸುವುದು ಅಥವಾ ಸಾಲಗಳನ್ನು ಎತ್ತುವುದು ಅವಶ್ಯಕ ಅಥವಾ ವಿಹಿತವೆಂದು ಅವರು ಅಭಿಪ್ರಾಯಪಟ್ಟರೆ ಅದಕ್ಕೆ ಸಂಬಂಧಿಸಿದಂತೆ ತಮ್ಮ ಪ್ರಸ್ತಾವನೆಗಳನ್ನು ಒಪ್ಪಿಸತಕ್ಕದ್ದು.

**167. [1][ತೆರಿಗೆ, ಹಣಕಾಸು ಮತ್ತು ಅಪೀಲುಗಳ][1] ಸ್ಥಾಯೀ ಸಮಿತಿಯು [2][ಅಥವಾ ಸಂದರ್ಭಾನುಸಾರ ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯು][2] ಬಜೆಟ್ ಅಂದಾಜುಗಳನ್ನು ತಯಾರಿಸುವುದು.**–(1) [2][[3][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ][3]ಯನ್ನು ಹೊರತುಪಡಿಸಿ, ನಗರಪಾಲಿಕೆಗಳ ಸಂದರ್ಭದಲ್ಲಿ, [1][ತೆರಿಗೆ, ಹಣಕಾಸು ಮತ್ತು ಅಪೀಲುಗಳ][1] ಸ್ಥಾಯೀ ಸಮಿತಿಯು ಮತ್ತು [3][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ][3]ಯ ಸಂದರ್ಭದಲ್ಲಿ, ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯು][2] ಜನವರಿ ಹದಿನೈದನೇ ದಿನಾಂಕದಂದು ಅಥವಾ ಅದರ ನಂತರ, ಅದಷ್ಟು ಬೇಗನೆ ಆಯುಕ್ತರ ಅಂದಾಜುಗಳನ್ನು ಮತ್ತು ಪ್ರಸ್ತಾವನೆಗಳನ್ನು ಪರ್ಯಾಲೋಚಿಸತಕ್ಕದ್ದು ಮತ್ತು ಇತರ ಸ್ಥಾಯೀ ಸಮಿತಿಗಳ ಪ್ರಸ್ತಾವನೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಪಡೆದುಕೊಂಡ ತರುವಾಯ, ಮತ್ತು ತಾನು ಸೂಕ್ತವೆಂದು ಭಾವಿಸುವಂಥ ಅಗತ್ಯವಿರುವ ವಿವರವಾದ ಮಾಹಿತಿ ಯಾವುದಾದರೂ ಇದ್ದರೆ ಅದನ್ನು ಆಯುಕ್ತರಿಂದ ಪಡೆದ ತರುವಾಯ ಮತ್ತು ಈ ಅಧಿನಿಯಮದ ಎಲ್ಲಾ ಅಗತ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಈ ಎಲ್ಲವುಗಳ ಆಧಾರದ ಮೇಲೆ, ತಾನು ಸೂಕ್ತವೆಂದು ಭಾವಿಸತಕ್ಕಂಥ ಅದರಲ್ಲಿ ಅಥವಾ ಅದಕ್ಕೆ ಮಾಡುವ ಮಾರ್ಪಾಡುಗಳು ಮತ್ತು ಸೇರ್ಪಡೆಗಳಿಗೆ ಒಳಪಟ್ಟು ಮುಂಬರುವ ವರ್ಷಕ್ಕಾಗಿ ನಗರಪಾಲಿಕೆಯ ಆದಾಯ ಮತ್ತು ವೆಚ್ಚದ ಬಜೆಟ್ ಅಂದಾಜನ್ನು ತಯಾರಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆಬಂದಿರುವ ಅಧಿಸೂಚನೆಯು ಲಭ್ಯವಾಗಿಲ್ಲ.
2. 1998 ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 2009 ರ ಅಧಿನಿಯಮ ಸಂಖ್ಯೆ 22 ರ ಮೂಲಕ 4.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(2) ಅಂಥ ಬಜೆಟ್ ಅಂದಾಜಿನಲ್ಲಿ ಸ್ಥಾಯೀ ಸಮಿತಿಯು,–

(ಎ) ಸಾಲಗಳ ಕಾರಣದಿಂದಾಗಿ ಅಸಲಿನ ಯಾವ ಕಂತುಗಳಿಗೆ ಮತ್ತು ಬಡ್ಡಿಗೆ ನಗರಪಾಲಿಕೆಯು ಹೊಣೆಯಾಗಬಹುದಾಗಿದೆಯೋ ಆ ಅಸಲಿನ ಎಲ್ಲ ಕಂತುಗಳನ್ನು ಮತ್ತು ಬಡ್ಡಿಯನ್ನು ಸಂದಾಯ ಮಾಡಬೇಕಾದಾಗ ಅವುಗಳನ್ನು ಸಂದಾಯ ಮಾಡುವುದಕ್ಕೆ ಏರ್ಪಾಡು ಮಾಡತಕ್ಕದ್ದು;

(ಬಿ) ವಂತಿಗೆಗಳ, ಫೀಜುಗಳ ಬಾಬ್ತು, ಯಾವುದೇ ಮೊಬಲಗನ್ನು ಸಂದಾಯ ಮಾಡಬೇಕಾದಾಗ ಅದರ ಸಂದಾಯಕ್ಕೆ ಅಥವಾ ನಗರಪಾಲಿಕೆಯು ಸರ್ಕಾರಕ್ಕೆ ಸಂದಾಯ ಮಾಡಬಹುದಾದಂಥ ಇತರ ಮೊಬಲಗುಗಳ ಸಂದಾಯಕ್ಕೆ ಏರ್ಪಾಡು ಮಾಡತಕ್ಕದ್ದು.

(ಸಿ) ಜನರಲ್ ಅಕೌಂಟ್–ರೆವಿನ್ಯೂದಲ್ಲಿ ವರ್ಷದ ಕೊನೆಯಲ್ಲಿ ಒಂದು ಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲದಷ್ಟು ನಗದು ಶಿಲ್ಕನ್ನು ಉಳಿಸಿಕೊಳ್ಳಲು ಅವಕಾಶ ನೀಡತಕ್ಕದ್ದು.

(3) ಆಯುಕ್ತರು, ಸ್ಥಾಯೀ ಸಮಿತಿಯಿಂದ ಅಂತಿಮವಾಗಿ ಅನುಮೋದನೆಯಾದಂಥ ಬಜೆಟ್ ಅಂದಾಜನ್ನು ಮುದ್ರಣ ಮಾಡಿಸತಕ್ಕದ್ದು ಮತ್ತು ಫೆಬ್ರವರಿ ಮೊದಲನೆಯ ದಿನಕ್ಕೆ ಮೀರದಂತೆ ಅದರ ಮುದ್ರಿತ ಪ್ರತಿಯನ್ನು ಪ್ರತಿಯೊಬ್ಬ ಕೌನ್ಸಿಲರನಿಗೂ ಕಳುಹಿಸಿಕೊಡತಕ್ಕದ್ದು.

**168. ನಗರಪಾಲಿಕೆಯಿಂದ ಬಜೆಟ್ ಅಂದಾಜಿನ ಪರ್ಯಾಲೋಚನೆ.**– ಸ್ಥಾಯೀ ಸಮಿತಿಯು ತಯಾರಿಸಿದ ಬಜೆಟ್ ಅಂದಾಜನ್ನು ಫೆಬ್ರವರಿಯ ಮೊದಲನೇ ವಾರದ ಯಾವುದೇ ಒಂದು ದಿನದಂದು ಕರೆಯಲಾಗುವ ನಗರಪಾಲಿಕೆಯ ಸಭೆಯ ಮುಂದೆ ಇಡತಕ್ಕದ್ದು.

**169. ನಗರಪಾಲಿಕೆಯ ಪ್ರಕ್ರಿಯೆ.**– ನಗರಪಾಲಿಕೆಯು ಬಜೆಟ್ ಅಂದಾಜನ್ನು ಇನ್ನಷ್ಟು ಪರ್ಯಾಲೋಚಿಸಿ ನಿರ್ದಿಷ್ಟಪಡಿಸಿದ ಕಾಲದೊಳಗೆ ಪುನಃ ಒಪ್ಪಿಸಲು ಸ್ಥಾಯೀ ಸಮಿತಿಗೆ ಹಿಂದಿರುಗಿಸಬಹುದು ಅಥವಾ ತನಗೆ ಒಪ್ಪಿಸಿದ ಬಜೆಟ್ ಅಂದಾಜನ್ನು ಅಥವಾ ಯಾವುದೇ ಪರಿಷ್ಕೃತ ಬಜೆಟ್ ಅಂದಾಜನ್ನು ಅದು ಇರುವಂತೆಯೇ ಅಥವಾ ತಾನು ವಿಹಿತವೆಂದು ಭಾವಿಸುವಂಥ ಮಾರ್ಪಾಡುಗಳಿಗೆ ಒಳಪಟ್ಟು ಅಂಗೀಕರಿಸಬಹುದು:

ಪರಂತು, ನಗರಪಾಲಿಕೆಯು ಅಂತಿಮವಾಗಿ ಅಂಗೀಕರಿಸಿದ ಬಜೆಟ್‌ನಲ್ಲಿ 167ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಮತ್ತು (ಬಿ) ಖಂಡಗಳಲ್ಲಿ ಉಲ್ಲೇಖಿಸಲಾದ ವಿಷಯಗಳಲ್ಲಿ ಪ್ರತಿಯೊಂದು ವಿಷಯಕ್ಕೂ ಸಾಕಷ್ಟು ಮತ್ತು ಸೂಕ್ತ ಏರ್ಪಾಡನ್ನು ಮಾಡತಕ್ಕದ್ದು.

**170. ವರ್ಷದ ಪ್ರಾರಂಭಕ್ಕೆ ಮುಂಚೆ ಬಜೆಟನ್ನು ಅಂಗೀಕರಿಸಲು ಹೊಣೆಗಾರಿಕೆ.**– (1) ನಗರಪಾಲಿಕೆಯು ಬಜೆಟ್ ಅಂದಾಜು ಯಾವ ವರ್ಷಕ್ಕೆ ಸಂಬಂಧಿಸಿದೆಯೋ ಆ ವರ್ಷದ ಪ್ರಾರಂಭಕ್ಕೆ ಕನಿಷ್ಠ ಮೂರು ವಾರಗಳಿಗೆ ಮುಂಚೆ ಅದನ್ನು ಅಂತಿಮವಾಗಿ ಅಂಗೀಕರಿಸತಕ್ಕದ್ದು ಮತ್ತು ತತ್‌ಕ್ಷಣವೇ ಅದರ ಒಂದು ಪ್ರತಿಯನ್ನು ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(2) ಸರ್ಕಾರವು ಬಜೆಟನ್ನು ಸಮಗ್ರವಾಗಿ ಅಥವಾ ತಾನು ಸೂಕ್ತವೆಂದು ಭಾವಿಸಬಹುದಾಂಥ ಮಾರ್ಪಾಟುಗಳಿಗೆ ಒಳಪಟ್ಟು ಮಂಜೂರು ಮಾಡಬಹುದು:

ಆದಾಗ್ಯೂ ಬಜೆಟನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳೊಳಗೆ ಸರ್ಕಾರವು ಅದರ ಬಗ್ಗೆ ಯಾವುದೇ ಆದೇಶಗಳನ್ನು ತಿಳಿಸದಿದ್ದರೆ, ಆ ಬಜೆಟ್ ಸರ್ಕಾರದಿಂದ ಮಂಜೂರಾಗಿದೆಯೆಂದು ಭಾವಿಸತಕ್ಕದ್ದು.

**171. ನಗರಪಾಲಿಕೆಯು ಪೂರಕ ಬಜೆಟನ್ನು ಅಂಗೀಕರಿಸಬಹುದು.**– ನಗರಪಾಲಿಕೆಯು, [1][[2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು][2] ಹೊರತುಪಡಿಸಿ, ನಗರಪಾಲಿಕೆಗಳ ಸಂದರ್ಭದಲ್ಲಿ [3][ತೆರಿಗೆ, ಹಣಕಾಸು ಮತ್ತು ಅಪೀಲುಗಳ][3] ಸ್ಥಾಯೀ ಸಮಿತಿಯು ಮತ್ತು [2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ][2] ಸಂದರ್ಭದಲ್ಲಿ ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯ][1] ಶಿಫಾರಸಿನ ಮೇಲೆ ಆ ವರ್ಷದಲ್ಲಿ ಉದ್ಭವಿಸುವ ಯಾವುದೇ

ವಿಶೇಷ ಅಥವಾ ಮುಂಗಾಣದ ಅಗತ್ಯತೆಗಳನ್ನು ಈಡೇರಿಸುವ ಉದ್ದೇಶಕ್ಕಾಗಿ ಪೂರಕ ಬಜೆಟ್ ಅಂದಾಜನ್ನು ಅಂಗೀಕರಿಸಬಹುದು. ಆದಾಗ್ಯೂ, ವರ್ಷದ ಕೊನೆಯಲ್ಲಿ ಜನರಲ್ ಅಕೌಂಟ್–ರೆವಿನ್ಯೂದಲ್ಲಿ ಅಂದಾಜು ನಗದು ಶಿಲ್ಕನ್ನು ಒಂದು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಮಾಡತಕ್ಕದ್ದಲ್ಲ:

1. 1998 ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2009ರ ಅಧಿನಿಯಮ ಸಂಖ್ಯೆ 22 ರ ಮೂಲಕ 4.06.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

3. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದ ಅಧಿಸೂಚನೆಯು ಲಭ್ಯವಾಗಿಲ್ಲ.

ಪರಂತು, ಬಜೆಟನ್ನು ಮಂಜೂರು ಮಾಡುವ ಸಮಯದಲ್ಲಿ ಸರ್ಕಾರವು ಅಂಗೀಕರಿಸದಿದ್ದಂಥ ಯಾವುದೇ ಬಾಬನ್ನು ಪೂರಕ ಬಜೆಟ್ಟಿನಲ್ಲಿ ಸೇರಿಸತಕ್ಕದ್ದಲ್ಲ.

**172. ಬಜೆಟ್ ಅನುದಾನಗಳ ಕಡಿತ ಅಥವಾ ವರ್ಗಾವಣೆ.–** (1) [1][ತೆರಿಗೆ, ಹಣಕಾಸು ಮತ್ತು ಅಪೀಲು][1] ಸ್ಥಾಯೀ ಸಮಿತಿಯು [2][ಅಥವಾ ಸಂದರ್ಭಾನುಸಾರ ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯು][2] ವರ್ಷದಲ್ಲಿ ಯಾವುದೇ ಕಾಲದಲ್ಲಿ ಅದು ಅವಶ್ಯವೆಂದು ಭಾವಿಸಿದರೆ,–

(ಎ) ಬಜೆಟ್ ಅನುದಾನದ ಮೊಬಲಗನ್ನು ಕಡಿಮೆ ಮಾಡಬಹುದು; ಅಥವಾ

(ಬಿ) ಒಂದು ಬಜೆಟ್ ಅನುದಾನದ ಮೊಬಲಗು ಅಥವಾ ಮೊಬಲಗಿನ ಭಾಗವನ್ನು ಯಾವುದೇ ಇತರ ಬಜೆಟ್ ಅನುದಾನದ ಮೊಬಲಗಿಗೆ ವರ್ಗಾವಣೆ ಮಾಡಬಹುದು ಮತ್ತು ಸೇರಿಸಬಹುದು:

ಪರಂತು,–

**(i)** ಯಾವುದೇ ಅಂಥ ಕಡಿತ ಅಥವಾ ವರ್ಗಾವಣೆಯನ್ನು ಮಾಡುವಾಗ ಈ ಅಧಿನಿಯಮದ ಎಲ್ಲಾ ಅಗತ್ಯತೆಗಳಿಗೆ ಯುಕ್ತ ಗಮನ ನೀಡತಕ್ಕದ್ದು;

**(ii)** ನಗರಪಾಲಿಕೆಯು ಅಂಗೀಕರಿಸಿದ ಬಜೆಟ್ ಅಂದಾಜಿನಲ್ಲಿ ಒಳಗೊಂಡ ಬಜೆಟ್ ಅನುದಾನಗಳ ಒಟ್ಟು ಮೊತ್ತವನ್ನು 171ನೇ ಪ್ರಕರಣದ ಮೇರೆಗೆ ನಗರಪಾಲಿಕೆಯಿಂದಲ್ಲದೆ, ಹೆಚ್ಚಿಸತಕ್ಕದ್ದಲ್ಲ;

**(iii)** ಪ್ರತಿಯೊಂದು ಅಂಥ ಕಡಿತ ಅಥವಾ ವರ್ಗಾವಣೆಯನ್ನು ನಗರಪಾಲಿಕೆಯ ಮುಂದಿನ ಸಭೆಯಲ್ಲಿ ಅದರ ಗಮನಕ್ಕೆ ತರತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದಿರುವ ಅಧಿಸೂಚನೆ ಲಭ್ಯವಾಗಿಲ್ಲ.

2. 1998 ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಯಾವುದೇ ಅಂಥ ಕಡಿತ ಅಥವಾ ವರ್ಗಾವಣೆಯ ಮೊಬಲಗು ಐದು ನೂರು ರೂಪಾಯಿಗಳಿಗೆ ಮೀರಿದರೆ ನಗರಪಾಲಿಕೆಯು ಅದಕ್ಕೆ ಸಂಬಂಧಿಸಿದಂತೆ ಅದು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಹೊರಡಿಸಬಹುದು ಮತ್ತು ಸದರಿ ಆದೇಶವನ್ನು ಜಾರಿಗೊಳಿಸುವುದು ಸ್ಥಾಯೀ ಸಮಿತಿಯ ಮತ್ತು ಆಯುಕ್ತರ ಕರ್ತವ್ಯವಾಗಿರತಕ್ಕದ್ದು.

**173. ಅವಶ್ಯವಾದಾಗಲೆಲ್ಲಾ ಅಧಿಕೃತ ವರ್ಷದ ಅವಧಿಯಲ್ಲಿ ನಗರಪಾಲಿಕೆಯು ಆದಾಯ ಮತ್ತು ವೆಚ್ಚವನ್ನು ಮರುಹೊಂದಾಣಿಕೆ ಮಾಡುವುದು.–** (1) ಯಾವುದೇ ವರ್ಷದ ಯಾವುದೇ ಕಾಲದಲ್ಲಿ [1][ತೆರಿಗೆ, ಹಣಕಾಸು ಮತ್ತು ಅಪೀಲು][1] ಸ್ಥಾಯೀ ಸಮಿತಿಯ [2][ಅಥವಾ ಸಂದರ್ಭಾನುಸಾರ ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯ][2] ಮನವಿಯ ಮೇಲೆ 172ನೇ ಪ್ರಕರಣದ ಮೇರೆಗೆ ಬಜೆಟ್ ಅನುದಾನಗಳಲ್ಲಿ ಯಾವುದೇ ಕಡಿತಮಾಡಬಹುದಾಗಿದ್ದರೂ ಸದರಿ ವರ್ಷದ ಅವಧಿಯಲ್ಲಿ ನಗರಪಾಲಿಕೆಯ ನಿಧಿಯ ಆದಾಯವು ಸದರಿ ವರ್ಷದ ಬಜೆಟ್ ಅಂದಾಜಿನಲ್ಲಿ ಮಂಜೂರಾದ ವೆಚ್ಚವನ್ನು ಭರಿಸಲು ಮತ್ತು ಜನರಲ್ ಅಕೌಂಟ್–ರೆವಿನ್ಯೂದಲ್ಲಿ ಒಂದು ಲಕ್ಷ ರೂಪಾಯಿಗಿಂತ ಕಡಿಮೆಯಿಲ್ಲದಂತೆ ನಗದು ಶಿಲ್ಕನ್ನು ವರ್ಷದ ಕೊನೆಯಲ್ಲಿ ಬಿಡಲು ಸಾಕಷ್ಟಿಲ್ಲವೆಂದು ನಗರಪಾಲಿಕೆಗೆ ಕಂಡುಬಂದರೆ, ಈ ಅಧಿನಿಯಮದ ಎಲ್ಲಾ ಅಗತ್ಯತೆಗಳಿಗೆ ಸೂಕ್ತ ಗಮನ ನೀಡಿ ಸಾಧ್ಯವಾದಷ್ಟುಮಟ್ಟಿಗೆ ವರ್ಷದ ಮಂಜೂರಾದ ವೆಚ್ಚವನ್ನು ಕಡಿಮೆ ಮಾಡುವುದು ಅಥವಾ ಪೂರಕ ತೆರಿಗೆ ವಿಧಿಸಲು ಅಥವಾ ವರ್ಷದ ಕೊನೆಯಲ್ಲಿ ಜನರಲ್ ಅಕೌಂಟ್–ರೆವಿನ್ಯೂದಲ್ಲಿ ಅಂದಾಜು ನಗದು ಶಿಲ್ಕು ಒಂದು ಲಕ್ಷ ರೂಪಾಯಿಗಳಿಗಿಂತ ಕಡಿಮೆಯಿಲ್ಲದಂತೆ ಇರುವುದನ್ನು ಖಚಿತಪಡಿಸಿಕೊಳ್ಳಲು ಅವಶ್ಯವಾಗಬಹುದಾದಂಥ ಪ್ರಮಾಣದಲ್ಲಿ ಆ ಎರಡೂ ವಿಹಿತ ಕಾರ್ಯಗಳನ್ನು ಅಳವಡಿಸಿಕೊಳ್ಳುವುದು ನಗರಪಾಲಿಕೆಯ ಕರ್ತವ್ಯವಾಗಿರತಕ್ಕದ್ದು.

1. 1994 ರ ಅಧಿನಿಯಮ ಸಂಖ್ಯೆ 35 ರ ಮೂಲಕ ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದಿರುವ ಅಧಿಸೂಚನೆ ಲಭ್ಯವಾಗಿಲ್ಲ.

2. 1998 ರ ಅಧಿನಿಯಮ ಸಂಖ್ಯೆ 27 ರ ಮೂಲಕ 21.11.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಯಾವುದೇ ವರ್ಷದಲ್ಲಿ ಪೂರಕ ತೆರಿಗೆ ವಿಧಿಸಬೇಕೆಂದು ನಗರಪಾಲಿಕೆಯು ನಿರ್ಧರಿಸಿದಾಗಲೆಲ್ಲಾ Xನೇ ಅಧ್ಯಾಯದಲ್ಲಿ ಹೇಳಿರುವ ಷರತ್ತುಗಳು, ಮಿತಿಗಳು ಮತ್ತು ನಿರ್ಬಂಧಗಳಿಗೆ ಒಳಪಟ್ಟು ಯಾವುದೇ ತೆರಿಗೆ ಅಥವಾ ಸುಂಕವನ್ನು ಯಾವ ದರದಲ್ಲಿ ವಿಧಿಸಲಾಗುತ್ತಿದೆಯೋ ಆ ದರವನ್ನು ಆ ವರ್ಷದ ಉಳಿದ ಅವಧಿಗೆ ಹೆಚ್ಚಿಸುವ ಮೂಲಕ ಅದು ಹಾಗೆ ಮಾಡತಕ್ಕದ್ದು.

## ಅಧ್ಯಾಯ – XII

## ಸ್ವತ್ತು ಮತ್ತು ಕರಾರುಗಳು

**174. ನಗರಪಾಲಿಕೆಯ ಸ್ವತ್ತು.–** (1) ಇಲ್ಲಿ ಇನ್ನು ಮುಂದೆ ನಿರ್ದಿಷ್ಟಪಡಿಸಿದ ಸ್ವರೂಪದ ಮತ್ತು ವಿಶೇಷವಾಗಿ ಸರ್ಕಾರದಿಂದ ಕಾಯ್ದಿರಿಸಿದ್ದಲ್ಲದ ಎಲ್ಲಾ ಸ್ವತ್ತು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು ಮತ್ತು ಅದಕ್ಕೆ ಸೇರತಕ್ಕದ್ದು ಮತ್ತು ನಗರಪಾಲಿಕೆಯಲ್ಲಿ ನಿಹಿತವಾಗಬಹುದಾದ ಸರ್ಕಾರದಿಂದ ವಿಶೇಷವಾಗಿ ಕಾಯ್ದಿರಿಸಿದ್ದಲ್ಲದ ಯಾವುದೇ ಸ್ವರೂಪದ ಅಥವಾ ಬಗೆಯ ಎಲ್ಲಾ ಇತರ ಸ್ವತ್ತಿನೊಂದಿಗೆ ಅದರ ನಿರ್ದೇಶನ, ಆಡಳಿತ ಮತ್ತು ನಿಯಂತ್ರಣದಲ್ಲಿರತಕ್ಕದ್ದು ಮತ್ತು ಅದು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಈ ಅಧಿನಿಯಮದ ಉದ್ದೇಶಗಳಿಗಾಗಿ, ಎಂದರೆ:–

(ಎ) ಸಾರ್ವಜನಿಕ ಉದ್ಯಾನವನಗಳು, ಆಟದ ಮೈದಾನಗಳು ಮತ್ತು ವಾಯುಸಂಚಾರಕ್ಕೆ ಕಾಯ್ದಿರಿಸಿದ ಎಲ್ಲಾ ಬಯಲು ಸ್ಥಳಗಳು;

(ಬಿ) ಎಲ್ಲಾ ಸಾರ್ವಜನಿಕ ದೀಪಗಳು, ದೀಪ ಸ್ತಂಭಗಳು ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಜೋಡಿಸಿದ ಉಪಕರಣ;

(ಸಿ) ಎಲ್ಲಾ ಗೇಟುಗಳು, ಮಾರುಕಟ್ಟೆಗಳು, ಕಸಾಯಿಖಾನೆಗಳು, ಗೊಬ್ಬರ ಮತ್ತು ಕಸದ ತಿಪ್ಪೆಗಳು ಮತ್ತು ಎಲ್ಲಾ ವರ್ಣನೆಯ ಸಾರ್ವಜನಿಕ ಕಟ್ಟಡಗಳು

– ನ್ಯಾಸಧಾರಿಯಾಗಿ ಧಾರಣ ಮಾಡತಕ್ಕದ್ದು ಮತ್ತು ಬಳಸತಕ್ಕದ್ದು.

(2) ನಗರಪಾಲಿಕೆಯು, ನಗರಪಾಲಿಕೆಯ ನಿಧಿಯನ್ನು ಯಾವ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ವಿನಿಯೋಗಿಸಬಹುದೋ ಆ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಮಾತ್ರವೇ ಸಂಬಂಧಿಸಿದಂತೆ ನ್ಯಾಸಗಳನ್ನು ಅಂಗೀಕರಿಸಬಹುದು.

**175. ಸ್ವತ್ತಿನ ಮತ್ತು ಅದರಲ್ಲಿನ ಹಿತಾಸಕ್ತಿಯ ಆರ್ಜನೆ.–** 174ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ ಆಯುಕ್ತರು, ನಗರಪಾಲಿಕೆಯ ಪರವಾಗಿ ನಗರದೊಳಗೆ ಅಥವಾ ನಗರದ ಹೊರಗೆ ಇರುವ ಚರ ಅಥವಾ ಸ್ಥಿರ ಸ್ವತ್ತನ್ನು ಅಥವಾ ಅಂಥ ಸ್ವತ್ತಿನಲ್ಲಿ ಯಾವುದೇ ಹಿತಾಸಕ್ತಿಯನ್ನು ಆರ್ಜಿಸಬಹುದು:

ಪರಂತು,–

(ಎ) ಆಯುಕ್ತರು, ನಿರ್ದಿಷ್ಟ ಪ್ರಕರಣಕ್ಕೆ ಅಥವಾ ಆ ಪ್ರಕರಣಗಳ ಯಾವುದೇ ವರ್ಗಕ್ಕೆ ನಿಬಂಧನೆಗಳನ್ನು, ದರಗಳನ್ನು ಅಥವಾ ಗರಿಷ್ಠ ಬೆಲೆಗಳನ್ನು ನಿಗದಿಪಡಿಸುವ ಸ್ಥಾಯೀ ಸಮಿತಿಯ ಯಾವುದೇ ನಿರ್ಣಯಕ್ಕೆ ಬದ್ಧರಾಗಿರತಕ್ಕದ್ದು;

(ಬಿ) ಯಾವುದೇ ಸ್ಥಿರ ಸ್ವತ್ತಿನ ವಿನಿಮಯಕ್ಕೆ, ಹನ್ನೆರಡು ತಿಂಗಳುಗಳಿಗೆ ಮೀರಿದ ಅವಧಿಗೆ ಯಾವುದೇ ಸ್ವತ್ತನ್ನು ಬಾಡಿಗೆಗೆ ತೆಗೆದುಕೊಳ್ಳುವುದಕ್ಕೆ ಅಥವಾ ಯಾವುದೇ ದಾನಗಳನ್ನು ಅಥವಾ ಬಾಧ್ಯತೆಯ ಭಾರದ ಸ್ವತ್ತನ್ನು ಮರಣಶಾಸನದ ಮೂಲಕ ದಾನ ಮಾಡಿರುವುದನ್ನು ಸ್ವೀಕರಿಸುವುದಕ್ಕೆ ಸ್ಥಾಯೀ ಸಮಿತಿಯ ಮಂಜೂರಾತಿ ಅಗತ್ಯವಾಗಿರತಕ್ಕದ್ದು;

(ಸಿ) ನಗರಪಾಲಿಕೆಯ ಮತ್ತು ಸರ್ಕಾರದ ಮಂಜೂರಾತಿಯು,–

**(i)** ಯಾವ ಸ್ವತ್ತನ್ನು ಸ್ವೀಕರಿಸಲು, ಆರ್ಜಿಸಲು ಅಥವಾ ವಿನಿಮಯ ಮಾಡಿಕೊಳ್ಳಲು ಉದ್ದೇಶಿಸಲಾಗಿದೆಯೋ ಆ ಯಾವುದೇ ಸ್ಥಿರ ಸ್ವತ್ತಿನ ಮೌಲ್ಯವು ಒಂದು ಸಾವಿರ ರೂಪಾಯಿಗಳಿಗೆ ಮೀರಿದ್ದರೆ ಅದನ್ನು ಸ್ವೀಕರಿಸಲು ಅಥವಾ ಆರ್ಜಿಸಲು;

**(ii)** ಮೂರು ವರ್ಷಗಳನ್ನು ಮೀರಿದ ಅವಧಿಗೆ ಯಾವುದೇ ಸ್ವತ್ತನ್ನು ಬಾಡಿಗೆಗೆ ತೆಗೆದುಕೊಳ್ಳಲು; ಅಥವಾ

**(iii)** ಆ ಸ್ವತ್ತಿನ ಯಾವುದೇ ದಾನವನ್ನು ಅಥವಾ ಬಾಧ್ಯತೆಯ ಭಾರದ ಸ್ವತ್ತಿನ ಮರಣ ಶಾಸನ ದಾನವನ್ನು, ಅಂಥ ಸ್ವತ್ತಿನ ಮೌಲ್ಯವು ಒಂದು ಸಾವಿರ ರೂಪಾಯಿಗಳನ್ನು ಮೀರಿದ್ದರೆ ಅದನ್ನು ಸ್ವೀಕರಿಸಲು

– ಅಗತ್ಯವಾಗಿರತಕ್ಕದ್ದು.

**176. ಸ್ವತ್ತಿನ ಮತ್ತು ಅದರಲ್ಲಿನ ಹಿತಾಸಕ್ತಿಯ ವಿಲೆ.–** (1) 182ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಆಯುಕ್ತರು ನಗರಪಾಲಿಕೆಯ ಯಾವುದೇ ಸ್ವತ್ತನ್ನು ಮಾರಾಟದ ಅಥವಾ ವಿನಿಮಯದ ಮೂಲಕ ವಿಲೆ ಮಾಡಬಹುದು [1][XXX][1] ಅಥವಾ ನಗರಪಾಲಿಕೆಯ ಯಾವುದೇ ಸ್ಥಿರ ಸ್ವತ್ತನ್ನು [2][ಎರಡು ವರ್ಷಗಳಿಗೆ][2] ಮೀರದ ಯಾವುದೇ ಅವಧಿಗೆ ಗುತ್ತಿಗೆಗೆ ನೀಡಬಹುದು ಅಥವಾ ಮೀನು ಹಿಡಿಯುವ ಅಥವಾ ಹುಲ್ಲು ಮೇಯಿಸುವ ಅಥವಾ ಹಣ್ಣನ್ನು ಮತ್ತು ಅಂಥವುಗಳನ್ನು ಶೇಖರಿಸುವ ಮತ್ತು ಕೀಳುವ ಯಾವುದೇ ಹಕ್ಕನ್ನು ಗುತ್ತಿಗೆಗೆ ಅಥವಾ ರಿಯಾಯಿತಿ ಬೆಲೆಗೆ ಕೊಡಬಹುದು:

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 2003 ರ ಅಧಿನಿಯಮ ಸಂಖ್ಯೆ 32ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಪರಂತು, ಅಂಥ ಗುತ್ತಿಗೆ ಅಥವಾ ರಿಯಾಯಿತಿಯು, ಹಾಗೆ ವಹಿಸಿಕೊಟ್ಟ ಆವರಣಗಳಲ್ಲಿ ಅದನ್ನು ಗುತ್ತಿಗೆಗೆ ಪಡೆದವನು ಯಾವುದೇ ಶಾಶ್ವತ ರಚನೆಯನ್ನು ನಿರ್ಮಿಸತಕ್ಕದ್ದಲ್ಲ ಎಂಬ ಷರತ್ತಿಗೆ ಒಳಪಟ್ಟಿರತಕ್ಕದ್ದು:

ಮತ್ತೂ ಪರಂತು, ಆಯುಕ್ತರು ಮಾಡಿದ ವಿಲೆಯನ್ನು, ನೀಡಿದ ಅಥವಾ ಮಂಜೂರ್ಮಾಡಿದ ಗುತ್ತಿಗೆಯನ್ನು ಅಥವಾ ರಿಯಾಯಿತಿಯನ್ನು ಹದಿನೈದು ದಿನಗಳೊಳಗಾಗಿ ಸ್ಥಾಯೀ ಸಮಿತಿಗೆ ವರದಿ ಮಾಡತಕ್ಕದ್ದು.

(2) ಆಯುಕ್ತರು, ಸ್ಥಾಯೀ ಸಮಿತಿಯ ಮಂಜೂರಾತಿಯೊಡನೆ ನಗರಪಾಲಿಕೆಯ ಯಾವುದೇ ಚರ ಸ್ವತ್ತನ್ನು ಮಾರಾಟ ಅಥವಾ ವಿನಿಮಯದ ಮೂಲಕ ವಿಲೆ ಮಾಡಬಹುದು [1][XXX][1] ಅಥವಾ ನಗರಪಾಲಿಕೆಯು ಯಾವುದೇ ಸ್ಥಿರ ಸ್ವತ್ತನ್ನು ಮೂರು ವರ್ಷಗಳಿಗೆ ಮೀರದ ಯಾವುದೇ ಅವಧಿಗೆ ಗುತ್ತಿಗೆಗೆ ನೀಡಬಹುದು ಅಥವಾ ಮೇಲೆ ಹೇಳಿದ ಅಂಥ ಯಾವುದೇ ಹಕ್ಕನ್ನು ಗುತ್ತಿಗೆಗೆ ಅಥವಾ ರಿಯಾಯಿತಿ ಬೆಲೆಗೆ ಕೊಡಬಹುದು.

1. 2003 ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(3) ಆಯುಕ್ತರು, ನಗರಪಾಲಿಕೆಯ ಮಂಜೂರಾತಿಯೊಡನೆ ನಗರಪಾಲಿಕೆಯ ಯಾವುದೇ ಚರ ಸ್ವತ್ತನ್ನು ಗುತ್ತಿಗೆಗೆ ಕೊಡಬಹುದು ಅಥವಾ ಮಾರಾಟ ಮಾಡಬಹುದು ಅಥವಾ ಅನ್ಯಥಾ ವಿಲೆ ಮಾಡಬಹುದು.

(4) (2)ನೇ ಉಪಪ್ರಕರಣದ ಮೇರೆಗೆ ಸ್ಥಾಯೀ ಸಮಿತಿಯ ಅಥವಾ (3)ನೇ ಉಪ–ಪ್ರಕರಣದ ಮೇರೆಗೆ ನಗರಪಾಲಿಕೆಯ ಮಂಜೂರಾತಿಯನ್ನು, ಸರ್ವೇ ಸಾಮಾನ್ಯವಾಗಿ ಅಥವಾ ಪ್ರಕರಣಗಳ ಯಾವುದೇ ವರ್ಗಕ್ಕೆ ಅಥವಾ ವಿಶೇಷವಾಗಿ ಯಾವುದೇ ನಿರ್ದಿಷ್ಟ ಪ್ರಕರಣಕ್ಕೆ ಕೊಡಬಹುದು.

(5) ಆಯುಕ್ತರು, ನಗರಪಾಲಿಕೆಯ ಯಾವುದೇ ಚರ ಸ್ವತ್ತನ್ನು ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳ ಮೇಲೆ ಮತ್ತು ಅಂಥ ಅವಧಿಗಳಿಗೆ ಎರವಲು ಅಥವಾ ಬಾಡಿಗೆಗೆ ನೀಡಬಹುದು.

(6) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರದ ಪೂರ್ವ ಮಂಜೂರಾತಿ ಪಡೆದ ಹೊರತು,–

(ಎ) ನಿಯಮಿಸಬಹುದಾದಂಥ ಮೌಲ್ಯದ ಮೊತ್ತವನ್ನು ಮೀರಿದ ಯಾವುದೇ ಚರ ಸ್ವತ್ತನ್ನು ಬಹಿರಂಗ ಹರಾಜಿನ ಮೂಲಕವಲ್ಲದೆ ಅನ್ಯಥಾ ಮಾರಾಟ ಮಾಡತಕ್ಕದ್ದಲ್ಲ;

(ಬಿ) (i) ಎಷ್ಟೇ ಮೌಲ್ಯದ ಯಾವುದೇ ಸ್ಥಿರ ಅಥವಾ ಚರ ಸ್ವತ್ತನ್ನು ಉಚಿತವಾಗಿ ಅಥವಾ ತೀರಾ ಕಡಿಮೆ ಬೆಲೆಗೆ ವರ್ಗಾವಣೆ ಮಾಡತಕ್ಕದ್ದಲ್ಲ.

(ii) ಯಾವುದೇ ಸ್ಥಿರ ಸ್ವತ್ತನ್ನು ಐದು ವರ್ಷಗಳಿಗೆ ಮೀರುವ ಯಾವುದೇ ಅವಧಿಗೆ ಗುತ್ತಿಗೆಗೆ ನೀಡತಕ್ಕದ್ದಲ್ಲ.

(iii) ಯಾವುದೇ ಸ್ಥಿರ ಸ್ವತ್ತನ್ನು ಮಾರಾಟದ ಅಥವಾ ಇತರ ವರ್ಗಾವಣೆಯ ಮೂಲಕ ವಿಲೆ ಮಾಡತಕ್ಕದ್ದಲ್ಲ.

**177. 1894ರ ಭೂ ಆರ್ಜನಾ ಅಧಿನಿಯಮದ ಮೇರೆಗೆ ಸ್ಥಿರ ಸ್ವತ್ತಿನ ಆರ್ಜನೆಯ ಪ್ರಕ್ರಿಯೆ.–** ಈ ಅಧಿನಿಯಮದ ಮೇರೆಗೆ ಯಾವ ಸ್ಥಿರ ಸ್ವತ್ತನ್ನು ಆರ್ಜಿಸಲು ಯಾವ ಪೌರ ಪ್ರಾಧಿಕಾರವನ್ನು ಅಧಿಕೃತಗೊಳಿಸಲಾಗಿದೆಯೋ ಆ ಸ್ಥಿರ ಸ್ವತ್ತನ್ನು 1894ರ ಭೂ ಆರ್ಜನಾ ಅಧಿನಿಯಮದ ಉಪಬಂಧಗಳ ಮೇರೆಗೆ ಆರ್ಜಿಸಬಹುದು ಮತ್ತು ಅಂಥ ಸ್ವತ್ತಿಗೆ ಸಂಬಂಧಿಸಿದಂತೆ ಸದರಿ ಅಧಿನಿಯಮದ ಮೇರೆಗೆ ಐತೀರ್ಪು ನೀಡಿದ ನಷ್ಟಪರಿಹಾರವನ್ನು ಮತ್ತು ಅದನ್ನು ಆರ್ಜಿಸುವಲ್ಲಿ ವಹಿಸಲಾದ ಯಾವುದೇ ಇತರ ಚಾರ್ಜುಗಳನ್ನು ಸಂದಾಯ ಮಾಡಿದ ಮೇಲೆ ಸದರಿ ಸ್ವತ್ತು, ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

**178. ಭೂಮಿಗೆ ಮತ್ತು ಇತರ ಸ್ವತ್ತುಗಳಿಗೆ ಸಂಬಂಧಿಸಿದ ಉಪಬಂಧಗಳು.–** (1) ಸರ್ಕಾರವು ನಗರಪಾಲಿಕೆಗೆ ವರ್ಗಾಯಿಸದ ಯಾವುದೇ ಭೂಮಿ ಅಥವಾ ಇತರ ಸ್ವತ್ತು ವರ್ಗಾವಣೆ ಪತ್ರದಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿದ್ದ ಹೊರತು, ಒಡೆತನದ ಹಕ್ಕಿನ ಮೂಲಕ ನಗರಪಾಲಿಕೆಗೆ ಸೇರತಕ್ಕದ್ದಲ್ಲ. ಆದರೆ ವರ್ಗಾವಣೆಯ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು ಮತ್ತು ಸದರಿ ನಿಬಂಧನೆಗಳಲ್ಲಿ ಮತ್ತು ಷರತ್ತುಗಳಲ್ಲಿ ಯಾವುದೇ ನಿಬಂಧನೆಯನ್ನು ಮತ್ತು ಷರತ್ತನ್ನು ಉಲ್ಲಂಘಿಸಿದಾಗ ಭೂಮಿ ಅಥವಾ ಇತರ ಸ್ವತ್ತು ಮತ್ತು ಅದರ ಮೇಲಿರುವ ಎಲ್ಲ ಜೋಡಣೆಗಳು ಮತ್ತು ರಚನೆಗಳು ಒಳಗೊಂಡಂತೆ ಅದಕ್ಕೆ ಹೊಂದಿಕೊಂಡಿರುವ ಎಲ್ಲ ವಸ್ತುಗಳ ಸಹಿತ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಮತ್ತು ಆದೇಶದ ಮೂಲಕ ಅದರ ಸ್ವಾಧೀನವನ್ನು ಮರಳಿ ಪಡೆಯುವುದು ಸರ್ಕಾರಕ್ಕೆ ಕಾನೂನುಬದ್ಧವಾಗಿರತಕ್ಕದ್ದು.

(2) ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ನಗರಪಾಲಿಕೆಯೊಂದಿಗೆ ಸಮಾಲೋಚಿಸಿದ ತರುವಾಯ ಸಾರ್ವಜನಿಕ ಉದ್ದೇಶಕ್ಕಾಗಿ ನಗರಪಾಲಿಕೆಗೆ ಸೇರಿರುವ ಅಥವಾ ನಗರಪಾಲಿಕೆಯಲ್ಲಿ ನಿಹಿತವಾಗಿರುವ ಯಾವುದೇ ಭೂಮಿಯನ್ನು ಅಥವಾ ಇತರ ಸ್ಥಿರ ಅಥವಾ ಚರ ಸ್ವತ್ತನ್ನು, ಅದು ನಿರ್ಧರಿಸಬಹುದಾದಂಥ ನಿಬಂಧನೆಗಳ ಮೇಲೆ ಸ್ವಾಧೀನ ಪಡಿಸಿಕೊಳ್ಳಬಹುದು.

[1][**178ಎ. ನಗರಪಾಲಿಕೆಯಿಂದ ಅಥವಾ ಅದರ ವಿರುದ್ಧದ ಸ್ವತ್ತುಗಳ ಬಗೆಗಿನ ಕ್ಲೇಮುಗಳ ನಿರ್ಧಾರ.–** (1) ಯಾವ ನಗರದಲ್ಲಿ, ಕೃಷಿಯ ಉದ್ದೇಶಕ್ಕಾಗಿ ಮಾತ್ರವೇ ಸಾಮಾನ್ಯವಾಗಿ ಬಳಸುವ ಭೂಮಿಗಳ ಹೊರತಾದ, ಭೂಮಿಗಳ ಸರ್ವೆಯನ್ನು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ವಿಸ್ತರಿಸಲಾಗಿದೆಯೋ ಅಥವಾ ವಿಸ್ತರಿಸತಕ್ಕದ್ದೋ ಆ ನಗರದಲ್ಲಿ ನಗರಪಾಲಿಕೆಯ ಅಥವಾ ಅದರ ಪರವಾಗಿ ಅಥವಾ ಅದರ ವಿರುದ್ಧವಾಗಿ ಯಾರೇ ವ್ಯಕ್ತಿಯು ಯಾವುದೇ ಸ್ವತ್ತಿನ ಬಗ್ಗೆ ಕ್ಲೇಮು ಮಾಡಿದರೆ, ಯುಕ್ತ ನೋಟೀಸನ್ನು ನೀಡಿ ವಿಚಾರಣೆಯನ್ನು ನಡೆಸಿದ ನಂತರ, ಕ್ಲೇಮುಗಳನ್ನು ನಿರ್ಧರಿಸುವ ಆದೇಶವನ್ನು ಹೊರಡಿಸುವುದು [2][ಸಂಬಂಧಪಟ್ಟ ರೆವಿನ್ಯೂ ವಿಭಾಗದ ಪ್ರಾದೇಶಿಕ ಆಯುಕ್ತರಿಗೆ][2] ಕಾನೂನುಬದ್ಧವಾಗಿತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಮಾಡಿದ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು ಸಲ್ಲಿಸಬಹುದು ಹಾಗೂ ನ್ಯಾಯಾಧಿಕರಣದ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು.

(3) ಯಾರೇ ವ್ಯಕ್ತಿಗೆ ನಿರ್ದಿಷ್ಟ ನಮೂನೆಯಲ್ಲಿ ನೋಟಿಸನ್ನು ನೀಡಲಾಗಿದ್ದರೆ, ಈ ಪ್ರಕರಣದ ಮೇರೆಗೆ ವಿಚಾರಣೆಯ ಯುಕ್ತ ನೋಟಿಸನ್ನು ಅಥವಾ ಆದೇಶವನ್ನು ಆತನು ಪಡೆದಿದ್ದನೆಂದು ಭಾವಿಸತಕ್ಕದ್ದು.][1]

1. 1995 ರ ಅಧಿನಿಯಮ ಸಂಖ್ಯೆ 14 ರ ಮೂಲಕ 3.5.1995 ರಿಂದ ಜಾರಿಗೆ ಬರುವಂತೆ 178ಎ ಪ್ರಕರಣವನ್ನು ಸೇರಿಸಲಾಗಿದೆ.

2. 2007ರ ಅಧಿನಿಯಮ ಸಂಖ್ಯೆ 17 ರ ಮೂಲಕ 5.1.2007 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**179. ಈ ಅಧಿನಿಯಮದಲ್ಲಿ ಉಪಬಂಧಿಸಿಲ್ಲದ ಉದ್ದೇಶಗಳು.–** ಸರ್ಕಾರವು ನಗರಪಾಲಿಕೆಯ ಸಮ್ಮತಿಯೊಂದಿಗೆ ಈ ಅಧಿನಿಯಮದ ಮೂಲಕ ಉಪಬಂಧಿಸಿಲ್ಲದ ಯಾವುದೇ ಸಂಸ್ಥೆಯ ಆಡಳಿತವನ್ನು ಅಥವಾ ಯಾವುದೇ ಕಾಮಗಾರಿಯ ಅನುಷ್ಠಾನವನ್ನು ನಗರಪಾಲಿಕೆಗೆ ವರ್ಗಾಯಿಸಬಹುದು ಮತ್ತು ಆ ತರುವಾಯ ಅಂಥ ಆಡಳಿತವನ್ನು ಅಥವಾ ಅನುಷ್ಠಾನ ಕಾರ್ಯವನ್ನು ವಹಿಸಿಕೊಳ್ಳುವುದು ನಗರಪಾಲಿಕೆಗೆ ಕಾನೂನುಬದ್ಧವಾಗಿರತಕ್ಕದ್ದು:

ಪರಂತು, ಅಂಥ ಪ್ರತಿಯೊಂದು ಸಂದರ್ಭದಲ್ಲಿ ಅಂಥ ಆಡಳಿತಕ್ಕೆ ಅಥವಾ ಅನುಷ್ಠಾನಕ್ಕೆ ಅವಶ್ಯವಾದ ನಿಧಿಗಳನ್ನು ಸರ್ಕಾರವು ನಗರಪಾಲಿಕೆಯ ವಶಕ್ಕೆ ನೀಡತಕ್ಕದ್ದು.

**180. ಕಾಮಗಾರಿಗಳನ್ನು ಕರಾರಿನ ಮೂಲಕ ನಿರ್ವಹಿಸತಕ್ಕದ್ದೇ ಎಂಬುದನ್ನು ನಿರ್ಧರಿಸಲು ನಗರಪಾಲಿಕೆಯ ಅಧಿಕಾರ.–** ನಗರಪಾಲಿಕೆಯು, ಯಾವುದೇ ನಿರ್ದಿಷ್ಟ ಪ್ರಕರಣಕ್ಕಾಗಿ ಆಯುಕ್ತರು ಕರಾರಿನ ಮೂಲಕ ಅಥವಾ ಅನ್ಯಥಾ ಕಾಮಗಾರಿಯನ್ನು ಅನುಷ್ಠಾನಗೊಳಿಸಬೇಕೇ ಎಂಬುದನ್ನು ನಿರ್ಧರಿಸಬಹುದು.

**181. ಅಂದಾಜುಗಳನ್ನು ಮಂಜೂರು ಮಾಡಲು ಹಲವು ಪ್ರಾಧಿಕಾರಿಗಳ ಅಧಿಕಾರಗಳು.–** ಅಂದಾಜುಗಳನ್ನು ಮಂಜೂರು ಮಾಡಲು ಹಲವು ಪ್ರಾಧಿಕಾರಿಗಳಿಗಿರುವ ಅಧಿಕಾರಗಳು ನಿಯಮಿಸಿದಂತುಗಳು ಆಗಿರತಕ್ಕದ್ದು.

**182. ಕರಾರುಗಳಿಗೆ ಸಂಬಂಧಿಸಿದ ಸಾಮಾನ್ಯ ಉಪಬಂಧಗಳು.–** (1) ನಗರಪಾಲಿಕೆಯು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸಲು ಅದು ಅವಶ್ಯವೆಂದು ಅಥವಾ ವಿಹಿತವೆಂದು ಪರ್ಯಾಲೋಚಿಸಬಹುದಾದಂಥ ಯಾವುದೇ ಕರಾರನ್ನು ಮಾಡಿಕೊಳ್ಳಬಹುದು ಮತ್ತು ಅಂಥ ಕರಾರುಗಳನ್ನು ನೆರವೇರಿಸಬಹುದು.

(2) ಈ ಬಗ್ಗೆ ರಚಿಸಿದ ನಿಯಮಗಳಿಗೆ ಒಳಪಟ್ಟು, ಈ ಅಧಿನಿಯಮದ ಯಾವುದೇ ಉದ್ದೇಶಗಳಿಗಾಗಿ ಕರಾರನ್ನು ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಉಪಬಂಧಗಳು ಅನ್ವಯವಾಗತಕ್ಕದ್ದು, ಎಂದರೆ:–

(ಎ) ಪ್ರತಿಯೊಂದು ಕರಾರನ್ನು ನಗರಪಾಲಿಕೆಯಿಂದ ಅಥವಾ ಅದರ ಪರವಾಗಿ ಆಯುಕ್ತರು ಮಾಡಿಕೊಳ್ಳತಕ್ಕದ್ದು;

(ಬಿ) ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಆಯುಕ್ತರು, ಒಂದಲ್ಲಾ ಒಂದು ಪೌರ ಪ್ರಾಧಿಕಾರದ ಅಥವಾ ಸರ್ಕಾರದ ಮಂಜೂರಾತಿಯಿಲ್ಲದೆ ನಿರ್ವಹಿಸಲು ಸಾಧ್ಯವಾಗದಂಥ ಯಾವುದೇ ಕಾಮಗಾರಿಯ ನೆರವೇರಿಕೆಗಾಗಿ ಯಾವುದೇ ಕರಾರನ್ನು ಅಂಥ ಮಂಜೂರಾತಿ ಕೊಟ್ಟಿದ್ದ ಹೊರತು ಮಾಡಿಕೊಳ್ಳತಕ್ಕದ್ದಲ್ಲ;

(ಸಿ) ನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಿತಿಗಳನ್ನು ಮೀರಿದ ಯಾವುದೇ ವೆಚ್ಚವನ್ನು ಒಳಗೊಳ್ಳುವ ಯಾವುದೇ ಕರಾರನ್ನು, ಅನುಸರಿಸಬೇಕಾದ ಪ್ರಕ್ರಿಯೆಗೆ ಸಂಬಂಧಿಸಿದ ಅಗತ್ಯತೆಯನ್ನು ಪಾಲಿಸಿದ ಹೊರತು ಮತ್ತು ಮಂಜೂರಾತಿಯನ್ನು ನೀಡಲು ಸಕ್ಷಮವಾದ ಪ್ರಾಧಿಕಾರವು ಅಂಥ ಮಂಜೂರಾತಿಯನ್ನು ನೀಡಿದ್ದ ಹೊರತು ಮತ್ತು ಮಂಜೂರಾತಿಯನ್ನು ಸರ್ಕಾರವು ನೀಡಬೇಕಾಗಿರುವಲ್ಲಿ ಅಂಥ ಮಂಜೂರಾತಿಯನ್ನು ಸರ್ಕಾರವು ನೀಡಿದ್ದ ಹೊರತು ಆಯುಕ್ತರು ಮಾಡಿಕೊಳ್ಳತಕ್ಕದ್ದಲ್ಲ.

(3) ನಿಯಮಿಸಬಹುದಾದಂತೆ ಮೂಲ ಕರಾರಿನಲ್ಲಿ ಒಳಗೊಂಡಿರುವ ವೆಚ್ಚವನ್ನು ಮೀರಿ ಎಷ್ಟು ಶೇಕಡಾ ಪ್ರಮಾಣದ ಹೆಚ್ಚಳ ಆಗುವುದೋ ಅದನ್ನು ಒಳಪಡಿಸಿ ಕರಾರಿನಲ್ಲಿ ಯಾವುದೇ ಬದಲಾವಣೆ ಮಾಡಿಕೊಳ್ಳಲು ಈ ಉಪಬಂಧಗಳು ಅನ್ವಯವಾಗತಕ್ಕದ್ದು.

(4) ಈ ಬಗ್ಗೆ ರಚಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ನಗರಪಾಲಿಕೆಯ ಪರವಾಗಿ ಆಯುಕ್ತರು ಮಾಡಿಕೊಳ್ಳುವ ಪ್ರತಿಯೊಂದು ಕರಾರನ್ನು ಆಯುಕ್ತರು ಸ್ವತಃ ತಮ್ಮ ಪರವಾಗಿಯೇ ಅದನ್ನು ಮಾಡಿಕೊಂಡಿದ್ದಿದ್ದರೆ ಅವರು ಹೇಗೆ ಬದ್ಧರಾಗಿರುತ್ತಿದ್ದರೋ ಹಾಗೆ ಅಂಥ ರೀತಿಯಲ್ಲಿ ಮತ್ತು ನಮೂನೆಯಲ್ಲಿ ಮಾಡಿಕೊಳ್ಳತಕ್ಕದ್ದು ಮತ್ತು ಅಂತಹುದೇ ರೀತಿಯಲ್ಲಿ ಮತ್ತು ನಮೂನೆಯಲ್ಲಿ ಬದಲಾಯಿಸಬಹುದು ಅಥವಾ ನಿರ್ವಹಿಸಬಹುದು:

ಪರಂತು,–

(ಎ) ಕರಾರನ್ನು ಖಾಸಗಿ ವ್ಯಕ್ತಿಗಳ ನಡುವೆ ಮಾಡಿಕೊಂಡಿದ್ದಿದ್ದರೆ ಹೇಗೆ ಮೊಹರನ್ನು ಹಾಕಿ ಆ ಕರಾರನ್ನು ಮಾಡಿಕೊಳ್ಳಬಹುದಾಗಿತ್ತೋ ಅದೇ ರೀತಿ ಪ್ರತಿಯೊಂದು ಕರಾರಿಗೂ ನಗರಪಾಲಿಕೆಯ ಸಾಮಾನ್ಯ ಮೊಹರನ್ನು ಹಾಕತಕ್ಕದ್ದು; ಮತ್ತು

(ಬಿ) ಒಂದು ಸಾವಿರ ರೂಪಾಯಿಗಳಿಗೆ ಮೀರಿದ ವೆಚ್ಚವನ್ನು ಒಳಗೊಂಡ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಅಥವಾ ಯಾವುದೇ ಸಾಮಗ್ರಿಗಳನ್ನು ಅಥವಾ ಸರಕುಗಳನ್ನು ಸರಬರಾಜು ಮಾಡುವುದಕ್ಕೆ ಸಂಬಂಧಿಸಿದ ಪ್ರತಿಯೊಂದು ಕರಾರು ಲಿಖಿತದಲ್ಲಿರತಕ್ಕದ್ದು ಮತ್ತು ನಗರಪಾಲಿಕೆಯ ಸಾಮಾನ್ಯ ಮೊಹರಿನಿಂದ ಮುದ್ರೆ ಹಾಕತಕ್ಕದ್ದು, ಮತ್ತು,–

(i) ಸಂದರ್ಭಾನುಸಾರ, ನಿರ್ವಹಿಸಬೇಕಾಗಿರುವ ಕಾಮಗಾರಿಯನ್ನು ಅಥವಾ ಸರಬರಾಜು ಮಾಡಬೇಕಾಗಿರುವ ಸಾಮಗ್ರಿಗಳನ್ನು ಅಥವಾ ಸರಕುಗಳನ್ನು;

(ii) ಅಂಥ ಕಾಮಗಾರಿಗೆ, ಸಾಮಗ್ರಿಗಳಿಗೆ ಅಥವಾ ಸರಕುಗಳಿಗೆ ಸಂದಾಯ ಮಾಡಬೇಕಾಗಿರುವ ಬೆಲೆಯನ್ನು; ಮತ್ತು

(iii) ಕಾಮಗಾರಿಗಾಗಿನ ಕರಾರಿನ ಸಂದರ್ಭದಲ್ಲಿ, ಕಾಮಗಾರಿಯ ಅಥವಾ ಅದರ ನಿರ್ದಿಷ್ಟಪಡಿಸಿದ ಭಾಗವನ್ನು ಯಾವ ಸಮಯದೊಳಗೆ ಪೂರ್ಣಗೊಳಿಸಬೇಕು ಎಂಬುದನ್ನು

– ನಿರ್ದಿಷ್ಟ ಪಡಿಸತಕ್ಕದ್ದು.

(5) ನಗರಪಾಲಿಕೆಯ ಸಾಮಾನ್ಯ ಮೊಹರು ಆಯುಕ್ತರ ಅಭಿರಕ್ಷೆಯಲ್ಲಿರತಕ್ಕದ್ದು ಮತ್ತು ಆಯುಕ್ತರ ಸಮ್ಮುಖದಲ್ಲಲ್ಲದೆ ಯಾವುದೇ ಕರಾರಿಗೆ ಅಥವಾ ಇತರ ಲಿಖಿತ ಪತ್ರಗಳಿಗೆ ಅದನ್ನು ಹಾಕತಕ್ಕದ್ದಲ್ಲ ಮತ್ತು ಆಯುಕ್ತರು ಅದನ್ನು ತಮ್ಮ ಸಮ್ಮುಖದಲ್ಲಿ ಮೊಹರನ್ನು ಹಾಕಲಾಗಿದೆ ಎಂಬುದರ ಸಂಕೇತವಾಗಿ ಕರಾರಿಗೆ ಅಥವಾ ಲಿಖಿತ ಪತ್ರಕ್ಕೆ ತಮ್ಮ ಸಹಿ ಹಾಕತಕ್ಕದ್ದು.

(6) ಈ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು ಅನ್ಯಥಾ ಮಾಡಿಕೊಂಡ ಯಾವುದೇ ಕರಾರಿಗೆ ನಗರಪಾಲಿಕೆಯು ಬದ್ಧವಾಗಿರತಕ್ಕದ್ದಲ್ಲ.

**183. ಟೆಂಡರುಗಳನ್ನು ಕರೆಯುವುದು.–** (1) [1][ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ ಮೊತ್ತವನ್ನು ಮೀರುವ][1] ಯಾವುದೇ ಕರಾರನ್ನು ಮಾಡಿಕೊಳ್ಳುವುದಕ್ಕೆ ಅಥವಾ ಆ ಯಾವುದೇ ಕಾಮಗಾರಿಯ ಅನುಷ್ಠಾನವನ್ನು ಅಥವಾ ಸಾಮಗ್ರಿಗಳ ಅಥವಾ ಸರಕುಗಳ ಸರಬರಾಜನ್ನು ಪ್ರಾರಂಭ ಮಾಡುವುದಕ್ಕೆ ಕಡೇ ಪಕ್ಷ ಏಳು ದಿನಗಳ ಮೊದಲು ಆಯುಕ್ತರು ಅಂಥ ಕರಾರಿಗೆ ಟೆಂಡರುಗಳನ್ನು ಕರೆಯುವ ಜಾಹೀರಾತಿನ ಮೂಲಕ ಪ್ರಕಟಣೆ ನೀಡತಕ್ಕದ್ದು:

1. 1986 ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಮತ್ತು 2003ರ ಅಧಿನಿಯಮದ ಸಂಖ್ಯೆ 32ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಪುನಃ ಪ್ರತ್ಯಾಯೋಜಿಸಲಾಗಿದೆ.

ಪರಂತು, ಅಂಥ ಜಾಹೀರಾತನ್ನು ನಿಯಮಿಸಬಹುದಾದಷ್ಟು ಪ್ರಸಾರವುಳ್ಳ ವೃತ್ತಪತ್ರಿಕೆಗಳಲ್ಲಿ ಮಾತ್ರವೇ ಪ್ರಕಟಿಸತಕ್ಕದ್ದು:

ಮತ್ತೂ ಪರಂತು, ಸ್ಥಾಯೀ ಸಮಿತಿಯು, ಆಯುಕ್ತರ ಕೋರಿಕೆಯಂತೆ ಮತ್ತು ಅದರ ವ್ಯವಹರಣೆಗಳಲ್ಲಿ ಕಾರಣಗಳನ್ನು ದಾಖಲಿಸಿ ಟೆಂಡರುಗಳನ್ನು ಕರೆಯದೆಯೇ ಕರಾರನ್ನು ಮಾಡಿಕೊಳ್ಳಲು ಆಯುಕ್ತರಿಗೆ ಅಧಿಕಾರನೀಡಬಹುದು.

[1][(2) (1)ನೇ ಉಪಪ್ರಕರಣದ ಮೇರೆಗೆ ನೀಡಿದ ಪ್ರಕಟಣೆಗೆ ಅನುಸಾರವಾಗಿ ಟೆಂಡರುಗಳನ್ನು ಸ್ವೀಕರಿಸಿದ ಮೇಲೆ ಆಯುಕ್ತರು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ (2000ದ ಕರ್ನಾಟಕ ಅಧಿನಿಯಮ 29) ಉಪಬಂಧಗಳಿಗೆ ಅನುಸಾರವಾಗಿ ಯಾವುದೇ ಟೆಂಡರನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು.][1]

1. 2003ರ ಅಧಿನಿಯಮ ಸಂಖ್ಯೆ 32 ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**184. ಕೆಲವು ಅಕ್ರಮತೆಗಳ ಉಳಿಸುವಿಕೆ.–** ಕಾಮಗಾರಿಯನ್ನು ಯೂನಿಟ್ ದರಗಳಲ್ಲಿ ಕರಾರಿನ ಮೇಲೆ ಕೊಡಲಾಗಿದ್ದರೆ ಮತ್ತು ಯೂನಿಟ್ಟುಗಳ ಸಂಖ್ಯೆಯನ್ನು ನಿಷ್ಕೃಷ್ಟವಾಗಿ ನಿರ್ಧರಿಸಲಾಗದಿರುವಲ್ಲಿ, ಅದರಲ್ಲಿ ವಿಧಿಸಲಾದ ಹಣಕಾಸಿನ ಮಿತಿಗಳು ಅಂತಿಮವಾಗಿ ಮೀರಿವೆ ಎಂಬ ಸಂಗತಿಯ ಕಾರಣ ಮಾತ್ರದಿಂದಲೇ 182 ಅಥವಾ 183ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿವೆ ಎಂದು ಭಾವಿಸತಕ್ಕದ್ದಲ್ಲ.

**185. ಕರಾರುಗಳ ನೆರವೇರಿಕೆಗಾಗಿ ಭದ್ರತೆ.–** ಆಯುಕ್ತರು ಟೆಂಡರನ್ನು ಅಂಗೀಕರಿಸಿದ ತರುವಾಯ, ತಾವು ಮಾಡಿಕೊಂಡ ಪ್ರತಿಯೊಂದು ಕರಾರಿನ ಸೂಕ್ತ ನೆರವೇರಿಕೆಗಾಗಿ ಸಾಕಷ್ಟು ಭದ್ರತೆಯನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಅವರು ಮಾಡಿಕೊಳ್ಳುವ ಯಾವುದೇ ಇತರ ಕರಾರಿನ ಸೂಕ್ತ ನೆರವೇರಿಕೆಗಾಗಿ ಭದ್ರತೆಯನ್ನು ತೆಗೆದುಕೊಳ್ಳಬಹುದು.

## ಅಧ್ಯಾಯ – XIII

### ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ

**186. [1][ಈ ಅಧ್ಯಾಯದ ಕೆಲವು ಉಪಬಂಧಗಳ][1] ಅನ್ವಯ.–** [1][187 ರಿಂದ 244ರವರೆಗಿನ ಪ್ರಕರಣಗಳ ಉಪಬಂಧಗಳು][1] ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಮೇರೆಗೆ ಪ್ರತ್ಯೇಕವಾಗಿ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆಯನ್ನು ಮಾಡಿರುವ ಯಾವುದೇ ನಗರಕ್ಕೆ ಅನ್ವಯವಾಗತಕ್ಕದ್ದಲ್ಲ.

1. 2001ರ ಅಧಿನಿಯಮ ಸಂಖ್ಯೆ 31 ರ ಮೂಲಕ 19.11.2001 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**187. ಕಾಮಗಾರಿಗಳ ನಿರ್ಮಾಣ.–** (1) ಸರ್ಕಾರದ ಮಂಜೂರಾತಿಯೊಂದಿಗೆ ನಗರಪಾಲಿಕೆಯು, ನಗರಕ್ಕೆ ನೀರು ಸರಬರಾಜು ಮಾಡಲು ಶುದ್ಧೀಕರಣ ಸ್ಥಾವರಗಳು, ಜಲಾಶಯಗಳು, ಯಂತ್ರಸಾಮಗ್ರಿಗಳು, ಕೊಳವೆಗಳು, ಪೈಪುಗಳು ಅಥವಾ ಇತರ ಕಾಮಗಾರಿಗಳನ್ನು ನಿರ್ಮಾಣ ಮಾಡಬಹುದು, ಹಾಕಬಹುದು ಅಥವಾ ನಿರ್ಮಿಸಬಹುದು ಮತ್ತು ನಿವಾಸಿಗಳ ಬಳಕೆಗಾಗಿ ನಗರದೊಳಗೆ, ಟ್ಯಾಂಕುಗಳನ್ನು, ಜಲಾಶಯಗಳನ್ನು, ಯಂತ್ರಸಾಮಗ್ರಿ ಪ್ರಧಾನ ಕೊಳವೆಗಳನ್ನು, ಕಾರಂಜಿಗಳನ್ನು ಮತ್ತು ಇತರ ಅನುಕೂಲತೆಗಳನ್ನು ಒದಗಿಸಬಹುದು.

(2) ನಗರಪಾಲಿಕೆಯು ಅಸ್ತಿತ್ವದಲ್ಲಿರುವ ನೀರು ಸರಬರಾಜು ಕಾಮಗಾರಿಗಳನ್ನು ನಿರ್ವಹಿಸುವಂತೆ ಮತ್ತು ಅವುಗಳಿಗೆ ನೀರು ಸರಬರಾಜಾಗುವಂತೆ ಮಾಡಬಹುದು ಅಥವಾ ಅದು ಅಂಥ ಯಾವುದೇ ಕಾಮಗಾರಿಗಳನ್ನು ಮುಚ್ಚಬಹುದು ಮತ್ತು ಅಂಥ ಇತರ ಯಾವುದೇ ಬದಲಿ ಕಾಮಗಾರಿಗಳನ್ನು ಕೈಗೊಳ್ಳಬಹುದು ಮತ್ತು ಅವುಗಳನ್ನು ನಿರ್ವಹಿಸುವಂತೆ ಮತ್ತು ಅವುಗಳಿಗೆ ನೀರು ಸರಬರಾಜಾಗುವಂತೆ ಮಾಡಬಹುದು.

**188. ನೀರು ಸರಬರಾಜು ಆವರಣಗಳಲ್ಲಿ ಅತಿಕ್ರಮ ಪ್ರವೇಶ.–** ಆಯುಕ್ತರ ಸೂಕ್ತ ಅನುಮತಿಯನ್ನು ಪಡೆದ ಹೊರತು, ಯಾರೇ ವ್ಯಕ್ತಿಯು, ಕೊಳವೆ ಅಥವಾ ಪೈಪು ಹಾದುಹೋಗಿರುವ, ನಗರಪಾಲಿಕೆಯಲ್ಲಿ ನಿಹಿತವಾಗಿರುವ ಯಾವುದೇ ಭೂಮಿಯಲ್ಲಿ ಅಥವಾ ನೀರು ಸರಬರಾಜಿಗೆ ಸಂಬಂಧಿಸಿದ ಯಾವುವೇ ಆವರಣಗಳಲ್ಲಿ ಪ್ರವೇಶಿಸತಕ್ಕದ್ದಲ್ಲ.

**189. ಪ್ರಧಾನ ನೀರುಕೊಳವೆಗಳ ಮೇಲೆ ಕಟ್ಟಡದ ನಿಷೇಧ.–** (1) ಆಯುಕ್ತರ ಅನುಮತಿಯಿಲ್ಲದೆ ನಗರಪಾಲಿಕೆಯ ಯಾವುದೇ ಪ್ರಧಾನ ನೀರು ಕೊಳವೆಗಳ ಮೇಲೆ ಯಾವುದೇ ಕಟ್ಟಡವನ್ನು, ಗೋಡೆಯನ್ನು ಅಥವಾ ಇತರ ರಚನೆಯನ್ನು ಹೊಸದಾಗಿ ನಿರ್ಮಿಸತಕ್ಕದ್ದಲ್ಲ ಮತ್ತು ಯಾವುದೇ ಬೀದಿಯನ್ನು ನಿರ್ಮಿಸತಕ್ಕದ್ದಲ್ಲ.

(2) ಯಾವುದೇ ಕಟ್ಟಡ ಗೋಡೆ ಅಥವಾ ಇತರ ರಚನೆಗಳನ್ನು ಹಾಗೆ ನಿರ್ಮಿಸಿದರೆ ಅಥವಾ ಯಾವುದೇ ಬೀದಿಯನ್ನು ಹಾಗೆ ನಿರ್ಮಿಸಿದರೆ, ಆಯುಕ್ತರು ಅದನ್ನು ತೆಗೆದುಹಾಕುವಂತೆ ಮಾಡಬಹುದು ಅಥವಾ ಸೂಕ್ತವೆಂದು ಅವರಿಗೆ ತೋರುವಂತೆ ಅವರೊಂದಿಗೆ ಅನ್ಯಥಾ ವ್ಯವಹರಿಸಬಹುದು ಮತ್ತು ಅದಕ್ಕಾಗಿ ವಹಿಸಿದ ವೆಚ್ಚಗಳನ್ನು (1)ನೇ ಉಪ-ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿದ ವ್ಯಕ್ತಿಯು ಸಂದಾಯಮಾಡತಕ್ಕದ್ದು.

**190. ಗೃಹ ಸಂಪರ್ಕಗಳ ಮೇಲೆ ನಿಯಂತ್ರಣ.–** ನೀರು ಸರಬರಾಜು ಪ್ರಧಾನ ಕೊಳವೆಗಳೊಂದಿಗೆ ಎಲ್ಲ ಗೃಹ ಸಂಪರ್ಕಗಳು ಯಾವ ಆವರಣಗಳಿಗೆ ಅವು ಸೇರಿವೆಯೋ ಆ ಆವರಣಗಳೊಳಗೆ ಇರಲಿ ಅಥವಾ ಹೊರಗಿರಲಿ, ಅವು ನಗರಪಾಲಿಕೆಯ ನಿಯಂತ್ರಣದಲ್ಲಿರತಕ್ಕದ್ದು. ಆದರೆ ಅವುಗಳು ಸೇರಿರುವ ಆವರಣಗಳ ಮಾಲೀಕನ ಅಥವಾ ಯಾವ ಆವರಣಗಳ ಉಪಯೋಗಕ್ಕಾಗಿ ಅವುಗಳನ್ನು ನಿರ್ಮಿಸಲಾಗಿದೆಯೋ ಆ ಆವರಣದ ಮಾಲೀಕನ ವೆಚ್ಚದಲ್ಲಿ ಮತ್ತು ಆ ಬಗ್ಗೆ ರಚಿಸಲಾದ ಉಪವಿಧಿಗಳಿಗೆ ಅನುಗುಣವಾಗಿ ಅವುಗಳನ್ನು ಬದಲಾಯಿಸತಕ್ಕದ್ದು, ದುರಸ್ತಿಗೊಳಿಸತಕ್ಕದ್ದು. ಮತ್ತು ಸುಸ್ಥಿತಿಯಲ್ಲಿರಿಸತಕ್ಕದ್ದು.

**191. ಸರಬರಾಜು ಮಾಡಿದ ನೀರಿಗೆ ಸಂದಾಯವನ್ನು ಮಾಡುವುದು.–** ಯಾವುದೇ ಕಾನೂನಿನಲ್ಲಿ, ಕರಾರಿನಲ್ಲಿ ಅಥವಾ ಲಿಖಿತದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೇರೆಗೆ ಸರಬರಾಜು ಮಾಡಿದ ಎಲ್ಲ ನೀರಿಗೆ ಉಪವಿಧಿಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದರಗಳನ್ನು, ಅಂಥ ಕಾಲಗಳಲ್ಲಿ ಮತ್ತು ಅಂಥ ಷರತ್ತುಗಳ ಮೇರೆಗೆ ಸಂದಾಯ ಮಾಡತಕ್ಕದ್ದು ಮತ್ತು ಬೇರೆ ಬೇರೆ ಉದ್ದೇಶಗಳಿಗಾಗಿನ ನೀರು ಸರಬರಾಜಿಗೆ ಬೇರೆ ಬೇರೆ ದರಗಳನ್ನು ನಿಯಮಿಸಬಹುದು.

**192. ಗೃಹ ಬಳಕೆಯ ಉದ್ದೇಶಗಳಿಗಾಗಿ ಖಾಸಗಿ ನೀರು ಸರಬರಾಜು.–** (1) ಆಯುಕ್ತರು ಯಾವುದೇ ಕಟ್ಟಡದ ಮಾಲೀಕನ ಅಥವಾ ಅಧಿಭೋಗದಾರನ ಅರ್ಜಿಯ ಮೇಲೆ, ಉಪವಿಧಿಗಳಿಗನುಸಾರವಾಗಿ ಗೃಹಬಳಕೆಗೆ ಮತ್ತು ಉಪಯೋಗಕ್ಕೆ ಕಟ್ಟಡಕ್ಕೆ ನೀರು ಸರಬರಾಜು ಮಾಡಲು ವ್ಯವಸ್ಥೆ ಮಾಡಬಹುದು.

(2) ಮನೆಯ ಒಳಗೆ ಅಥವಾ ಮನೆಯಿಂದ ಯುಕ್ತ ದೂರದೊಳಗೆ ಆರೋಗ್ಯಕರ ನೀರನ್ನು ನಿವಾಸಿಗಳ ಬಳಕೆಗೆ ಮತ್ತು ಉಪಯೋಗಕ್ಕೆ ಸಾಕಷ್ಟು ಪ್ರಮಾಣದಲ್ಲಿ ಒದಗಿಸಲಾಗಿದೆ ಎಂದು ಆಯುಕ್ತರಿಂದ ಯಾವುದೇ ವಾಸಗೃಹದ ಮಾಲೀಕನು ಪ್ರಮಾಣ ಪತ್ರವನ್ನು ಪಡೆಯುವವರೆಗೆ ಅವನು ಹೊಸದಾಗಿ ನಿರ್ಮಿಸಿದ ಅಥವಾ ಪುನರ್‌ನಿರ್ಮಿಸಿದ ವಾಸದ ಮನೆಯನ್ನು ಅಧಿಭೋಗಿಸುವುದು ಅಥವಾ ಅಧಿಭೋಗಿಸುವಂತೆ ಮಾಡುವುದು ಅಥವಾ ಅದಕ್ಕೆ ಅನುಮತಿಸುವುದು ಕಾನೂನುಬದ್ಧವಾಗಿರತಕ್ಕದ್ದಲ್ಲ.

(3) ಯಾವುದೇ ಭೂಮಿಯ ಮೇಲೆ, ಎರಡು ಅಥವಾ ಹೆಚ್ಚು ಮೇಲುರಚನೆಗಳಿರುವಲ್ಲಿ ಮತ್ತು ಭೂಮಿಯ ಮಾಲೀಕನು ಎಲ್ಲ ಮೇಲುರಚನೆಗಳ ಮಾಲೀಕನಾಗಿಲ್ಲದಿರುವಲ್ಲಿ, ಆಯುಕ್ತರು, ಗೃಹಬಳಕೆಗಾಗಿ ಮತ್ತು ಉಪಯೋಗಕ್ಕಾಗಿ ಮೇಲುರಚನೆಗಳಿಗೆ ಸರಿಯಾದ ನೀರು ಸರಬರಾಜಿಲ್ಲವೆಂದು ಮತ್ತು ಅಂಥ ಯಾವುದೇ ಮೇಲುರಚನೆಯ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳಿಗೆ ಹೆಚ್ಚಿಲ್ಲದ ದೂರದ ಪ್ರಧಾನ ಕೊಳವೆಯಿಂದ ಅಂಥ ಸರಬರಾಜನ್ನು ಒದಗಿಸಬಹುದೆಂದು ಅವರಿಗೆ ಕಂಡುಬಂದರೆ, ನೋಟೀಸಿನ ಮೂಲಕ, ಆ ಭೂಮಿಯ ಮಾಲೀಕನನ್ನು ಅಂಥ ಸರಬರಾಜನ್ನು ಪಡೆಯುವಂತೆ ಅಗತ್ಯಪಡಿಸಬಹುದು.

**193. ಗೃಹಬಳಕೆಯ ಉದ್ದೇಶಕ್ಕಾಗಿ ನೀರು ಸರಬರಾಜು ಮಾಡುವುದು, ಕೆಲವು ನಿರ್ದಿಷ್ಟ ಉದ್ದೇಶಕ್ಕೆ ಯಾವುದೇ ಸರಬರಾಜನ್ನು ಒಳಗೊಳ್ಳುವುದಿಲ್ಲ.–** ಗೃಹಬಳಕೆಯ ಉದ್ದೇಶಗಳಿಗಾಗಿನ ನೀರು ಸರಬರಾಜಿನಲ್ಲಿ,–

(ಎ) ಯಾವುದೇ ವ್ಯಾಪಾರ, ತಯಾರಿಕೆ ಅಥವಾ ವ್ಯವಹಾರಕ್ಕಾಗಿ;

(ಬಿ) ತೋಟಗಳಿಗಾಗಿ ಅಥವಾ ನೀರಾವರಿಯ ಉದ್ದೇಶಗಳಿಗಾಗಿ;

(ಸಿ) ಕಟ್ಟಡದ ಉದ್ದೇಶಗಳಿಗಾಗಿ;

(ಡಿ) ಕಾರಂಜಿಗಳು, ಈಜು ಸ್ನಾನಗೃಹಗಳು, ಸಾರ್ವಜನಿಕ ಸ್ನಾನಗೃಹಗಳಿಗಾಗಿ ಅಥವಾ ಟ್ಯಾಂಕುಗಳು ಅಥವಾ ಯಾವುದೇ ಅಲಂಕಾರಿಕ ಅಥವಾ ಯಾಂತ್ರಿಕ ಉದ್ದೇಶಗಳಿಗಾಗಿ;

(ಇ) ಪ್ರಾಣಿಗಳಿಗಾಗಿ, ಪ್ರಾಣಿಗಳ ಉತ್ಪನ್ನವನ್ನು ಅಥವಾ ಅವುಗಳಿಂದ ಪಡೆದ ಯಾವುದೇ ಉತ್ಪನ್ನವನ್ನು ಮಾರಾಟ ಮಾಡುವುದಕ್ಕಾಗಿ, ಮಾರಾಟಕ್ಕಾಗಿ ಅಥವಾ ಬಾಡಿಗೆಗಾಗಿ ಅವುಗಳನ್ನು ಇಟ್ಟಿರುವುದಕ್ಕಾಗಿ;

(ಎಫ್) ಹೋಟೆಲುಗಳು, ಭೋಜನ ಗೃಹಗಳು ಮತ್ತು ವಸತಿ ಕ್ಲಬ್ಬುಗಳ ನಿವಾಸಿಗಳ ಬಳಕೆಗಾಗಿ ಮತ್ತು ಉಪಯೋಗಕ್ಕಾಗಿ;

(ಜಿ) ಥಿಯೇಟರು ಮತ್ತು ಸಿನಿಮಾಗಳಿಗೆ ಹೋಗಿಬರುವ ವ್ಯಕ್ತಿಗಳ ಬಳಕೆಗಾಗಿ ಮತ್ತು ಉಪಯೋಗಕ್ಕಾಗಿ;

(ಹೆಚ್) ಬೀದಿಗಳನ್ನು ನಿರ್ಮಿಸುವುದಕ್ಕಾಗಿ ಅಥವಾ ಅವುಗಳಿಗೆ ನೀರು ಹಾಕುವುದಕ್ಕಾಗಿ; ಅಥವಾ

(ಐ) ಮಾರಾಟ ಅಥವಾ ಬಾಡಿಗೆಗಾಗಿ ಇರಿಸಲಾಗಿರುವ ವಾಹನಗಳನ್ನು ತೊಳೆಯುವುದಕ್ಕಾಗಿ

– ಮಾಡಿದ ಯಾವುದೇ ನೀರು ಸರಬರಾಜು ಒಳಗೊಂಡಿರುವುದಾಗಿ ಭಾವಿಸತಕ್ಕದ್ದಲ್ಲ, ಆದರೆ,–

(i) ಕಕ್ಕಸುಗಳಲ್ಲಿ ಅಥವಾ ಚರಂಡಿಗಳಲ್ಲಿ ನೀರು ಹರಿಸುವುದಕ್ಕಾಗಿ; ಮತ್ತು

(ii) ಈಜುಸ್ನಾನಗೃಹಗಳನ್ನು ಅಥವಾ ಸಾರ್ವಜನಿಕ ಸ್ನಾನಗೃಹಗಳನ್ನು ಬಿಟ್ಟು ಎಲ್ಲ ಸ್ನಾನಗೃಹಗಳಿಗಾಗಿ

– ಮಾಡಿದ ನೀರು ಸರಬರಾಜು ಒಳಗೊಂಡಿರುವುದಾಗಿ ಭಾವಿಸತಕ್ಕದ್ದು.

**194. ಗೃಹಬಳಕೆಯ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹೇತರ ಉದ್ದೇಶಗಳಿಗಾಗಿ ಬಳಸತಕ್ಕದ್ದಲ್ಲ.–** ಯಾರೇ ವ್ಯಕ್ತಿಯು ಆಯುಕ್ತರ ಲಿಖಿತ ಅನುಮತಿಯಿಲ್ಲದೆ ಗೃಹಬಳಕೆ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹಬಳಕೆ ಉದ್ದೇಶಗಳಿಗಲ್ಲದೆ ಇತರ ಉದ್ದೇಶಗಳಿಗಾಗಿ ಬಳಸತಕ್ಕದ್ದಲ್ಲ ಅಥವಾ ಬಳಸಲು ಅನುಮತಿಸತಕ್ಕದ್ದಲ್ಲ.

**195. ಗೃಹೇತರ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಲು ಅಧಿಕಾರ.–** (1) ಆಯುಕ್ತರು, ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ, ನೀರು ಸರಬರಾಜು ಯಾವ ಉದ್ದೇಶಕ್ಕಾಗಿ ಅವಶ್ಯವಾಗಿದೆ ಮತ್ತು ಬಳಕೆ ಮಾಡಬಹುದಾದ ನೀರಿನ ಪ್ರಮಾಣ ಎಷ್ಟು ಎಂಬುದನ್ನು ನಿರ್ದಿಷ್ಟಪಡಿಸುವ ಲಿಖಿತದಲ್ಲಿನ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಈ ಅಧಿನಿಯಮದ ಮೇರೆಗೆ ರಚಿಸಿದ ಉಪವಿಧಿಗಳಿಗೆ ಸುಸಂಗತವಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಗೃಹಬಳಕೆಯಲ್ಲದ ಯಾವುದೇ ಇತರ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಬಹುದು.

(2) (1)ನೇ ಉಪ–ಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದಾಗ, ಆಯುಕ್ತರು ಉಪವಿಧಿಗಳ ಮೂಲಕ ನಿಗದಿಪಡಿಸಬಹುದಾದಂಥ ಚಾರ್ಜುಗಳಿಗೆ ಮತ್ತು ದರಗಳಿಗೆ ಒಳಪಟ್ಟು, ಉಪವಿಧಿಗಳಲ್ಲಿ ನಿಯಮಿಸಬಹುದಾದಂಥ ಅಳತೆಗಳ ಮತ್ತು ವರ್ಣನೆಯ ಅವಶ್ಯಕ ಪೈಪುಗಳು ಮತ್ತು ನೀರಿನ ಜೋಡಣೆಗಳನ್ನು ಹಾಕಬಹುದು ಅಥವಾ ಹಾಕುವುದಕ್ಕೆ ಅನುಮತಿಸಬಹುದು ಮತ್ತು ಅಂಥ ಪೈಪುಗಳು ಮತ್ತು ಜೋಡಣೆಗಳ ಮೂಲಕ ನೀರಿನ ಸರಬರಾಜಿಗೆ ವ್ಯವಸ್ಥೆ ಮಾಡಬಹುದು.

**196. ಸರ್ಕಾರಕ್ಕೆ ಮತ್ತು ಸ್ಥಳೀಯ ಪ್ರಾಧಿಕಾರಗಳಿಗೆ ನೀರು ಸರಬರಾಜು.–** ನಗರಪಾಲಿಕೆಯು, ಸಂದಾಯ, ಸರಬರಾಜಿನ ಅವಧಿ ಮತ್ತು ಷರತ್ತುಗಳ ಬಗ್ಗೆ ಅದು ನಿರ್ಧರಿಸತಕ್ಕಂಥ ನಿಬಂಧನೆಗಳ ಮೇಲೆ ಸರ್ಕಾರಕ್ಕೆ ಅಥವಾ ಇತರ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ನೀರು ಸರಬರಾಜು ಮಾಡಬಹುದು.

**197. ಸಾರ್ವಜನಿಕ ನೀರು ಸರಬರಾಜು.–** (1) ನಗರಪಾಲಿಕೆಯು ನಗರದಲ್ಲಿ ಆರೋಗ್ಯಕರವಾದ ಕುಡಿಯುವ ನೀರಿನ ಸರಬರಾಜಿಗೆ ಏರ್ಪಾಡು ಮಾಡತಕ್ಕದ್ದು ಮತ್ತು ಉಚಿತ ನೀರು ಸರಬರಾಜಿಗಾಗಿ ಸಾಕಷ್ಟು ನಿಲುಪೈಪುಗಳನ್ನು, ನೀರಿನ ಕೊಳಾಯಿಗಳನ್ನು ಮತ್ತು ಇತರ ಅನುಕೂಲತೆಗಳನ್ನು ನಿರ್ಮಿಸತಕ್ಕದ್ದು.

(2) ಸಾರ್ವಜನಿಕರಿಗೆ ಆರೋಗ್ಯಕರ ನೀರನ್ನು ಸರಬರಾಜು ಮಾಡುವುದು ಇನ್ನು ಮುಂದೆ ಅಗತ್ಯವಿಲ್ಲ ಎನಿಸಿದಾಗ ಆಯುಕ್ತರು, ಸಾರ್ವಜನಿಕ ಹೈಡ್ರೆಂಟುಗಳನ್ನು ಅಥವಾ ಇತರ ಅನುಕೂಲತೆಗಳನ್ನು ಮುಚ್ಚಬಹುದು.

**198. ಪ್ರಧಾನ ನೀರು ಕೊಳವೆ ಮಾರ್ಗಗಳನ್ನು ಹಾಕಲು ಅಧಿಕಾರ.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ನಗರಪಾಲಿಕೆಯು ನಗರದ ಸ್ಥಳೀಯ ಎಲ್ಲೆಗಳ ಒಳಗಾಗಲಿ ಅಥವಾ ಹೊರಗಾಗಲಿ,–

(ಎ) ಸರ್ಕಾರದಲ್ಲಿ, ನಗರಪಾಲಿಕೆಯಲ್ಲಿ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದಲ್ಲಿ ನಿಹಿತವಾಗಿರುವ ಯಾವುದೇ ಬೀದಿಯಲ್ಲಿ ಅಥವಾ ಯಾವುದೇ ಭೂಮಿಯಲ್ಲಿ;

(ಬಿ) ಬೀದಿಯ ಭಾಗವಾಗಿರದ ಯಾವುದೇ ಭೂಮಿಯ ಪ್ರತಿಯೊಬ್ಬ ಮಾಲೀಕನ ಮತ್ತು ಅಧಿಭೋಗದಾರನ ಅನುಮತಿಯೊಂದಿಗೆ ಆ ಭೂಮಿಯೊಳಗೆ, ಅದರ ಮೇಲ್ಭಾಗದಲ್ಲಿ ಅಥವಾ ಅದರ ಮೇಲೆ

– ಪ್ರಧಾನ ಕೊಳವೆ ಮಾರ್ಗವನ್ನು ಹಾಕಬಹುದು ಮತ್ತು ಹಾಗೆ ಹಾಕಿದ ಯಾವುದೇ ಪ್ರಧಾನ ಕೊಳವೆ ಮಾರ್ಗವನ್ನು ಪರಿಶೀಲಿಸಬಹುದು, ದುರಸ್ತಿ ಮಾಡಬಹುದು, ಬದಲಾಯಿಸಬಹುದು ಅಥವಾ ನವೀಕರಿಸಬಹುದು ಅಥವಾ ಯಾವುದೇ ಕಾಲದಲ್ಲಿ ತೆಗೆದುಹಾಕಬಹುದು:

ಪರಂತು, ಈ ಉಪ–ಪ್ರಕರಣದ ಉದ್ದೇಶಕ್ಕಾಗಿ ಅವಶ್ಯವಾದ ಅನುಮತಿಯನ್ನು ತಡೆಹಿಡಿದಿರುವಲ್ಲಿ, ನಗರಪಾಲಿಕೆಯು ಅಂಥ ಅನುಮತಿಯಿಲ್ಲದೆ ಆ ಭೂಮಿಯೊಳಗೆ, ಅದರ ಮೇಲೆ ಅಥವಾ ಅದರ ಮೇಲ್ಭಾಗದಲ್ಲಿ, ಪ್ರಧಾನ ಕೊಳವೆ ಮಾರ್ಗವನ್ನು ಹಾಕುವ ತನ್ನ ಉದ್ದೇಶವನ್ನು ತಿಳಿಸಿ ಭೂಮಿಯ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಲಿಖಿತ ನೋಟೀಸನ್ನು ಕೊಟ್ಟ ತರುವಾಯ ಹಾಗೆ ಮಾಡಬಹುದು.

(2) ನಗರಪಾಲಿಕೆಯು ಈ ಪ್ರಕರಣದ ಮೇರೆಗೆ ಅಧಿಕಾರಗಳನ್ನು ಚಲಾಯಿಸಿ, (1)ನೇ ಉಪ–ಪ್ರಕರಣದ (ಬಿ) ಖಂಡದಲ್ಲಿ ತಿಳಿಸಿರುವ ಬೀದಿ ಅಥವಾ ಭೂಮಿಯ ಭಾಗವಾಗಿರದ ಯಾವುದೇ ಭೂಮಿಯೊಳಗೆ, ಅದರ ಮೇಲೆ ಅಥವಾ ಅದರ ಮೇಲ್ಭಾಗದಲ್ಲಿ ಪ್ರಧಾನ ಕೊಳವೆ ಮಾರ್ಗವನ್ನು ಹಾಕಿದರೆ ಅಥವಾ ಅಂಥ ಯಾವುದೇ ಭೂಮಿಯೊಳಗೆ, ಅದರ ಮೇಲೆ ಅಥವಾ ಮೇಲ್ಭಾಗದಲ್ಲಿ ಹಾಗೆ ಹಾಕಲಾದ ಪ್ರಧಾನ ಕೊಳವೆ ಮಾರ್ಗವನ್ನು ಪರಿಶೀಲಿಸಿದರೆ,

ದುರಸ್ತಿ ಮಾಡಿದರೆ, ಮಾರ್ಪಾಡು ಮಾಡಿದರೆ, ನವೀಕರಿಸಿದರೆ ಅಥವಾ ತೆಗೆದುಹಾಕಿದರೆ, ಹಾಗೆ ಪ್ರಧಾನ ಕೊಳವೆ ಮಾರ್ಗವನ್ನು ಪರಿಶೀಲಿಸಿದ, ಹಾಕಿದ, ದುರಸ್ತಿ ಮಾಡಿದ, ಮಾರ್ಪಾಡು ಮಾಡಿದ, ನವೀಕರಿಸಿದ ಅಥವಾ ತೆಗೆದುಹಾಕಿದ ಕಾರಣದಿಂದಾಗಿ ಆ ಭೂಮಿಗೆ ಉಂಟಾದ ಯಾವುದೇ ಹಾನಿಗಾಗಿ ಅಥವಾ ಹಾನಿಕಾರಕ ಪರಿಣಾಮಕ್ಕಾಗಿ ಆ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಗೆ ಅದು ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

**199. ನೀರು ಸರಬರಾಜು ಪೈಪುಗಳು, ಇತ್ಯಾದಿಗಳನ್ನು ಹಾಕಲು ಅಧಿಕಾರ.–** (1) ನಗರದ ಸ್ಥಳೀಯ ಎಲ್ಲೆಗಳ ಒಳಗಾಗಲಿ ಅಥವಾ ಹೊರಗಾಗಲಿ, 198ನೇ ಪ್ರಕರಣದ (1)ನೇ ಉಪ ಪ್ರಕರಣ (ಬಿ) ಖಂಡದಲ್ಲಿ ಉಲ್ಲೇಖಿಸಿರುವ ಯಾವುದೇ ಬೀದಿಯಲ್ಲಿ ಅಥವಾ ಯಾವುದೇ ಭೂಮಿಯಲ್ಲಿ, ಆವರಣಗಳಿಗೆ ನೀರು ಸರಬರಾಜು ಮಾಡುವುದಕ್ಕಾಗಿ ಅದು ಅವಶ್ಯವೆಂದು ಭಾವಿಸಬಹುದಾದಂಥ ತಡೆಬಿರಡೆ ಮತ್ತು ಇತರ ನೀರು ಜೋಡಣೆಗಳೊಂದಿಗೆ ನೀರು ಸರಬರಾಜು ಪೈಪುಗಳನ್ನು ಹಾಕಬಹುದು ಮತ್ತು ಈ ಪ್ರಕರಣದ ಬಲದಿಂದಾಗಲಿ ಅಥವಾ ಅನ್ಯಥಾ ಆಗಲಿ, ಅಂಥ ಬೀದಿಯಲ್ಲಿ ಅಥವಾ ಭೂಮಿಯಲ್ಲಿ ಹಾಕಿದ ಯಾವುದೇ ನೀರು ಸರಬರಾಜು ಪೈಪನ್ನು ಕಾಲಕಾಲಕ್ಕೆ ಪರಿಶೀಲನೆ ಮಾಡಬಹುದು, ದುರಸ್ತಿ ಮಾಡಬಹುದು, ಬದಲಾವಣೆ ಮಾಡಬಹುದು ಅಥವಾ ನವೀಕರಣ ಮಾಡಬಹುದು ಅಥವಾ ಯಾವುದೇ ಸಮಯದಲ್ಲಿ ತೆಗೆದುಹಾಕಬಹುದು.

(2) ಉಪಪ್ರಕರಣ (1)ರ ಉಲ್ಲೇಖಿಸಿದ ಬೀದಿಯ ಅಥವಾ ಭೂಮಿಯ ಭಾಗವಾಗಿರದ ಭೂಮಿಯೊಳಗೆ, ಅದರ ಮೇಲೆ ಅಥವಾ ಅದರ ಮೇಲ್ಭಾಗದಲ್ಲಿ ಕಾನೂನು ಬದ್ಧವಾಗಿ ನೀರು ಸರಬರಾಜು ಪೈಪನ್ನು ಹಾಕಿರುವಲ್ಲಿ, ಆಯುಕ್ತರು ಅಧಿಕೃತಗೊಳಿಸಬಹುದಾದಂಥ ಅಧಿಕಾರಿಗಳು, ಆ ಭೂಮಿಯ ಮೇಲೆ ಪ್ರವೇಶಿಸಬಹುದು ಮತ್ತು ಪೈಪನ್ನು ಪರಿಶೀಲನೆ ಮಾಡಬಹುದು, ದುರಸ್ತಿ ಮಾಡಬಹುದು, ಬದಲಾವಣೆ ಮಾಡಬಹುದು, ನವೀಕರಣ ಮಾಡಬಹುದು ಅಥವಾ ತೆಗೆದುಹಾಕಬಹುದು ಅಥವಾ ಅದರ ಬದಲಿಗೆ ಹೊಸ ಪೈಪನ್ನು ಹಾಕಬಹುದು. ಆದರೆ ಅಂಥ ಕಾರ್ಯ ಮಾಡುವಾಗ ಉಂಟಾದ ಯಾವುದೇ ಹಾನಿಗಾಗಿ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

**200. ಅಗ್ನಿಶಾಮಕ ಹೈಡ್ರೆಂಟ್‌ಗಳ ವ್ಯವಸ್ಥೆ.–** (1) ಆಯುಕ್ತರು, ಹೊತ್ತಿಕೊಂಡಿರುವ ಯಾವುದೇ ಬೆಂಕಿಯನ್ನು ಆರಿಸುವುದಕ್ಕಾಗಿ ನೀರನ್ನು ಸರಬರಾಜು ಮಾಡಲು ಹೆಚ್ಚು ಅನುಕೂಲವಾಗಬಹುದಾದಂಥ ಸ್ಥಳಗಳಲ್ಲಿ ಪ್ರಧಾನ ನೀರುಕೊಳವೆ ಮಾರ್ಗಗಳ ಮೇಲೆ (ಟ್ರಂಕ್ ಪ್ರಧಾನ ಕೊಳವೆ ಮಾರ್ಗಗಳನ್ನು ಬಿಟ್ಟು) ಹೈಡ್ರೆಂಟುಗಳನ್ನು ಅಳವಡಿಸತಕ್ಕದ್ದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡತಕ್ಕದ್ದು ಮತ್ತು ಕಾಲಕಾಲಕ್ಕೆ ಅಂಥ ಪ್ರತಿಯೊಂದು ಹೈಡ್ರೆಂಟನ್ನು ನವೀಕರಿಸತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಅಳವಡಿಸಿದ ಪ್ರತಿಯೊಂದು ಹೈಡ್ರೆಂಟ್ ಇರುವ ಸ್ಥಳವನ್ನು ಸೂಚಿಸುವುದಕ್ಕಾಗಿ, ಅಂಥ ಹೈಡ್ರೆಂಟ್‌ನ ಸಮೀಪ ಇರುವ ಯಾವುದಾದರೂ ಗೋಡೆಯ, ಕಟ್ಟಡದ ಅಥವಾ ಇತರ ರಚನೆಯ ಮೇಲೆ ಅಕ್ಷರಗಳನ್ನು, ಚಿಹ್ನೆಗಳನ್ನು ಅಥವಾ ಅಂಕಿಗಳನ್ನು ಎದ್ದು ಕಾಣುವಂತೆ ಪ್ರದರ್ಶಿಸತಕ್ಕದ್ದು.

(3) ಯಾವುದೇ ಅಂಥ ಹೈಡ್ರೆಂಟ್‌ನ ಅಳವಡಿಕೆ ಕಾರ್ಯ ಪೂರ್ಣಗೊಂಡ ಕೂಡಲೇ, ಆಯುಕ್ತರು ಅದರ ಕೀಲಿಕೈಯನ್ನು ಸಾರ್ವಜನಿಕ ಅಗ್ನಿಶಾಮಕ ಯಂತ್ರ ವಾಹನವನ್ನು ಇಡಲಾಗಿರುವ ಸ್ಥಳದಲ್ಲಿ ಮತ್ತು ಅವರು ಅವಶ್ಯವೆಂದು ಭಾವಿಸಬಹುದಾದ ಇತರ ಸ್ಥಳಗಳಲ್ಲಿ ಇಡತಕ್ಕದ್ದು.

(4) ನಗರಪಾಲಿಕೆಯು, ಯಾವ ಬೀದಿಯಲ್ಲಿ ಅಥವಾ ಅದರ ಬಳಿಯಲ್ಲಿ ಪೈಪನ್ನು (ಟ್ರಂಕ್ ಪ್ರಧಾನ ಕೊಳವೆ ಮಾರ್ಗವಾಗಿರದ) ಹಾಕಲಾಗಿದೆಯೋ ಮತ್ತು ಹೈಡ್ರೆಂಟನ್ನು ಒಯ್ಯಲು ಸಾಕಷ್ಟು ವಿಸ್ತೀರ್ಣವನ್ನು ಹೊಂದಿದೆಯೋ ಆ ಬೀದಿಯಲ್ಲಿ ಅಥವಾ ಅದರ ಬಳಿಯಲ್ಲಿ ಇರುವ ಯಾವುದೇ ಕಾರ್ಖಾನೆಯ, ಕಾರ್ಯಾಗಾರದ, ವ್ಯಾಪಾರ ಆವರಣಗಳ ಅಥವಾ ವ್ಯವಹಾರದ ಸ್ಥಳದ ಮಾಲೀಕನ ಅಥವಾ ಅಧಿಭೋಗದಾರನ ಕೋರಿಕೆಯಂತೆ ಮತ್ತು ಅವನ ಖರ್ಚಿನಲ್ಲಿ ಆ ಕಾರ್ಖಾನೆಗೆ, ಕಾರ್ಯಾಗಾರಕ್ಕೆ, ವ್ಯಾಪಾರ ಆವರಣಗಳಿಗೆ ಅಥವಾ ವ್ಯವಹಾರದ ಸ್ಥಳಕ್ಕೆ ಅನುಕೂಲಕರವಾದಷ್ಟು ಹತ್ತಿರದಲ್ಲಿರುವಂಥ, ಬೆಂಕಿಯನ್ನು ನಂದಿಸುವುದಕ್ಕಾಗಿಯೇ ಬಳಸಲಾಗುವಂಥ ಒಂದು ಅಥವಾ ಹೆಚ್ಚು ಅಗ್ನಿಶಾಮಕ ಹೈಡ್ರೆಂಟುಗಳನ್ನು ಪೈಪಿನ ಮೇಲೆ ಅಳವಡಿಸಬಹುದು, ಉತ್ತಮ ಸ್ಥಿತಿಯಲ್ಲಿ ಇಟ್ಟುಕೊಂಡು ಬರಬಹುದು ಅಥವಾ ನವೀಕರಿಸಬಹುದು.

(5) ನಗರಪಾಲಿಕೆಯು, ಯಾವ ಪೈಪಿನ ಮೇಲೆ ಹೈಡ್ರೆಂಟನ್ನು ಅಳವಡಿಸಲಾಗಿದೆಯೋ ಆ ಯಾವುದೇ ಪೈಪಿನಿಂದ ಬೆಂಕಿಯನ್ನು ಆರಿಸುವ ಸಲುವಾಗಿ ಯಾವುದೇ ಹಣ ಸಂದಾಯ ಮಾಡದೆ ನೀರನ್ನು ತೆಗೆದುಕೊಳ್ಳಲು ಎಲ್ಲರಿಗೂ ಅನುಮತಿ ನೀಡತಕ್ಕದ್ದು.

**201. ಪಂಪುಗಳು, ಇತ್ಯಾದಿಗಳನ್ನು ಅಳವಡಿಸಲು ಆವರಣಗಳ ಮಾಲೀಕನನ್ನು ಅಗತ್ಯಪಡಿಸಲು ಅಧಿಕಾರ.–** ಪ್ರತಿಯೊಂದು ಆವರಣದ ಅತ್ಯಂತ ಮೇಲಿನ ಮಹಡಿಯ ತುದಿಗೆ ನೀರು ತಲುಪಲು ಸಾಧ್ಯವಾಗುವಂತೆ ಪಂಪನ್ನು ಅಳವಡಿಸಬೇಕೆಂದು ಮತ್ತು ವಿದ್ಯುತ್ ಪಂಪುಗಳನ್ನು ಅಥವಾ ಇತರ ಯಂತ್ರಸಾಧನಗಳನ್ನು ಅಳವಡಿಸಬೇಕೆಂದು ಅಂಥ ಪ್ರತಿಯೊಂದು ಆವರಣದ ಮಾಲೀಕನನ್ನು ನಗರಪಾಲಿಕೆಯು ಅಗತ್ಯಪಡಿಸಿದರೆ, ಅವನು ಹಾಗೆ ಮಾಡತಕ್ಕದ್ದು.

**202. ನೀರು ಸರಬರಾಜು.–** ಆಯುಕ್ತರು, ಯಾವುದೇ ಆವರಣದ ಮಾಲೀಕನಿಗೆ, ಗುತ್ತಿಗೆದಾರನಿಗೆ ಅಥವಾ ಅಧಿಭೋಗದಾರನಿಗೆ 203ನೇ ಪ್ರಕರಣದ ಅಗತ್ಯತೆಗಳಿಗೆ ಒಳಪಟ್ಟು ನಗರಪಾಲಿಕೆಯ ನೀರು ಪೂರೈಕೆ ಕೊಳವೆ ಮಾರ್ಗಗಳಿಂದ ಅವನ ಗೃಹಬಳಕೆಯ ಉದ್ದೇಶಗಳಿಗೆ ನೀರು ಸರಬರಾಜು ಮಾಡುವುದಕ್ಕಾಗಿ ಆ ಆವರಣಗಳ ಮೂಲಕ ನೀರು ಹರಿಸಲು ಸರಬರಾಜು ಪೈಪುಗಳ ಮೂಲಕ ಆವರಣಗಳಿಗೆ ಸಂಪರ್ಕ ಕಲ್ಪಿಸಲು ಅನುಮತಿ ನೀಡಬಹುದು.

**203. ನೀರು ಸರಬರಾಜು ಪೈಪುಗಳನ್ನು ಹಾಕುವುದು, ಇತ್ಯಾದಿ.–** (1) ನಗರಪಾಲಿಕೆಯ ನೀರು ಸರಬರಾಜು ಕಾಮಗಾರಿಗಳಿಂದ ತನ್ನ ಗೃಹಬಳಕೆಯ ಉದ್ದೇಶಗಳಿಗಾಗಿ, ನೀರು ಸರಬರಾಜು ಸೌಲಭ್ಯ ಪಡೆಯಲು ಇಚ್ಛಿಸುವ ಯಾವುವೇ ಆವರಣಗಳ ಮಾಲೀಕನು, ಗುತ್ತಿಗೆದಾರನು ಅಥವಾ ಅಧಿಭೋಗದಾರನು ಈ ಕೆಳಕಂಡ ಅಗತ್ಯತೆಗಳನ್ನು ಪಾಲಿಸತಕ್ಕದ್ದು, ಎಂದರೆ:–

(ಎ) ಅವನು, ಅವಶ್ಯಕ ನೀರು ಸರಬರಾಜು ಪೈಪನ್ನು ಹಾಕುವ ತನ್ನ ಆಶಯದ ಬಗ್ಗೆ ಹದಿನಾಲ್ಕು ದಿನಗಳ ನೋಟೀಸನ್ನು ಆಯುಕ್ತರಿಗೆ ಕೊಡತಕ್ಕದ್ದು;

(ಬಿ) ಬೀದಿಯ ಭಾಗವಾಗಿರದ ಯಾವುದೇ ಭೂಮಿಗೆ ಸಂಬಂಧಿಸಿದಂತೆ ಅದರ ಮಾಲೀಕನ ಅಥವಾ ಅಧಿಭೋಗದಾರನ ಸಮ್ಮತಿಯನ್ನು ಮೊದಲು ಪಡೆದು ತನ್ನ ಸ್ವಂತ ಖರ್ಚಿನಲ್ಲಿ ಅವನು ನೀರು ಸರಬರಾಜು ಪೈಪನ್ನು ಹಾಕತಕ್ಕದ್ದು:

ಪರಂತು, ನೀರು ಸರಬರಾಜು ಪೈಪಿನ ಯಾವುದೇ ಭಾಗವನ್ನು ಬೀದಿಯಲ್ಲಿ ಹಾಕಬೇಕಾಗಿರುವಲ್ಲಿ, ಅವನು ಸ್ವತಃ ಬೀದಿಯನ್ನು ಅಗೆಯತಕ್ಕದ್ದಲ್ಲ ಅಥವಾ ಪೈಪಿನ ಆ ಭಾಗವನ್ನು ಹಾಕತಕ್ಕದ್ದಲ್ಲ.

(2) ಉಪಪ್ರಕರಣ (1) ರಲ್ಲಿ ಉಲ್ಲೇಖಿಸಿದ ನೋಟೀಸನ್ನು ಸ್ವೀಕರಿಸಿದ ಮೇಲೆ ಆಯುಕ್ತರು, ಅವಶ್ಯಕ ಸಂಪರ್ಕ ಪೈಪನ್ನು ಮತ್ತು ಬೀದಿಯಲ್ಲಿ ಹಾಕಬೇಕಾದ ನೀರು ಸರಬರಾಜು ಪೈಪಿನ ಯಾವುದೇ ಭಾಗವನ್ನು ಹಾಕತಕ್ಕದ್ದು ಮತ್ತು ನೀರು ಸರಬರಾಜು ಪೈಪಿಗೆ ಸಂಪರ್ಕ ಪೈಪನ್ನು ಜೋಡಿಸತಕ್ಕದ್ದು.

(3) ಈ ಪ್ರಕರಣದ ಮೂಲಕ ಕಾರ್ಯಗತಗೊಳಿಸಲು ಅಗತ್ಯಪಡಿಸಿದ ಅಥವಾ ಅಧಿಕೃತಗೊಳಿಸಿದ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವಲ್ಲಿ ಆಯುಕ್ತರು ಯುಕ್ತವಾಗಿ ವಹಿಸಿದ ವೆಚ್ಚವನ್ನು, ನೋಟೀಸನ್ನು ನೀಡಿದ್ದ ವ್ಯಕ್ತಿಯು ನಗರಪಾಲಿಕೆಗೆ ಮರುಸಂದಾಯ ಮಾಡತಕ್ಕದ್ದು ಮತ್ತು ಅದನ್ನು ಈ ಅಧಿನಿಯಮದ ಮೇರೆಗೆ ನೀರು ದರದ ಬಾಕಿಯಂತೆ ಅಂಥ ವ್ಯಕ್ತಿಯಿಂದ ವಸೂಲು ಮಾಡಬಹುದು:

ಪರಂತು, ಈ ಪ್ರಕರಣದ ಉಪಬಂಧದ ಮೇರೆಗೆ ಆಯುಕ್ತರು ನೀರು ಸರಬರಾಜು ಪೈಪಿಗೆ ಬದಲಾಗಿ ಪ್ರಧಾನ ಕೊಳವೆ ಮಾರ್ಗವನ್ನು ಹಾಕಿದಲ್ಲಿ, ನೀರು ಸರಬರಾಜು ಪೈಪಿಗೆ ಬದಲಾಗಿ ಪ್ರಧಾನ ಕೊಳವೆ ಮಾರ್ಗವನ್ನು ಹಾಕಿದ್ದಕ್ಕೆ ವಹಿಸಿದ ಹೆಚ್ಚುವರಿ ವೆಚ್ಚವನ್ನು ಅವನು ಸಂದಾಯ ಮಾಡತಕ್ಕದ್ದು.

(4) ಈ ಪ್ರಕರಣದ ಮೇಲೆ ಹೇಳಿದ ಉಪಬಂಧಗಳಲ್ಲಿ ಏನೇ ಒಳಗೊಂಡಿದ್ದರೂ, ಆಯುಕ್ತರು ತಾವು ನೋಟೀಸನ್ನು ಸ್ವೀಕರಿಸಿದ ತರುವಾಯ, ಯುಕ್ತ ಕಾಲದೊಳಗೆ, ನಗರಪಾಲಿಕೆಯು ಅಂದಾಜು ಮಾಡಿದಂಥ ಕಾಮಗಾರಿಯ ವೆಚ್ಚವನ್ನು ಮೊದಲೇ ಸಂದಾಯ ಮಾಡುವಂತೆ ಅಥವಾ ನಗರಪಾಲಿಕೆಗೆ ಮನದಟ್ಟಾಗುವಂಥ ಭದ್ರತೆಯನ್ನು ನೀಡುವಂತೆ ನೋಟೀಸು ನೀಡಿದ ವ್ಯಕ್ತಿಯನ್ನು ಅಗತ್ಯಪಡಿಸಬಹುದು.

(5) ಉಪಪ್ರಕರಣ (4)ರ ಮೇರೆಗೆ ನಗರಪಾಲಿಕೆಗೆ ಸಂದಾಯ ಮಾಡಿರುವ ಯಾವುದೇ ಹಣವು ನೋಟೀಸನ್ನು ನೀಡುವ ವ್ಯಕ್ತಿಯಿಂದ ನಗರ ಪಾಲಿಕೆಯು ಯಾವ ವೆಚ್ಚಗಳ ವಸೂಲಿ ಮಾಡಲು ಹಕ್ಕುಳ್ಳದ್ದಾಗಿಯೋ ಆ ವೆಚ್ಚಗಳಿಗಿಂತ ಹೆಚ್ಚಾಗಿದ್ದರೆ, ಆ ಹೆಚ್ಚುವರಿ ಹಣವನ್ನು ನಗರ ಪಾಲಿಕೆಯು ಮರುಸಂದಾಯ ಮಾಡತಕ್ಕದ್ದು ಮತ್ತು ಸಂದಾಯ ಮಾಡಿದ ಹಣಕ್ಕಿಂತ ವೆಚ್ಚಗಳು ಹೆಚ್ಚಾಗಿದ್ದರೆ ಮತ್ತು ಹೆಚ್ಚಾದ ವೆಚ್ಚದಷ್ಟರ ಮಟ್ಟಿಗೆ ನಗರಪಾಲಿಕೆಯು ಈ ಅಧಿನಿಯಮದ ಮೇರೆಗೆ ನೀರು ದರದ ಬಾಕಿಯಂತೆ ಅಂಥ ವ್ಯಕ್ತಿಯಿಂದ ವಸೂಲಿ ಮಾಡಬಹುದು.

**204. ಪ್ರತ್ಯೇಕ ನೀರು ಸರಬರಾಜು ಪೈಪುಗಳನ್ನು ಅಗತ್ಯಪಡಿಸಲು ಅಧಿಕಾರ.–** (1) ನಗರಪಾಲಿಕೆಯು, ಅದು ನೀರು ಸರಬರಾಜು ಮಾಡಿದ ಅಥವಾ ಸರಬರಾಜು ಮಾಡಬೇಕಾದ ಪ್ರತಿಯೊಂದು ಆವರಣಕ್ಕಾಗಿ ಪ್ರತ್ಯೇಕ ನೀರು ಸರಬರಾಜು ಪೈಪನ್ನು ಹಾಕುವುದಕ್ಕೆ ಅವಕಾಶ ಕಲ್ಪಿಸುವಂತೆ ಅಗತ್ಯಪಡಿಸಬಹುದು.

(2) ಈಗಾಗಲೇ ನೀರು ಸರಬರಾಜನ್ನು ಮಾಡಲಾಗಿದ್ದು, ಪ್ರತ್ಯೇಕ ನೀರು ಸರಬರಾಜು ಪೈಪನ್ನು ಹಾಕಿರದ ಯಾವುವೇ ಆವರಣಗಳ ಸಂದರ್ಭದಲ್ಲಿ, ನಗರಪಾಲಿಕೆಯು ಅಂಥ ಪೈಪನ್ನು ಹಾಕಲು ಅವಕಾಶ ಕಲ್ಪಿಸುವಂತೆ ಅಗತ್ಯಪಡಿಸಿ ಆವರಣಗಳ ಮಾಲೀಕನಿಗೆ ನೋಟೀಸನ್ನು ನೀಡಬಹುದು, ಮಾಲೀಕನು ಮೂರು ತಿಂಗಳೊಳಗೆ ನೀರು ಸರಬರಾಜು ಪೈಪಿಗೆ ಬೇಕಾಗುವಷ್ಟು ಪೈಪನ್ನು ಹಾಕತಕ್ಕದ್ದು ಮತ್ತು ಬೀದಿಯಲ್ಲಿ ಹಾಕಬೇಕಾದ ಪೈಪನ್ನು ಅವನು ಹಾಕುವ ಅಗತ್ಯವಿರತಕ್ಕದ್ದಲ್ಲ. ಮಾಲೀಕನು ಹಾಗೆ ಮಾಡಿದ ತರುವಾಯ, ಹದಿನಾಲ್ಕು ದಿನದೊಳಗಾಗಿ ನಗರಪಾಲಿಕೆಯು ಬೀದಿಯಲ್ಲಿ ಹಾಕಲು ಬೇಕಾಗುವಷ್ಟು ಸಂಪರ್ಕ ಪೈಪನ್ನು ಅಥವಾ ನೀರು ಸರಬರಾಜು ಪೈಪನ್ನು ಹಾಕತಕ್ಕದ್ದು ಮತ್ತು ಎಲ್ಲ ಅಗತ್ಯ ಸಂಪರ್ಕಗಳನ್ನು ಕಲ್ಪಿಸತಕ್ಕದ್ದು.

(3) ಉಪಪ್ರಕರಣ (2)ರ ಮೇರೆಗೆ ಯಾವ ಮಾಲೀಕನಿಗೆ ನೋಟೀಸನ್ನು ನೀಡಲಾಗಿದೆಯೋ, ಆ ಮಾಲೀಕನು ಅದನ್ನು ಪಾಲಿಸಲು ತಪ್ಪಿದರೆ, ಮಾಲೀಕನು ಕಾರ್ಯಗತಗೊಳಿಸಬೇಕಾಗಿದ್ದ ಕಾಮಗಾರಿಯನ್ನು ನಗರಪಾಲಿಕೆಯು ಸ್ವತಃ ತಾನೇ ಕಾರ್ಯಗತಗೊಳಿಸಬಹುದು ಮತ್ತು ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅದು ಸೂಕ್ತವಾಗಿ ವಹಿಸಿದ ವೆಚ್ಚವನ್ನು ಈ ಅಧಿನಿಯಮದ ಮೇರೆಗೆ ನೀರು ದರದ ಬಾಕಿಯಂತೆ ಅಂಥ ವ್ಯಕ್ತಿಯಿಂದ ವಸೂಲಿ ಮಾಡತಕ್ಕದ್ದು.

**205. ತಡೆಬಿರಡೆಗಳು.–** (1) ಹಾಕಿದ ಪ್ರತಿಯೊಂದು ನೀರು ಸರಬರಾಜು ಪೈಪಿನ ಮೇಲೆ ನಗರಪಾಲಿಕೆಯು, ಮುಚ್ಚಳವಿರುವ ಪೆಟ್ಟಿಗೆಯಲ್ಲಿ ಅಥವಾ ಯುಕ್ತವಾಗಿ ಅವಶ್ಯಕವಾಗಬಹುದಾದಂಥ ಗಾತ್ರದ ಕುಳಿಯಲ್ಲಿ ಆವೃತವಾದ ತಡೆಬಿರಡೆಯನ್ನು ಜೋಡಿಸತಕ್ಕದ್ದು.

(2) ನೀರು ಸರಬರಾಜು ಪೈಪಿನ ಮೇಲೆ ಜೋಡಿಸಿದ ಪ್ರತಿಯೊಂದು ತಡೆಬಿರಡೆಯನ್ನು ನಗರಪಾಲಿಕೆಯು ಅತ್ಯಂತ ಅನುಕೂಲಕರವೆಂದು ಭಾವಿಸುವಂಥ ಸ್ಥಾನದಲ್ಲಿರಿಸತಕ್ಕದ್ದು:

ಪರಂತು,–

(ಎ) ಖಾಸಗಿ ಆವರಣಗಳಲ್ಲಿನ ತಡೆಬಿರಡೆಯನ್ನು, ಯಾವ ಬೀದಿಯಿಂದ ನೀರು ಸರಬರಾಜು ಪೈಪು ಆ ಆವರಣಗಳಿಗೆ ಬಂದಿರುವುದೋ ಆ ಬೀದಿಗೆ ಯುಕ್ತವಾಗಿ ಕಾರ್ಯಸಾಧ್ಯವಾಗಬಹುದಾದಷ್ಟು ಹತ್ತಿರದಲ್ಲಿ ಇರಿಸತಕ್ಕದ್ದು;

(ಬಿ) ಬೀದಿಯಲ್ಲಿ ತಡೆಬಿರಡೆಯನ್ನು ಬೀದಿಯ ಅಂಚಿಗೆ ಯುಕ್ತವಾಗಿ ಕಾರ್ಯಸಾಧ್ಯ ವಾಗಬಹುದಾದಷ್ಟು ಹತ್ತಿರದಲ್ಲಿ ಇರಿಸತಕ್ಕದ್ದು.

**206. ಮೀಟರುಗಳನ್ನು ಹಾಕಲು ಅಧಿಕಾರ.–** (1) ನಗರಪಾಲಿಕೆಯು ನೀರು ಮೀಟರುಗಳನ್ನು ಹಾಕಬಹುದು ಮತ್ತು ನಗರಪಾಲಿಕೆಯ ನೀರು ಪೂರೈಕೆ ಕೊಳವೆ ಮಾರ್ಗಕ್ಕೆ ಸಂಪರ್ಕ ಕಲ್ಪಿಸಿದ ಆವರಣಗಳಲ್ಲಿನ ನೀರು ಸರಬರಾಜು ಪೈಪಿಗೆ ಅದನ್ನು ಜೋಡಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಮೀಟರನ್ನು ಜೋಡಿಸಲು ತಗಲುವ ವೆಚ್ಚವನ್ನು ಆವರಣದ ಮಾಲೀಕನು ಸಂದಾಯ ಮಾಡತಕ್ಕದ್ದು.

(3) ಮೀಟರುಗಳ ಬಳಕೆ, ಅಂಥ ಬಳಕೆಗೆ ಸಂದಾಯ ಮಾಡಬೇಕಾದ ಬಾಡಿಗೆ, ಅವುಗಳ ನಿರ್ವಹಣೆ ಮತ್ತು ಪರೀಕ್ಷೆಗಳನ್ನು ಉಪವಿಧಿಗಳ ಮೂಲಕ ನಿಯಂತ್ರಿಸತಕ್ಕದ್ದು.

**207. ಮೀಟರುಗಳು ಸರಿಯಾಗಿರುವುದರ ಬಗ್ಗೆ ಪೂರ್ವಭಾವನೆ.–** ನಗರಪಾಲಿಕೆಯು ಮೀಟರಿನ ಮೂಲಕ ನೀರನ್ನು ಸರಬರಾಜು ಮಾಡಿದಾಗಲೆಲ್ಲಾ, ತದ್ವಿರುದ್ಧವಾದುದು ರುಜುವಾತು ಆಗುವವರೆಗೆ, ಮೀಟರು ಸೂಚಿಸುವ ಪರಿಮಾಣದಷ್ಟು ನೀರನ್ನು ಬಳಸಲಾಗಿದೆ ಎಂದು ಪೂರ್ವಭಾವನೆ ಮಾಡತಕ್ಕದ್ದು.

**208. ನೀರಿನ ಪೋಲು ಅಥವಾ ದುರ್ಬಳಕೆಯ ನಿಷೇಧ.–** (1) ಯಾರೇ ವ್ಯಕ್ತಿಯು, ತಾನು ನಿರ್ವಹಿಸಲು ಹೊಣೆಗಾರನಾಗಿರುವ ನೀರಿನ ಯಾವುದೇ ಜೋಡಣೆಯನ್ನು, ನಗರಪಾಲಿಕೆಯು ಅವನಿಗೆ ಸರಬರಾಜು ಮಾಡಿದ ನೀರು ಪೋಲಾಗುವ ಹಾಗೇ ಅಥವಾ ಪೋಲಾಗುವ ಸಂಭವವಿರುವ ಹಾಗೇ, ದುರ್ಬಳಕೆಯಾಗುವ ಹಾಗೇ ಅಥವಾ ಅನುಚಿತವಾಗಿ ಬಳಕೆಯಾಗುವ ಹಾಗೇ ಅಥವಾ ಬಳಸುವುದಕ್ಕೆ ಮುಂಚೆಯೇ ಮಲಿನವಾಗುವ ಹಾಗೇ ಅಥವಾ ಕೆಟ್ಟ ಗಾಳಿ ಅಥವಾ ಕಲುಷಿತ ವಸ್ತುವು ನಗರಪಾಲಿಕೆಗೆ ಸೇರಿದ ಯಾವುದೇ ಪೈಪಿನೊಳಗೆ ಅಥವಾ ನಗರಪಾಲಿಕೆಗೆ ಸೇರಿದ ಪೈಪಿಗೆ ಜೋಡಿಸಿದ ಯಾವುದೇ ಪೈಪಿನೊಳಗೆ ಮರಳಿ ಬರುವ ಸಂಭವವಿರುವ ಹಾಗೇ ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷ್ಯದಿಂದ,–

(ಎ) ಕೆಡಿಸುವಂತೆ ಅಥವಾ ಕೆಟ್ಟುಹೋಗಿರುವ ಸ್ಥಿತಿಯಲ್ಲೇ ಉಳಿಯುವಂತೆ ಅಥವಾ ದುರಸ್ತಿಯು ಅವಶ್ಯಕವಾಗುವಂತೆ; ಅಥವಾ

(ಬಿ) ರಚಿಸುವಂತೆ ಅಥವಾ ಅಳವಡಿಸುವಂತೆ ಅಥವಾ ರಚಿಸಿರುವುದನ್ನು ಅಥವಾ ಅಳವಡಿಸಿರುವುದನ್ನು ಹಾಗೆಯೇ ಬಿಡುವಂತೆ ಅಥವಾ ಹಾಗೆಯೇ ಬಳಸುವಂತೆ,

– ಮಾಡತಕ್ಕದ್ದಲ್ಲ ಅಥವಾ ಮಾಡಲು ಅವಕಾಶ ನೀಡತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು ನಿರ್ವಹಿಸಲು ಹೊಣೆಗಾರನಾಗಿರುವ ಯಾವುದೇ ನೀರಿನ ಜೋಡಣೆಯು ಮೇಲೆ ಹೇಳಿದ ಸ್ಥಿತಿಯಲ್ಲಿದ್ದರೆ ಅಥವಾ ಅದನ್ನು ಹಾಗೆ ನಿರ್ಮಿಸಲಾಗಿದ್ದರೆ ಅಥವಾ ಅಳವಡಿಸಲಾಗಿದ್ದರೆ ನಗರಪಾಲಿಕೆಯು, ಈ ಅಧಿನಿಯಮದ ಯಾವುದೇ ಇತರ ಉಪಬಂಧಗಳ ಮೇರೆಗೆ ಯಾವುದೇ ಕಾರ್ಯಕ್ಕೆ ಬಾಧಕವಾಗದಂತೆ, ಯಾವುದೇ ಅವಶ್ಯ ದುರಸ್ತಿಯನ್ನು ಅಥವಾ ಬದಲಾವಣೆಯನ್ನು ಮಾಡುವಂತೆ ಆ ವ್ಯಕ್ತಿಯನ್ನು ಅಗತ್ಯಪಡಿಸಬಹುದು ಮತ್ತು ನಲವತ್ತೆಂಟು ಗಂಟೆಗಳೊಳಗೆ ಅವನು ಹಾಗೆ ಮಾಡಲು ತಪ್ಪಿದರೆ, ಅದು ತಾನೇ ಆ ಕಾರ್ಯವನ್ನು ನಿರ್ವಹಿಸಬಹುದು ಮತ್ತು ಹಾಗೆ ಮಾಡುವುದಕ್ಕೆ ಅದು ಯುಕ್ತವಾಗಿ ವಹಿಸಿದ ವೆಚ್ಚವನ್ನು ಈ ಅಧ್ಯಾಯದ ಮೇರೆಗೆ ಸಂದಾಯ ಮಾಡಬೇಕಾದ ನೀರಿನ ದರದ ಬಾಕಿಯಂತೆ ಅವನಿಂದ ವಸೂಲಿ ಮಾಡಬಹುದು.

**209. ನೀರಿನ ಪೋಲನ್ನು ಅಥವಾ ದುರ್ಬಳಕೆಯನ್ನು ಪತ್ತೆ ಮಾಡುವುದಕ್ಕಾಗಿ ಆವರಣಗಳನ್ನು ಪ್ರವೇಶಿಸಲು ಅಧಿಕಾರ.**– ಆಯುಕ್ತರು ಅಥವಾ ನಗರಪಾಲಿಕೆಯು ಅಧಿಕೃತಗೊಳಿಸಿದ ಯಾರೇ ಅಧಿಕಾರಿಯು, ನಗರಪಾಲಿಕೆಯು ನೀರು ಸರಬರಾಜು ಮಾಡಿದ ಯಾವುದೇ ಆವರಣವನ್ನು, ಅಲ್ಲಿ ಅಂಥ ನೀರೇನಾದರೂ ಪೋಲಾಗುತ್ತಿದೆಯೇ ಅಥವಾ ದುರ್ಬಳಕೆಯಾಗುತ್ತಿದೆಯೇ ಎಂಬುದನ್ನು ಪರೀಕ್ಷಿಸುವ ಸಲುವಾಗಿ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ, ಯಾವುದೇ ಕಾಲದಲ್ಲಿ ಪ್ರವೇಶಿಸಬಹುದು ಮತ್ತು ಆಯುಕ್ತರಿಗೆ ಅಥವಾ ಅಂಥ ಅಧಿಕಾರಿಗೆ ಆವರಣಕ್ಕೆ ಪ್ರವೇಶಿಸಲು ನಿರಾಕರಿಸತಕ್ಕದ್ದಲ್ಲ ಇಲ್ಲವೇ ಅವರು ಪರೀಕ್ಷೆ ಮಾಡುವುದಕ್ಕೆ ಯಾರೇ ವ್ಯಕ್ತಿಯು ಅಡ್ಡಿಪಡಿಸತಕ್ಕದ್ದಲ್ಲ.

**210. ನೀರಿನ ಜೋಡಣೆಗಳನ್ನು ಪರೀಕ್ಷಿಸಲು ಅಧಿಕಾರ.**– ಆಯುಕ್ತರು ಅಥವಾ ಇತರ ಅಧಿಕಾರಿಯು ನಗರಪಾಲಿಕೆಯು ಸರಬರಾಜು ಮಾಡಿದ ನೀರಿಗೆ ಸಂಬಂಧಿಸಿದಂತೆ ಬಳಸಿರುವ ಯಾವುದೇ ನೀರಿನ ಜೋಡಣೆಯನ್ನು ಪರೀಕ್ಷಿಸಬಹುದು.

**211. ನೀರಿನ ಪೈಪುಗಳು ಮುಂತಾದವುಗಳನ್ನು ನೀರು ಕಲುಷಿತವಾಗುವ ಸ್ಥಳದಲ್ಲಿ ಹಾಕತಕ್ಕದ್ದಲ್ಲ.**– (1) ಯಾವುದೇ ನೀರಿನ ಪೈಪನ್ನು, ಚರಂಡಿಯಲ್ಲಿ ಅಥವಾ ತೆರೆದ ನಾಲೆಯ ಮೇಲ್ಭಾಗದಲ್ಲಿ ಅಥವಾ ಮನೆಯ ಗಲ್ಲಿಯಲ್ಲಿ ಅಥವಾ ರೊಚ್ಚುಗುಂಡಿಯಿಂದ ಆರು ಮೀಟರುಗಳ ಒಳಗೆ ಅಥವಾ ಪೈಪು ಹಾನಿಗೊಳಗಾಗಬಹುದಾದ ಅಥವಾ ಅದರಲ್ಲಿನ ನೀರು ಕಲುಷಿತವಾಗಬಹುದಾದ ಸಂಭವವಿರುವ ಸ್ಥಳದಲ್ಲಿ ಹಾಕತಕ್ಕದ್ದಲ್ಲ ಮತ್ತು ನಗರಪಾಲಿಕೆಯು ಅನುಮೋದನೆಯೊಂದಿಗೆ ಹೊರತು, ಕಕ್ಕಸು ಅಥವಾ ರೊಚ್ಚುಗುಂಡಿಯ ಆರು ಮೀಟರಿನ ಒಳಗೆ ತೊಟ್ಟಿಯನ್ನು ನಿರ್ಮಿಸತಕ್ಕದ್ದಲ್ಲ.

(2) ಯಾವುದೇ ಕಕ್ಕಸನ್ನು ಅಥವಾ ರೊಚ್ಚುಗುಂಡಿಯನ್ನು ಯಾವುದೇ ನೀರಿನ ಪೈಪಿನಿಂದ ಅಥವಾ ನೀರಿನ ತೊಟ್ಟಿಯಿಂದ ಆರು ಮೀಟರಿನ ಒಳಗೆ ಅಥವಾ ಪೈಪು ಅಥವಾ ನೀರಿನ ತೊಟ್ಟಿಯು ಹಾನಿಗೊಳಗಾಗಬಹುದಾದ ಅಥವಾ ಅದರಲ್ಲಿನ ನೀರು ಕಲುಷಿತವಾಗಬಹುದಾದ ಸಂಭವವಿರುವ ಯಾವುದೇ ಸ್ಥಾನದಲ್ಲಿ ನಿರ್ಮಿಸತಕ್ಕದ್ದಲ್ಲ ಅಥವಾ ರಚಿಸತಕ್ಕದ್ದಲ್ಲ.

**212. ನೀರು ಸರಬರಾಜನ್ನು ನಿಲ್ಲಿಸಲು ಅಧಿಕಾರ.**– (1) ಆಯುಕ್ತರು, ಯಾವುವೇ ಆವರಣಗಳಿಗೆ,–

(ಎ) ಆ ಆವರಣಗಳು ಅಧಿಭೋಗದಲ್ಲಿಲ್ಲದಿದ್ದರೆ;

(ಬಿ) ಮಾಲೀಕನು ಅಥವಾ ಅಧಿಭೋಗದಾರನು ನೀರು ಸರಬರಾಜಿಗೆ ಸಂಬಂಧಿಸಿದಂತೆ ಆಯುಕ್ತರು ಹೊರಡಿಸಿದ ಕಾನೂನುಬದ್ಧ ಆದೇಶವನ್ನು ಅಥವಾ ಕಡ್ಡಾಯ ಕೋರಿಕೆಯನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪಾಲಿಸಲು ನಿರ್ಲಕ್ಷಿಸಿದರೆ;

(ಸಿ) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನೀರಿನ ಬಾಬ್ತು ಅಥವಾ ನೀರು ಸರಬರಾಜು ಸಂಪರ್ಕ ಕಲ್ಪಸುವುದಕ್ಕಾಗಿಯ ಖರ್ಚಿನ ಬಾಬ್ತು ಬಾಕಿಯಿರುವ ಯಾವುದೇ ಚಾರ್ಜುಗಳನ್ನು ಅಥವಾ ಇತರ ಯಾವುದೇ ಮೊತ್ತವನ್ನು ಅಥವಾ ಮೀಟರಿನ ಬಾಡಿಗೆಯನ್ನು ಅಥವಾ ಯಾರೇ ವ್ಯಕ್ತಿಗೆ ವಿಧಿಸಬಹುದಾದ ನೀರು ಸರಬರಾಜಿಗೆ ಸಂಬಂಧಿಸಿದಂತೆ ಯಾವುದೇ ಕಾಮಗಾರಿಯನ್ನು ನಿರ್ವಹಿಸುವ ಅಥವಾ ಪರೀಕ್ಷಿಸುವ ಖರ್ಚನ್ನು, ಅಂಥ ಚಾರ್ಜುಗಳ ಅಥವಾ ಮೊತ್ತದ ಬಿಲ್ಲನ್ನು ನೀಡಿದ ಅಥವಾ ಜಾರಿಮಾಡಿದ ಹದಿನೈದು ದಿನಗಳೊಳಗೆ ಸಂದಾಯ ಮಾಡದಿದ್ದರೆ;

(ಡಿ) ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮವನ್ನು ಅಥವಾ ಉಪವಿಧಿಗಳನ್ನು ಉಲ್ಲಂಘಿಸಿ ನೀರನ್ನು ಬಳಸಬಾರದೆಂದು ಅಥವಾ ನೀರನ್ನು ಬಳಸಲು ಅನುಮತಿ ನೀಡಬಾರದೆಂದು ಅಗತ್ಯಪಡಿಸಿ ಆಯುಕ್ತರು ನೀಡಿದ ನೋಟೀಸನ್ನು ಸ್ವೀಕರಿಸಿದ ತರುವಾಯವೂ ಮಾಲೀಕನು ಅಥವಾ ಅಧಿಭೋಗದಾರನು ಹಾಗೆ ಮಾಡುವುದನ್ನು ಮುಂದುವರೆಸಿದರೆ;

(ಇ) ಮಾಲೀಕನು ಅಥವಾ ಅಧಿಭೋಗದಾರನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷ್ಯದಿಂದ ಅವನ ಮೀಟರಿಗೆ ಅಥವಾ ನೀರನ್ನು ಒದಗಿಸುವ ಯಾವುದೇ ಪೈಪಿಗೆ ಅಥವಾ ನಲ್ಲಿಗೆ ಹಾನಿಯುಂಟು ಮಾಡಿದರೆ;

(ಎಫ್) ಮಾಲೀಕನು ಅಥವಾ ಅಧಿಭೋಗದಾರನು, ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವ ಅಥವಾ ಯಾವುದೇ ಸಾಧನ–ಸಲಕರಣೆಯನ್ನು ಅಳವಡಿಸುವ ಅಥವಾ ತೆಗೆದುಹಾಕುವ ಅಥವಾ ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಪರೀಕ್ಷೆಯನ್ನು ಅಥವಾ ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ ಆಯುಕ್ತರು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು ಯಾವ ಆವರಣದೊಳಕ್ಕೆ ಪ್ರವೇಶಿಸಲು ಉದ್ದೇಶಿಸುತ್ತಾರೋ ಆ ಆವರಣದೊಳಕ್ಕೆ ಅವರಿಗೆ ಪ್ರವೇಶ ನೀಡಲು ನಿರಾಕರಿಸಿದರೆ, ಅಥವಾ ಆಯುಕ್ತರು ಅಥವಾ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಅಂಥ ಸಾಧನ ಸಲಕರಣೆಯನ್ನು ಅಳವಡಿಸಲು ಅಥವಾ ತೆಗೆದುಹಾಕಲು ಅಥವಾ ಅಂಥ ಪರೀಕ್ಷೆಯನ್ನು ಅಥವಾ ವಿಚಾರಣೆಯನ್ನು ನಡೆಸಲು ಅಡ್ಡಿ ಪಡಿಸಿದರೆ;

(ಜಿ) ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಪೈಪುಗಳು, ನಲ್ಲಿಗಳು, ಕಾರ್ಯೋಪಕರಣಗಳು ಅಥವಾ ಜೋಡಣೆಗಳು ನೀರಿನ ಪೋಲಿಗೆ ಅಥವಾ ಮಲಿನತೆಗೆ ಕಾರಣವಾಗುವಷ್ಟರಮಟ್ಟಿಗೆ ದುರಸ್ತಿಮಾಡಲಾಗದಷ್ಟು ಹಾಳಾಗಿವೆಯೆಂದು ಅವುಗಳ ಪರೀಕ್ಷೆಯ ನಂತರ ಆಯುಕ್ತರಿಗೆ ಅಥವಾ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಗೆ ಕಂಡುಬಂದರೆ;

(ಹೆಚ್) ಮಾಲೀಕನು ಅಥವಾ ಅಧಿಭೋಗದಾರನು, ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳನ್ನು ಅಥವಾ ಉಪವಿಧಿಗಳನ್ನು ಉಲ್ಲಂಘಿಸಿ ನಗರಪಾಲಿಕೆಯು ನೀರು ಸರಬರಾಜಿಗೆ ಸಂಬಂಧಿಸಿದ ಪೈಪುಗಳನ್ನು, ನಲ್ಲಿಗಳನ್ನು, ಕಾರ್ಯೋಪಕರಣಗಳನ್ನು, ಅಥವಾ ಜೋಡಣೆಗಳನ್ನು ಹಾಕಿಸಿದರೆ, ತೆಗೆದು ಹಾಕಿಸಿದರೆ, ದುರಸ್ತಿ ಮಾಡಿಸಿದರೆ, ಅಥವಾ ಅವುಗಳ ಬಗ್ಗೆ ಅನ್ಯಥಾ ಹಸ್ತಕ್ಷೇಪ ಮಾಡಿದರೆ;

– ನೀರು ಸರಬರಾಜನ್ನು ನಿಲ್ಲಿಸಬಹುದು:

ಪರಂತು, ಆಯುಕ್ತರು, ಆವರಣಗಳ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಮೂರು ದಿನಗಳಿಗೆ ಕಡಿಮೆಯಿಲ್ಲದ ನೋಟೀಸನ್ನು ನೀಡಿದ ಹೊರತು ನೀರು ಸರಬರಾಜನ್ನು ನಿಲ್ಲಿಸತಕ್ಕದ್ದಲ್ಲ.

(2) (ಎ) (1)ನೇ ಉಪಪ್ರಕರಣದ (ಸಿ) ಖಂಡದಲ್ಲಿ ಉಲ್ಲೇಖಿಸಿದ ಎಲ್ಲ ಮೊತ್ತಗಳನ್ನು ಸಂದಾಯ ಮಾಡುವುದಕ್ಕೆ ಆವರಣಗಳ ಮಾಲೀಕನು ಮತ್ತು ಅಧಿಭೋಗದಾರನು, ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಹೊಣೆಯಾಗಿರತಕ್ಕದ್ದು.

(ಬಿ) ಖಂಡ (ಎ) ಯಲ್ಲಿ ಉಲ್ಲೇಖಿಸಿದ ಮೊತ್ತಗಳು ಆವರಣಗಳ ಮೇಲೆ ಋಣಭಾರವಾಗಿರತಕ್ಕದ್ದು.

(3) ನೀರು ಸರಬರಾಜನ್ನು ನಿಲ್ಲಿಸಲು ಆದ ವೆಚ್ಚವನ್ನು ಆವರಣಗಳ ಮಾಲೀಕನು ಮತ್ತು ಅಧಿಭೋಗದಾರನು ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಸಂದಾಯ ಮಾಡತಕ್ಕದ್ದು.

(4) (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ನೀರು ಸರಬರಾಜನ್ನು ಯಾವ ಆವರಣಗಳಿಗೆ ನಿಲ್ಲಿಸಲಾಗಿದೆಯೋ ಆ ಯಾವುದೇ ಆವರಣಗಳಿಗೆ ಸಂಬಂಧಿಸಿದಂತೆ, ಯಾವ ಹಣವನ್ನು ಸಂದಾಯ ಮಾಡದಿರುವುದಕ್ಕೆ ನೀರು ಸರಬರಾಜನ್ನು ನಿಲ್ಲಿಸಲಾಗಿದೆಯೋ ಆ ಹಣವನ್ನು, ನೀರು ಸರಬರಾಜನ್ನು ನಿಲ್ಲಿಸಿದ್ದಕ್ಕೆ ಆದ ವೆಚ್ಚಗಳೊಂದಿಗೆ ಮಾಲೀಕನು ಅಥವಾ ಅಧಿಭೋಗದಾರನು ಸಂದಾಯ ಮಾಡಿದ ಮೇಲೆ, ಆದಷ್ಟು ಬೇಗನೆ, ಆಯುಕ್ತರು, ಆವರಣಗಳಿಗೆ ನೀರು ಸರಬರಾಜು ಕೊಳವೆ ಮಾರ್ಗದೊಂದಿಗೆ ಮರು ಸಂಪರ್ಕ ಕಲ್ಪಿಸಲು ಆದ ವೆಚ್ಚವನ್ನು ಸಂದಾಯ ಮಾಡಿದ ನಂತರ ಮೊದಲಿನಂತೆಯೇ ನೀರು ಸರಬರಾಜಾಗುವಂತೆ ಮಾಡತಕ್ಕದ್ದು.

(5) ಈ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯ ವಿರುದ್ಧ ಕೈಗೊಂಡ ಕ್ರಮವು ಅವನು ಯಾವ ದಂಡನೆಗಳಿಗೆ ಅನ್ಯಥಾ ಹೊಣೆಯಾಗಬಹುದೋ ಆ ಯಾವುದೇ ದಂಡನೆಗಳಿಗೆ ಪ್ರತಿಕೂಲವಾಗಿರತಕ್ಕದ್ದಲ್ಲ.

**213. ನೀರು ಸರಬರಾಜಿಗೆ ಸಂಬಂಧಿಸಿದ ಅಪರಾಧಕ್ಕಾಗಿ ಮಾಲೀಕರ ಮತ್ತು ಅಧಿಭೋಗದಾರರ ಜಂಟಿ ಮತ್ತು ಪ್ರತ್ಯೇಕ ಹೊಣೆಗಾರಿಕೆ.–** ನಗರಪಾಲಿಕೆಯ ನೀರು ಸರಬರಾಜು ಕೊಳವೆ ಮಾರ್ಗದೊಂದಿಗೆ ಸಂಪರ್ಕ ಕಲ್ಪಿಸಿರುವ ಯಾವುದೇ ಆವರಣಗಳಲ್ಲಿ ನೀರು ಸರಬರಾಜಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಯಾವುದೇ ಅಪರಾಧವನ್ನು ಮಾಡಿದರೆ, ನೀರು ದರವನ್ನು ಸಂದಾಯ ಮಾಡಲು ಮೂಲತಃ ಹೊಣೆಗಾರನಾದ ವ್ಯಕ್ತಿಯಾದ ಮಾಲೀಕನು ಮತ್ತು ಸದರಿ ಆವರಣಗಳ ಅಧಿಭೋಗದಾರನು ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಅಂಥ ಅಪರಾಧಕ್ಕೆ ಹೊಣೆಯಾಗತಕ್ಕದ್ದು.

**214. ಕೆಲವು ಸಂದರ್ಭಗಳಲ್ಲಿ ನೀರು ಸರಬರಾಜನ್ನು ಕಡಿಮೆಮಾಡಿದಾಗ ಅಥವಾ ನೀರು ಸರಬರಾಜನ್ನು ಮಾಡದಿರುವಾಗ ನಗರಪಾಲಿಕೆಯು ಹೊಣೆಯಾಗದಿರುವುದು.–** ಅಸಾಮಾನ್ಯ ಅನಾವೃಷ್ಟಿಯ, ಇತರ ಅನಿವಾರ್ಯ ಕಾರಣದ ಅಥವಾ ಆಕಸ್ಮಿಕ ಘಟನೆಯ ಅಥವಾ ಪೈಪುಗಳನ್ನು ಮತ್ತೆ ಹಾಕುವ ಅಥವಾ ದುರಸ್ತಿಗೊಳಿಸುವ ಅವಶ್ಯಕತೆಯ ಸಂದರ್ಭದಲ್ಲಿ ನೀರು ಸರಬರಾಜನ್ನು ನಿಲ್ಲಿಸಿದ್ದಕ್ಕೆ ಅಥವಾ ನೀರು ಸರಬರಾಜನ್ನು ಮಾಡದಿರುವುದಕ್ಕೆ ನಗರಪಾಲಿಕೆಯು ಯಾವುದೇ ದಂಡನೆಗೆ ಅಥವಾ ಹಾನಿ ಪರಿಹಾರಕ್ಕೆ ಗುರಿಯಾಗತಕ್ಕದ್ದಲ್ಲ.

**215. ಕೊಳವೆಗಳು, ಕೊಳವೆ ಮಾರ್ಗಗಳು, ಇತ್ಯಾದಿಗಳ ಬಳಕೆಯ ಹಕ್ಕು.–** (1) ನಗರಪಾಲಿಕೆಯು ಯಾವುದೇ ಸ್ಥಿರಸ್ವತ್ತನ್ನು ಆರ್ಜನೆ ಮಾಡದೆಯೇ ನಗರದ ಸ್ಥಳೀಯ ಎಲ್ಲೆಗಳ ಒಳಗಾಗಲಿ, ಅಥವಾ ಹೊರಗಾಗಲಿ ಇರುವ ಯಾವುದೇ ಸ್ಥಿರಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಕೊಳವೆಗಳನ್ನು ಮತ್ತು ಪ್ರಧಾನ ಕೊಳವೆಯ ಮಾರ್ಗಗಳನ್ನು ಅಥವಾ ಪೈಪುಗಳನ್ನು ಹಾಕಬಹುದು ಮತ್ತು ನಿರ್ವಹಿಸಬಹುದು ಮತ್ತು ಯಾವುದೇ ಕೊಳವೆಗಳನ್ನು ಅಥವಾ ಪ್ರಧಾನ ಕೊಳವೆ ಮಾರ್ಗಗಳನ್ನು ಅಥವಾ ಪೈಪುಗಳನ್ನು ಪರೀಕ್ಷಿಸುವ, ದುರಸ್ತಿ ಮಾಡುವ, ಬದಲಾಯಿಸುವ ಅಥವಾ ತೆಗೆದುಹಾಕುವ ಉದ್ದೇಶಕ್ಕಾಗಿ ಯಾವುದೇ ಕಾಲದಲ್ಲಿ, ಕೊಳವೆಗಳನ್ನು ಅಥವಾ ಪ್ರಧಾನ ಕೊಳವೆ ಮಾರ್ಗಗಳನ್ನು ಅಥವಾ ಪೈಪುಗಳನ್ನು ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನ ಮೇಲೆ ಪ್ರವೇಶಿಸಬಹುದು:

ಪರಂತು, ನಗರಪಾಲಿಕೆಯು ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಕೊಳವೆಯನ್ನು ಅಥವಾ ಪ್ರಧಾನ ಕೊಳವೆ ಮಾರ್ಗಗಳನ್ನು ಅಥವಾ ಪೈಪುಗಳನ್ನು ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನಲ್ಲಿ ಬಳಕೆಯ ಹಕ್ಕನ್ನಲ್ಲದೆ ಯಾವುದೇ ಹಕ್ಕನ್ನು ಆರ್ಜಿಸತಕ್ಕದ್ದಲ್ಲ.

(2) ಈ ಪ್ರಕರಣದ ಮೂಲಕ ತನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುವಾಗ, ನಗರಪಾಲಿಕೆಯು ಹೆಚ್ಚು ಹಾನಿ ಆಗದಂತೆ ಮತ್ತು ಹೆಚ್ಚು ಅನಾನುಕೂಲ ಆಗದಂತೆ ಮಾಡಿಕೊಳ್ಳತಕ್ಕದ್ದು, ಮತ್ತು ತನ್ನಿಂದಾದ ಯಾವುದೇ ಹಾನಿಗೆ ಅಥವಾ ಅನಾನುಕೂಲಕ್ಕೆ ಸಂಪೂರ್ಣ ನಷ್ಟಪರಿಹಾರವನ್ನು ನೀಡತಕ್ಕದ್ದು.

**216. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಪೈಪುಗಳನ್ನು ಹಾಕಲು ಆವರಣದ ಮಾಲೀಕನ ಅಧಿಕಾರ.–** (1) ಇತರ ವ್ಯಕ್ತಿಯ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಪೈಪನ್ನು ಹಾಕುವ ಅಥವಾ ಹಾಯಿಸುವ ಮೂಲಕ ಯಾವುದೇ ಆವರಣಕ್ಕೆ ನೀರು ಸರಬರಾಜು ಮಾಡುವುದು ಏಕೈಕ ಅಥವಾ ಅತ್ಯಂತ ಹೆಚ್ಚು ಅನುಕೂಲಕರ ಮಾರ್ಗವೆಂದು ನಗರಪಾಲಿಕೆಗೆ ಕಂಡುಬಂದರೆ, ಅದು ಲಿಖಿತ ಆದೇಶದ ಮೂಲಕ, ಆವರಣದ ಮಾಲೀಕನಿಗೆ, ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಅಂಥ ಪೈಪನ್ನು ಹಾಕಲು ಅಥವಾ ಹಾಯಿಸಲು ಅಧಿಕಾರ ನೀಡಬಹುದು:

ಪರಂತು, ಯಾವುದೇ ಅಂಥ ಆದೇಶವನ್ನು ಮಾಡುವ ಮೊದಲು, ನಗರಪಾಲಿಕೆಯು, ಸ್ಥಿರ ಸ್ವತ್ತಿನ ಮಾಲೀಕನಿಗೆ ಆದೇಶವನ್ನು ಏಕೆ ಮಾಡಬಾರದು ಎಂಬುದಕ್ಕೆ ಈ ಬಗ್ಗೆ ರಚಿಸಿದ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಕಾರಣ ತೋರಿಸಲು ಸೂಕ್ತ ಅವಕಾಶವನ್ನು ಕೊಡತಕ್ಕದ್ದು:

ಮತ್ತೂ ಪರಂತು, ಆವರಣದ ಮಾಲೀಕನು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಅಂಥ ಪೈಪನ್ನು ಹಾಕಲಾಗಿದೆಯೋ, ಅಥವಾ ಹಾಯಿಸಲಾಗಿದೆಯೋ ಆ ಸ್ವತ್ತಿನಲ್ಲಿ ಬಳಕೆಯ ಹಕ್ಕನ್ನಲ್ಲದೆ ಯಾವುದೇ ಹಕ್ಕನ್ನು ಆರ್ಜಿಸತಕ್ಕದ್ದಲ್ಲ.

(2) ಉಪ-ಪ್ರಕರಣ (1)ರ ಮೇರೆಗೆ ಆದೇಶವನ್ನು ಮಾಡಿದ ನಂತರ, ಆವರಣದ ಮಾಲೀಕನು ಅಂಥ ಸ್ಥಿರಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಪೈಪನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಅದನ್ನು ದುರಸ್ತಿ ಮಾಡುವ ಉದ್ದೇಶಕ್ಕಾಗಿ, ಆ ಸ್ಥಿರ ಸ್ವತ್ತಿನ ಮೇಲೆ, ಸಹಾಯಕರು ಮತ್ತು ಕೆಲಸಗಾರರೊಂದಿಗೆ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ ಯಾವುದೇ ಕಾಲದಲ್ಲಿ ಪ್ರವೇಶಿಸುವ ತನ್ನ ಆಶಯವನ್ನು ತಿಳಿಸಿ ಯುಕ್ತ ನೋಟೀಸನ್ನು ಕೊಟ್ಟ ತರುವಾಯ ಹಾಗೆ ಪ್ರವೇಶಿಸಬಹುದು.

(3) ಈ ಪ್ರಕರಣದ ಮೇರೆಗೆ ಪೈಪನ್ನು ಹಾಕುವಾಗ ಅಥವಾ ಹಾಯಿಸುವಾಗ ಸ್ಥಿರ ಸ್ವತ್ತಿಗೆ ಹೆಚ್ಚು ಹಾನಿಯಾಗದಂತೆ ನೋಡಿಕೊಳ್ಳತಕ್ಕದ್ದು ಮತ್ತು ಆವರಣದ ಮಾಲಿಕನು,-

(ಎ) ಹೆಚ್ಚು ವಿಳಂಬ ಮಾಡದೆ ಪೈಪನ್ನು ಹಾಕುವಂತೆ ಅಥವಾ ಹಾಯಿಸುವಂತೆ ಮಾಡತಕ್ಕದ್ದು;

(ಬಿ) ಅಂಥ ಕೊಳವೆಯನ್ನು ಹಾಕುವ ಅಥವಾ ಹಾಯಿಸುವ ಉದ್ದೇಶಕ್ಕಾಗಿ ತೆರೆದ, ಅಗೆದ ಯಾವುದೇ ಭೂಮಿಯನ್ನು ಅಥವಾ ತೆಗೆದುಹಾಕಿದ ಯಾವುದೇ ಮಣ್ಣನ್ನು ಹೆಚ್ಚು ವಿಳಂಬ ಮಾಡದೆ ತನ್ನ ಸ್ವಂತ ಖರ್ಚಿನಲ್ಲಿ ಮುಚ್ಚತಕ್ಕದ್ದು, ಪೂರ್ವಸ್ಥಿತಿಗೆ ತರತಕ್ಕದ್ದು ಮತ್ತು ಭರ್ತಿ ಮಾಡತಕ್ಕದ್ದು;

(ಸಿ) ಅಂಥ ಪೈಪನ್ನು ಹಾಕುವ ಅಥವಾ ಹಾಯಿಸುವ ಕಾರಣದಿಂದ ಹಾನಿಗೊಳಗಾದ ಸ್ಥಿರ ಸ್ವತ್ತಿನ ಮಾಲೀಕನಿಗೆ ಮತ್ತು ಇತರ ಯಾರೇ ವ್ಯಕ್ತಿಗೆ ಉಂಟಾದ ಹಾನಿಗೆ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(4) ಈ ಪ್ರಕರಣದ ಮೇರೆಗೆ ಯಾವ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಪೈಪನ್ನು ಹಾಕಲಾಗಿದೆಯೋ ಅಥವಾ ಹಾಯಿಸಲಾಗಿದೆಯೋ ಅಂಥ ಸ್ಥಿರ ಸ್ವತ್ತಿನ ಮಾಲೀಕನು ಆ ಸ್ಥಿರ ಸ್ವತ್ತಿನ ಮೇಲೆ ಏನನ್ನೂ ಕಟ್ಟಿಲ್ಲದಿದ್ದರೆ, ಅದರ ಮೇಲೆ ಯಾವುದೇ ಕಟ್ಟಡವನ್ನು ನಿರ್ಮಿಸಲು ಇಚ್ಛಿಸಿದರೆ, ನಗರಪಾಲಿಕೆಯು ಆ ಮಾಲೀಕನು ಅನುಮೋದಿಸತಕ್ಕಂಥ ರೀತಿಯಲ್ಲಿ ಪೈಪನ್ನು ಮುಚ್ಚಲು, ತೆಗೆದುಹಾಕಲು ಅಥವಾ ಪೈಪಿನ ಮಾರ್ಗವನ್ನು ಬದಲಾಯಿಸಲು ಮತ್ತು ಪೈಪನ್ನು ಆ ಸ್ವತ್ತಿನ ಮೇಲೆ, ಕೆಳಗೆ ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಹಾಕಿರದಿದ್ದರೆ ಅಥವಾ ಹಾಯಿಸಿರದಿದ್ದರೆ ಆ ಸ್ವತ್ತು ಹೇಗಿರುತ್ತಿತ್ತೋ ಹಾಗೆ ಆ ಸ್ಥಿರ ಸ್ವತ್ತನ್ನು ಮುಚ್ಚಲು, ಪೂರ್ವಸ್ಥಿತಿಗೆ ತರಲು ಮತ್ತು ಭರ್ತಿಮಾಡಲು ಲಿಖಿತ ನೋಟೀಸಿನ ಮೂಲಕ ಆವರಣದ ಮಾಲೀಕನನ್ನು ಅಗತ್ಯಪಡಿಸತಕ್ಕದ್ದು:

ಪರಂತು, ಉದ್ದೇಶಿತ ಕಟ್ಟಡವನ್ನು ಕಟ್ಟುವುದಕ್ಕಾಗಿ ಅಥವಾ ಅದರ ಸುರಕ್ಷಿತ ಅನುಭೋಗಕ್ಕಾಗಿ ಪೈಪನ್ನು ಮುಚ್ಚುವುದು, ತೆಗೆದುಹಾಕುವುದು ಅಥವಾ ಅದರ ಮಾರ್ಗವನ್ನು ಬದಲಾಯಿಸುವುದು ಅವಶ್ಯವೆಂದು ಅಥವಾ ವಿಹಿತವೆಂದು ನಗರಪಾಲಿಕೆಯು ಅಭಿಪ್ರಾಯಪಟ್ಟ ಹೊರತು, ಹಾಗೆ ಅಗತ್ಯಪಡಿಸತಕ್ಕದ್ದಲ್ಲ.

**217. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಧಿಕಾರ.-** (1) ಈ ಅಧ್ಯಾಯದ ಉಪಬಂಧಗಳ ಮೇರೆಗೆ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಯಾರೇ ವ್ಯಕ್ತಿಯನ್ನು ಅಗತ್ಯಪಡಿಸಬಹುದಾದಾಗ ಅಥವಾ ಅವನು ಹೊಣೆಗಾರನಾದಾಗ ನಗರಪಾಲಿಕೆಯು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಈ ಬಗ್ಗೆ ರಚಿಸಿದ ಯಾವುದೇ ಉಪವಿಧಿಗಳಿಗೆ ಅನುಸಾರವಾಗಿ, ಈ ಉದ್ದೇಶಕ್ಕಾಗಿ ಅದು ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಆ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಂಥ ವ್ಯಕ್ತಿಗೆ ಅವಕಾಶವನ್ನು ನೀಡಿದ ತರುವಾಯ ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವಂತೆ ಮಾಡತಕ್ಕದ್ದು.

(2) ಅಂಥ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ನಗರಪಾಲಿಕೆಯು ವಹಿಸಿದ ಅಥವಾ ವಹಿಸುವ ಸಂಭವವಿರುವ ವೆಚ್ಚಗಳನ್ನು ಸದರಿ ವ್ಯಕ್ತಿಯು ಸಂದಾಯಮಾಡತಕ್ಕದ್ದು ಮತ್ತು ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಯು ವಹಿಸಿದ ವೆಚ್ಚಗಳನ್ನು, ಅಂಥ ಕಾಮಗಾರಿಯಿಂದ ದೊರೆಯುವಂಥ ಸೌಕರ್ಯಗಳನ್ನು ಮತ್ತು ಅನುಕೂಲತೆಗಳನ್ನು ಅನುಭೋಗಿಸುತ್ತಿರುವ ವ್ಯಕ್ತಿ ಅಥವಾ ವ್ಯಕ್ತಿಗಳು ಸಂದಾಯ ಮಾಡತಕ್ಕದ್ದು.

(3) ಉಪಪ್ರಕರಣ (2)ರಲ್ಲಿ ಉಲ್ಲೇಖಿಸಿದ ವೆಚ್ಚಗಳು ಅವುಗಳಿಗೆ ಹೊಣೆಗಾರನಾದ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳಿಂದ ಈ ಅಧ್ಯಾಯದ ಮೇರೆಗೆ ಸಂದಾಯ ಮಾಡಬೇಕಾದ ನೀರಿನ ದರಗಳ ಬಾಕಿಯಂತೆ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು.

**218. ನೀರು ಸರಬರಾಜಿಗೆ ಸಂಬಂಧಿಸಿದ ಕಾಮಗಾರಿಯನ್ನು ಲೈಸೆನ್ಸ್ ಪಡೆದ ಕೊಳಾಯಿಗಾರನು ಮಾಡತಕ್ಕದ್ದು.-** (1) ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾರೇ ಇತರ ವ್ಯಕ್ತಿಯು, ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸತಕ್ಕದ್ದಲ್ಲ ಮತ್ತು ಯಾರೇ ವ್ಯಕ್ತಿಯು, ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಅಂಥ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅನುಮತಿಸತಕ್ಕದ್ದಲ್ಲ:

ಪರಂತು, ಆ ಕಾಮಗಾರಿಯು ಸಣ್ಣಮಟ್ಟ ಸ್ವರೂಪದ್ದಾಗಿದೆ ಎಂದು ಆಯುಕ್ತರು ಅಭಿಪ್ರಾಯಪಟ್ಟರೆ ಅವರು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಇತರ ವ್ಯಕ್ತಿಗೆ ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಲಿಖಿತದಲ್ಲಿ ಅನುಮತಿಯನ್ನು ನೀಡಬಹುದು.

(2) ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ನಿಯೋಜಿಸಿಕೊಳ್ಳುವ ಪ್ರತಿಯೊಬ್ಬ ವ್ಯಕ್ತಿಯು, ಅಂಥ ಕೊಳಾಯಿಗಾರನ ಹೆಸರನ್ನು ತಿಳಿಸುವಂತೆ ಆಯುಕ್ತರು ಅವನನ್ನು ಅಗತ್ಯಪಡಿಸಿದಾಗ ಅವರಿಗೆ ಆ ಕೊಳಾಯಿಗಾರನ ಹೆಸರನ್ನು ತಿಳಿಸತಕ್ಕದ್ದು.

(3) (1)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಹೊರತು ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಿದಾಗ, ಅಂಥ ಕಾಮಗಾರಿಯನ್ನು ಯಾವ ವ್ಯಕ್ತಿಯ ಸೂಚನೆಯಂತೆ ಕಾರ್ಯಗತಗೊಳಿಸಲಾಗಿದೆಯೋ ಆ ವ್ಯಕ್ತಿಯನ್ನು ಈ ಅಧಿನಿಯಮದ ಮೇರೆಗೆ ಪ್ರಾಸಿಕ್ಯೂಟ್ ಮಾಡಲು ನಗರಪಾಲಿಕೆಗೆ ಇರುವ ಹಕ್ಕಿಗೆ ಬಾಧಕವಾಗದಂತೆ ನಗರಪಾಲಿಕೆಯ ವಿವೇಚನಾನುಸಾರ ಅಂಥ ಕಾಮಗಾರಿಯು ತೆಗೆದುಹಾಕುವುದಕ್ಕೆ ಗುರಿಯಾಗತಕ್ಕದ್ದು.

(4) ನಗರಪಾಲಿಕೆಯು ಲೈಸೆನ್ಸ್ ಪಡೆದ ಕೊಳಾಯಿಗಾರನ ಮಾರ್ಗದರ್ಶನಕ್ಕಾಗಿ ಉಪವಿಧಿಗಳನ್ನು ರಚಿಸಬಹುದು ಮತ್ತು ಎಲ್ಲಾ ಅಂಥ ಉಪವಿಧಿಗಳ ಪ್ರತಿಯನ್ನು, ನಗರಪಾಲಿಕೆಯು ಕೊಳಾಯಿಗಾರರಿಗೆ ಮಂಜೂರು ಮಾಡಿದ ಪ್ರತಿಯೊಂದು ಲೈಸೆನ್ಸಿಗೆ ಲಗತ್ತಿಸತಕ್ಕದ್ದು.

(5) ನಗರಪಾಲಿಕೆಯು, ಈ ಅಧ್ಯಾಯದ ಯಾವುದೇ ಉದ್ದೇಶಕ್ಕಾಗಿ ಅಥವಾ ಅದರ ಮೇರೆಗೆ ಲೈಸೆನ್ಸ್ ಪಡೆದ ಕೊಳಾಯಿಗಾರನು ಮಾಡಿದ ಯಾವುದೇ ಕಾಮಗಾರಿಗೆ ಸಂದಾಯ ಮಾಡಬೇಕಾದ ಚಾರ್ಜುಗಳನ್ನು ನಿಯಮಿಸಬಹುದು.

(6) ಯಾರೇ ಲೈಸೆನ್ಸ್ ಪಡೆದ ಕೊಳಾಯಿಗಾರನು, (5)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಕಾಮಗಾರಿಗಾಗಿ ಅದೇ ಉಪಪ್ರಕರಣದ ಮೇರೆಗೆ ಅದಕ್ಕೆ ನಿಯಮಿಸಲಾದುದಕ್ಕಿಂತ ಹೆಚ್ಚಿನ ಚಾರ್ಜನ್ನು ತಗಾದೆ ಮಾಡತಕ್ಕದ್ದಲ್ಲ ಅಥವಾ ಪಡೆಯತಕ್ಕದ್ದಲ್ಲ.

(7) ನಗರಪಾಲಿಕೆಯು,–

(ಎ) ಲೈಸೆನ್ಸ್‌ಪಡೆದ ಎಲ್ಲ ಕೊಳಾಯಿಗಾರರ ಮೇಲೆ ಸಾಕಷ್ಟು ನಿಯಂತ್ರಣವನ್ನು ಚಲಾಯಿಸುವುದಕ್ಕಾಗಿ;

(ಬಿ) ಅವರು ಕಾರ್ಯಗತಗೊಳಿಸಿದ ಎಲ್ಲಾ ಕಾಮಗಾರಿಗಳ ಪರಿಶೀಲನೆಗಾಗಿ; ಮತ್ತು

(ಸಿ) ಆವರಣಗಳ ಮಾಲೀಕರು ಅಥವಾ ಅಧಿಭೋಗದಾರರು, ಮಾಡಿದ ಕಾಮಗಾರಿಯ ಗುಣಮಟ್ಟ ಬಳಸಿದ ಸಾಮಗ್ರಿಯ ಗುಣಮಟ್ಟ, ಕಾಮಗಾರಿಯ ನಿರ್ವಹಣೆಯಲ್ಲಿ ವಿಳಂಬ ಮತ್ತು ಲೈಸೆನ್ಸ್ ಪಡೆದ ಕೊಳಾಯಿಗಾರರು ಮಾಡಿದ ಚಾರ್ಜು ಇವುಗಳಿಗೆ ಸಂಬಂಧಿಸಿದಂತೆ ನೀಡಿದ ದೂರುಗಳ ವಿಚಾರಣೆ ಮತ್ತು ವಿಲೆಗಾಗಿ

– ಉಪಬಂಧಿಸುವ ಉಪವಿಧಿಗಳನ್ನು ರಚಿಸತಕ್ಕದ್ದು.

(8) ಯಾರೇ ಲೈಸೆನ್ಸ್ ಪಡೆದ ಕೊಳಾಯಿಗಾರನು, ಈ ಬಗ್ಗೆ ರಚಿಸಿದ ಯಾವುವೇ ಉಪವಿಧಿಗಳನ್ನು ಉಲ್ಲಂಘಿಸತಕ್ಕದ್ದಲ್ಲ ಅಥವಾ ಈ ಅಧಿನಿಯಮದ ಮೇರೆಗೆ ಯಾವುದೇ ಕಾಮಗಾರಿಯನ್ನು ಅಜಾಗರೂಕತೆಯಿಂದ ಅಥವಾ ನಿರ್ಲಕ್ಷ್ಯದಿಂದ ಕಾರ್ಯಗತಗೊಳಿಸತಕ್ಕದ್ದಲ್ಲ ಅಥವಾ ಕಳಪೆ ಸಾಮಗ್ರಿಗಳನ್ನು, ಉಪಕರಣಗಳನ್ನು ಅಥವಾ ಜೋಡಣೆಗಳನ್ನು ಬಳಸತಕ್ಕದ್ದಲ್ಲ.

(9) ಯಾರೇ ಲೈಸೆನ್ಸ್ ಪಡೆದ ಕೊಳಾಯಿಗಾರನು (8)ನೇ ಉಪಪ್ರಕರಣವನ್ನು ಉಲ್ಲಂಘಿಸಿದರೆ, ಅವನನ್ನು ಈ ಅಧಿನಿಯಮದ ಮೇರೆಗೆ ಪ್ರಾಸಿಕ್ಯೂಟ್ ಮಾಡಿರಲಿ ಅಥವಾ ಮಾಡಿಲ್ಲದಿರಲಿ ಅವನ ಲೈಸೆನ್ಸನ್ನು ಅಮಾನತಿನಲ್ಲಿಡಬಹುದು ಅಥವಾ ರದ್ದುಪಡಿಸಬಹುದು.

**219. ನೀರು ಸರಬರಾಜಿಗೆ ಸಂಬಂಧಿಸಿದಂತೆ ಕೆಲವು ಕಾರ್ಯಗಳ ನಿಷೇಧ.**– (1) ಯಾರೇ ವ್ಯಕ್ತಿಯು,–

(ಎ) ನಗರಪಾಲಿಕೆಯ ಪ್ರಾಧಿಕಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯನ್ನು, ಅಂಥ ನೀರು ಸರಬರಾಜು ಕೊಳವೆಮಾರ್ಗಗಳನ್ನು ಹಾಕುವಾಗ ಉದ್ದೇಶಪೂರ್ವಕವಾಗಿ ಅಡ್ಡಿಪಡಿಸತಕ್ಕದ್ದಲ್ಲ ಅಥವಾ ಅಂಥ ನೀರು ಸರಬರಾಜು ಕೊಳವೆ ಮಾರ್ಗಗಳನ್ನು ಹಾಕುವ ಉದ್ದೇಶಕ್ಕಾಗಿ ಭೂಮಿಯಲ್ಲಿ ನೆಟ್ಟಿರುವ ಯಾವುದೇ ಕಂಬ, ಸ್ತಂಭ ಅಥವಾ ಗೂಟವನ್ನು ಕಿತ್ತುಹಾಕತಕ್ಕದ್ದಲ್ಲ ಅಥವಾ ತೆಗೆದುಹಾಕತಕ್ಕದ್ದಲ್ಲ ಅಥವಾ ಅದೇ ಉದ್ದೇಶಕ್ಕಾಗಿ ಮಾಡಲಾದ ಯಾವುದೇ ಕಾಮಗಾರಿಗಳನ್ನು ವಿರೂಪಗೊಳಿಸತಕ್ಕದ್ದಲ್ಲ ಅಥವಾ ನಾಶಪಡಿಸತಕ್ಕದ್ದಲ್ಲ; ಅಥವಾ

(ಬಿ) ನಗರಪಾಲಿಕೆಗೆ ಸೇರಿದ ಯಾವುದೇ ಬೀಗ, ತಿರುಪು, ಕವಾಟ, ಪೈಪು, ಮೀಟರು ಅಥವಾ ಇತರ ಕಾರ್ಯೋಪಕರಣ ಅಥವಾ ಸಲಕರಣೆಯನ್ನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷ್ಯದಿಂದ ಒಡೆಯತಕ್ಕದ್ದಲ್ಲ, ಹಾನಿಗೊಳಿಸತಕ್ಕದ್ದಲ್ಲ, ತಿರುಗಿಸತಕ್ಕದ್ದಲ್ಲ, ತೆರೆಯತಕ್ಕದ್ದಲ್ಲ, ಮುಚ್ಚತಕ್ಕದ್ದಲ್ಲ ಅಥವಾ ಮುಚ್ಚಿಬಿಡತಕ್ಕದ್ದಲ್ಲ ಅಥವಾ ಅವುಗಳ ಬಗ್ಗೆ ಅನ್ಯಥಾ ಹಸ್ತಕ್ಷೇಪ ಮಾಡತಕ್ಕದ್ದಲ್ಲ; ಅಥವಾ

(ಸಿ) ನಗರಪಾಲಿಕೆಗೆ ಸೇರಿದ ಯಾವುದೇ ನೀರು ಸರಬರಾಜು ಕೊಳವೆ ಮಾರ್ಗದಿಂದ ಅಥವಾ ಯಾವ ಜಲಮಾರ್ಗದಿಂದ ಅಂಥ ಯಾವುದೇ ನೀರನ್ನು ಸರಬರಾಜು ಮಾಡಲಾಗುತ್ತಿದೆಯೋ ಆ ಜಲಮಾರ್ಗದಿಂದ ನೀರು ಹರಿಯುವುದನ್ನು ಅಥವಾ ರಭಸದಿಂದ ನೀರು ಹರಿಸುವುದನ್ನು ಕಾನೂನು ಬಾಹಿರವಾಗಿ ಅಡ್ಡಿಪಡಿಸತಕ್ಕದ್ದಲ್ಲ, ನೀರನ್ನು ಎಳೆದುಕೊಳ್ಳತಕ್ಕದ್ದಲ್ಲ ಅಥವಾ ಬೇರೆ ಕಡೆ ತಿರುಗಿಸತಕ್ಕದ್ದಲ್ಲ ಅಥವಾ ತೆಗೆದುಕೊಳ್ಳತಕ್ಕದ್ದಲ್ಲ; ಅಥವಾ

(ಡಿ) ಈ ಅಧ್ಯಾಯದ ಮೇರೆಗೆ ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ನಗರಪಾಲಿಕೆಯ ಯಾರೇ ಅಧಿಕಾರಿಗೆ ಅಥವಾ ಇತರ ನೌಕರನಿಗೆ ಅಡ್ಡಿಯುಂಟುಮಾಡತಕ್ಕದ್ದಲ್ಲ ಅಥವಾ ಯಾವುದೇ ನೀರು ಸರಬರಾಜು ಕೊಳವೆ ಮಾರ್ಗಕ್ಕೆ ಸಂಬಂಧಿಸಿದಂತೆ ಈ ಅಧ್ಯಾಯದ ಮೇರೆಗೆ ಯಾವುದೇ ಪ್ರವೇಶ, ಪರಿಶೀಲನೆ, ಪರೀಕ್ಷೆ ಅಥವಾ ವಿಚಾರಣೆ ಮಾಡುವುದಕ್ಕೆ ಅವಶ್ಯಕವಾದ ಸಾಧನಗಳನ್ನು ಅವನಿಗೆ ಒದಗಿಸಲು ನಿರಾಕರಿಸತಕ್ಕದ್ದಲ್ಲ ಅಥವಾ ಬುದ್ಧಿಪೂರ್ವಕವಾಗಿ ನಿರ್ಲಕ್ಷಿಸತಕ್ಕದ್ದಲ್ಲ; ಅಥವಾ

(ಇ) ಯಾವುದೇ ನೀರು ಸರಬರಾಜು ಕೊಳವೆ ಮಾರ್ಗದೊಳಗೆ, ಅದರಲ್ಲಿ ಅಥವಾ ಅದರ ಮೇಲೆ ಸ್ನಾನ ಮಾಡತಕ್ಕದ್ದಲ್ಲ ಅಥವಾ ಅದರಲ್ಲಿ ಯಾವುದೇ ಪ್ರಾಣಿಯನ್ನು ತೊಳೆಯತಕ್ಕದ್ದಲ್ಲ ಅಥವಾ ಎಸೆಯತಕ್ಕದ್ದಲ್ಲ ಅಥವಾ ಪ್ರವೇಶಿಸುವಂತೆ ಮಾಡತಕ್ಕದ್ದಲ್ಲ ಅಥವಾ ಯಾವುದೇ ನೀರು ಸರಬರಾಜು ಕೊಳವೆ ಮಾರ್ಗದೊಳಕ್ಕೆ ಯಾವುದೇ ಕಸ, ಕೊಳೆ ಅಥವಾ ಹೊಲಸನ್ನು ಎಸೆಯತಕ್ಕದ್ದಲ್ಲ ಅಥವಾ ಯಾವುದೇ ಬಟ್ಟೆಯನ್ನು, ಉಣ್ಣೆಯನ್ನು ಅಥವಾ ಚರ್ಮವನ್ನು ಅಥವಾ ಯಾವುದೇ ಪ್ರಾಣಿಯ ಚರ್ಮವನ್ನು ಅದರಲ್ಲಿ ಸ್ವಚ್ಛಗೊಳಿಸತಕ್ಕದ್ದಲ್ಲ. ಯಾವುದೇ ನೀರು ಸರಬರಾಜು ಕೊಳವೆ ಮಾರ್ಗದೊಳಕ್ಕೆ ಯಾವುದೇ ಸಿಂಕ್‌ನ ಅಥವಾ ಚರಂಡಿಯ ಅಥವಾ ಯಾವುದೇ ಉಗಿಎಂಜಿನ್‌ನ ಅಥವಾ ಬಾಯ್ಲರ್‌ನ ನೀರನ್ನು ಅಥವಾ ಕಲುಷಿತ ನೀರನ್ನು ತಿರುಗುವಂತೆ ಮಾಡತಕ್ಕದ್ದಲ್ಲ ಅಥವಾ ತರತಕ್ಕದ್ದಲ್ಲ ಅಥವಾ ಯಾವುದೇ ನೀರು ಸರಬರಾಜು ಕೊಳವೆ ಮಾರ್ಗದಲ್ಲಿನ ನೀರು ಮಲಿನವಾಗುವ ಅಥವಾ ಮಲಿನವಾಗುವ ಸಂಭವವಿರುವ ಯಾವುದೇ ಇತರ ಕಾರ್ಯವನ್ನು ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ ಇರುವುದು ಯಾವುದೂ, ಬಳಕೆದಾರನ ಆವರಣಗಳಿಗೆ ನೀರು ಸರಬರಾಜು ಮಾಡುತ್ತಿರುವ ನೀರು ಸರಬರಾಜು ಪೈಪಿನ ಮೇಲೆ ಅಳವಡಿಸಿರುವ ತಡೆಬಿರಡೆಯನ್ನು ಅವನು ಮುಚ್ಚುವುದಕ್ಕೆ, ಹಾಗೆ ಮುಚ್ಚುವುದರಿಂದ ಯಾವ ಬಳಕೆದಾರನ ನೀರು ಸರಬರಾಜಿಗೆ ತೊಂದರೆಯಾಗುವುದೋ ಆ ಯಾರೇ ಇತರ ಬಳಕೆದಾರನ ಸಮ್ಮತಿಯನ್ನು ಪಡೆದಿರುವಷ್ಟು ಕಾಲ ಅನ್ವಯವಾಗತಕ್ಕದ್ದಲ್ಲ.

**220. ನೀರು ಸರಬರಾಜಿಗೆ ಸಂಬಂಧಿಸಿದ ಉಪವಿಧಿಗಳು.**– (1) ನಗರಪಾಲಿಕೆಯು ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸಲು ನೀರು ಸರಬರಾಜಿಗೆ ಸಂಬಂಧಿಸಿದಂತೆ ಉಪವಿಧಿಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಿದ ಉಪಬಂಧದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ಉಪವಿಧಿಗಳು,–

(ಎ) (i) ಗೃಹ ಬಳಕೆ ಉದ್ದೇಶಗಳಿಗಾಗಿ ಆಗಲಿ ಅಥವಾ ಅಲ್ಲದಿರಲಿ ಅಥವಾ ಉಚಿತವಾದ ಬಳಕೆಗಾಗಲಿ ನೀರು ಸರಬರಾಜನ್ನು ನಿಲ್ಲಿಸಲು;

(ii) ವ್ಯಾಪಾರದ ಉದ್ದೇಶಕ್ಕಾಗಿ ನೀರನ್ನು ಮಾರಾಟ ಮಾಡುವುದನ್ನು ಮತ್ತು ಬಳಸುವುದನ್ನು ನಿಷೇಧಿಸಲು

– ನಗರಪಾಲಿಕೆಯ ಅಧಿಕಾರಕ್ಕೆ;

(ಬಿ) ನಗರಪಾಲಿಕೆಯ ನೀರು ಸರಬರಾಜು ಕೊಳವೆ ಮಾರ್ಗದಿಂದ ನೀರು ಸರಬರಾಜನ್ನು ಯಾವುದೇ ಆವರಣಗಳಿಗೆ ಒಯ್ಯುವುದಕ್ಕಾಗಿ ನೀರು ಸರಬರಾಜು ಪೈಪುಗಳ ಸಂಪರ್ಕ ಕಲ್ಪಿಸುವುದಕ್ಕೆ;

(ಸಿ) ನಗರಪಾಲಿಕೆಯ ನೀರು ಸರಬರಾಜು ಕೊಳವೆ ಮಾರ್ಗಗಳೊಂದಿಗೆ ಸಂಪರ್ಕ ಕಲ್ಪಿಸುವುದಕ್ಕೆ ಮತ್ತು ನವೀಕರಿಸುವುದಕ್ಕೆ;

(ಡಿ) ಖಾಸಗಿ ಸಂಪರ್ಕಗಳ ಪ್ರಭಾರವನ್ನು ವಹಿಸಿಕೊಳ್ಳಲು ನಗರಪಾಲಿಕೆಯ ಅಧಿಕಾರಕ್ಕೆ;

(ಇ) ನಿರ್ದಿಷ್ಟ ಸ್ಥಾನದಲ್ಲಿನ ಸಂಪರ್ಕಗಳನ್ನು ಬದಲಾಯಿಸಲು ನಗರಪಾಲಿಕೆಯ ಅಧಿಕಾರಕ್ಕೆ;

(ಎಫ್) ಅಧಿಭೋಗದಾರರಿಗೆ ನೀರು ಸರಬರಾಜನ್ನು ನ್ಯಾಯಸಮ್ಮತವಾಗಿ ಹಂಚಿಕೆ ಮಾಡುವುದಕ್ಕೆ;

(ಜಿ) ನಗರಪಾಲಿಕೆಯ ಯಾವುದೇ ನೀರು ಸರಬರಾಜು ಕೊಳವೆ ಮಾರ್ಗಗಳೊಂದಿಗೆ ಅಥವಾ ಅವುಗಳಿಂದ ಯಾವುದೇ ಸಂಪರ್ಕ ಕಲ್ಪಿಸುವ ಉದ್ದೇಶಕ್ಕಾಗಿ ಬಳಸಲಾಗುವ ಪೈಪುಗಳು ಮತ್ತು ಜೋಡಣೆಗಳ ಗಾತ್ರ, ಸಾಮಗ್ರಿ ಗುಣಮಟ್ಟ, ವರ್ಣನೆ ಮತ್ತು ಸ್ಥಿತಿಗೆ ಮತ್ತು ಪೈಪುಗಳ ಮತ್ತು ಜೋಡಣೆಗಳ ಮೇಲೆ ಮುದ್ರೆಹಾಕುವುದಕ್ಕೆ ಮತ್ತು ಅಂಥ ಮುದ್ರೆ ಹಾಕುವುದಕ್ಕೆ ವಿಧಿಸುವ ಫೀಜಿಗೆ;

(ಹೆಚ್) ಪರಿಣಾಮಕಾರಿಯಾಗಿ ದುರಸ್ತಿ ಮಾಡಲಾಗದಷ್ಟು ದೋಷಪೂರಿತವಾಗಿವೆ ಎಂದು ಪರೀಕ್ಷೆಯ ನಂತರ ಕಂಡುಬಂದಂಥ ಪೈಪುಗಳ, ತೊಟ್ಟಿಗಳ ಮತ್ತು ಜೋಡಣೆಗಳ ಗಾತ್ರ, ಸಾಮಗ್ರಿ, ಗುಣಮಟ್ಟ ಮತ್ತು ವರ್ಣನೆಗೆ;

(ಐ) ಅಳತೆಯ ಮೂಲಕ ನೀರನ್ನು ಸರಬರಾಜು ಮಾಡಿದಾಗ ಮೀಟರುಗಳನ್ನು ಅಳವಡಿಸುವುದಕ್ಕೆ ಮತ್ತು ಅವುಗಳ ನಿರ್ವಹಣೆಗೆ;

(ಜೆ) ನೀರನ್ನು ಮೋಸದಿಂದ ಮತ್ತು ಅನಧಿಕೃತವಾಗಿ ಬಳಸುವುದನ್ನು ನಿಷೇಧಿಸುವುದಕ್ಕೆ ಮತ್ತು ಮೀಟರುಗಳನ್ನು ಕೆಡಿಸುವುದನ್ನು ನಿಷೇಧಿಸುವುದಕ್ಕೆ;

(ಕೆ) ಪೈಪುಗಳ, ತೊಟ್ಟಿಗಳ ಮತ್ತು ಇತರ ನೀರು ಸರಬರಾಜು ಕೊಳವೆ ಮಾರ್ಗಗಳ ನಿರ್ವಹಣೆಗೆ;

(ಎಲ್) ಕೊಳಾಯಿಗಾರರಿಗೆ ಮತ್ತು ಜೋಡಣೆದಾರರಿಗೆ ಲೈಸೆನ್ಸ್ ನೀಡುವುದಕ್ಕೆ ಮತ್ತು ಲೈಸೆನ್ಸ್ ಪಡೆದ ಕೊಳಾಯಿಗಾರರನ್ನು ಮತ್ತು ಜೋಡಣೆಗಾರರನ್ನು ಕಡ್ಡಾಯವಾಗಿ ನಿಯೋಜಿಸಿಕೊಳ್ಳುವುದಕ್ಕೆ;

(ಎಂ) ಈ ಅಧ್ಯಾಯದ ಮೇರೆಗೆ ರಚಿಸಿದ ಉಪವಿಧಿಗಳ ಮೂಲಕ ಉಪಬಂಧಿಸಬೇಕಾದ ಅಥವಾ ಉಪಬಂಧಿಸಬಹುದಾದ ಯಾವುದೇ ಇತರ ವಿಷಯಕ್ಕೆ

– ಉಪಬಂಧ ಕಲ್ಪಿಸಬಹುದು.

(3) ಈ ಪ್ರಕರಣದ ಮೇರೆಗೆ ಯಾವುದೇ ಉಪವಿಧಿಗಳನ್ನು ರಚಿಸುವಾಗ, ನಗರಪಾಲಿಕೆಯು ಅವುಗಳ ಉಲ್ಲಂಘನೆಗಾಗಿ ಒಂದು ನೂರು ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಉಲ್ಲಂಘನೆಯನ್ನು ಮುಂದುವರೆಸಿದ ಸಂದರ್ಭದಲ್ಲಿ, ಅಂಥ ಉಲ್ಲಂಘನೆಯನ್ನು ಮುಂದುವರೆಸದಿರಲು ನಗರಪಾಲಿಕೆಯಿಂದ ನೋಟೀಸನ್ನು ಸ್ವೀಕರಿಸಿದ ತರುವಾಯವೂ ಉಲ್ಲಂಘನೆಯನ್ನು ಮುಂದುವರಿಸಿದ, ಪ್ರತಿದಿನಕ್ಕೆ ಹತ್ತು ರೂಪಾಯಿವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಎಂದು ಉಪಬಂಧಿಸಬಹುದು.

**221. ಒಳಚರಂಡಿ, ಇತ್ಯಾದಿಗಳು ನಗರಪಾಲಿಕೆಯಲ್ಲಿ ನಿಹಿತವಾಗಿರುವುದು.–** (1) ನಗರದ ಒಳಗಿರುವ ಎಲ್ಲಾ ಸಾರ್ವಜನಿಕ ಒಳಚರಂಡಿಗಳು, ಯಾವುದೇ ಸಾರ್ವಜನಿಕ ಬೀದಿಯಲ್ಲಿ, ಅದರ ಪಕ್ಕದಲ್ಲಿ ಅಥವಾ ಅದರ ಅಡಿಯಲ್ಲಿ ಇರುವ ಎಲ್ಲ ಒಳ ಚರಂಡಿಗಳು, ನಗರಪಾಲಿಕೆಯ ನಿಧಿಯಿಂದ ನಿರ್ಮಿಸಿದ್ದಾಗಿರಲಿ ಅಥವಾ ಅನ್ಯಥಾ ನಿರ್ಮಿಸಿದ್ದಾಗಿರಲಿ ಊರಿನ ರೊಚ್ಚನ್ನು ವಿಲೆ ಮಾಡುವ ಎಲ್ಲ ಕೊಳವೆ ಮಾರ್ಗಗಳು ಮತ್ತು ಅವುಗಳಿಗೆ ಸಂಬಂಧಿಸಿದ ಎಲ್ಲ ಕೊಳವೆ ಮಾರ್ಗಗಳು, ಸಾಮಗ್ರಿಗಳು ಮತ್ತು ವಸ್ತುಗಳು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

(2) ನಗರಪಾಲಿಕೆಯಲ್ಲಿ ನಿಹಿತವಾಗಿರುವ ಎಲ್ಲಾ ಸಾರ್ವಜನಿಕ ಮತ್ತು ಇತರ ಒಳಚರಂಡಿಗಳನ್ನು ಈ ಅಧಿನಿಯಮದಲ್ಲಿ ಇನ್ನು ಮುಂದೆ ನಗರಪಾಲಿಕೆಯ ಒಳಚರಂಡಿಗಳೆಂದು ಉಲ್ಲೇಖಿಸಲಾಗಿದೆ.

(3) ಅಂಥ ಯಾವುದೇ ಒಳಚರಂಡಿ ಅಥವಾ ಊರಿನ ರೊಚ್ಚಿನ ವಿಲೆ ಮಾಡುವ ಮಾರ್ಗವನ್ನು ವಿಸ್ತರಿಸುವ, ಆಳಗೊಳಿಸುವ ಅಥವಾ ಅನ್ಯಥಾ ದುರಸ್ತಿಗೊಳಿಸುವ ಅಥವಾ ನಿರ್ವಹಿಸುವ ಉದ್ದೇಶಗಳಿಗಾಗಿ, ಸದರಿ ಉದ್ದೇಶಕ್ಕಾಗಿ ಅವಶ್ಯವಾಗಬಹುದಾದಷ್ಟು ಅದಕ್ಕೆ ಸೇರಿರುವ ಒಳ ಮಣ್ಣೂ ಸಹ ನಗರಪಾಲಿಕೆಯಲ್ಲಿ ನಿಹಿತವಾಗಿದೆ ಎಂದು ಭಾವಿಸತಕ್ಕದ್ದು.

(4) ನಗರಪಾಲಿಕೆಗೆ ಸೇರಿದ್ದಲ್ಲದ ಆವರಣಗಳಲ್ಲಿ ಅಥವಾ ಅವುಗಳ ಮೇಲೆ ನಗರಪಾಲಿಕೆಯ ನಿಧಿಗಳಿಂದ ನಿರ್ಮಿಸಿದ ಅಥವಾ ರಚಿಸಿದ ಅಥವಾ ಸ್ಥಾಪಿಸಿದ ಒಳಚರಂಡಿ ಕೊಳವೆ ಮಾರ್ಗಗಳೊಂದಿಗೆ ಸಂಪರ್ಕ ಕಲ್ಪಿಸಿದ ಎಲ್ಲ ಒಳಚರಂಡಿಗಳು ಮತ್ತು ವಾಯುಸಂಚಾರ ಷಾಫ್ಟ್‌ಗಳು, ಪೈಪುಗಳು ಮತ್ತು ಎಲ್ಲಾ ಉಪಕರಣಗಳು ಮತ್ತು ಜೋಡಣೆಗಳು; ಅವುಗಳು,–

(ಎ) ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯನ್ನು ಸ್ಥಾಪಿಸಿದ ದಿನಾಂಕಕ್ಕೆ ಮುಂಚೆ ಇದ್ದವುಗಳಾಗಿರಲಿ ಅಥವಾ ನಂತರದವುಗಳಾಗಿರಲಿ; ಮತ್ತು

(ಬಿ) ಅಂಥ ಆವರಣಗಳ ಮಾಲೀಕನ ಅಥವಾ ಅಧಿಭೋಗದಾರನ ಬಳಕೆಗಾಗಿ ಇರುವಂಥವುಗಳಾಗಿರಲಿ ಅಥವಾ ಅಲ್ಲದಿರಲಿ,

– ನಗರಪಾಲಿಕೆಯು ಅನ್ಯಥಾ ನಿರ್ಧರಿಸಿದ ಹೊರತು ಅಥವಾ ಯಾವುದೇ ಕಾಲದಲ್ಲಿ ಅನ್ಯಥಾ ನಿರ್ಧರಿಸುವ ಹೊರತು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

**222. ಒಳಚರಂಡಿಗಳ ಮತ್ತು ಊರಿನ ರೊಚ್ಚಿನ ವಿಲೆ ಮಾರ್ಗಗಳ ನಿರ್ವಹಣೆ.–** ನಗರಪಾಲಿಕೆಯು, ನಗರಪಾಲಿಕೆಯ ಎಲ್ಲ ಒಳಚರಂಡಿಗಳನ್ನು ಮತ್ತು ಊರಿನ ರೊಚ್ಚಿನ ವಿಲೆ ಮಾರ್ಗಗಳನ್ನು ನಿರ್ವಹಿಸತಕ್ಕದ್ದು ಮತ್ತು ಉತ್ತಮ ಸ್ಥಿತಿಯಲ್ಲಿಟ್ಟುಕೊಳ್ಳತಕ್ಕದ್ದು ಮತ್ತು ನಗರದ ಪರಿಣಾಮಕಾರಿ ಒಳಚರಂಡಿ ವ್ಯವಸ್ಥೆಗಾಗಿ ಕಾಲಕಾಲಕ್ಕೆ ಅವಶ್ಯವಾದಷ್ಟು ಹೊಸ ಚರಂಡಿಗಳನ್ನು ಮತ್ತು ಊರಿನ ರೊಚ್ಚಿನ ವಿಲೆ ಮಾರ್ಗಗಳನ್ನು ನಿರ್ಮಿಸತಕ್ಕದ್ದು.

**223. ನಗರಪಾಲಿಕೆಯ ಒಳಚರಂಡಿಯೊಳಕ್ಕೆ ಕೆಲವು ವಸ್ತುಗಳನ್ನು ಹಾಯಿಸತಕ್ಕದ್ದಲ್ಲ.–** (1) ಯಾರೇ ವ್ಯಕ್ತಿಯು ನಗರಪಾಲಿಕೆಯ ಯಾವುದೇ ಒಳಚರಂಡಿಯೊಳಕ್ಕೆ ಅಥವಾ ನಗರಪಾಲಿಕೆಯ ಒಳ ಚರಂಡಿಯೊಂದಿಗೆ ಸಂಪರ್ಕ ಹೊಂದಿರುವ ಯಾವುದೇ ಚರಂಡಿಯೊಳಕ್ಕೆ ಅಥವಾ ಒಳಚರಂಡಿಯೊಳಕ್ಕೆ,–

(ಎ) ಒಳಚರಂಡಿಯನ್ನು ಹಾನಿಗೊಳಿಸುವ ಅಥವಾ ಅದರಲ್ಲಿನ ವಸ್ತುಗಳು ಸರಾಗವಾಗಿ ಹರಿದು ಹೋಗುವುದಕ್ಕೆ ಅಡ್ಡಿಗೊಳಿಸುವ ಅಥವಾ ಅದರಲ್ಲಿನ ವಸ್ತುಗಳ ಸಂಸ್ಕರಣೆಗೆ ಮತ್ತು ವಿಲೆಗೆ ಪ್ರತಿಕೂಲ ಪರಿಣಾಮ ಉಂಟುಮಾಡುವ ಸಂಭವವಿರುವ ಯಾವುದೇ ವಸ್ತುವನ್ನು; ಅಥವಾ

(ಬಿ) ಯಾವ ತ್ಯಾಜ್ಯವಸ್ತು ಅಥವಾ ಆವಿಯನ್ನು ಕಾಯಿಸಿದಾಗ ಯಾವ ದ್ರವವು ನಲವತ್ತೈದು ಡಿಗ್ರಿ ಸೆಂಟಿಗ್ರೇಡಿಗಿಂತ ಹೆಚ್ಚಿನ ಉಷ್ಣಾಂಶದ ಯಾವುದೇ ರಾಸಾಯನಿಕ, ಕಸ ಅಥವಾ ನಿರುಪಯುಕ್ತ ವಸ್ತು ಆವಿಯು ಅಥವಾ ಯಾವುದೇ ದ್ರವವು, ಒಳಚರಂಡಿ ವಸ್ತುಗಳೊಡನೆ ಅಥವಾ ಅವುಗಳ ಸಂಯೋಜನೆಯೊಂದಿಗೆ ಅಪಾಯಕಾರಿ ಅಥವಾ ಉಪದ್ರವಕ್ಕೆ ಕಾರಣವಾಗುವ ಅಥವಾ ಆರೋಗ್ಯಕ್ಕೆ ವಿಭಾಜಕವಾಗುವ ಆ ಯಾವುದೇ ರಾಸಾಯನಿಕ, ಕಸ ಅಥವಾ ನಿರುಪಯುಕ್ತ ವಸ್ತು, ಆವಿ ಅಥವಾ ದ್ರವ;

(ಸಿ) ಯಾವುದೇ ಅಪಾಯಕಾರಿ ಪೆಟ್ರೋಲಿಯಂಅನ್ನು,–

– ಎಸೆಯತಕ್ಕದ್ದಲ್ಲ, ಸುರಿಯತಕ್ಕದ್ದಲ್ಲ ಅಥವಾ ತಿರುಗಿಸತಕ್ಕದ್ದಲ್ಲ.

(2) ಈ ಪ್ರಕರಣದಲ್ಲಿ "ಅಪಾಯಕಾರಿ ಪೆಟ್ರೋಲಿಯಂ" ಎಂಬ ಪದಾವಳಿಯು ಪೆಟ್ರೋಲಿಯಂ ಅಧಿನಿಯಮ, 1934, (ಕೇಂದ್ರ ಅಧಿನಿಯಮ 1934ರ 30) ರಲ್ಲಿ ಅದಕ್ಕಿರುವಂಥ ಅರ್ಥವನ್ನೇ ಹೊಂದಿರತಕ್ಕದ್ದು.

**224. ನಗರಪಾಲಿಕೆಯ ಒಳಚರಂಡಿಯೊಳಕ್ಕೆ, ಚರಂಡಿ ನೀರನ್ನು ಹರಿಸಲು ಮಾಲೀಕರಿಂದ ಮತ್ತು ಅಧಿಭೋಗದಾರರಿಂದ ಅರ್ಜಿ.–** (1) ಉಪವಿಧಿಗಳಲ್ಲಿ ವಿಧಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಖಾಸಗಿ ಚರಂಡಿಯನ್ನು ಹೊಂದಿರುವ ಯಾವುದೇ ಆವರಣಗಳ ಮಾಲೀಕನು ಅಥವಾ ಅಧಿಭೋಗದಾರನು ಅಥವಾ ನಗರದೊಳಗಿರುವ ಯಾವುದೇ ಖಾಸಗಿ ಚರಂಡಿಯ ಮಾಲಿಕನು, ತನ್ನ ಚರಂಡಿಗೆ ನಗರಪಾಲಿಕೆಯ ಒಳಚರಂಡಿಗಳೊಂದಿಗೆ ಸಂಪರ್ಕ ಕಲ್ಪಿಸಲು ಮತ್ತು ಆ ಮೂಲಕ ಆ ಆವರಣಗಳಿಂದ ಅಥವಾ ಆ ಖಾಸಗಿ ಚರಂಡಿಯಿಂದ ಮಲಿನ ನೀರನ್ನು ಮತ್ತು ಭೂ ಮೇಲ್ಮೈ ನೀರನ್ನು ಹರಿಯಬಿಡಲು ನಗರಪಾಲಿಕೆಗೆ ಅರ್ಜಿ ಸಲ್ಲಿಸಬಹುದು:

ಪರಂತು, ಈ ಉಪಪ್ರಕರಣದಲ್ಲಿರುವುದು ಯಾವುದೂ,–

(i) ಈ ಬಗ್ಗೆ ರಚಿಸಿರುವ ಉಪವಿಧಿಗಳಿಗೆ ಅನುಸಾರವಾಗಿ ಹೊರತು, ಯಾವುದೇ ಉದ್ಯಮದ ಆವರಣದಿಂದ ಯಾವುದೇ ಉದ್ಯಮದ ಕೊಳಚೆ ನೀರನ್ನು; ಅಥವಾ

(ii) ಈ ಅಧಿನಿಯಮದ ಅಥವಾ ಇತರ ಯಾವುದೇ ಕಾನೂನಿನ ಮೂಲಕ ಅಥವಾ ಮೇರೆಗೆ ಯಾವ ದ್ರವವನ್ನು ಅಥವಾ ಇತರ ವಸ್ತುವನ್ನು ನಗರಪಾಲಿಕೆಯ ಒಳಚರಂಡಿಯೊಳಕ್ಕೆ ಹರಿಸುವುದನ್ನು ನಿಷೇಧಿಸಲಾಗಿದೆಯೋ ಆ ಯಾವುದೇ ದ್ರವವನ್ನು ಅಥವಾ ಇತರ ವಸ್ತುವನ್ನು

– ನಗರಪಾಲಿಕೆಯ ಯಾವುದೇ ಒಳಚರಂಡಿಯೊಳಕ್ಕೆ ನೇರವಾಗಿ ಅಥವಾ ಪರೋಕ್ಷವಾಗಿ ಹರಿಸುವುದಕ್ಕೆ ಯಾರೇ ವ್ಯಕ್ತಿಯನ್ನು ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಸ್ವತಃ ಬಳಸಿಕೊಳ್ಳಲು ಇಚ್ಛಿಸುವ ಯಾರೇ ವ್ಯಕ್ತಿಯು ತನ್ನ ಪ್ರಸ್ತಾವಗಳ ನೋಟೀಸನ್ನು ನಗರಪಾಲಿಕೆಗೆ ನೀಡತಕ್ಕದ್ದು ಮತ್ತು ಅದನ್ನು ಸ್ವೀಕರಿಸಿದ ತರುವಾಯ ಒಂದು ತಿಂಗಳೊಳಗೆ, ಯಾವುದೇ ಕಾಲದಲ್ಲಿ, ಆಯುಕ್ತರಿಗೆ ಚರಂಡಿಯ ನಿರ್ಮಾಣದ ರೀತಿಯು ಅಥವಾ ಚರಂಡಿಯ ಸ್ಥಿತಿಯು ಒಳಚರಂಡಿಗೆ ಅದನ್ನು ಸಂಪರ್ಕ ಕಲ್ಪಿಸುವುದರಿಂದ ಒಳಚರಂಡಿಯ ವ್ಯವಸ್ಥೆಗೆ ಹಾನಿಕರವಾಗುವಂಥದ್ದು ಆಗಿದೆ ಎಂದು ಕಂಡುಬಂದರೆ, ಅವರು ಆ ವ್ಯಕ್ತಿಗೆ ನೋಟೀಸನ್ನು ನೀಡುವುದರ ಮೂಲಕ ಆ ಸಂಪರ್ಕವನ್ನು ಕಲ್ಪಿಸಿಕೊಳ್ಳುವುದಕ್ಕೆ ಅನುಮತಿಯನ್ನು ನಿರಾಕರಿಸಬಹುದು ಮತ್ತು ಚರಂಡಿಯ ನಿರ್ಮಾಣದ ರೀತಿಯನ್ನು ಮತ್ತು ಸ್ಥಿತಿಯನ್ನು ಪರೀಕ್ಷಿಸುವ ಉದ್ದೇಶಕ್ಕಾಗಿ ಅಗತ್ಯವಾದರೆ, ಅದನ್ನು ಪರಿಶೀಲನೆಗಾಗಿ ತೆರೆದಿಡುವಂತೆ ಅಗತ್ಯಪಡಿಸಬಹುದು.

(3) ಆಯುಕ್ತರು ತಾವು ಸೂಕ್ತವೆಂದು ಭಾವಿಸಿದರೆ, ಸಾರ್ವಜನಿಕ ಬೀದಿಯಲ್ಲಿ ಅಥವಾ ಅದರ ಕೆಳಗೆ ಇರುವ ನಗರಪಾಲಿಕೆಯ ಒಳ ಚರಂಡಿಯೊಂದಿಗೆ ಖಾಸಗಿ ಚರಂಡಿಯ ಸಂಪರ್ಕ ಕಲ್ಪಿಸುವುದಕ್ಕೆ ಅವಶ್ಯವಾದ ಕೊಳವೆ ಮಾರ್ಗದ ಅಂಥ ಭಾಗವನ್ನು ನಿರ್ಮಿಸಬಹುದು ಮತ್ತು ಅಂಥ ಸಂದರ್ಭದಲ್ಲಿ ಆಯುಕ್ತರು ವಹಿಸಿದ ವೆಚ್ಚಗಳನ್ನು ಆವರಣಗಳ ಮಾಲೀಕನು ಅಥವಾ ಅಧಿಭೋಗದಾರನು ಅಥವಾ ಸಂದರ್ಭಾನುಸಾರ ಖಾಸಗಿ ಚರಂಡಿಯ ಮಾಲೀಕನು ಸಂದಾಯ ಮಾಡತಕ್ಕದ್ದು ಮತ್ತು ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲಿ ಮಾಡಬಹುದಾದುದು ಆಗಿರತಕ್ಕದ್ದು.

**225. ಚರಂಡಿ ಇಲ್ಲದ ಆವರಣಗಳಿಗೆ ಚರಂಡಿ ವ್ಯವಸ್ಥೆ.–** (1) ಯಾವುದೇ ಆವರಣಗಳಲ್ಲಿ ಸಾಕಷ್ಟು ಪರಿಣಾಮಕಾರಿ ಚರಂಡಿ ವ್ಯವಸ್ಥೆ ಇಲ್ಲ ಎಂದು ಆಯುಕ್ತರು ಅಭಿಪ್ರಾಯಪಟ್ಟರೆ ಮತ್ತು ನಗರಪಾಲಿಕೆಯ ಒಳಚರಂಡಿಯು ಅಥವಾ ಹೊಲಸು ಪದಾರ್ಥವನ್ನು ಮತ್ತು ಇತರ ಮಲಿನ ಮತ್ತು ಅಸಹ್ಯಕರ ವಸ್ತುಗಳನ್ನು ಹರಿಯಬಿಡಲು, ನಗರಪಾಲಿಕೆಯು ಅನುಮೋದಿಸಿರುವ ಯಾವುದೇ ಸ್ಥಳವು ಸದರಿ ಆವರಣದ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳಿಗೆ ಮೀರದ ದೂರದಲ್ಲಿದ್ದರೆ, ಆಯುಕ್ತರು,–

(ಎ) ನಗರಪಾಲಿಕೆಯ ಅಂಥ ಒಳಚರಂಡಿಯೊಳಕ್ಕೆ ಅಥವಾ ಸ್ಥಳಕ್ಕೆ ಚರಂಡಿಯ ರೊಚ್ಚನ್ನು ಹರಿಸಿ ಚರಂಡಿಯನ್ನು ಖಾಲಿ ಮಾಡುವಂತೆ;

(ಬಿ) ಹೊಲಸು ಪದಾರ್ಥ ಮತ್ತು ಇತರ ಮಲಿನ ಮತ್ತು ಅಸಹ್ಯಕರ ವಸ್ತುಗಳು ಸದರಿ ಆವರಣಗಳಿಂದ ಬಂದು ಶೇಖರವಾಗುವ ಮತ್ತು ಬಂದು ಸೇರುವ ಮತ್ತು ಸದರಿ ಆವರಣಗಳಿಂದ ಅವುಗಳನ್ನು ಸಾಗಿಸುವ ಮತ್ತು ಅಂಥ ಚರಂಡಿಯನ್ನು ಮತ್ತು ಅದಕ್ಕೆ ಸಂಬಂಧಿಸಿದ ಪ್ರತಿಯೊಂದು ಜೋಡಣೆಯನ್ನು ಚೆನ್ನಾಗಿ ನೀರು ಹರಿಸಿ ಚೊಕ್ಕಟ ಮಾಡುವ ಉದ್ದೇಶಕ್ಕಾಗಿ ಆಯುಕ್ತರಿಗೆ ಅವಶ್ಯವೆಂದು ತೋರಬಹುದಾದಂಥ ಮುಚ್ಚಿದ ರೊಚ್ಚುಗುಂಡಿಯನ್ನು ಅಥವಾ ಇಂಗುಗುಂಡಿಯನ್ನು ಮತ್ತು ಜೋಡಣೆಗಳನ್ನು ನಿರ್ಮಿಸುವಂತೆ;

(ಸಿ) ಆರೋಗ್ಯಕ್ಕೆ ಹಾನಿಕರವಾದ ಹಾಲಿ ಇರುವ ಯಾವುದೇ ಚರಂಡಿಯನ್ನು ಅಥವಾ ಚರಂಡಿಗೆ ಬಳಸಿದ ಅಥವಾ ಬಳಸಲು ಉದ್ದೇಶಿಸಿರುವ ಇತರ ಉಪಕರಣವನ್ನು ಅಥವಾ ವಸ್ತುವನ್ನು ತೆಗೆದುಹಾಕುವಂತೆ;

(ಡಿ) ಆರೋಗ್ಯಕ್ಕೆ ಹಾನಿಕರವಾದ ಅಥವಾ ಹಾನಿಕರವಾಗುವ ಸಂಭವವಿರುವಂಥ ತೆರೆದ ಚರಂಡಿಗೆ ಬದಲಾಗಿ ಮುಚ್ಚಿದ ಚರಂಡಿಯನ್ನು ಒದಗಿಸುವಂತೆ ಅಥವಾ ಅಂಥ ಇತರ ಉಪಕರಣವನ್ನು ಅಥವಾ ವಸ್ತುವನ್ನು ಹೊಸದಾಗಿಯಾಗಲಿ ಅಥವಾ ಹಾಲಿ ಇರುವ

ಉಪಕರಣಕ್ಕೆ ಅಥವಾ ವಸ್ತುವಿಗೆ ಬದಲಾಗೆ ಬೇರೆಯದನ್ನಾಗಲಿ ಒದಗಿಸುವಂತೆ ಅಥವಾ ಹಾಲಿ ಇರುವ ತೆರೆದ ಚರಂಡಿಗೆ ಮತ್ತು ಇತರ ಉಪಕರಣಕ್ಕೆ ಅಥವಾ ವಸ್ತುವಿಗೆ ಬದಲಾಗಿ ಮುಚ್ಚಿದ ಚರಂಡಿ ಮತ್ತು ಅಂಥ ಇತರ ಉಪಕರಣ ಅಥವಾ ವಸ್ತು ಎರಡನ್ನು ಒದಗಿಸುವಂತೆ;

(ಇ) ಕಟ್ಟಡಗಳ ಅಂತಸ್ತುಗಳನ್ನು ಮತ್ತು ಮೊಗಸಾಲೆಗಳನ್ನು ತೊಳೆದಾಗ ಅವುಗಳಿಂದ ನಿರುಪಯುಕ್ತ ನೀರು ಬಂದು ಶೇಖರವಾಗುವ ಮತ್ತು ಬಂದು ಸೇರುವ ಮತ್ತು ಅಂಥ ನಿರುಪಯುಕ್ತ ನೀರು ಬೀದಿಗಳ ಮೇಲೆ ಅಥವಾ ಆವರಣಗಳ ಯಾವುದೇ ಕೆಳಭಾಗದ ಒಳಗೆ ನೇರವಾಗಿ ಬೀಳುವುದನ್ನು ತಡೆಗಟ್ಟುವ ಹಾಗೆ ಆ ನೀರನ್ನು ಕೆಳಗೆ ಒಯ್ಯುವ ಪೈಪುಗಳಿಂದ ಹರಿನಳಿಕೆಗಳ ಮೂಲಕ ಸಾಗಿಸುವ ಉದ್ದೇಶಕ್ಕಾಗಿ, ಆಯುಕ್ತರಿಗೆ ಅವಶ್ಯವೆಂದು ತೋರಬಹುದಾದಂಥ ಎಲ್ಲ ಉಪಕರಣಗಳನ್ನು ಮತ್ತು ಜೋಡಣೆಗಳನ್ನು ಒದಗಿಸುವಂತೆ ಮತ್ತು ಸ್ಥಾಪಿಸುವಂತೆ;

(ಎಫ್) ಅಸಮರ್ಪಕವಾದ, ಸಾಕಷ್ಟಲ್ಲದ ಅಥವಾ ದೋಷಪೂರ್ಣವಾದ ಹಾಲಿ ಇರುವ ಚರಂಡಿಯನ್ನು ಉತ್ತಮಪಡಿಸಲು ಅಥವಾ ಪುನರ್ ವಿನ್ಯಾಸಗೊಳಿಸಲು ಯಾವುದೇ ಕಾಮಗಾರಿಯನ್ನು ಕೈಗೊಳ್ಳುವಂತೆ

– ಲಿಖಿತ ನೋಟೀಸಿನ ಮೂಲಕ ಸದರಿ ಆವರಣಗಳ ಮಾಲೀಕನನ್ನು ಅಗತ್ಯಪಡಿಸಬಹುದು.

(2) (1)ನೇ ಉಪಪ್ರಕರಣದಲ್ಲಿ ಉಪಬಂಧ ಕಲ್ಪಿಸಿರದ ಯಾವುದೇ ಸಂದರ್ಭದಲ್ಲಿ, ಯಾವುದೇ ಆವರಣಗಳಲ್ಲಿ ಸಾಕಷ್ಟು ಪರಿಣಾಮಕಾರಿ ಚರಂಡಿ ವ್ಯವಸ್ಥೆ ಇಲ್ಲವೆಂದು ಆಯುಕ್ತರು ಅಭಿಪ್ರಾಯ ಪಟ್ಟರೆ, ಅವರು ಲಿಖಿತ ನೋಟೀಸಿನ ಮೂಲಕ,–

(ಎ) ಆವರಣಗಳ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳಿಗಿಂತ ಕಡಿಮೆಯಿಲ್ಲದ, ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸುವ ಜಾಗದವರೆಗೆ ಚರಂಡಿಯನ್ನು ನಿರ್ಮಿಸುವಂತೆ;

(ಬಿ) ಮುಚ್ಚಿದ ರೊಚ್ಚುಗುಂಡಿಯನ್ನು ಅಥವಾ ಇಂಗುಗುಂಡಿಯನ್ನು ನಿರ್ಮಿಸುವಂತೆ ಮತ್ತು ಅಂಥ ರೊಚ್ಚುಗುಂಡಿಗೆ ಅಥವಾ ಇಂಗುಗುಂಡಿಗೆ ಚರಂಡಿಯ ಅಥವಾ ಚರಂಡಿಗಳ ರೊಚ್ಚನ್ನು ಹರಿಸಿ ಖಾಲಿ ಮಾಡುವಂತೆ

– ಆ ಆವರಣಗಳ ಮಾಲೀಕನನ್ನು ಅಗತ್ಯಪಡಿಸಬಹುದು.

(3) (2)ನೇ ಉಪಪ್ರಕರಣದ ಮೇರೆಗೆ ಯಾವುದೇ ಚರಂಡಿಯನ್ನು ನಿರ್ಮಿಸುವುದಕ್ಕಾಗಿ ಅಗತ್ಯಪಡಿಸುವ ಯಾವುದೇ ನೋಟೀಸು (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿವರಗಳನ್ನು ಒಳಗೊಂಡಿರಬಹುದು.

(4) (2)ನೇ ಉಪಪ್ರಕರಣದ ಮೇರೆಗೆ ಯಾವ ಆವರಣಗಳ ಮಾಲೀಕನಿಗೆ ನೋಟೀಸನ್ನು ನೀಡಲಾಗಿದೆಯೋ, ಆ ಆವರಣಗಳ ಮಾಲೀಕನು ಅಂಥ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಆ ಕಾರ್ಯವನ್ನು ನಿರ್ವಹಿಸಲು ತಪ್ಪಿದರೆ, ಆಯುಕ್ತರು ಅಂಥ ಕಾರ್ಯವನ್ನು ಕಾರ್ಯಗತಗೊಳಿಸುವಂತೆ ಮಾಡತಕ್ಕದ್ದು ಮತ್ತು ಆ ನಂತರ 237ನೇ ಪ್ರಕರಣಕ್ಕೆ ಅನುಸಾರವಾಗಿ ಸದರಿ ಕಾರ್ಯವನ್ನು ಕಾರ್ಯಗತಗೊಳಿಸಿದ್ದರೆ ಹೇಗೋ ಹಾಗೆ, ಸದರಿ ಪ್ರಕರಣದ ಉಪಬಂಧಗಳು ಅನ್ವಯವಾಗತಕ್ಕದ್ದು.

**226. ಹೊಸ ಆವರಣಗಳನ್ನು ಚರಂಡಿಗಳಿಲ್ಲದೆ ನಿರ್ಮಿಸತಕ್ಕದ್ದಲ್ಲ.–** (1) ಯಾವ ಪ್ರದೇಶಗಳಲ್ಲಿ ನಗರಪಾಲಿಕೆಯು ಒಳಚರಂಡಿಗಳನ್ನು ಒದಗಿಸಿದೆಯೋ ಆ ಪ್ರದೇಶಗಳಲ್ಲಿ–

(ಎ) ಅಂಥ ಆವರಣಗಳಲ್ಲಿ ಪರಿಣಾಮಕಾರಿ ಚರಂಡಿ ವ್ಯವಸ್ಥೆಗೆ ಅವಶ್ಯವೆಂದು ಆಯುಕ್ತರಿಗೆ ಕಂಡುಬರುವಂಥ ಗಾತ್ರದ, ಸಾಮಗ್ರಿಗಳ ಮತ್ತು ವರ್ಣನೆಯ, ಅಂಥ ಮಟ್ಟದಲ್ಲಿ ಮತ್ತು ಅಂಥ ಆಳದ ಚರಂಡಿಯನ್ನು ನಿರ್ಮಿಸಿದ ಹೊರತು;

(ಬಿ) ಹೊಲಸು ಪದಾರ್ಥ ಮತ್ತು ಇತರ ಮಲಿನ ಮತ್ತು ಅಸಹ್ಯಕರ ವಸ್ತುಗಳು ಸದರಿ ಆವರಣಗಳಿಂದ ಬಂದು ಶೇಖರವಾಗುವ ಮತ್ತು ಬಂದು ಸೇರುವ ಮತ್ತು ಸದರಿ ಆವರಣಗಳಿಂದ ಅವುಗಳನ್ನು ಸಾಗಿಸುವ ಮತ್ತು ಅಂಥ ಚರಂಡಿಯನ್ನು ಮತ್ತು ಅದಕ್ಕೆ ಸಂಬಂಧಿಸಿದ ಪ್ರತಿಯೊಂದು ಜೋಡಣೆಯನ್ನು ಚೆನ್ನಾಗಿ ನೀರು ಹರಿಸಿ ಚೊಕ್ಕಟ ಮಾಡುವ ಉದ್ದೇಶಕ್ಕಾಗಿ ಅವಶ್ಯವೆಂದು ಆಯುಕ್ತರಿಗೆ ಕಂಡುಬರಬಹುದಾದಂಥ ಉಪಕರಣಗಳನ್ನು ಮತ್ತು ಜೋಡಣೆಗಳನ್ನು ಅಂಥ ಆವರಣಗಳಲ್ಲಿ ಒದಗಿಸಿದ್ದ ಮತ್ತು ಸ್ಥಾಪಿಸಿದ್ದ ಹೊರತು

– ಯಾವುವೇ ಆವರಣಗಳನ್ನು ನಿರ್ಮಿಸುವುದು ಅಥವಾ ಪುನರ್‌ನಿರ್ಮಿಸುವುದು ಅಥವಾ ಅಂಥ ಯಾವುದೇ ಆವರಣವನ್ನು ಅಧಿಭೋಗಿಸುವುದು ಕಾನೂನುಬದ್ಧವಾಗಿರತಕ್ಕದ್ದಲ್ಲ.

(2) ಹಾಗೆ ನಿರ್ಮಿಸಿದ ಚರಂಡಿಯಿಂದ, ನಗರಪಾಲಿಕೆಯ ಒಳಚರಂಡಿಗೆ ಹರಿಸಿ ಖಾಲಿಮಾಡತಕ್ಕದ್ದು.

(3) ಈ ಪ್ರಕರಣದ ಉಪಬಂಧಗಳು ನಗರಪಾಲಿಕೆಯ ಒಳಚರಂಡಿಯಿಂದ ಯಾವ ಆವರಣದ ಯಾವುದೇ ಭಾಗವು ಮೂವತ್ತೈದು ಮೀಟರುಗಳ ಅಂತರದೊಳಗೆ ಇದೆಯೋ ಆ ಆವರಣಗಳಿಗೆ ಅನ್ವಯವಾಗತಕ್ಕದ್ದು.

**227. ಸಂಯೋಜಿತ ಕಾರ್ಯಾಚರಣೆಯ ಮೂಲಕ ಆವರಣಗಳ ಗುಂಪು ಅಥವಾ ಬ್ಲಾಕುಗಳಿಂದ ಚರಂಡಿ ನೀರು ಹರಿಸಲು ಅಧಿಕಾರ.–** (1) ಆವರಣಗಳ ಯಾವುದೇ ಗುಂಪಿನಿಂದ ಅಥವಾ ಬ್ಲಾಕುಗಳಿಂದ ಪ್ರತ್ಯೇಕವಾಗಿ ಚರಂಡಿ ನೀರು ಹರಿಸುವುದಕ್ಕಿಂತ ಸುಯೋಜಿತವಾಗಿ ಚರಂಡಿ ನೀರನ್ನು ಹರಿಸುವುದು ಹೆಚ್ಚು ಮಿತವ್ಯಯಕಾರಿ ಅಥವಾ ಅನುಕೂಲಕಾರಿ ಎಂದು ಮತ್ತು ಸಾಕಷ್ಟು ಗಾತ್ರದ ನಗರಪಾಲಿಕೆಯ ಚರಂಡಿಯು ಈಗಾಗಲೇ ಇದೆ ಎಂದು ಅಥವಾ ಆ ಆವರಣಗಳ ಗುಂಪಿನ ಅಥವಾ ಬ್ಲಾಕಿನ ಯಾವುದೇ ಭಾಗದ ಮೂವತ್ತೈದು ಮೀಟರುಗಳ ಒಳಗೆ ಇಷ್ಟರಲ್ಲೇ ನಗರಪಾಲಿಕೆಯ ಚರಂಡಿಯನ್ನು ನಿರ್ಮಿಸಲಾಗುವುದೆಂದು ಆಯುಕ್ತರಿಗೆ ಕಂಡುಬಂದರೆ, ಆಯುಕ್ತರು ಆವರಣಗಳ ಗುಂಪಿನಿಂದ ಅಥವಾ ಬ್ಲಾಕಿನಿಂದ ಸಂಯೋಜಿತ ಕಾರ್ಯಾಚರಣೆಯ ಮೂಲಕ ಚರಂಡಿ ನೀರನ್ನು ಹರಿಸುವಂತೆ ಮಾಡಬಹುದು.

(2) ಆವರಣಗಳ ಯಾವುದೇ ಗುಂಪಿಗೆ ಅಥವಾ ಬ್ಲಾಕಿಗೆ ಸಂಬಂಧಿಸಿದಂತೆ (1)ನೇ ಉಪ–ಪ್ರಕರಣದ ಮೇರೆಗೆ ಯಾವುದೇ ಕಾರ್ಯವನ್ನು ಮಾಡಲು ವಹಿಸಿದ ವೆಚ್ಚಗಳನ್ನು, ಅಂಥ ಆವರಣಗಳ ಮಾಲೀಕರು, ಆಯುಕ್ತರು ನಿರ್ಧರಿಸಬಹುದಾದಂಥ ಪ್ರಮಾಣದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಚಾರ್ಜುಗಳ ಬಾಕಿಯಂತೆ ಮಾಲೀಕರಿಂದ ವಸೂಲು ಮಾಡುವಂಥದ್ದಾಗಿರತಕ್ಕದ್ದು.

(3) ಅಂಥ ಯಾವುದೇ ಕಾರ್ಯವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಹದಿನೈದು ದಿವಸಗಳಿಗೆ ಕಡಿಮೆಯಿಲ್ಲದಂತೆ, ಆಯುಕ್ತರು ಅಂಥ ಪ್ರತಿಯೊಬ್ಬ ಮಾಲೀಕನಿಗೆ,–

(ಎ) ಉದ್ದೇಶಿತ ಕಾರ್ಯದ ಸ್ವರೂಪದ ಬಗ್ಗೆ ಲಿಖಿತ ನೋಟೀಸನ್ನು, ಮತ್ತು

(ಬಿ) ಅದಕ್ಕೆ ಸಂಬಂಧಿಸಿದಂತೆ ತಗಲುವ ವೆಚ್ಚಗಳ ಅಂದಾಜನ್ನು ಮತ್ತು ಅವನು ಸಂದಾಯ ಮಾಡಬೇಕಾದ ಅಂಥ ವೆಚ್ಚಗಳ ಪ್ರಮಾಣದ ಅಂದಾಜನ್ನು

– ನೀಡತಕ್ಕದ್ದು.

(4) ಆಯುಕ್ತರು ಆವರಣಗಳ ಗುಂಪಿನ ಅಥವಾ ಬ್ಲಾಕಿನ ಮಾಲೀಕನಿಗೆ, ಈ ಪ್ರಕರಣದ ಮೇರೆಗೆ ಕಾರ್ಯಗತಗೊಳಿಸಿದ ಕಾಮಗಾರಿಯನ್ನು ನಿರ್ವಹಿಸಲು ಅಗತ್ಯಪಡಿಸಬಹುದು.

**228. ಕೆಲವು ಸಂದರ್ಭಗಳಲ್ಲಿ ಖಾಸಗಿ ಚರಂಡಿಗಳನ್ನು ಮುಚ್ಚಲು ಅಥವಾ ಅವುಗಳ ಬಳಕೆಯನ್ನು ನಿರ್ಬಂಧಿಸಲು ಆಯುಕ್ತರ ಅಧಿಕಾರ.–** ನಗರಪಾಲಿಕೆಯ ಒಳಚರಂಡಿಯೊಂದಿಗೆ ಸಂಪರ್ಕ ಕಲ್ಪಿಸುವ ಯಾವುದೇ ಆವರಣದ ಚರಂಡಿಯು, ಅಂಥ ಆವರಣಗಳಿಂದ ಸಮರ್ಪಕವಾಗಿ ಚರಂಡಿ ನೀರು ಹರಿದು ಹೋಗುವುದಕ್ಕೆ ಸಾಕಾಗುವಂತಿದ್ದರೆ ಮತ್ತು ಅದಕ್ಕೆ ಅನ್ಯಥಾ ಆಕ್ಷೇಪಣೆ ಇಲ್ಲದಿದ್ದರೆ, ಆದರೆ ನಗರದಲ್ಲಿನ ಒಳಚರಂಡಿಯ ಸಾಮಾನ್ಯ ವ್ಯವಸ್ಥೆಗೆ ಅದನ್ನು ಅಳವಡಿಸಿಲ್ಲವೆಂದು ಆಯುಕ್ತರು ಅಭಿಪ್ರಾಯಪಟ್ಟರೆ ಆಯುಕ್ತರು ಆವರಣಗಳ ಮಾಲೀಕನಿಗೆ ಲಿಖಿತ ನೋಟೀಸಿನ ಮೂಲಕ,–

(ಎ) ಅಂಥ ಚರಂಡಿಯನ್ನು ಮುಚ್ಚತಕ್ಕದ್ದೆಂದು, ಮುಂದುವರಿಸತಕ್ಕದ್ದಲ್ಲವೆಂದು ಅಥವಾ ನಾಶಪಡಿಸತಕ್ಕದ್ದೆಂದು ಮತ್ತು ಆ ಉದ್ದೇಶಕ್ಕಾಗಿ ಅವಶ್ಯವಿರುವ ಯಾವುದೇ ಕಾರ್ಯವನ್ನು ಮಾಡತಕ್ಕದ್ದೆಂದು; ಅಥವಾ

(ಬಿ) ಅಂಥ ಚರಂಡಿಯನ್ನು, ಈ ಬಗ್ಗೆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಹೊಲಸು ಮತ್ತು ಮಲಿನ ನೀರಿಗಾಗಿ ಮಾತ್ರ ಅಥವಾ ಮಳೆ ನೀರು ಮತ್ತು ಭೂಮಿಯ ಒಳಪದರದ ನೀರಿಗಾಗಿ ಮಾತ್ರವೇ ಬಳಸತಕ್ಕದ್ದೆಂದು

– ನಿರ್ದೇಶಿಸಬಹುದು:

ಪರಂತು,–

(i) ಆಯುಕ್ತರು, ಆವರಣಗಳಿಂದ ಚರಂಡಿ ನೀರು ಹರಿದು ಹೋಗುವುದಕ್ಕೆ ಅಷ್ಟೇ ಸಮರ್ಪಕವಾದ ಮತ್ತು ಅವರು ಸೂಕ್ತವೆಂದು ಭಾವಿಸುವ ನಗರಪಾಲಿಕೆಯ ಯಾವುದೇ ಒಳಚರಂಡಿಯೊಂದಿಗೆ ಸಂಪರ್ಕ ಕಲ್ಪಿಸುವ ಮತ್ತೊಂದು ಚರಂಡಿಯನ್ನು ಅವರು ಒದಗಿಸುವ ಷರತ್ತಿನ ಮೇಲೆ ಹೊರತು (ಎ) ಖಂಡದ ಮೇರೆಗೆ ಯಾವುದೇ ಚರಂಡಿಯನ್ನು ಮುಚ್ಚತಕ್ಕದ್ದಲ್ಲ, ಮುಂದುವರಿಸತಕ್ಕದ್ದಲ್ಲ ಅಥವಾ ನಾಶಪಡಿಸತಕ್ಕದ್ದಲ್ಲ;

(ii) ಆಯುಕ್ತರು ಹಾಗೆ ಒದಗಿಸಿದ ಯಾವುದೇ ಚರಂಡಿಯ ನಿರ್ಮಾಣದ ಮತ್ತು (ಎ) ಖಂಡದ ಮೇರೆಗೆ ಮಾಡಿದ ಯಾವುದೇ ಕಾರ್ಯದ ವೆಚ್ಚಗಳನ್ನು ನಗರಪಾಲಿಕೆಯು ಭರಿಸತಕ್ಕದ್ದು.

**229. ಮಾಲೀಕನಲ್ಲದ ಇತರ ವ್ಯಕ್ತಿಯಿಂದ ಚರಂಡಿಯ ಬಳಕೆ.–** (1) ಆಯುಕ್ತರು, ಯಾವುವೇ ಆವರಣಗಳ ಮಾಲೀಕನಿಂದ ಅರ್ಜಿಯನ್ನು ಸ್ವೀಕರಿಸಿದ ಮೇಲಾಗಲಿ ಅಥವಾ ಅನ್ಯಥಾ ಆಗಲಿ ಇನ್ನೊಬ್ಬ ವ್ಯಕ್ತಿಗೆ ಸೇರಿದ ಚರಂಡಿಯ ಮೂಲಕ ನಗರಪಾಲಿಕೆಯ ಚರಂಡಿಯೊಳಕ್ಕೆ ಆವರಣಗಳಿಂದ ಸಮರ್ಪಕವಾಗಿ ನೀರನ್ನು ಹರಿಸುವುದೊಂದೇ ಮಾರ್ಗವೆಂದು ಅಥವಾ ಅತ್ಯಂತ ಅನುಕೂಲಕರ ಮಾರ್ಗವೆಂದು ಅಭಿಪ್ರಾಯಪಟ್ಟರೆ, ಆಯುಕ್ತರು ಲಿಖಿತ ನೋಟೀಸಿನ ಮೂಲಕ ಅಂಥ ಚರಂಡಿಯ ಮಾಲೀಕನನ್ನು ಈ ಪ್ರಕರಣದ ಮೇರೆಗೆ ಒಂದು ಆದೇಶವನ್ನು ಏಕೆ ಮಾಡಬಾರದು ಎಂಬುದರ ಬಗ್ಗೆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಕಾರಣ ತೋರಿಸುವಂತೆ ಅಗತ್ಯಪಡಿಸಬಹುದು.

(2) ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುದೇ ಕಾರಣ ತೋರಿಸದಿದ್ದರೆ ಅಥವಾ ತೋರಿಸಿದ ಕಾರಣವು ಸಮರ್ಥನೀಯವಾದುದಲ್ಲವೆಂದು ಅಥವಾ ಸಾಕಷ್ಟಿಲ್ಲವೆಂದು ಆಯುಕ್ತರಿಗೆ ಕಂಡುಬಂದರೆ, ಆಯುಕ್ತರು ಲಿಖಿತ ಆದೇಶದ ಮೂಲಕ ಆವರಣಗಳ ಮಾಲೀಕನಿಗೆ ಚರಂಡಿಯನ್ನು ಬಳಸಲು ಅಧಿಕಾರ ನೀಡಬಹುದು ಅಥವಾ ಅವನನ್ನು ಅದರ ಜಂಟಿ ಮಾಲೀಕನೆಂದು ಘೋಷಿಸಬಹುದು.

(3) (2)ನೇ ಉಪ–ಪ್ರಕರಣದ ಮೇರೆಗೆ ಮಾಡಿದ ಆದೇಶವು,–

(ಎ) ಆವರಣಗಳ ಮಾಲೀಕನಿಂದ ಬಾಡಿಗೆಯ ಅಥವಾ ನಷ್ಟಪರಿಹಾರದ ಸಂದಾಯದ;

(ಬಿ) ಮೇಲೆ ಹೇಳಿದ ಚರಂಡಿಯೊಂದಿಗೆ ಸಂಪರ್ಕ ಕಲ್ಪಿಸುವ ಉದ್ದೇಶಕ್ಕಾಗಿ ಆವರಣಗಳಲ್ಲಿ ಚರಂಡಿಯ ನಿರ್ಮಾಣದ;

(ಸಿ) ಸಹಾಯಕರು ಮತ್ತು ಕೆಲಸಗಾರರೊಂದಿಗೆ ಎಲ್ಲಾ ಯುಕ್ತ ವೇಳೆಗಳಲ್ಲಿ ಮೇಲೆ ಹೇಳಿದ ಚರಂಡಿಯು ಇರುವ ಭೂಮಿಯ ಮೇಲೆ ಪ್ರವೇಶಿಸುವ;

(ಡಿ) ಮೇಲೆ ಹೇಳಿದ ಚರಂಡಿಯನ್ನು ನಿರ್ವಹಿಸಲು, ದುರಸ್ತಿ ಮಾಡಲು, ನೀರು ಹಾಯಿಸಿ ಚೊಕ್ಕಟಮಾಡಲು, ಸ್ವಚ್ಛಗೊಳಿಸಲು ಮತ್ತು ಖಾಲಿ ಮಾಡಲು ಪಕ್ಷಕಾರರಿಗೆ ಇರುವ ಅವರವರ ಜವಾಬ್ದಾರಿಗಳ

– ಬಗ್ಗೆ ನಿರ್ದೇಶನಗಳನ್ನು ಒಳಗೊಂಡಿರಬಹುದು.

**230. ಊರಿನ ರೊಚ್ಚಿಗೆ ಮತ್ತು ಮಳೆನೀರಿಗೆ ಬೇರೆಬೇರೆ ಚರಂಡಿಗಳು ಇರತಕ್ಕದ್ದು.–** ಯಾವುದೇ ಆವರಣಗಳಿಂದ ಸಮರ್ಪಕವಾಗಿ ಚರಂಡಿ ನೀರು ಹರಿದು ಹೋಗುವುದಕ್ಕಾಗಿ ಕ್ರಮಗಳನ್ನು ಕೈಗೊಳ್ಳತಕ್ಕದ್ದೆಂದು ಅಥವಾ ಕೈಗೊಳ್ಳಬಹುದೆಂದು ಈ ಅಧ್ಯಾಯದಲ್ಲಿ ಉಪಬಂಧಿಸಿರುವಾಗಲೆಲ್ಲಾ, ಹೊಲಸು ಮತ್ತು ಮಲಿನ ನೀರಿಗೆ ಒಂದು ಚರಂಡಿ ಇರತಕ್ಕದ್ದೆಂದು ಮತ್ತು ಮಳೆನೀರಿಗೆ ಹಾಗೂ ಮಲಿನವಲ್ಲದ ಭೂಮಿಯ ಒಳಪದರದ ನೀರಿಗೆ ಅಥವಾ ಮಳೆನೀರು ಅಥವಾ ಮಲಿನವಲ್ಲದ ಭೂಮಿಯ ಒಳಪದರದ ನೀರು ಇವೆರಡಕ್ಕೂ ಪೂರ್ಣವಾಗಿ ಬೇರೆ ಬೇರೆಯಾದ ಚರಂಡಿ ಇರತಕ್ಕದ್ದೆಂದು, ಆ ಪ್ರತಿಯೊಂದು ಚರಂಡಿಯಿಂದ ನಗರಪಾಲಿಕೆಯ ಪ್ರತ್ಯೇಕ ಒಳಚರಂಡಿಯೊಳಕ್ಕೆ ಅಥವಾ ನಗರಪಾಲಿಕೆಯ ಚರಂಡಿಯೊಳಕ್ಕೆ ಅಥವಾ ಇತರ ಸೂಕ್ತ ಸ್ಥಳಗಳೊಳಕ್ಕೆ ಚರಂಡಿ ನೀರನ್ನು ಹರಿಸಿ ಖಾಲಿ ಮಾಡತಕ್ಕದೆಂದು ಅಗತ್ಯಪಡಿಸಲು ಆಯುಕ್ತರು ಸಕ್ಷಮರಾಗಿರತಕ್ಕದ್ದು.

**231. ಸಮರ್ಪಕವಾಗಿ ಚರಂಡಿ ನೀರು ಹರಿದು ಹೋಗುವುದಕ್ಕೆ ಕೆಲವು ಕಾರ್ಯಗಳನ್ನು ಮಾಡಲು ಮಾಲೀಕನನ್ನು ಅಗತ್ಯಪಡಿಸುವ ಅಧಿಕಾರ.–** ಯಾವುದೇ ಆವರಣಗಳಿಂದ ಸಮರ್ಪಕವಾಗಿ ಚರಂಡಿ ನೀರು ಹರಿದು ಹೋಗುವ ಉದ್ದೇಶಕ್ಕಾಗಿ ಆಯುಕ್ತರು ಲಿಖಿತ ನೋಟೀಸಿನ ಮೂಲಕ–

(ಎ) ಎರಡು ಅಥವಾ ಹೆಚ್ಚು ಕಟ್ಟಡಗಳ ನಡುವಣ ಯಾವುದೇ ಅಂಗಳದಲ್ಲಿ, ಓಣಿಯಲ್ಲಿ ಅಥವಾ ಮಾರ್ಗದಲ್ಲಿ ಅಂಥ ಕಟ್ಟಡಗಳ ಮಾಲೀಕ ಅಥವಾ ಮಾಲೀಕರು ನಗರಪಾಲಿಕೆಯು ಅನುಮೋದಿಸಬಹುದಾದಂಥ ಸಾಮಗ್ರಿಗಳಿಂದ ಮತ್ತು ಅಂಥ ರೀತಿಯಲ್ಲಿ ನೆಲಗಟ್ಟು ಮಾಡಲು ಅಗತ್ಯಪಡಿಸಬಹುದು; ಮತ್ತು

(ಬಿ) ಅಂಥ ನೆಲಗಟ್ಟನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಲು ಅಗತ್ಯಪಡಿಸಬಹುದು.

**232. ಒಳಚರಂಡಿಗಳನ್ನು ಬರಿದು ಮಾಡಲು ಮತ್ತು ಊರಿನ ರೊಚ್ಚನ್ನು ವಿಲೆ ಮಾಡಲು ಸ್ಥಳಗಳನ್ನು ಗೊತ್ತುಪಡಿಸುವುದು.–** ಆಯುಕ್ತರು ಸೂಕ್ತವೆಂದು ಪರಿಗಣಿಸುವಂಥ ಸ್ಥಳದಲ್ಲಿ ಅಥವಾ ಸ್ಥಳಗಳಲ್ಲಿ, ನಗರಪಾಲಿಕೆಯ ಯಾವುದೇ ಅಥವಾ ಎಲ್ಲ ಒಳಚರಂಡಿಗಳಿಂದ ಹರಿಸಿ ಬರಿದು ಮಾಡುವಂತೆ ಮತ್ತು ಊರಿನ ಎಲ್ಲ ರೊಚ್ಚನ್ನು ವಿಲೆ ಮಾಡುವಂತೆ ಮಾಡಬಹುದು:

ಪರಂತು, ಈ ಬಗ್ಗೆ ನಗರಪಾಲಿಕೆಯು ಗೊತ್ತುಪಡಿಸಬಹುದಾದಂಥ ದಿನಾಂಕದಂದು ಮತ್ತು ಆ ತರುವಾಯ ಯಾವುದೇ ಜಲಮಾರ್ಗದೊಳಕ್ಕೆ ಊರಿನ ರೊಚ್ಚನ್ನು ಅದನ್ನು ಯಾವ ನೀರಿನೊಳಕ್ಕೆ ಹರಿಯಬಿಡಲಾಗಿದೆಯೋ ಆ ನೀರಿನ ಪರಿಶುದ್ಧತೆಗೆ ಮತ್ತು ಗುಣಮಟ್ಟಕ್ಕೆ ಪ್ರತಿಕೂಲ ಪರಿಣಾಮ ಬೀರದಂತೆ ಅದನ್ನು ಹಾಗೆ ಸಂಸ್ಕರಿಸುವವರೆಗೆ, ಹರಿಯಬಿಡತಕ್ಕದ್ದಲ್ಲ.

**233. ಅನುಮತಿಯಿಲ್ಲದೆ ಒಳಚರಂಡಿಗಳೊಂದಿಗೆ ಸಂಪರ್ಕ ಕಲ್ಪಿಸತಕ್ಕದ್ದಲ್ಲ.–** ಆಯುಕ್ತರ ಲಿಖಿತ ಅನುಮತಿಯಿಲ್ಲದೆ ಯಾರೇ ವ್ಯಕ್ತಿಯು ಯಾವುದೇ ಬಗೆಯ ಉದ್ದೇಶಕ್ಕೆ, ಯಾವುದೇ ಕಾಲದಲ್ಲಿ ನಗರಪಾಲಿಕೆಯು ನಿರ್ಮಿಸಿದ ಅಥವಾ ಅದು ನಿರ್ವಹಿಸುತ್ತಿರುವ ಅಥವಾ ಅದರಲ್ಲಿ ನಿಹಿತವಾಗಿರುವ 226ನೇ ಪ್ರಕರಣದಲ್ಲಿ ಉಲ್ಲೇಖಿಸಿದ, ಯಾವುದೇ ಒಳಚರಂಡಿಯೊಂದಿಗೆ ಆವರಣಗಳ ಯಾವುದೇ ಚರಂಡಿಯನ್ನು ಕೂಡಿಸತಕ್ಕದ್ದಲ್ಲ ಅಥವಾ ಸಂಪರ್ಕ ಕಲ್ಪಿಸತಕ್ಕದ್ದಲ್ಲ ಅಥವಾ ಹಾಗೆ ಮಾಡಿಸತಕ್ಕದ್ದಲ್ಲ.

**234. ಒಳಚರಂಡಿಗಳ ಮೇಲೆ ಅನುಮತಿಯಿಲ್ಲದೆ ಕಟ್ಟಡಗಳನ್ನು ಮತ್ತು ಖಾಸಗಿ ಬೀದಿಗಳನ್ನು ಕಟ್ಟತಕ್ಕದ್ದಲ್ಲ ಅಥವಾ ನಿರ್ಮಿಸತಕ್ಕದ್ದಲ್ಲ.–** (1) ನಗರಪಾಲಿಕೆಯು ನಿರ್ಮಿಸಿದ ಅಥವಾ ನಿರ್ವಹಿಸುತ್ತಿರುವ ಅಥವಾ ನಗರಪಾಲಿಕೆಯಲ್ಲಿ ನಿಹಿತವಾಗಿರುವ ನಗರಪಾಲಿಕೆಯ ಯಾವುದೇ ಒಳಚರಂಡಿಯ ಮೇಲೆ ಆಯುಕ್ತರ ಲಿಖಿತ ಅನುಮತಿ ಇಲ್ಲದೆ, ಯಾವುದೇ ಖಾಸಗಿ ಬೀದಿಯನ್ನು, ನಿರ್ಮಿಸತಕ್ಕದಲ್ಲ ಮತ್ತು ಯಾವುದೇ ಕಟ್ಟಡವನ್ನು, ಗೋಡೆಯನ್ನು, ಬೇಲಿಯನ್ನು ಅಥವಾ ಇತರ ರಚನೆಯನ್ನು ಕಟ್ಟತಕ್ಕದ್ದಲ್ಲ.

(2) ಆಯುಕ್ತರ ಲಿಖಿತ ಅನುಮತಿಯಿಲ್ಲದೆ ಮೇಲೆ ಹೇಳಿದಂತೆ ಯಾವುದೇ ಒಳಚರಂಡಿಯ ಮೇಲೆ ಯಾವುದೇ ಖಾಸಗಿ ಬೀದಿಯನ್ನು ನಿರ್ಮಿಸಿದರೆ ಅಥವಾ ಯಾವುದೇ ಕಟ್ಟಡವನ್ನು, ಗೋಡೆಯನ್ನು, ಬೇಲಿಯನ್ನು ಅಥವಾ ರಚನೆಯನ್ನು ಕಟ್ಟಿದರೆ, ಆಯುಕ್ತರು ಅದನ್ನು ತೆಗೆದುಹಾಕಬಹುದು ಅಥವಾ ಅದರ ಬಗ್ಗೆ ತಾವು ಸೂಕ್ತವೆಂದು ಭಾವಿಸುವಂತೆ ಅನ್ಯಥಾ ವ್ಯವಹರಿಸಬಹುದು.

(3) ಆಯುಕ್ತರು ಹಾಗೆ ಮಾಡುವುದಕ್ಕೆ ವಹಿಸಿದ ವೆಚ್ಚಗಳನ್ನು ಖಾಸಗಿ ಬೀದಿಯ ಅಥವಾ ಕಟ್ಟಡದ, ಬೇಲಿಯ, ಗೋಡೆಯ ಅಥವಾ ಇತರ ರಚನೆಯ ಮಾಲೀಕನು ಅಥವಾ ಸಂದರ್ಭಾನುಸಾರ ತಪ್ಪಿತಸ್ಥ ವ್ಯಕ್ತಿಯು ಸಂದಾಯ ಮಾಡತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ವೆಚ್ಚಗಳ ಬಾಕಿಯಂತೆ ಅದು ವಸೂಲಿಮಾಡುವಂಥದ್ದು ಆಗಿರತಕ್ಕದ್ದು.

**235. ಒಳಚರಂಡಿಗಳನ್ನು ಹಾಕುವುದಕ್ಕೆ ಸ್ವತ್ತನ್ನು ಬಳಸುವ ಹಕ್ಕು.–** (1) ನಗರಪಾಲಿಕೆಯು, ನಗರಪಾಲಿಕೆಯ ಸ್ಥಳೀಯ ಎಲ್ಲೆಗಳೊಳಗಾಗಲಿ ಅಥವಾ ಹೊರಗಾಗಲಿ ಯಾವುದೇ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ, ಆ ಸ್ವತ್ತನ್ನು ಆರ್ಜನೆ ಮಾಡದೆಯೆ ಒಳಚರಂಡಿಗಳನ್ನು ಹಾಕಬಹುದು ಮತ್ತು ನಿರ್ವಹಿಸಬಹುದು ಮತ್ತು ನಗರಪಾಲಿಕೆಯ ಯಾರೇ ಅಧಿಕಾರಿಯು ಅಥವಾ ನೌಕರನು ಯಾವುದೇ ಒಳಚರಂಡಿಯನ್ನು ಪರೀಕ್ಷಿಸುವ, ದುರಸ್ತಿಗೊಳಿಸುವ, ಬದಲಾಯಿಸುವ ಅಥವಾ ತೆಗೆದುಹಾಕುವ ಉದ್ದೇಶಕ್ಕಾಗಿ ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಒಳಚರಂಡಿಗಳನ್ನು ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನ ಮೇಲೆ ಯಾವುದೇ ಕಾಲದಲ್ಲಿ ಪ್ರವೇಶಿಸಬಹುದು:

ಪರಂತು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಒಳಚರಂಡಿಯನ್ನು ಹಾಕಲಾಗಿದೆಯೋ ಆ ಸ್ವತ್ತಿನಲ್ಲಿ ನಗರಪಾಲಿಕೆಯು ಬಳಕೆಯ ಹಕ್ಕಿನ ಹೊರತು ಇತರ ಯಾವುದೇ ಹಕ್ಕನ್ನು ಆರ್ಜಿಸತಕ್ಕದ್ದಲ್ಲ.

(2) ಈ ಪ್ರಕರಣದ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸುವಾಗ, ನಗರಪಾಲಿಕೆಯು ಆ ಸ್ವತ್ತಿಗೆ ಹೆಚ್ಚು ಹಾನಿ ಆಗದಂತೆ ನೋಡಿಕೊಳ್ಳತಕ್ಕದ್ದು ಮತ್ತು ಅದು ಉಂಟುಮಾಡಿದ ಯಾವುದೇ ಹಾನಿಗೆ ಪೂರ್ಣ ನಷ್ಟಪರಿಹಾರವನ್ನು ಕೊಡತಕ್ಕದ್ದು.

**236. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಒಳಚರಂಡಿಯನ್ನು ಹಾಕಲು ಆವರಣದ ಮಾಲೀಕನ ಅಧಿಕಾರ.–** (1) ಇತರ ವ್ಯಕ್ತಿಯ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ ಆದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಒಳಚರಂಡಿಯನ್ನು ಹಾಕುವ ಮೂಲಕ ಯಾವುದೇ ಆವರಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಏಕಮಾತ್ರ ಅಥವಾ ಅತ್ಯಂತ ಹೆಚ್ಚು ಅನುಕೂಲಕರ ಮಾರ್ಗವೆಂದು ಆಯುಕ್ತರಿಗೆ ಕಂಡುಬಂದರೆ, ಆಯುಕ್ತರು ಲಿಖಿತ ಆದೇಶದ ಮೂಲಕ ಆವರಣದ ಮಾಲಿಕನಿಗೆ ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅಡ್ಡಲಾಗಿ ಅಂಥ ಒಳಚರಂಡಿಯನ್ನು ಹಾಕಲು ಅಥವಾ ಹಾಯಿಸಲು ಅಧಿಕಾರ ನೀಡಬಹುದು:

ಪರಂತು, ಯಾವುದೇ ಅಂಥ ಆದೇಶವನ್ನು ಮಾಡುವುದಕ್ಕೆ ಮೊದಲು ಆಯುಕ್ತರು ಸ್ಥಿರಸ್ವತ್ತಿನ ಮಾಲೀಕನಿಗೆ, ಅಂಥ ಆದೇಶವನ್ನು ಏಕೆ ಮಾಡಬಾರದು ಎಂಬುದಕ್ಕೆ ನಲವತ್ತೈದು ದಿವಸಗಳೊಳಗೆ ಕಾರಣ ತೋರಿಸಲು ಯುಕ್ತ ಅವಕಾಶವನ್ನು ಕೊಡತಕ್ಕದ್ದು:

ಮತ್ತು ಪರಂತು, ಆವರಣಗಳ ಮಾಲೀಕನು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಅಂಥ ಒಳಚರಂಡಿಯನ್ನು ಹಾಕಲಾಗಿದೆಯೋ ಆ ಸ್ವತ್ತಿನಲ್ಲಿ ಬಳಕೆಯ ಹಕ್ಕಿನ ಹೊರತು ಯಾವುದೇ ಇತರ ಹಕ್ಕನ್ನು ಆರ್ಜಿಸತಕ್ಕದ್ದಲ್ಲ.

(2) ಉಪಪ್ರಕರಣ (1)ರ ಮೇರೆಗೆ ಆದೇಶವನ್ನು ಮಾಡಿದ ನಂತರ, ಆವರಣದ ಮಾಲೀಕನು, ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಒಳಚರಂಡಿಯನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಅದನ್ನು ದುರಸ್ತಿ ಮಾಡುವ ಉದ್ದೇಶಕ್ಕಾಗಿ, ಆ ಸ್ಥಿರ ಸ್ವತ್ತಿನ ಮೇಲೆ ಸಹಾಯಕರು ಮತ್ತು ಕೆಲಸಗಾರರೊಂದಿಗೆ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ ಯಾವುದೇ ಕಾಲದಲ್ಲಿ ಪ್ರವೇಶಿಸುವ ತನ್ನ ಆಶಯವನ್ನು ತಿಳಿಸಿ ಯುಕ್ತ ನೋಟಿಸನ್ನು ಕೊಟ್ಟ ತರುವಾಯ ಹಾಗೆ ಪ್ರವೇಶಿಸಬಹುದು.

(3) ಈ ಪ್ರಕರಣದ ಮೇರೆಗೆ ಒಳಚರಂಡಿಯನ್ನು ಹಾಕುವಾಗ, ಆ ಸ್ಥಿರ ಸ್ವತ್ತಿಗೆ ಸಾಧ್ಯವಾದಷ್ಟು ಮಟ್ಟಿಗೆ ಹೆಚ್ಚು ಹಾನಿ ಆಗದಂತೆ ನೋಡಿಕೊಳ್ಳತಕ್ಕದ್ದು ಮತ್ತು ಆವರಣದ ಮಾಲೀಕನು,–

(ಎ) ಹೆಚ್ಚು ವಿಳಂಬ ಮಾಡದೆ ಒಳಚರಂಡಿಯನ್ನು ಹಾಕಿಸತಕ್ಕದ್ದು;

(ಬಿ) ಅಂಥ ಒಳಚರಂಡಿಯನ್ನು ಹಾಕುವ ಉದ್ದೇಶಕ್ಕಾಗಿ ತೆರೆದ, ಅಗೆದ ಯಾವುದೇ ಭೂಮಿಯನ್ನು, ತೆಗೆದುಹಾಕಿದ ಯಾವುದೇ ಮಣ್ಣನ್ನು, ಹೆಚ್ಚು ವಿಳಂಬ ಮಾಡದೆ ತನ್ನ ಸ್ವಂತ ಖರ್ಚಿನಲ್ಲಿ ಮುಚ್ಚತಕ್ಕದ್ದು, ಪೂರ್ವಸ್ಥಿತಿಗೆ ತರತಕ್ಕದ್ದು ಮತ್ತು ಭರ್ತಿಮಾಡತಕ್ಕದ್ದು;

(ಸಿ) ಅಂಥ ಒಳಚರಂಡಿಯನ್ನು ಹಾಕುವುದರಿಂದ ಹಾನಿಗೆ ಒಳಗಾದ ಸ್ಥಿರ ಸ್ವತ್ತಿನ ಮಾಲೀಕನಿಗೆ ಮತ್ತು ಯಾರೇ ಇತರ ವ್ಯಕ್ತಿಗೆ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(4) ಈ ಪ್ರಕರಣದ ಮೇರೆಗೆ ಯಾವ ಸ್ಥಿರಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಒಳಚರಂಡಿಯನ್ನು ಹಾಕಲಾಗಿದೆಯೋ ಅಂಥ ಸ್ಥಿರಸ್ವತ್ತಿನ ಮೇಲೆ ಮಾಲೀಕನು ಏನನ್ನೂ ಕಟ್ಟಿರದಿದ್ದರೆ, ಅದರ ಮೇಲೆ ಯಾವುದೇ ಕಟ್ಟಡವನ್ನು ಕಟ್ಟಲು ಇಚ್ಛಿಸಿದರೆ ಆಯುಕ್ತರು, ಆ ಮಾಲೀಕನು ಅನುಮೋದಿಸತಕ್ಕಂಥ ರೀತಿಯಲ್ಲಿ ಒಳಚರಂಡಿಯನ್ನು ಮುಚ್ಚಲು, ತೆಗೆದುಹಾಕಲು ಅಥವಾ ಒಳಚರಂಡಿ ಮಾರ್ಗವನ್ನು ಬದಲಾಯಿಸಲು ಮತ್ತು ಒಳಚರಂಡಿಯನ್ನು ಆ ಸ್ವತ್ತಿನ ಮೇಲೆ, ಕೆಳಗೆ, ಅದರಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಹಾಕಿರದಿದ್ದರೆ ಆ ಸ್ವತ್ತು ಹೇಗಿರುತ್ತಿತ್ತೊ ಹಾಗೆ ಆ ಸ್ಥಿರ ಸ್ವತ್ತನ್ನು ಮುಚ್ಚಲು ಪೂರ್ವಸ್ಥಿತಿಗೆ ತರಲು ಮತ್ತು ಭರ್ತಿ ಮಾಡಲು ಲಿಖಿತ ನೋಟೀಸಿನ ಮೂಲಕ ಆವರಣದ ಮಾಲೀಕನನ್ನು ಅಗತ್ಯಪಡಿಸತಕ್ಕದ್ದು:

ಪರಂತು, ಉದ್ದೇಶಿತ ಕಟ್ಟಡವನ್ನು ಕಟ್ಟುವುದಕ್ಕಾಗಿ ಅಥವಾ ಅದರ ಸುರಕ್ಷಿತ ಅನುಭೋಗಕ್ಕಾಗಿ ಒಳಚರಂಡಿಯನ್ನು ಮುಚ್ಚುವುದು, ತೆಗೆದುಹಾಕುವುದು ಅಥವಾ ಅದರ ಮಾರ್ಗವನ್ನು ಬದಲಾಯಿಸುವುದು ಅವಶ್ಯವೆಂದು ಅಥವಾ ವಿಹಿತವೆಂದು ಆಯುಕ್ತರು ಅಭಿಪ್ರಾಯಪಟ್ಟ ಹೊರತು, ಹಾಗೆ ಅಗತ್ಯಪಡಿಸತಕ್ಕದ್ದಲ್ಲ.

**237. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಧಿಕಾರ.–** (1) ಈ ಅಧ್ಯಾಯದ ಉಪಬಂಧಗಳ ಮೇರೆಗೆ, ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಯಾರೇ ವ್ಯಕ್ತಿಯನ್ನು ಅಗತ್ಯಪಡಿಸಬಹುದಾದಾಗ ಅಥವಾ ಅವನು ಹೊಣೆಗಾರನಾದಾಗ, ಆಯುಕ್ತರು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಈ ಬಗ್ಗೆ ರಚಿಸಿದ ಯಾವುದೇ ಉಪವಿಧಿಗಳಿಗೆ ಅನುಸಾರವಾಗಿ ಈ ಉದ್ದೇಶಕ್ಕಾಗಿ ಅವರು ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಆ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಂಥ ವ್ಯಕ್ತಿಗೆ ಅವಕಾಶವನ್ನು ಕೊಟ್ಟ ತರುವಾಯ ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವಂತೆ ಮಾಡತಕ್ಕದ್ದು.

(2) ಅಂಥ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಆಯುಕ್ತರು ವಹಿಸಿದ ಅಥವಾ ವಹಿಸುವ ಸಂಭವವಿರುವ ವೆಚ್ಚಗಳನ್ನು ಸದರಿ ವ್ಯಕ್ತಿಯು ಸಂದಾಯ ಮಾಡತಕ್ಕದ್ದು ಮತ್ತು ಅಂಥ ಕಾಮಗಾರಿಯ ನಿರ್ವಹಣೆಗೆ ಸಂಬಂಧಿಸಿದಂತೆ ಆಯುಕ್ತರು ವಹಿಸಿದ ವೆಚ್ಚಗಳನ್ನು, ಅಂಥ ಕಾಮಗಾರಿಯಿಂದ ದೊರೆಯುವಂಥ ಸೌಕರ್ಯಗಳನ್ನು ಮತ್ತು ಅನುಕೂಲತೆಗಳನ್ನು ಅನುಭೋಗಿಸುತ್ತಿರುವ ವ್ಯಕ್ತಿ ಅಥವಾ ವ್ಯಕ್ತಿಗಳು ಸಂದಾಯ ಮಾಡತಕ್ಕದ್ದು.

(3) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವೆಚ್ಚಗಳು, ಅವುಗಳಿಗೆ ಹೊಣೆಗಾರನಾದ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳಿಂದ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ವೆಚ್ಚಗಳ ಬಾಕಿಯಂತೆ ವಸೂಲಿ ಮಾಡುವಂಥವು ಆಗಿರತಕ್ಕದ್ದು.

**238. ಒಳಚರಂಡಿಯಲ್ಲಿ ಅಥವಾ ರೊಚ್ಚುಗುಂಡಿಯಲ್ಲಿ ವಾಯುಸಂಚಾರಕ್ಕಾಗಿ ಶಾಫ್ಟ್‌ಗಳು, ಇತ್ಯಾದಿಗಳನ್ನು ಅಳವಡಿಸಲು ಅಧಿಕಾರ.–** ಯಾವುದೇ ಒಳಚರಂಡಿಯು ಅಥವಾ ರೊಚ್ಚುಗುಂಡಿಯು, ನಗರಪಾಲಿಕೆಯಲ್ಲಿ ನಿಹಿತವಾಗಿರಲಿ ಅಥವಾ ಇಲ್ಲದಿರಲಿ, ಅದರಲ್ಲಿ ವಾಯಸಂಚಾರದ ಉದ್ದೇಶಕ್ಕಾಗಿ ಆಯುಕ್ತರು ಈ ಬಗ್ಗೆ ರಚಿಸಲಾದ ಉಪವಿಧಿಗಳಿಗೆ ಅನುಸಾರವಾಗಿ, ಅವರಿಗೆ ಅವಶ್ಯವೆಂದು ಕಂಡುಬರಬಹುದಾದಂಥ ಯಾವುದೇ ಶಾಫ್ಟನ್ನು ಅಥವಾ ಪೈಪನ್ನು ಯಾವುದೇ ಆವರಣದ ಮೇಲೆ ನಿಲ್ಲಿಸಬಹುದು ಅಥವಾ ಯಾವುದೇ ಕಟ್ಟಡದ ಹೊರಭಾಗಕ್ಕೆ ಅಥವಾ ಯಾವುದೇ ಮರಕ್ಕೆ ಅಳವಡಿಸಬಹುದು.

**239. ದೋಷಪೂರಿತವೆಂದು ನಂಬಲಾದ ಒಳಚರಂಡಿಗಳು, ಇತ್ಯಾದಿಗಳನ್ನು ಪರಿಶೀಲಿಸಲು ಮತ್ತು ಪರೀಕ್ಷಿಸಲು ಅಧಿಕಾರ.–** (1) ಖಾಸಗಿ ಒಳಚರಂಡಿಯು ಅಥವಾ ರೊಚ್ಚುಗುಂಡಿಯು ಆರೋಗ್ಯಕ್ಕೆ ಹಾನಿಕರವಾಗುವಂಥ ಅಥವಾ ಉಪದ್ರವಕಾರಿಯಾದ ಸ್ಥಿತಿಯಲ್ಲಿದೆ ಎಂದು ಅಥವಾ ನಗರಪಾಲಿಕೆಯ ಒಳಚರಂಡಿಯೊಂದಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಸಂಪರ್ಕಿಸುವ ಖಾಸಗಿ ಒಳಚರಂಡಿಯು ಭೂ ಒಳಪದರದ ನೀರು ಅದರೊಳಕ್ಕೆ ಬರುವ ಹಾಗೆ ದೋಷಪೂರಿತವಾಗಿದೆ ಎಂದು ನಂಬಲು ಯುಕ್ತ ಕಾರಣಗಳಿವೆ ಎಂದು ಆಯುಕ್ತರಿಗೆ ಕಂಡುಬಂದಲ್ಲಿ, ಅವರು ಅದರ ಸ್ಥಿತಿಯನ್ನು ಪರಿಶೀಲಿಸಬಹುದು ಮತ್ತು ಆ ಉದ್ದೇಶಕ್ಕಾಗಿ ರಭಸವಾಗಿ ನೀರನ್ನು ಹರಿಸಿ ಮಾಡುವ ಪರೀಕ್ಷೆಯಲ್ಲದ ಯಾವುದೇ ಪರೀಕ್ಷೆಯನ್ನು ಮಾಡಬಹುದು ಮತ್ತು ಅವರು ಅವಶ್ಯವೆಂದು ಭಾವಿಸಿದರೆ ಭೂಮಿಯನ್ನು ಅಗೆಯಬಹುದು.

(2) ಪರಿಶೀಲನೆ ಮಾಡಿದ ಮೇಲೆ, ಒಳಚರಂಡಿಯು ಅಥವಾ ರೊಚ್ಚುಗುಂಡಿಯು ಸರಿಯಾದ ಸ್ಥಿತಿಯಲ್ಲಿದೆ ಎಂದು ಕಂಡುಬಂದರೆ, ಆಯುಕ್ತರು, ಸಾಧ್ಯವಾದಷ್ಟು ಬೇಗನೆ, ಅಗೆದ ಭೂಮಿಯನ್ನು ಪುನಃ ಭರ್ತಿಮಾಡತಕ್ಕದ್ದು ಮತ್ತು ಅವರಿಂದ ಆದ ಹಾನಿಯನ್ನು ತುಂಬಿಕೊಡತಕ್ಕದ್ದು.

**240. ನಗರಪಾಲಿಕೆಯ ಒಳಚರಂಡಿ ವ್ಯವಸ್ಥೆಗೆ ಸಂಬಂಧಿಸಿದ ಕಾಮಗಾರಿಯನ್ನು ಲೈಸೆನ್ಸ್ ಪಡೆದ ಕೊಳಾಯಿಗಾರನು ಮಾಡತಕ್ಕದ್ದು.–** (1) ನಗರಪಾಲಿಕೆಯ ಒಳಚರಂಡಿ ವ್ಯವಸ್ಥೆಗೆ ಸಂಬಂಧಿಸಿದ ಯಾವುದೇ ಕಾಮಗಾರಿಯನ್ನು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ, ಯಾರೇ ಇತರ ವ್ಯಕ್ತಿಯು ಕಾರ್ಯಗತಗೊಳಿಸತಕ್ಕದ್ದಲ್ಲ ಮತ್ತು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾರೇ ವ್ಯಕ್ತಿಯು ಅಂಥ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅನುಮತಿಸತಕ್ಕದ್ದಲ್ಲ:

ಪರಂತು, ಕಾಮಗಾರಿಯು ಸಣ್ಣಪುಟ್ಟ ಸ್ವರೂಪದ್ದಾಗಿದೆ ಎಂದು ನಗರಪಾಲಿಕೆಯ ಇಂಜಿನಿಯರನು ಅಭಿಪ್ರಾಯಪಟ್ಟರೆ, ಅವರು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ, ಇತರ ವ್ಯಕ್ತಿಗೆ ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಲಿಖಿತದಲ್ಲಿ ಅನುಮತಿಯನ್ನು ಕೊಡಬಹುದು.

(2) 218ನೇ ಪ್ರಕರಣದ ಉಪಬಂಧಗಳು, ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಕಾಮಗಾರಿಗೆ ಸಂಬಂಧಿಸಿದಂತೆ ಅವು ಅನ್ವಯವಾಗುವಂತೆಯೇ ಯಾವುದೇ ಚರಂಡಿಗೆ ಸಂಬಂಧಿಸಿದ ಯಾವುದೇ ಕಾಮಗಾರಿಗೆ ಸಂಬಂಧಿಸಿದಂತೆಯು ಅನ್ವಯವಾಗತಕ್ಕದ್ದು.

**241. ಒಳಚರಂಡಿಗೆ ಸಂಬಂಧಿಸಿದಂತೆ ಕೆಲವು ಕಾರ್ಯಗಳ ನಿಷೇಧ.–** ಯಾರೇ ವ್ಯಕ್ತಿಯು,–

(ಎ) ನಗರಪಾಲಿಕೆಯ ಅಥವಾ ಆಯುಕ್ತರ ಪ್ರಾಧಿಕಾರದ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯನ್ನು ಯಾವುದೇ ಒಳಚರಂಡಿ ಮಾರ್ಗಗಳನ್ನು ಹಾಕುವಾಗ ಉದ್ದೇಶಪೂರ್ವಕವಾಗಿ ಅಡ್ಡಿಪಡಿಸತಕ್ಕದ್ದಲ್ಲ ಅಥವಾ ಅಂಥ ಒಳಚರಂಡಿ ಮಾರ್ಗಗಳನ್ನು ಹಾಕುವ

ಉದ್ದೇಶಕ್ಕಾಗಿ ಭೂಮಿಯಲ್ಲಿ ನೆಟ್ಟಿರುವ ಯಾವುದೇ ಕಂಬ, ಸ್ತಂಭ ಅಥವಾ ಗೂಟವನ್ನು ಕಿತ್ತುಹಾಕತಕ್ಕದ್ದಲ್ಲ ಅಥವಾ ತೆಗೆದುಹಾಕತಕ್ಕದ್ದಲ್ಲ ಅಥವಾ ಅದೇ ಉದ್ದೇಶಕ್ಕಾಗಿ ಮಾಡಲಾದ ಯಾವುದೇ ಕಾಮಗಾರಿಗಳನ್ನು ವಿರೂಪಗೊಳಿಸತಕ್ಕದ್ದಲ್ಲ ಅಥವಾ ನಾಶಗೊಳಿಸತಕ್ಕದ್ದಲ್ಲ; ಅಥವಾ

(ಬಿ) ನಗರಪಾಲಿಕೆಗೆ ಸೇರಿದ ಯಾವುದೇ ಬೀಗ, ತಿರುಪು, ಕವಾಟ, ಪೈಪು ಅಥವಾ ಇತರ ಕಾರ್ಯೋಪಕರಣ ಅಥವಾ ಸಲಕರಣೆಯನ್ನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷ್ಯದಿಂದ ಒಡೆಯತಕ್ಕದ್ದಲ್ಲ, ಹಾನಿಗೊಳಿಸತಕ್ಕದ್ದಲ್ಲ, ತಿರುಗಿಸತಕ್ಕದ್ದಲ್ಲ, ತೆರೆಯತಕ್ಕದ್ದಲ್ಲ, ಮುಚ್ಚತಕ್ಕದ್ದಲ್ಲ, ಅಥವಾ ಮುಚ್ಚಿಬಿಡತಕ್ಕದ್ದಲ್ಲ ಅಥವಾ ಅವುಗಳ ಬಗ್ಗೆ ಅನ್ಯಥಾ ಹಸ್ತಕ್ಷೇಪ ಮಾಡತಕ್ಕದ್ದಲ್ಲ; ಅಥವಾ

(ಸಿ) ನಗರಪಾಲಿಕೆಗೆ ಸೇರಿದ ಯಾವುದೇ ಒಳಚರಂಡಿ ಮಾರ್ಗದಿಂದ, ಊರಿನ ರೊಚ್ಚು ಹರಿಯುವುದನ್ನು ಅಥವಾ ರಭಸದಿಂದ ಹರಿಯುವುದನ್ನು ಕಾನೂನುಬಾಹಿರವಾಗಿ ಅಡ್ಡಿಪಡಿಸತಕ್ಕದ್ದಲ್ಲ, ಊರಿನ ರೊಚ್ಚನ್ನು ಎಳೆದುಕೊಳ್ಳತಕ್ಕದ್ದಲ್ಲ ಅಥವಾ ಬೇರೆ ಕಡೆ ತಿರುಗಿಸತಕ್ಕದ್ದಲ್ಲ ಅಥವಾ ತೆಗೆದುಕೊಳ್ಳತಕ್ಕದ್ದಲ್ಲ; ಅಥವಾ

(ಡಿ) ಈ ಅಧ್ಯಾಯದ ಮೇರೆಗೆ ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ನಗರಪಾಲಿಕೆಯ ಯಾರೇ ಅಧಿಕಾರಿಗೆ ಅಥವಾ ಇತರ ನೌಕರನಿಗೆ ಅಡ್ಡಿಯುಂಟುಮಾಡತಕ್ಕದ್ದಲ್ಲ ಅಥವಾ ಯಾವುದೇ ಒಳಚರಂಡಿ ಮಾರ್ಗಕ್ಕೆ ಸಂಬಂಧಿಸಿದಂತೆ ಈ ಅಧ್ಯಾಯದ ಮೇರೆಗೆ ಯಾವುದೇ ಪ್ರವೇಶ, ಪರಿಶೀಲನೆ, ಪರೀಕ್ಷೆ ಅಥವಾ ವಿಚಾರಣೆ ಮಾಡುವುದಕ್ಕೆ ಅವಶ್ಯವಾದ ಸಾಧನಗಳನ್ನು ಅವನಿಗೆ ಒದಗಿಸಲು ನಿರಾಕರಿಸತಕ್ಕದ್ದಲ್ಲ ಅಥವಾ ಬದ್ಧಿಪೂರ್ವಕವಾಗಿ ನಿರ್ಲಕ್ಷಿಸತಕ್ಕದ್ದಲ್ಲ.

**242. ಒಳಚರಂಡಿಗೆ ಸಂಬಂಧಿಸಿದ ಉಪವಿಧಿಗಳು.–** (1) ನಗರಪಾಲಿಕೆಯು ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸಲು ಒಳಚರಂಡಿಗೆ ಸಂಬಂಧಿಸಿದಂತೆ ಉಪವಿಧಿಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಿದ ಉಪಬಂಧಗಳಿಗೆ ಬಾಧಕವಾಗದಂತೆ, ಅಂಥ ಉಪವಿಧಿಗಳು,–

(ಎ) ಒಳಚರಂಡಿಗಳೊಳಕ್ಕೆ ಹೊಲಸು ಅಥವಾ ತಡೆಯುಂಟುಮಾಡುವ ವಸ್ತುವನ್ನು, ಮಲಿನ ನೀರನ್ನು ಅಥವಾ ಇತರ ಮಲಿನಗೊಂಡ ಮತ್ತು ಅಸಹ್ಯಕರ ವಸ್ತುವನ್ನು ವಿಸರ್ಜಿಸುವುದನ್ನು ಅಥವಾ ಒಳಚರಂಡಿಗಳೊಳಗೆ ಶೇಖರವಾಗುವುದನ್ನು ನಿಯಂತ್ರಿಸುವುದಕ್ಕೆ ಅಥವಾ ನಿಷೇಧಿಸುವುದಕ್ಕೆ;

(ಬಿ) ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿರದ ಒಳಚರಂಡಿಗಳು, ವಾಯುಸಂಚಾರ ಷಾಫ್ಟ್‌ಗಳು, ಪೈಪುಗಳು, ಕಕ್ಕಸುಗಳು, ಮೂತ್ರಿಗಳು, ರೊಚ್ಚು ಗುಂಡಿಗಳು ಮತ್ತು ಇತರ ಒಳಚರಂಡಿಮಾರ್ಗಗಳ ನಿರ್ಮಾಣ, ಬದಲಾವಣೆ, ನಿರ್ವಹಣೆ, ಸಂರಕ್ಷಣೆ, ಸ್ವಚ್ಛತೆ ಮತ್ತು ದುರಸ್ತಿಗಳನ್ನು ಯಾವುದೇ ರೀತಿಯಲ್ಲಿ ನಿಯಂತ್ರಿಸುವುದಕ್ಕೆ;

(ಸಿ) ಒಳಚರಂಡಿಗಳನ್ನು ಸ್ವಚ್ಛಗೊಳಿಸುವುದಕ್ಕೆ;

(ಡಿ) ನಗರಪಾಲಿಕೆಯ ಅಥವಾ ಆಯುಕ್ತರ ಅನುಮತಿ ಇಲ್ಲದೆ ಒಳಚರಂಡಿಗಳ ಮೇಲೆ ಕಟ್ಟಡಗಳ ನಿರ್ಮಾಣವನ್ನು ನಿಷೇಧಿಸುವುದಕ್ಕೆ;

(ಇ) ಖಾಸಗಿ ಚರಂಡಿಗಳನ್ನು ನಗರಪಾಲಿಕೆಯ ಒಳಚರಂಡಿಗಳೊಂದಿಗೆ ಸಂಪರ್ಕ ಕಲ್ಪಿಸುವುದಕ್ಕೆ;

(ಎಫ್) ರೊಚ್ಚುಗುಂಡಿಗಳ ಸ್ಥಳಕ್ಕೆ ಮತ್ತು ನಿರ್ಮಾಣಕ್ಕೆ;

(ಜಿ) ರೊಚ್ಚುಗುಂಡಿಗಳನ್ನು ಮುಚ್ಚುವುದಕ್ಕೆ ಮತ್ತು ಅವುಗಳಲ್ಲಿ ವಾಯುಸಂಚಾರ ವ್ಯವಸ್ಥೆಗೆ;

(ಹೆಚ್) ನಗರಪಾಲಿಕೆಯ ಒಳಚರಂಡಿಗಳೊಳಕ್ಕೆ ಯಾವುದೇ ಉದ್ಯಮದ ಆವರಣಗಳಿಂದ ಉದ್ಯಮದ ಕೊಳಚೆ ನೀರನ್ನು ದಿನದ ಯಾವ ಅವಧಿಯಲ್ಲಿ ಅಥವಾ ಅವಧಿಗಳಲ್ಲಿ ವಿಸರ್ಜಿಸಬಹುದೋ ಆ ಯಾವುದೇ ಅವಧಿಗೆ ಅಥವಾ ಅವಧಿಗಳಿಗೆ;

(ಐ) ಎಲ್ಲ ಸಾಂದ್ರೀಕರಣ ವಸ್ತುವನ್ನು ಉದ್ಯಮದ ಕೊಳಚೆ ನೀರಿನಿಂದ ಹೊರತುಪಡಿಸುವುದಕ್ಕೆ;

(ಜೆ) ಉದ್ಯಮದ ಕೊಳಚೆ ನೀರು, ನಗರಪಾಲಿಕೆಯ ಒಳಚರಂಡಿಗಳನ್ನು ಪ್ರವೇಶಿಸುವುದಕ್ಕೆ ಮೊದಲು, ಅದರ ಯಾವ ಘಟಕಾಂಶವು, ಅದೊಂದೇ ಆಗಲಿ ಅಥವಾ ನಗರಪಾಲಿಕೆಯ ಒಳಚರಂಡಿಗಳ ಮೂಲಕ ಹರಿದು ಹೋಗುವಾಗ ಅದರ ಸಂಪರ್ಕಕ್ಕೆ ಬರುವ ಸಂಭವವಿರುವಂಥ ಯಾವುದೇ ವಸ್ತುವಿನೊಡನೆ ಸೇರಿಯಾಗಲಿ, ಆ ಒಳಚರಂಡಿಗಳಿಗೆ ಹಾನಿಯನ್ನು ಅಥವಾ ತಡೆಯನ್ನು ಉಂಟು ಮಾಡುತ್ತದೆ ಎಂದು ಅಥವಾ ಆ ಒಳಚರಂಡಿಗಳಿಂದ ಊರಿನ ರೊಚ್ಚನ್ನು ಸಂಸ್ಕರಣೆ ಮಾಡಲು ಅಥವಾ ಅದನ್ನು ಆ ಒಳಚರಂಡಿಗಳಿಂದ ವಿಲೆಮಾಡಲು ವಿಶೇಷವಾಗಿ ಕಷ್ಟಕರವಾಗಿಸುತ್ತದೆಂದು ಅಥವಾ ದುಬಾರಿಯಾಗಿಸುತ್ತದೆಂದು ನಗರಪಾಲಿಕೆಯು ಅಭಿಪ್ರಾಯಪಡುತ್ತದೋ ಆ ಯಾವುದೇ ಘಟಕಾಂಶವನ್ನು ಉದ್ಯಮದ ಕೊಳಚೆ ನೀರಿನಿಂದ ಹೊರ ಹಾಕುವುದಕ್ಕೆ;

(ಕೆ) ಯಾವುದೇ ಸಮ್ಮತಿ ಅಥವಾ ಅನುಮತಿ ಇಲ್ಲದೆ ಯಾವುದೇ ಉದ್ಯಮದ ಆವರಣದಿಂದ ನಗರಪಾಲಿಕೆಯ ಒಳಚರಂಡಿಗಳ ಒಳಕ್ಕೆ ಯಾವುದೇ ಒಂದು ದಿನದಲ್ಲಿ ವಿಸರ್ಜಿಸಬಹುದಾದಂಥ ಉದ್ಯಮದ ಕೊಳಚೆ ನೀರಿನ ಗರಿಷ್ಠ ಪರಿಮಾಣಕ್ಕೆ ಮತ್ತು ಅಂಥ ಸಮ್ಮತಿ ಅಥವಾ ಅನುಮತಿ ಇಲ್ಲದೆ ಯಾವುದೇ ಉದ್ಯಮದ ಆವರಣದಿಂದ ನಗರಪಾಲಿಕೆಯ ಒಳಚರಂಡಿಗಳೊಳಕ್ಕೆ ವಿಸರ್ಜಿಸಬಹುದಾದ ಉದ್ಯಮದ ಕೊಳಚೆ ನೀರಿನ ಅತಿ ಹೆಚ್ಚಿನ ಪ್ರಮಾಣಕ್ಕೆ;

(ಎಲ್) ನಗರಪಾಲಿಕೆಯ ಒಳಚರಂಡಿಗಳ ಒಳಕ್ಕೆ ಉದ್ಯಮದ ಕೊಳಚೆ ನೀರನ್ನು ವಿಸರ್ಜಿಸುವ ಸಮಯದಲ್ಲಿ ಅದರ ಉಷ್ಣಾಂಶದ ನಿಯಂತ್ರಣಕ್ಕೆ ಮತ್ತು ಹಾಗೆ ವಿಸರ್ಜಿಸುವ ಸಮಯದಲ್ಲಿ ಉದ್ಯಮದ ಕೊಳಚೆ ನೀರು ನಿಷ್ಪರಿಣಾಮ ಸ್ಥಿತಿಯಲ್ಲಿ ಇರುವುದನ್ನು (ಎಂದರೆ ಅದು ಆಮ್ಲೀಯವೂ ಅಲ್ಲದ ಅಥವಾ ಕ್ಷಾರೀಯವೂ ಅಲ್ಲದ ಸ್ಥಿತಿಯಲ್ಲಿರುವುದನ್ನು) ಸುನಿಶ್ಚಿತಪಡಿಸಿಕೊಳ್ಳುವುದಕ್ಕೆ;

(ಎಂ) ಉದ್ಯಮದ ಕೊಳಚೆ ನೀರು ನಗರಪಾಲಿಕೆಯ ಒಳಚರಂಡಿಗಳ ಒಳಕ್ಕೆ ಬಂದು ಸೇರುವುದಕ್ಕೆ ಮತ್ತು ಅದರ ವಿಲೆಗೆ ಉದ್ಯಮದ ಆವರಣದ ಅಧಿಭೋಗದಾರರು ನಗರಪಾಲಿಕೆಗೆ ಸಂದಾಯ ಮಾಡಬೇಕಾದ ವೆಚ್ಚಕ್ಕೆ;

(ಎನ್) ಉದ್ಯಮದ ಆವರಣದಿಂದ ನಗರಪಾಲಿಕೆಯ ಒಳಚರಂಡಿಗಳ ಒಳಕ್ಕೆ ಹರಿದು ಬರುತ್ತಿರುವುದರ ಮಾದರಿಗಳನ್ನು ಯಾವುದೇ ಕಾಲದಲ್ಲಿ ಸುಲಭವಾಗಿ ತೆಗೆದುಕೊಳ್ಳಲು ವ್ಯಕ್ತಿಗೆ ಅನುಕೂಲವಾಗುವಂಥ ಇನ್ಸ್‌ಪೆಕ್ಷನ್ ಚೇಂಬರನ್ನು ಅಥವಾ ಮ್ಯಾನ್ ಹೋಲನ್ನು ನಿರ್ಮಾಣ ಮಾಡುವುದಕ್ಕೆ ಮತ್ತು ಅದರ ನಿರ್ವಹಣೆಗೆ;

(ಓ) ಯಾವುದೇ ಉದ್ಯಮದ ಆವರಣದಿಂದ ನಗರಪಾಲಿಕೆಯ ಒಳಚರಂಡಿಗಳ ಒಳಕ್ಕೆ ವಿಸರ್ಜಿಸಲಾಗುತ್ತಿರುವ ಯಾವುದೇ ಕೊಳಚೆ ನೀರಿನ ಪರಿಮಾಣವನ್ನು ಅಳೆಯುವುದಕ್ಕೆ ಅಗತ್ಯವಾಗಬಹುದಾದಂಥ ಮೀಟರುಗಳನ್ನು ಅಳವಡಿಸುವುದಕ್ಕೆ ಮತ್ತು ಅವುಗಳ ನಿರ್ವಹಣೆಗೆ ಮತ್ತು ಅಂಥ ಮೀಟರುಗಳನ್ನು ಪರೀಕ್ಷೆ ಮಾಡುವುದಕ್ಕೆ;

(ಪಿ) ಈ ಅಧ್ಯಾಯದ ಮೇರೆಗೆ ರಚಿಸಲಾದ ಉಪವಿಧಿಗಳ ಮೂಲಕ ಉಪಬಂಧಿಸಬೇಕಾದ ಅಥವಾ ಉಪಬಂಧಿಸಬಹುದಾದ ಯಾವುದೇ ಇತರ ವಿಷಯಕ್ಕೆ

– ಉಪಬಂಧ ಕಲ್ಪಿಸಬಹುದು.

(3) ಈ ಪ್ರಕರಣದ ಮೇರೆಗೆ ಯಾವುದೇ ಉಪವಿಧಿಯನ್ನು ರಚಿಸುವಾಗ, ಅದರ ಉಲ್ಲಂಘನೆಯು ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಆ ಉಲ್ಲಂಘನೆಯು ಮುಂದುವರಿದ ಸಂದರ್ಭಗಳಲ್ಲಿ, ಅಂಥ ಉಲ್ಲಂಘನೆಯನ್ನು ಮುಂದುವರಿಸದಂತೆ ನಗರಪಾಲಿಕೆಯು ನೀಡಿದ ನೋಟೀಸನ್ನು ಸ್ವೀಕರಿಸಿದ ತರುವಾಯವೂ ಉಲ್ಲಂಘನೆಯನ್ನು ಮುಂದುವರಿಸಿದ ಅವಧಿಯಲ್ಲಿ ಪ್ರತಿಯೊಂದು ದಿನಕ್ಕೆ ಹತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯವಾಗತಕ್ಕದ್ದೆಂದು ನಗರಪಾಲಿಕೆಯು ಉಪಬಂಧಿಸಬಹುದು.

**243. ಸರ್ಕಾರದಿಂದ ನೇಮಕಗೊಂಡ ವ್ಯಕ್ತಿಗಳಿಂದ ನಗರಪಾಲಿಕೆಯ ನೀರು ಸರಬರಾಜು ಕಾಮಗಾರಿಗಳ ಅಥವಾ ಒಳಚರಂಡಿ ಕಾಮಗಾರಿಗಳ ಪರಿಶೀಲನೆ.–** ಈ ಬಗ್ಗೆ ಸರ್ಕಾರದಿಂದ ನೇಮಕಗೊಂಡ ಯಾರೇ ವ್ಯಕ್ತಿಯು, ನಗರಪಾಲಿಕೆಯ ಯಾವುದೇ ನೀರು ಸರಬರಾಜು ಕಾಮಗಾರಿಗಳ ಅಥವಾ ಒಳಚರಂಡಿ ಕಾಮಗಾರಿಗಳ ಸ್ಥಳಕ್ಕೆ ಎಲ್ಲ ಯುಕ್ತ ಕಾಲಗಳಲ್ಲಿ ಪ್ರವೇಶಿಸುವ ಮತ್ತು ಅವುಗಳನ್ನು ಪರಿಶೀಲಿಸುವ ಸ್ವಾತಂತ್ರ್ಯ ಹೊಂದಿರತಕ್ಕದ್ದು.

**244. ಸರ್ಕಾರದ ಏಜನ್ಸಿಯ ಮೂಲಕ ಕಾಮಗಾರಿಗಳ ನಿರ್ವಹಣೆ.–** ನೀರು ಸರಬರಾಜು ಅಥವಾ ಚರಂಡಿ ಯೋಜನೆಯನ್ನು ನಿರ್ವಹಿಸಲು ನಗರಪಾಲಿಕೆಯು ಸಾಕಷ್ಟು ತಾಂತ್ರಿಕ ನೆರವನ್ನು ಹೊಂದಿಲ್ಲವೆಂದು ಸರ್ಕಾರವು ಪರಿಗಣಿಸಿದಾಗ, ಅದು ನಗರಪಾಲಿಕೆಯ ಕೋರಿಕೆಯಂತೆ, ಯಾವುದೇ ನೀರು ಸರಬರಾಜು ಅಥವಾ ಚರಂಡಿ ಯೋಜನೆಯನ್ನು ಸರ್ಕಾರದ ಲೋಕೋಪಯೋಗಿ ಇಲಾಖೆಯ ಮುಖಾಂತರ ನಿರ್ವಹಿಸಲು ನಿರ್ದೇಶಿಸಬಹುದು.

**245. ಸಾರ್ವಜನಿಕ ಕಕ್ಕಸುಗಳ ವ್ಯವಸ್ಥೆ.–** ನಗರಪಾಲಿಕೆಯು ಸರಿಯಾದ ಮತ್ತು ಅನುಕೂಲವಾದ ಸ್ಥಳಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಸಾರ್ವಜನಿಕ ಕಕ್ಕಸುಗಳನ್ನು ವ್ಯವಸ್ಥೆ ಮಾಡತಕ್ಕದ್ದು ಮತ್ತು ಅವುಗಳನ್ನು ನಿರ್ವಹಿಸತಕ್ಕದ್ದು ಮತ್ತು ಅವುಗಳನ್ನು ಸ್ವಚ್ಛವಾದ ಮತ್ತು ಸರಿಯಾದ ರೀತಿಯಲ್ಲಿಟ್ಟುಕೊಳ್ಳುವಂತೆ ಮಾಡತಕ್ಕದ್ದು.

**246. ಸಾರ್ವಜನಿಕ ಕಕ್ಕಸುಗಳಿಗೆ ಲೈಸೆನ್ಸ್ ನೀಡಿಕೆ.–** (1) ಆಯುಕ್ತರು, ಸಾರ್ವಜನಿಕರ ಬಳಕೆಗಾಗಿ ಕಕ್ಕಸುಗಳ ವ್ಯವಸ್ಥೆ ಮತ್ತು ಅವುಗಳ ನಿರ್ವಹಣೆಗೆ ಒಂದು ವರ್ಷಕ್ಕೆ ಮೀರದ ಯಾವುದೇ ಅವಧಿಗೆ ಲೈಸೆನ್ಸ್ ಕೊಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯು ಲೈಸೆನ್ಸ್ ಇಲ್ಲದೆ ಸಾರ್ವಜನಿಕ ಕಕ್ಕಸನ್ನು ನಿರ್ವಹಣೆ ಮಾಡತಕ್ಕದ್ದಲ್ಲ.

(3) ಸಾರ್ವಜನಿಕ ಕಕ್ಕಸನ್ನು ನಿರ್ವಹಿಸಲು ಲೈಸೆನ್ಸು ಪಡೆದ ಪ್ರತಿಯೊಬ್ಬ ವ್ಯಕ್ತಿಯು, ಅದನ್ನು ಸ್ವಚ್ಛವಾದ ಮತ್ತು ಸರಿಯಾದ ರೀತಿಯಲ್ಲಿ ನಿರ್ವಹಿಸತಕ್ಕದ್ದು.

**247. ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ಕಕ್ಕಸುಗಳ ವ್ಯವಸ್ಥೆ.–** (1) ಆಯುಕ್ತರು ನೋಟೀಸಿನ ಮೂಲಕ, ಯಾವುದೇ ಕಟ್ಟಡದ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಮತ್ತು ಅಂಥ ನಿರ್ದೇಶನಕ್ಕೆ ಅನುಸಾರವಾಗಿ ಅಂಥ ಕಟ್ಟಡದಲ್ಲಿ ಅಥವಾ ಸುತ್ತಮುತ್ತ ನಿಯೋಜಿತರಾದ ಅಥವಾ ಅಂಥ ಕಟ್ಟಡವನ್ನು ಅಧಿಭೋಗಿಸುತ್ತಿರುವ ವ್ಯಕ್ತಿಗಳ ಬಳಕೆಗಾಗಿ ನೀರನ್ನು ರಭಸವಾಗಿ ಹರಿಸಿ ತೊಳೆಯುವ ಅಥವಾ ಇತರ ಕಕ್ಕಸುಗಳನ್ನು ವ್ಯವಸ್ಥೆ ಮಾಡುವಂತೆ ಅಥವಾ ಹಾಲಿ ಇರುವ ಯಾವುದೇ ಕಕ್ಕಸನ್ನು ಬದಲಾಯಿಸುವಂತೆ ಅಥವಾ ಸೂಕ್ತವಲ್ಲದ ಸ್ಥಳದಿಂದ ಹೆಚ್ಚು ಸೂಕ್ತವಾದ ಸ್ಥಳಕ್ಕೆ ಸ್ಥಳಾಂತರಿಸುವಂತೆ ಅಗತ್ಯಪಡಿಸಬಹುದು. ಅಂಥ ಮಾಲೀಕನು ಅಥವಾ ಅಧಿಭೋಗದಾರನು ಅಂಥ ಪ್ರತಿಯೊಂದು ಕಕ್ಕಸನ್ನು ಸ್ವಚ್ಛವಾಗಿ ಮತ್ತು ಸರಿಯಾದ ರೀತಿಯಲ್ಲಿ ನಿರ್ವಹಿಸತಕ್ಕದ್ದು.

(2) ಸಾಲು ಗುಡಿಸಲುಗಳು ಇರುವ ಯವುದೇ ಭೂಮಿಯ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು ಆಯುಕ್ತರು ಕೊಟ್ಟ ನೋಟೀಸಿನಲ್ಲಿ ನಿಗದಿಪಡಿಸಬಹುದಾದಂಥ ಕಾಲದೊಳಗೆ ಮತ್ತು ಅಂಥ ನಿರ್ದೇಶನಗಳಿಗೆ ಅನುಸಾರವಾಗಿ ಅಂಥ ಸಾಲು ಗುಡಿಸಲುಗಳ ನಿವಾಸಿಗಳ ಬಳಕೆಗಾಗಿ ನೀರನ್ನು ರಭಸವಾಗಿ ಹರಿಸಿ ತೊಳೆಯುವ ಅಥವಾ ಇತರ ಕಕ್ಕಸುಗಳನ್ನು ವ್ಯವಸ್ಥೆ ಮಾಡತಕ್ಕದ್ದು ಅಥವಾ ಹಾಲಿ ಇರುವ ಯಾವುದೇ ಕಕ್ಕಸನ್ನು ಸೂಕ್ತವಲ್ಲದ ಸ್ಥಳದಿಂದ ಹೆಚ್ಚು ಸೂಕ್ತವಾದ ಸ್ಥಳಕ್ಕೆ ಸ್ಥಳಾಂತರಿಸತಕ್ಕದ್ದು ಮತ್ತು ಅವುಗಳನ್ನು ಸ್ವಚ್ಛವಾಗಿ ಮತ್ತು ಸರಿಯಾದ ರೀತಿಯಲ್ಲಿ ನಿರ್ವಹಿಸತಕ್ಕದ್ದು.

**248. ಕಾರ್ಮಿಕರಿಗೆ ಕಕ್ಕಸುಗಳ ಮತ್ತು ಮೂತ್ರಿಗಳ ವ್ಯವಸ್ಥೆ.–** ಇಪ್ಪತ್ತಕ್ಕೆ ಮೀರಿದ ಸಂಖ್ಯೆಯ ಕೆಲಸಗಾರರನ್ನು, ಕಾರ್ಮಿಕರನ್ನು ಅಥವಾ ಇತರ ವ್ಯಕ್ತಿಗಳನ್ನು ನಿಯೋಜಿಸಿಕೊಳ್ಳುವ ಪ್ರತಿಯೊಬ್ಬ ವ್ಯಕ್ತಿಯು, ಹಾಗೆ ನಿಯೋಜಿತರಾದ ಸ್ತ್ರೀಯರ ಮತ್ತು ಪುರುಷರ ಬಳಕೆಗಾಗಿ ಪ್ರತ್ಯೇಕವಾಗಿ, ಆಯುಕ್ತರು ನೋಟೀಸಿನ ಮೂಲಕ ಅಗತ್ಯಪಡಿಸಬಹುದಾದಷ್ಟು ಸಂಖ್ಯೆಯ ಮತ್ತು ಅಂಥ ವರ್ಣನೆಯ, ನೀರನ್ನು ರಭಸವಾಗಿ ಹರಿಸಿ, ತೊಳೆಯುವ ಅಥವಾ ಇತರ ಬಗೆಯ ಕಕ್ಕಸುಗಳನ್ನು ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ವ್ಯವಸ್ಥೆ ಮಾಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ಅವುಗಳನ್ನು ಸ್ವಚ್ಛವಾದ ಮತ್ತು ಸರಿಯಾದ ರೀತಿಯಲ್ಲಿ ಇಡತಕ್ಕದ್ದು.

**249. ಮಾರುಕಟ್ಟೆಗಳಲ್ಲಿ, ಗಾಡಿ ನಿಲ್ದಾಣಗಳಲ್ಲಿ ಮತ್ತು ದನಗಳ ನಿಲ್ದಾಣಗಳಲ್ಲಿ ಕಕ್ಕಸುಗಳ ಮತ್ತು ಮೂತ್ರಿಗಳ ವ್ಯವಸ್ಥೆ.–** ಆಯುಕ್ತರು ನೋಟೀಸಿನ ಮೂಲಕ, ಗಾಡಿ ನಿಲ್ದಾಣ, ದನಗಳ ನಿಲ್ದಾಣ, ಛತ್ರ, ಥಿಯೇಟರ್, ರೈಲ್ವೆ ನಿಲ್ದಾಣ ಅಥವಾ ಸಾರ್ವಜನಿಕರು ಸೇರುವ ಇತರ ಸ್ಥಳಗಳ ಯಾರೇ ಮಾಲೀಕನಿಗೆ ಅಥವಾ ವ್ಯವಸ್ಥಾಪಕನಿಗೆ, ಸ್ತ್ರೀಯರ ಮತ್ತು ಪುರುಷರ ಪ್ರತ್ಯೇಕ ಬಳಕೆಗಾಗಿ ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಮತ್ತು ಅಂಥ ಸ್ಥಳದಲ್ಲಿ ಮತ್ತು ಅಂಥ ವರ್ಣನೆಯ ಮತ್ತು ಅಷ್ಟು ಸಂಖ್ಯೆಯ ನೀರನ್ನು ರಭಸವಾಗಿ ಹರಿಸಿ ತೊಳೆಯುವ ಅಥವಾ ಇತರ ಬಗೆಯ ಕಕ್ಕಸುಗಳನ್ನು ಒದಗಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ಅವುಗಳನ್ನು ಸ್ವಚ್ಛವಾದ ಮತ್ತು ಸರಿಯಾದ ರೀತಿಯಲ್ಲಿ ಇಡತಕ್ಕದ್ದು.

**250. ಕಕ್ಕಸುಗಳನ್ನು ಕಾಣದಂತೆ ಮರೆ ಮಾಡುವುದು.–** ನೀರನ್ನು ರಭಸವಾಗಿ ಹರಿಸಿ ತೊಳೆಯುವ ಅಥವಾ ಇತರ ಬಗೆಯ ಕಕ್ಕಸುಗಳನ್ನು, ಅವುಗಳನ್ನು ಬಳಸುವ ವ್ಯಕ್ತಿಗಳು ಅವುಗಳ ಪಕ್ಕದಲ್ಲಿ ಹಾಯ್ದು ಹೋಗುವ ಅಥವಾ ಅವುಗಳ ಅಕ್ಕಪಕ್ಕದಲ್ಲಿ ವಾಸಿಸುವ ವ್ಯಕ್ತಿಗಳಿಗೆ ಕಾಣದ ಹಾಗೆ ನಿರ್ಮಿಸತಕ್ಕದ್ದು.

**251. ತಂತಿ, ಪೈಪುಗಳು, ಚರಂಡಿಗಳು, ಇತ್ಯಾದಿಗಳನ್ನು ಖಾಸಗಿ ಸ್ವತ್ತಿನ ಮೂಲಕ ಒಯ್ಯಲು ಅಧಿಕಾರ.–** ಆಯುಕ್ತರು, ಯಾವುದೇ ರಸ್ತೆಯ, ಬೀದಿಯ ಅಥವಾ ರಸ್ತೆಗಾಗಿ ಅಥವಾ ಬೀದಿಗಾಗಿ ಗುರುತು ಮಾಡಿದ ಸ್ಥಳದ ಮೂಲಕ, ಅದಕ್ಕೆ ಅಡ್ಡಲಾಗಿ, ಅದರ ಕೆಳಗೆ ಅಥವಾ ಅದರ ಮೇಲೆ ಚರಂಡಿ, ನೀರು ಸರಬರಾಜು, ಅಥವಾ ದೀಪದ ಯಾವುದೇ ವ್ಯವಸ್ಥೆಯನ್ನು ಕಲ್ಪಿಸಲು ಅಥವಾ ನಿರ್ವಹಿಸಲು ಯಾವುದೇ ಕೇಬಲ್ಲು, ತಂತಿ, ಪೈಪು, ಚರಂಡಿ ಅಥವಾ ಯಾವುದೇ ಬಗೆಯ ಮಾರ್ಗವನ್ನು ಒಯ್ಯಬಹುದು; ಮತ್ತು ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಯುಕ್ತ ನೋಟೀಸನ್ನು ಕೊಟ್ಟ ತರುವಾಯ, ಸರ್ಕಾರದಲ್ಲಿ ನಿಹಿತವಾಗಿರದ ಮತ್ತು ಸರ್ಕಾರದ ನಿಯಂತ್ರಣದಲ್ಲಿಲ್ಲದ ನಗರದಲ್ಲಿನ ಯಾವುದೇ ಕಂಬ ಅಥವಾ ಸ್ತಂಭದ ಮೇಲೆ, ಕೇಬಲ್ಲುಗಳು, ಪೈಪುಗಳು, ಮಾರ್ಗಗಳು, ತಂತಿಗಳು ಮತ್ತು ದೀಪಗಳಿಗೆ ಆಸರೆ ಒದಗಿಸುವ ಸಲುವಾಗಿ ಸ್ತಂಭಗಳು, ಕಂಬಗಳು, ನಿಲುಗಂಬುಗಳು, ನಾಗಂದಿಗೆಗಳು ಅಥವಾ ಇತರ ಸಾಧನಗಳನ್ನು ನೆಡಬಹುದು ಮತ್ತು ನಿರ್ವಹಿಸಬಹುದು ಮತ್ತು ಅಂಥ ಯಾವುದೇ ಕೇಬಲ್ಲು, ತಂತಿ, ಪೈಪು, ಚರಂಡಿ, ಮಾರ್ಗ, ಸ್ತಂಭ, ಕಂಬ, ನಿಲುಗಂಬ, ನಾಗಂದಿಗೆ ಅಥವಾ ಅದೇ ರೀತಿಯ ಸಾಧನವನ್ನು ದುರಸ್ತಿ ಮಾಡುವುದಕ್ಕೆ ಅಥವಾ ಯಾವ ಉದ್ದೇಶಕ್ಕಾಗಿ ಅವುಗಳನ್ನು ಬಳಸಲು ಉದ್ದೇಶಿಸಲಾಗಿದೆಯೋ ಆ ಯಾವುದೇ ಉದ್ದೇಶಕ್ಕಾಗಿ ಉತ್ತಮ ಸ್ಥಿತಿಯಲ್ಲಿ ಅವುಗಳನ್ನು ನಿರ್ವಹಿಸುವುದಕ್ಕೆ ಅಥವಾ ಅದನ್ನು ಅಥವಾ ಅವುಗಳನ್ನು ತೆಗೆದುಹಾಕುವುದಕ್ಕೆ ಅವಶ್ಯವಾದ ಮತ್ತು ವಿಹಿತವಾದ ಎಲ್ಲ ಕಾರ್ಯಗಳನ್ನು ಮಾಡಬಹುದು:

ಪರಂತು, ಯಾರೇ ವ್ಯಕ್ತಿಗೆ ಹೆಚ್ಚು ಉಪದ್ರವ ಅಥವಾ ಅನಾನುಕೂಲ ಉಂಟುಮಾಡದ ಹಾಗೆ ಅಂಥ ಕೆಲಸವನ್ನು ಮಾಡತಕ್ಕದ್ದು:

ಮತ್ತೂ ಪರಂತು, ಅಂಥ ಅಧಿಕಾರವನ್ನು ಚಲಾಯಿಸುವುದರಿಂದ ಹಾನಿಯನ್ನು ಅನುಭವಿಸುವ ಯಾರೇ ವ್ಯಕ್ತಿಗೆ ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ ಆಯುಕ್ತರು ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

**252. ಅನುಮತಿಯಿಲ್ಲದೆ ಸಂಪರ್ಕ ಕಲ್ಪಿಸುವುದಕ್ಕೆ ನಿಷೇಧ.–** (1) ಯಾರೇ ವ್ಯಕ್ತಿಯು, ಆಯುಕ್ತರ ಅನುಮತಿಯಿಲ್ಲದೆ, ನಗರಪಾಲಿಕೆಯ ಯಾವುದೇ ಕೇಬಲ್ಲು, ತಂತಿ, ಪೈಪು, ಚರಂಡಿ ಅಥವಾ ಮಾರ್ಗದೊಂದಿಗೆ ಅಥವಾ ಇತರ ಯಾರೇ ವ್ಯಕ್ತಿಯು ಮನೆಯ ಸಂಪರ್ಕದೊಂದಿಗೆ ಯಾವುದೇ ಸಂಪರ್ಕ ಕಲ್ಪಿಸತಕ್ಕದ್ದಲ್ಲ.

(2) ಉಪಪ್ರಕರಣ (1)ನ್ನು ಉಲ್ಲಂಘಿಸಿ ಕಲ್ಪಿಸಿದ ಯಾವುದೇ ಸಂಪರ್ಕಗಳನ್ನು ಕಿತ್ತುಹಾಕಲು ತೆಗೆದುಹಾಕಲು, ಮುಚ್ಚಲು, ಬದಲಾಯಿಸಲು ಅಥವಾ ಪುನರ್‌ಕಲ್ಪಿಸಲು ಆಯುಕ್ತರು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

**253. ರೈಲ್ವೆ ಮಾರ್ಗದ ಮಟ್ಟ, ಇತ್ಯಾದಿಗಳನ್ನು ಎತ್ತರಿಸಲು ಅಥವಾ ತಗ್ಗಿಸಲು ಅಗತ್ಯ ಪಡಿಸುವ ಅಧಿಕಾರ.–** ರೈಲ್ವೆ ಮಾರ್ಗಕ್ಕೆ ಅಡ್ಡಲಾಗಿ ನಗರದ ನೀರು ಸರಬರಾಜು ಅಥವಾ ಚರಂಡಿ ವ್ಯವಸ್ಥೆಗೆ ಸಂಬಂಧಪಟ್ಟ ಯಾವುದೇ ಪೈಪು ಅಥವಾ ಚರಂಡಿ ಅಥವಾ ಇತರ ಕಾಮಗಾರಿಯನ್ನು ನಗರಪಾಲಿಕೆಯು ಕೈಗೊಂಡರೆ, ಅದು ಸರ್ಕಾರದ ಮಂಜೂರಾತಿ ಪಡೆದು ಮತ್ತು ನಗರಪಾಲಿಕೆಯ ನಿಧಿಯ ಖರ್ಚಿನಲ್ಲಿ ಆ ರೈಲ್ವೆ ಮಾರ್ಗದ ಮಟ್ಟವನ್ನು ಎತ್ತರಿಸುವುದಕ್ಕೆ ಅಥವಾ ತಗ್ಗಿಸುವುದಕ್ಕೆ ರೈಲ್ವೆ ಆಡಳಿತವನ್ನು ಅಗತ್ಯಪಡಿಸಬಹುದು.

**254. ನಗರದ ಹೊರಭಾಗದಲ್ಲಿನ ಕಾಮಗಾರಿಗಳಿಗೆ ಸಂಬಂಧಿಸಿದಂತೆ ನಗರಪಾಲಿಕೆಯ ಅಧಿಕಾರ.–** (1) ಸರ್ಕಾರದ ಮಂಜೂರಾತಿಯಿಲ್ಲದೆ ನಗರಪಾಲಿಕೆಯು ನಗರದ ಎಲ್ಲೆಗಳಿಂದಾಚೆ ಹೊಸ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದಲ್ಲ.

(2) ನಗರಪಾಲಿಕೆಯು ಸರ್ಕಾರವು ಮಂಜೂರು ಮಾಡಿದ ನಗರಪಾಲಿಕೆಯ ಎಲ್ಲೆಗಳಿಂದಾಚೆಗಿನ ಯಾವುವೇ ಕಾಮಗಾರಿಗಳನ್ನು ನಿರ್ವಹಿಸುವುದಕ್ಕಾಗಿ ಮತ್ತು ಆ ಉದ್ದೇಶಗಳಿಗಾಗಿ ನಗರದೊಳಗೆ ಅದು ಚಲಾಯಿಸಬಹುದಾದಂಥ ಎಲ್ಲ ಅಧಿಕಾರಗಳನ್ನು, ಯಾವ ಪ್ರದೇಶ ಪಥದ ಮೂಲಕ ಕೊಳವೆಗಳು, ಮಾರ್ಗಗಳು, ಪೈಪುಗಳು, ಲೈನುಗಳು ಅಥವಾ ಸ್ತಂಭಗಳು ಮತ್ತು ತಂತಿಗಳು ಮತ್ತು ಅಂತಹವುಗಳು ಹಾಯ್ದು ಹೋಗುವವೋ ಆ ಪ್ರದೇಶ ಪಥದ ಆದ್ಯಂತ ಮತ್ತು ನಗರಪಾಲಿಕೆಯ ಬಳಕೆಗಾಗಿ ಯಾವ ಕೆರೆಯಿಂದ ಅಥವಾ ಜಲಾಶಯದಿಂದ ನೀರು ಸರಬರಾಜನ್ನು ಪಡೆಯಲಾಗಿದೆಯೋ ಆ ಯಾವುದೇ ಕೆರೆಯ ಅಥವಾ ಜಲಾಶಯದ ಮೇಲೆ ಮತ್ತು ಅಂಥ ಯಾವುದೇ ಕೆರೆಯ ಅಥವಾ ಜಲಾಶಯದ ಭರ್ತಿಯ ಮಟ್ಟದ ಆಚೆಯ ಎರಡು ಕಿಲೋಮೀಟರುಗಳಿಗೆ ಮೀರದ ದೂರದಲ್ಲಿನ ಎಲ್ಲ ಭೂಮಿಗಳ ಮೇಲೆ ಮತ್ತು ಊರಿನ ರೊಚ್ಚು ಶೇಖರಣಾ ಫಾರ್ಮುಗಳು, ಊರಿನ ರೊಚ್ಚು ವಿಲೆ ಟ್ಯಾಂಕುಗಳು, ಶೋಧಕ ಮತ್ತು ನಗರದ ಚರಂಡಿ ವ್ಯವಸ್ಥೆಗೆ ಸಂಬಂಧಿಸಿದ ಇತರ ಕಾಮಗಾರಿಗಳಿಗೆ ಉಪಯೋಗಿಸಿದ ಯಾವುದೇ ಭೂಮಿಗಳ ಮೇಲೆ ಚಲಾಯಿಸಬಹುದು.

**255. ಹೊಲಸನ್ನು ತೆಗೆದು ಹಾಕುವುದಕ್ಕೆ ವ್ಯವಸ್ಥೆ .–** (1) ಆಯುಕ್ತರು,–

(i) ಕಸಕಡ್ಡಿ ಮತ್ತು ಹೊಲಸಿನ ತಾತ್ಕಾಲಿಕ ಶೇಖರಣೆಗಾಗಿ ಮತ್ತು ಹೊಲಸಿನ ಮತ್ತು ಪ್ರಾಣಿಗಳ ಶವಗಳ ಅಂತಿಮ ವಿಲೆಗಾಗಿ ಸರಿಯಾದ ಮತ್ತು ಅನುಕೂಲಕರವಾದ ಜಾಗಗಳಲ್ಲಿ, ಡಿಪೋಗಳನ್ನು ಅಥವಾ ಸ್ಥಳಗಳನ್ನು ಒದಗಿಸತಕ್ಕದ್ದು ಅಥವಾ ಗೊತ್ತುಪಡಿಸತಕ್ಕದ್ದು;

(ii) ಕಸದ ತಾತ್ಕಾಲಿಕ ಶೇಖರಣೆಗಾಗಿ ಕಸದ ತೊಟ್ಟಿಗಳನ್ನು ಒದಗಿಸತಕ್ಕದ್ದು;

(iii) ಪ್ರಾಣಿಗಳ ಶವಗಳನ್ನು ತೆಗೆದುಹಾಕುವುದಕ್ಕಾಗಿ ವಾಹನಗಳನ್ನು ಅಥವಾ ಇತರ ಸೂಕ್ತ ಸಾಧನಗಳನ್ನು ಒದಗಿಸತಕ್ಕದ್ದು;

(iv) ಹೊಲಸನ್ನು ತೆಗೆದುಹಾಕುವುದಕ್ಕಾಗಿ ಮುಚ್ಚಿದ ವಾಹನಗಳನ್ನು ಅಥವಾ ಭಾಂಡಗಳನ್ನು ಒದಗಿಸತಕ್ಕದ್ದು.

(2) ಆಯುಕ್ತರು, (1)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಿದ ಶೇಖರಣ ಸ್ಥಳಗಳು, ಕಸದ ತೊಟ್ಟಿಗಳು, ವಾಹನಗಳು ಮತ್ತು ಭಾಂಡಗಳು ಉಪದ್ರವದ ಮೂಲಗಳಾಗುವುದನ್ನು ತಡೆಯುವುದಕ್ಕಾಗಿ ಸಾಕಷ್ಟು ವ್ಯವಸ್ಥೆಯನ್ನು ಮಾಡತಕ್ಕದ್ದು.

**256. ಅಧಿಭೋಗದಾರನು ಕಸ ಕಡ್ಡಿ ಮತ್ತು ಹೊಲಸನ್ನು ಶೇಖರಿಸುವುದಕ್ಕೆ ಆದೇಶಿಸುವ ಸಾರ್ವಜನಿಕ ನೋಟೀಸು.–** (1) ಆಯುಕ್ತರು ಸಾರ್ವಜನಿಕ ನೋಟೀಸಿನ ಮೂಲಕ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ನಗರದ ಯಾವುದೇ ಬೀದಿಯಲ್ಲಿನ ಅಥವಾ ಕೇರಿಯಲ್ಲಿನ ಯಾವುದೇ ಆವರಣದಲ್ಲಿ ರಾಶಿಗೂಡುವ ಎಲ್ಲ ಕಸಕಡ್ಡಿ ಮತ್ತು ಹೊಲಸನ್ನು ಅಂಥ ಆವರಣದ ಮಾಲೀಕನು ಅಥವಾ ಅಧಿಭೋಗದಾರನು ಸಂಗ್ರಹಿಸತಕ್ಕದ್ದು ಮತ್ತು ಅಂಥ ಮಾಲೀಕನು ಅಥವಾ ಅಧಿಭೋಗದಾರನು ಒದಗಿಸಬೇಕಾದ ಮತ್ತು ಆ ಆವರಣದಲ್ಲಿ ಅಥವಾ ಅದರ ಸಮೀಪ ಇಟ್ಟಿರುವ, ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಬಗೆಯ ಪೆಟ್ಟಿಗೆಯಲ್ಲಿ ಅಥವಾ ಬುಟ್ಟಿಯಲ್ಲಿ ಅಥವಾ ಇತರ ತೊಟ್ಟಿಯಲ್ಲಿ ಶೇಖರಿಸತಕ್ಕದ್ದು ಎಂದು ನಿರ್ದೇಶಿಸಬಹುದು.

(2) ಆಯುಕ್ತರು, ಯಾವ ಬೀದಿಗೆ ಅಥವಾ ಕೇರಿಗೆ ಸಂಬಂಧಿಸಿದಂತೆ (1)ನೇಯ ಉಪ–ಪ್ರಕರಣದ ಮೇರೆಗೆ ನೀಡಿದ ಯಾವುದೇ ನೋಟೀಸು ತತ್ಕಾಲದಲ್ಲಿ ಜಾರಿಯಲ್ಲಿಲ್ಲವೋ ಆ ಯಾವುದೇ ಬೀದಿಯಲ್ಲಿ ಅಥವಾ ಕೇರಿಯಲ್ಲಿ ಸೂಕ್ತ ಅಂತರಗಳಲ್ಲಿ ಮತ್ತು ಸರಿಯಾದ ಮತ್ತು ಅನುಕೂಲಕರ ಜಾಗದಲ್ಲಿ

ಸಾರ್ವಜನಿಕ ಕಸದ ತೊಟ್ಟಿಗಳನ್ನು ಅಥವಾ ಇತರ ಅನುಕೂಲಕರ ತೊಟ್ಟಿಗಳನ್ನು ಒದಗಿಸುವಂತೆ ಮಾಡಬಹುದು ಮತ್ತು ಯಾವ ಆವರಣದ ಪ್ರವೇಶದ್ವಾರವು ಯಾವುದೇ ಅಂಥ ತೊಟ್ಟಿಗಳಿಂದ ಐವತ್ತು ಮೀಟರುಗಳ ಒಳಗೆ ಇದೆಯೋ ಆ ಯಾವುದೇ ಆವರಣದಲ್ಲಿ ರಾಶಿಗೂಡುವ ಎಲ್ಲ ಕಸ ಕಡ್ಡಿಯನ್ನು ಅಥವಾ ಹೊಲಸನ್ನು ಅಂಥ ಆವರಣದ ಮಾಲೀಕನು ಅಥವಾ ಅಧಿಭೋಗದಾರನು ಸಂಗ್ರಹಿಸತಕ್ಕದ್ದೆಂದು ಮತ್ತು ಅಂಥ ತೊಟ್ಟಿಯಲ್ಲಿ ಹಾಕತಕ್ಕದ್ದೆಂದು ಸಾರ್ವಜನಿಕ ನೋಟೀಸಿನ ಮೂಲಕ ನಿರ್ದೇಶಿಸಬಹುದು.

**257. ಆವರಣಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ರಾಶಿಗೂಡುವ ಕಸಕಡ್ಡಿಯನ್ನು ಅಥವಾ ಹೊಲಸನ್ನು ತೆಗೆದುಹಾಕುವುದು.**– ಯಾವುದೇ ಆವರಣಗಳನ್ನು, 256ನೇ ಪ್ರಕರಣದ ಮೇರೆಗೆ ನೀಡಿದ ನೋಟೀಸಿನ ಮೂಲಕ ನಿಯಮಿಸಿದ ವಿಧಾನಗಳ ಪೈಕಿ ಯಾವುದೇ ವಿಧಾನದಲ್ಲಿ ಶೇಖರಿಸಲು ತುಂಬಾ ಗಣನೀಯ ಪ್ರಮಾಣದ್ದಾಗುತ್ತದೆ ಎಂದು ಆಯುಕ್ತರು ಅಭಿಪ್ರಾಯಪಡುವಂತಹ ಪ್ರಮಾಣಗಳಲ್ಲಿ ಕಸಕಡ್ಡಿ ಅಥವಾ ಹೊಲಸು ರಾಶಿಗೂಡುವ ಹಾಗೇ ಯಾವುದೇ ತಯಾರಿಕೆಯನ್ನು, ವ್ಯಾಪಾರವನ್ನು ಅಥವಾ ವ್ಯವಹಾರವನ್ನು ನಡೆಸುವುದಕ್ಕಾಗಿ ಅಥವಾ ಯಾವುದೇ ಇತರ ರೀತಿಯಲ್ಲಿ ಬಳಸಲಾಗುತ್ತಿದ್ದಾಗ, ಆಯುಕ್ತರು,–

(ಎ) ಅಂಥ ಆವರಣದ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಆ ಆವರಣದಲ್ಲಿ ರಾಶಿಗೂಡುವ ಎಲ್ಲ ಕಸಕಡ್ಡಿ ಮತ್ತು ಹೊಲಸನ್ನು ಸಂಗ್ರಹಿಸುವಂತೆ ಮತ್ತು 255ನೇ ಪ್ರಕರಣದ ಮೇರೆಗೆ ಒದಗಿಸಿದ ಅಥವಾ ಗೊತ್ತುಪಡಿಸಿದ ಡಿಪೋಗೆ ಅಥವಾ ಸ್ಥಳಕ್ಕೆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲಗಳಲ್ಲಿ, ಅಂಥ ಗಾಡಿಗಳಲ್ಲಿ ಅಥವಾ ತೊಟ್ಟಿಗಳಲ್ಲಿ ಮತ್ತು ಅಂಥ ಮಾರ್ಗಗಳ ಮೂಲಕ ಅದನ್ನು ಸಾಗಿಸುವಂತೆ ನೋಟೀಸಿನ ಮೂಲಕ ಅಗತ್ಯಪಡಿಸಬಹುದು; ಅಥವಾ

(ಬಿ) ಅಂಥ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ತನ್ನ ಉದ್ದೇಶದ ಬಗ್ಗೆ ನೋಟೀಸನ್ನು ಕೊಟ್ಟ ತರುವಾಯ ಅಂಥ ಆವರಣದಲ್ಲಿ ರಾಶಿಗೂಡಿದ ಎಲ್ಲ ಕಸಕಡ್ಡಿ ಮತ್ತು ಹೊಲಸನ್ನು ತೆಗೆದುಹಾಕಿಸತಕ್ಕದ್ದು ಮತ್ತು ಹಾಗೆ ತೆಗೆದುಹಾಕಿಸಿದ್ದಕ್ಕೆ ಸದರಿ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ (ಎ) ಖಂಡದ ಮೇರೆಗೆ ಕೊಟ್ಟ ನೋಟೀಸಿನಲ್ಲಿ ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ ನಿರ್ದಿಷ್ಟಪಡಿಸಬಹುದಾದಂಥ ನಿಯತಕಾಲಿಕ ಫೀಜನ್ನು ವಿಧಿಸಬಹುದು.

**258. ಪ್ರತಿನಿತ್ಯ ಬೀದಿಗಳನ್ನು ಗುಡಿಸಿ ಸ್ವಚ್ಛಗೊಳಿಸುವುದಕ್ಕೆ ಮತ್ತು ಕಸಕಡ್ಡಿ ಮತ್ತು ಹೊಲಸನ್ನು ತೆಗೆದುಹಾಕುವುದಕ್ಕೆ ವ್ಯವಸ್ಥೆ.**– ಆಯುಕ್ತರು,–

(ಎ) ಪ್ರತಿನಿತ್ಯ ಎಲ್ಲ ಸಾರ್ವಜನಿಕ ಬೀದಿಗಳನ್ನು ಗುಡಿಸಿ ಸ್ವಚ್ಛಗೊಳಿಸುವುದಕ್ಕೆ ಮತ್ತು ಅಲ್ಲಿಂದ ಗುಡಿಸಿದ ಕಸವನ್ನು ತೆಗೆದುಹಾಕುವುದಕ್ಕೆ, ಮತ್ತು

(ಬಿ) **(i)** ಎಲ್ಲಾ ತೊಟ್ಟಿಗಳ ಮತ್ತು ಡಿಪೋಗಳ ಒಳಗಿರುವ ವಸ್ತುಗಳನ್ನು ಮತ್ತು 255ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಸ್ತುಗಳ ತಾತ್ಕಾಲಿಕ ಶೇಖರಣೆಗಾಗಿ ಆ ಪ್ರಕರಣದ ಮೇರೆಗೆ ತಾವು ಒದಗಿಸಿದ ಅಥವಾ ಗೊತ್ತುಪಡಿಸಿದ ಎಲ್ಲ ಸ್ಥಳಗಳಲ್ಲಿ ರಾಶಿಗೂಡಿದ ವಸ್ತುಗಳನ್ನು; ಮತ್ತು

**(ii)** 256ನೇ ಪ್ರಕರಣದ ಮೇರೆಗೆ ಕೊಟ್ಟ ಯಾವುದೇ ನೋಟೀಸಿನ ಅನುಸಾರವಾಗಿ ಆವರಣದ ಮಾಲೀಕನು ಅಥವಾ ಅಧಿಭೋಗದಾರನು ಶೇಖರಣೆ ಮಾಡಿದ ಎಲ್ಲ ವಸ್ತುಗಳನ್ನು ತೆಗೆದುಹಾಕುವುದಕ್ಕೆ

– ವ್ಯವಸ್ಥೆ ಮಾಡತಕ್ಕದ್ದು.

**259. ತೊಟ್ಟಿಗಳಲ್ಲಿ ಶೇಖರಣೆ ಮಾಡಿದ ವಸ್ತುಗಳಲ್ಲಿ ನಗರಪಾಲಿಕೆಯ ಸ್ವತ್ತಿನ ಹಕ್ಕುಗಳು.**– 260ನೇ ಪ್ರಕರಣದ ಮೇರೆಗೆ ಒದಗಿಸಿದ ಅಥವಾ ಗೊತ್ತುಪಡಿಸಿದ ಡಿಪೋಗಳಲ್ಲಿ ಅಥವಾ ಸ್ಥಳಗಳಲ್ಲಿ ಶೇಖರಣೆ ಮಾಡಿದ ಎಲ್ಲ ವಸ್ತುಗಳು ನಗರಪಾಲಿಕೆಯ ಸ್ವತ್ತಾಗಿರತಕ್ಕದ್ದು.

**260. ಕಸಕಡ್ಡಿ ಮತ್ತು ಹೊಲಸನ್ನು ತೆಗೆದುಹಾಕುವುದರ ಬಗ್ಗೆ ನಿರ್ದೇಶನಗಳು ಹಾಗೂ ಕಸಕಡ್ಡಿ ಮತ್ತು ಹೊಲಸಿನಿಂದ ಕಾಂಪೋಸ್ಟ್ ಗೊಬ್ಬರದ ತಯಾರಿಕೆ.**– 256ನೇ ಪ್ರಕರಣದ ಮೇರೆಗೆ ಕೊಟ್ಟ ಯಾವುದೇ ನೋಟೀಸಿನ ಮೂಲಕ ಉಪಬಂಧಿಸಿರದ ಪ್ರಕರಣಗಳಲ್ಲಿ ಆಯುಕ್ತರು,–

(ಎ) ಯಾವ ವೇಳೆಯೊಳಗೆ, ಕಸಕಡ್ಡಿ ಮತ್ತು ಹೊಲಸನ್ನು ತೆಗೆದುಸಾಗಿಸಬಹುದೋ ಆ ವೇಳೆಗಳನ್ನು;

(ಬಿ) ಯಾವ ಬಗೆಯ ಗಾಡಿಗಳಲ್ಲಿ ಅಥವಾ ಇತರ ತೊಟ್ಟಿಗಳಲ್ಲಿ ಕಸಕಡ್ಡಿ ಮತ್ತು ಹೊಲಸನ್ನು ತೆಗೆದು ಸಾಗಿಸಬಹುದೋ ಆ ಗಾಡಿಯ ಅಥವಾ ಇತರ ತೊಟ್ಟಿಯ ಬಗೆಯನ್ನು; ಮತ್ತು

(ಸಿ) ಯಾವ ಮಾರ್ಗದ ಮೂಲಕ ಅಂಥ ಗಾಡಿಗಳನ್ನು ಅಥವಾ ಇತರೆ ತೊಟ್ಟಿಗಳನ್ನು ತೆಗೆದುಕೊಂಡು ಹೋಗತಕ್ಕದ್ದೋ ಆ ಮಾರ್ಗವನ್ನು ಗೊತ್ತುಪಡಿಸತಕ್ಕದ್ದು.

**261. ಕಸಕಡ್ಡಿಯನ್ನು ಮತ್ತು ಹೊಲಸನ್ನು ತೆಗೆದುಸಾಗಿಸುವುದಕ್ಕೆ ಸಿಬ್ಬಂದಿಯನ್ನು ಇಟ್ಟುಕೊಳ್ಳುವುದು.**– (1) ನಗರಪಾಲಿಕೆಯು ಕಸಕಡ್ಡಿಯನ್ನು ಮತ್ತು ಸಾರ್ವಜನಿಕ ಚರಂಡಿಗೆ ಸಂಪರ್ಕ ಕಲ್ಪಿಸಿರದ ಕಕ್ಕಸುಗಳಿಂದ ಹೊಲಸನ್ನು ತೆಗೆದುಸಾಗಿಸುವುದಕ್ಕಾಗಿ ಆಯುಕ್ತರ ನಿಯಂತ್ರಣದಲ್ಲಿ ಸಿಬ್ಬಂದಿಯನ್ನು ಇಟ್ಟುಕೊಳ್ಳತಕ್ಕದ್ದು.

(2) ನಗರಪಾಲಿಕೆಯು ಕಸಕಡ್ಡಿಯಿಂದ ಮತ್ತು ಹೊಲಸಿನಿಂದ ಕಾಂಪೋಸ್ಟ್ ಗೊಬ್ಬರವನ್ನು ತಯಾರಿಸುವುದಕ್ಕೆ ವ್ಯವಸ್ಥೆ ಮಾಡುವಂತೆ ಸರ್ಕಾರವು ಅಗತ್ಯಪಡಿಸಿದರೆ ಹಾಗೆ ಮಾಡತಕ್ಕದ್ದು.

**262. ಮಲವನ್ನು ತಲೆಯಮೇಲೆ ಹೊತ್ತುಕೊಂಡು ಹೋಗುವುದಕ್ಕೆ ವ್ಯಕ್ತಿಗಳನ್ನು ನಿಯೋಜಿಸಿಕೊಳ್ಳುವ ಪದ್ಧತಿಯ ನಿಷೇಧ.**– (1) ಈ ಅಧಿನಿಯಮದಲ್ಲಿ ಅಥವಾ ಇತರೆ ಯಾವುದೇ ಕಾನೂನಿನಲ್ಲಿ, ರೂಢಿಯಲ್ಲಿ, ಆಚರಣೆಯಲ್ಲಿ, ಒಪ್ಪಂದದಲ್ಲಿ ಅಥವಾ ಪದ್ಧತಿಯಲ್ಲಿ ತದ್ವಿರುದ್ಧವಾಗಿ ಏನೇ ಒಳಗೊಂಡಿದ್ದರೂ, ಮತ್ತು (3)ನೇ ಉಪ–ಪ್ರಕರಣದಲ್ಲಿ ಉಪಬಂಧಿಸಿರುವಂತೆ ಹೊರತು, ಮಲವನ್ನು ತಲೆಮೇಲೆ ಹೊತ್ತುಕೊಂಡು ಹೋಗುವುದಕ್ಕಾಗಿ ಅಥವಾ ಅದನ್ನು ಕೈಯಿಂದ ತೆಗೆಯುವುದಕ್ಕಾಗಿ ಮಜೂರಿ ಅಥವಾ ಸಂಬಳದ ಮೇಲೆ ಯಾರೇ ವ್ಯಕ್ತಿಯು ಯಾರನ್ನೇ ಆಗಲಿ ನಿಯೋಜಿಸಿಕೊಳ್ಳತಕ್ಕದ್ದಲ್ಲ ಅಥವಾ ಯಾರೇ ವ್ಯಕ್ತಿಯು ಸ್ವತಃ ಆ ಕೆಲಸವನ್ನು ಮಾಡಲು ಅವಕಾಶ ನೀಡತಕ್ಕದ್ದಲ್ಲ.

(2) ಉಪಪ್ರಕರಣ (1)ರ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಇಪ್ಪತ್ತೈದು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಮೊದಲ ಅಪರಾಧ ನಿರ್ಣಯದ ದಿನಾಂಕದ ತರುವಾಯ ಅಂಥ ಅಪರಾಧವನ್ನು ಮುಂದುವರಿಸಿದಂಥ ಪ್ರತಿಯೊಂದು ದಿನಕ್ಕೆ ಐದು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು (1)ನೇ ಉಪ–ಪ್ರಕರಣದ ಉಪಬಂಧಗಳ ಉಲ್ಲಂಘನೆಯ

ಅಪರಾಧಕ್ಕಾಗಿ ಐದನೆಯ ಬಾರಿಗೆ ಯಾರೇ ವ್ಯಕ್ತಿಯು ಅಪರಾಧಿಯೆಂದು ನಿರ್ಣೀತನಾದರೆ, ಅವನು ಮೂರು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಮೂರುನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಈ ಅಧಿನಿಯಮದಲ್ಲಿರುವುದು ಯಾವುದೂ, ಯಾವುದೇ ಆಸ್ಪತ್ರೆ, ಚಿಕಿತ್ಸಾಲಯ, ನರ್ಸಿಂಗ್ ಹೋಂ ಅಥವಾ ಅಂಥದೇ ಇತರ ಸಂಸ್ಥೆಯಲ್ಲಿ ಅಥವಾ ಸಮಾಜ ಸೇವೆಯಲ್ಲಿ ತೊಡಗಿರುವ ಯಾವುದೇ ಸಂಸ್ಥೆಯ ಸದಸ್ಯನಾಗಿ, ಮಲವನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗಲು ಅಥವಾ ಅದನ್ನು ಕೈಯಿಂದ ತೆಗೆಯಲು ಯಾರನ್ನೇ ಆಗಲಿ ನಿಯೋಜಿಸಿಕೊಳ್ಳುವ ಯಾರೇ ವ್ಯಕ್ತಿಗೆ ಅಥವಾ ಸ್ವತಃ ಆ ಕೆಲಸ ಮಾಡಲು ಅವಕಾಶ ನೀಡುವ ಯಾರೇ ವ್ಯಕ್ತಿಗೆ ಅಥವಾ ಗೊಬ್ಬರವನ್ನು ಸಿದ್ಧಪಡಿಸುವುದಕ್ಕಾಗಿ, ಅದನ್ನು ಉಪಯೋಗಿಸುವುದಕ್ಕಾಗಿ ಅಥವಾ ತಯಾರಿಸುವುದಕ್ಕಾಗಿ ಮಲವನ್ನು ಸ್ವತಃ ಒಯ್ಯುವ ಅಥವಾ ಸಂಗ್ರಹಿಸುವ ಯಾರೇ ವ್ಯಕ್ತಿಗೆ ಅನ್ವಯಿಸತಕ್ಕದ್ದಲ್ಲ.

**263. ಆವರಣ, ಮುಂತಾದವುಗಳಲ್ಲಿ ಕಸಕಡ್ಡಿಯನ್ನು ಮತ್ತು ಹೊಲಸನ್ನು ರಾಶಿ ಹಾಕುವುದಕ್ಕೆ ನಿಷೇಧ.–** (1) ಯಾವುದೇ ಆವರಣದಲ್ಲಿ ರಾಶಿಬೀಳುವ ಕಸಕಡ್ಡಿಯನ್ನು ಅಥವಾ ಹೊಲಸನ್ನು ಸಂಗ್ರಹಿಸಲು ಮತ್ತು ತಂದುಹಾಕಲು ಅಥವಾ ತೆಗೆದುಸಾಗಿಸಲು ಸಂದರ್ಭಾನುಸಾರ 256ನೇ ಪ್ರಕರಣದ ಅಥವಾ 257ನೇ ಪ್ರಕರಣದ ಮೇರೆಗೆ ಕೊಟ್ಟ ಯಾವುದೇ ನೋಟೀಸಿಗೆ ಬದ್ಧನಾದ ಯಾರೇ ವ್ಯಕ್ತಿಯು ಇಪ್ಪತ್ನಾಲ್ಕು ಗಂಟೆಗಳಿಗಿಂತ ಹೆಚ್ಚಿಗೆ ಅವು ರಾಶಿಬೀಳಲು ಅವಕಾಶ ನೀಡತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು ಸಂದರ್ಭಾನುಸಾರ 256ನೇ ಪ್ರಕರಣದ ಅಥವಾ 257ನೇ ಪ್ರಕರಣದ ಮೇರೆಗೆ ಕೊಟ್ಟ ನೋಟೀಸಿನಲ್ಲಿ ಉಪಬಂಧಿಸಿದಂತೆ ಹೊರತು ಯಾವುದೇ ಕಸಕಡ್ಡಿಯನ್ನು ಅಥವಾ ಹೊಲಸನ್ನು ಶೇಖರಿಸತಕ್ಕದ್ದಲ್ಲ.

(3) 255 ಮತ್ತು 258ನೇ ಪ್ರಕರಣಗಳ ಮೇರೆಗೆ ಅದನ್ನು ಶೇಖರಿಸಲು ಮತ್ತು ತೆಗೆದುಸಾಗಿಸಲು ಯುಕ್ತ ವ್ಯವಸ್ಥೆಯನ್ನು ಮಾಡಿದ ತರುವಾಯ, ಯಾರೇ ವ್ಯಕ್ತಿಯು–

(ಎ) ಪ್ರಾಣಿಗಳ ಶವಗಳನ್ನು, ಕಸಕಡ್ಡಿಯನ್ನು ಅಥವಾ ಹೊಲಸನ್ನು ಯಾವುದೇ ಬೀದಿಯಲ್ಲಿ ಅಥವಾ ಯಾವುದೇ ಕಟ್ಟಡದ ವರಾಂಡಾದಲ್ಲಿ ಅಥವಾ ಯಾವುದೇ ಬೀದಿಯ ಪಕ್ಕದಲ್ಲಿ ಇರುವ ಅಧಿಭೋಗದಲ್ಲಿ ಇಲ್ಲದ ಯಾವುದೇ ನೆಲದ ಮೇಲೆ ಅಥವಾ ಯಾವುದೇ ಸಾರ್ವಜನಿಕ ಇಳಿದಾಣ ಅಥವಾ ಇಳಿಕಟ್ಟೆ, ಇಳಿಯುವ ಸ್ಥಳ ಅಥವಾ ಜಲಮಾರ್ಗದ ಅಥವಾ ಕೆರೆಯ ದಡದ ಮೇಲೆ ತಂದು ಹಾಕತಕ್ಕದ್ದಲ್ಲ; ಅಥವಾ

(ಬಿ) ಹೊಲಸನ್ನು ಅಥವಾ ಪ್ರಾಣಿಗಳ ಶವಗಳನ್ನು ಯಾವುದೇ ಕಸದ ತೊಟ್ಟಿಯಲ್ಲಿ ಅಥವಾ ಅದನ್ನು ತೆಗೆದುಸಾಗಿಸಲು ಉದ್ದೇಶಿಸಿರದ ಯಾವುದೇ ವಾಹನದಲ್ಲಿ ತಂದು ಹಾಕತಕ್ಕದ್ದಲ್ಲ; ಅಥವಾ

(ಸಿ) ಹೊಲಸನ್ನು ದುರ್ವಾಸನೆ ರಹಿತವಾಗಿಸುವ ಅಥವಾ ಸೋಂಕು ಮುಕ್ತವಾಗಿಸುವ ಉದ್ದೇಶಕ್ಕಾಗಿ ಹೊರತು ಹೊಲಸನ್ನು ತೆಗೆದು ಸಾಗಿಸಲು

– ಉದ್ದೇಶಿಸಿದ ಯಾವುದೇ ವಾಹನದಲ್ಲಿ ಅಥವಾ ಭಾಂಡದಲ್ಲಿ ತಂದುಹಾಕತಕ್ಕದ್ದಲ್ಲ.

(4) ಯಾವುದೇ ಆವರಣದ ಮಾಲೀಕನು ಅಥವಾ ಅಧಿಭೋಗದಾರನು, ಅಂಥ ಆವರಣದಲ್ಲಿ ಅಥವಾ ಅದಕ್ಕೆ ಸೇರಿದ ಯಾವುದೇ ಸ್ಥಳದಲ್ಲಿ ಯಾವುದೇ ಕಸಕಡ್ಡಿಯನ್ನು ಅಥವಾ ಹೊಲಸನ್ನು ಆಯುಕ್ತರಿಂದ ಅನುಮೋದಿತವಾದ ತೊಟ್ಟಿಯಲ್ಲಿ ಹೊರತು ಇಪ್ಪತ್ನಾಲ್ಕು ಗಂಟೆಗಳಿಗಿಂತ ಹೆಚ್ಚಾಗಿ ಇಟ್ಟುಕೊಳ್ಳತಕ್ಕದ್ದಲ್ಲ ಅಥವಾ ಇಟ್ಟುಕೊಳ್ಳಲು ಅವಕಾಶ ನೀಡತಕ್ಕದ್ದಲ್ಲ ಅಥವಾ ಅಂಥ ತೊಟ್ಟಿಯಿಂದ ಕಸಕಡ್ಡಿಯನ್ನು ಅಥವಾ ಹೊಲಸನ್ನು ತೆಗೆದುಸಾಗಿಸಲು ಅಥವಾ ಅದನ್ನು ಸ್ವಚ್ಛಗೊಳಿಸಲು ಸರಿಯಾದ ಮಾರ್ಗಗಳನ್ನು ಅಳವಡಿಸಿಕೊಳ್ಳಲು ಮತ್ತು ಆಯುಕ್ತರು ನಿರ್ದೇಶಿಸಿದ ರೀತಿಯಲ್ಲಿ ಅಂಥ ಕಸಕಡ್ಡಿಯನ್ನು ಅಥವಾ ಹೊಲಸನ್ನು ವಿಲೆ ಮಾಡಲು ಉಪೇಕ್ಷಿಸತಕ್ಕದ್ದಲ್ಲ ಅಥವಾ ಆ ಆವರಣದಲ್ಲಿನ ಅಥವಾ ಅದಕ್ಕೆ ಸೇರಿದ ಯಾವುದೇ ಕಕ್ಕಸಿನ ನಿರ್ಮಾಣ, ದುರಸ್ತಿ, ನೆಲೆಗಟ್ಟು ನಿರ್ಮಾಣ ಅಥವಾ ಚೊಕ್ಕಟಮಾಡುವುದರ ಬಗ್ಗೆ ಆಯುಕ್ತರ ಯಾವುದೇ ಆದೇಶವನ್ನು ಪಾಲಿಸಲು ತಪ್ಪತಕ್ಕದ್ದಲ್ಲ.

(5) ಯಾರೇ ಮಾಲೀಕನು ಅಥವಾ ಅಧಿಭೋಗದಾರನು ಯಾವುದೇ ಲಾಯದಿಂದ ಅಥವಾ ಸ್ಥಳದಿಂದ ಯಾವುದೇ ಬಚ್ಚಲುಗುಂಡಿ, ಚರಂಡಿ ಅಥವಾ ಕಕ್ಕಸು ಅಥವಾ ಒಳಚರಂಡಿಯ ನೀರು ಅಥವಾ ಇತರ ಯಾವುದೇ ಹೊಲಸು ಸದರಿ ಚರಂಡಿಯ ಪಕ್ಕದಲ್ಲಿರುವ ಬಾವಿಗಳು ಅಥವಾ ನೆಲದೊಳಗೆ ಅಂಥ ಯಾವುದೇ ಹೊಲಸು ಇಂಗಿಹೋಗುವುದರಿಂದ ಉಂಟಾಗುವ ಯಾವುದೇ ತಪ್ಪಿಸಬಹುದಾದ ಉಪದ್ರವವನ್ನು ತಡೆಗಟ್ಟತಕ್ಕಂಥ ರೀತಿಯಲ್ಲಿ ಹೊರತು, ಯಾವುದೇ ಬೀದಿಯ ಮೇಲೆ ಹರಿದು ಬರಲು ಅಥವಾ ಅದರ ಮೇಲೆ ಹಾಕಲು, ಅಥವಾ ಯಾವುದೇ ಬೀದಿಯಲ್ಲಿ ಅಥವಾ ಅದರ ಪಕ್ಕದಲ್ಲಿನ ಯಾವುದೇ ಚರಂಡಿಯೊಳಕ್ಕೆ ಹರಿಯಲು ಅಥವಾ ಹಾಕಲು ಅನುಮತಿಸತಕ್ಕದ್ದಲ್ಲ.

**264. ಯಾತ್ರಾಸ್ಥಳಗಳು, ಮುಂತಾದುವುಗಳ ಮೇಲೆ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯಿಂದ ವಂತಿಗೆ.–** ನಗರದಲ್ಲಿನ ಅಥವಾ ಅದರ ನೆರೆಹೊರೆಯಲ್ಲಿನ ಮಸೀದಿ, ದೇವಾಲಯ, ಮಠ ಅಥವಾ ಧಾರ್ಮಿಕ ಆರಾಧನೆಯ ಅಥವಾ ಬೋಧನೆಯ ಯಾವುದೇ ಸ್ಥಳದಲ್ಲಿ ಅಥವಾ ಜಾತ್ರೆಗಳನ್ನು, ಉತ್ಸವಗಳನ್ನು ನಡೆಸುವುದಕ್ಕಾಗಿ ಅಥವಾ ಅಂಥದೇ ಇತರ ಉದ್ದೇಶಗಳಿಗಾಗಿ ಬಳಸಲಾಗುವಂಥ ಯಾವುದೇ ಸ್ಥಳದಲ್ಲಿ, ವಿಶಿಷ್ಟ ಸಂದರ್ಭಗಳಲ್ಲಿ ಅಪಾರ ಸಂಖ್ಯೆಯ ಜನರು ಸೇರುವಲ್ಲಿ, ಆಯುಕ್ತರು, ಸಾರ್ವಜನಿಕರ ಆರೋಗ್ಯ, ಸುರಕ್ಷೆ ಅಥವಾ ಅನುಕೂಲತೆಯ ಹಿತದೃಷ್ಟಿಯಿಂದ ಅವಶ್ಯವಾಗಬಹುದಾದಂಥ ಖಾಯಂ ಅಥವಾ ತಾತ್ಕಾಲಿಕ ವಿಶೇಷ ವ್ಯವಸ್ಥೆಗಳನ್ನು ಮಾಡತಕ್ಕದ್ದು ಮತ್ತು ನ್ಯಾಸಧಾರಿಯನ್ನು ಅಥವಾ ಅಂಥ ಸ್ಥಳದ ಮೇಲೆ ನಿಯಂತ್ರಣವನ್ನು ಹೊಂದಿರುವ ಇತರ ವ್ಯಕ್ತಿಯನ್ನು ಸರ್ಕಾರವು ನಿರ್ಧರಿಸಬಹುದಾದಂತೆ ನಗರಪಾಲಿಕೆಯ ನಿಧಿಗಳಿಗೆ ಅಂಥ ಆವರ್ತಕ ಅಥವಾ ಅನಾವರ್ತಕ ವಂತಿಗೆಯನ್ನು ಕೊಡುವಂತೆ ಅಗತ್ಯಪಡಿಸತಕ್ಕದ್ದು.

## ಅಧ್ಯಾಯ – XIV

### ಬೀದಿಗಳು

**265. ಸಾರ್ವಜನಿಕ ಬೀದಿಗಳು ಮತ್ತು ಅವುಗಳಿಗೆ ಲಗತ್ತಾದುವುಗಳು ನಗರಪಾಲಿಕೆಯಲ್ಲಿ ನಿಹಿತವಾಗುವುದು.–** (1) ಸರ್ಕಾರದ ನಿಯಂತ್ರಣದ ಮೇರೆಗೆ ಕಾಯ್ದಿರಿಸಲಾದ ನಗರಪಾಲಿಕೆಯಲ್ಲಿನ ಎಲ್ಲ ಸಾರ್ವಜನಿಕ ಬೀದಿಗಳು, ಅವುಗಳ ನೆಲೆಗಟ್ಟಿನ ಪಾದಚಾರಿ ಮಾರ್ಗಗಳು, ಕಲ್ಲುಗಳು ಮತ್ತು ಇತರ

ಸಾಮಗ್ರಿಗಳು ಮತ್ತು ಅಂಥ ಬೀದಿಗಳಿಗೆ ಒದಗಿಸಿದ ಎಲ್ಲ ಕಾಮಗಾರಿ ಸಾಮಗ್ರಿಗಳು, ಉಪಕರಣಗಳು ಮತ್ತು ಇತರ ವಸ್ತುಗಳು ಸಾರ್ವಜನಿಕವಾದದ್ದೇ ಆಗಲಿ ಅಥವಾ ಖಾಸಗಿಯದ್ದೇ ಆಗಲಿ ಯಾವುದೇ ಬೀದಿಯಲ್ಲಿ ಅಥವಾ ಅದರ ಪಕ್ಕದಲ್ಲಿ ಅಥವಾ ಅದರ ಕೆಳಗೆ ನಗರಪಾಲಿಕೆಯ ನಿಧಿಯ ಖರ್ಚಿನಲ್ಲಿ ಅಥವಾ ಅನ್ಯಥಾ ನಿರ್ಮಿಸಿದ ಎಲ್ಲ ಒಳಚರಂಡಿಗಳು, ಚರಂಡಿಗಳು, ಚರಂಡಿ ಕಾಮಗಾರಿಗಳು, ಸುರಂಗಗಳು ಮತ್ತು ಅಡಿಗಾಲುವೆಗಳು ಮತ್ತು ಅವುಗಳಿಗೆ ಲಗತ್ತಾಗಿರುವ ಎಲ್ಲ ಕಾಮಗಾರಿಗಳು, ಸಾಮಗ್ರಿಗಳು, ಉಪಕರಣಗಳು ಮತ್ತು ಇತರ ವಸ್ತುಗಳೊಂದಿಗೆ ಮತ್ತು ಸಾರ್ವಜನಿಕ ಬೀದಿಗಳಲ್ಲಿ ಅಥವಾ ಅವುಗಳ ಪಕ್ಕದಲ್ಲಿ ಬೆಳೆಯುತ್ತಿರುವ ಖಾಸಗಿ ಸ್ವತ್ತಾಗಿರದ ಎಲ್ಲ ಮರಗಳು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

(2) ಸರ್ಕಾರವು ನಗರಪಾಲಿಕೆಯೊಂದಿಗೆ ಸಮಾಲೋಚನೆ ನಡೆಸಿದ ತರುವಾಯ ಅಧಿಸೂಚನೆ ಮೂಲಕ ಯಾವುದೇ ಅಂಥ ಬೀದಿ, ಒಳಚರಂಡಿ, ಚರಂಡಿ, ಚರಂಡಿ ಕಾಮಗಾರಿ, ಸುರಂಗ, ಅಡಿಗಾಲುವೆ ಅಥವಾ ಮರಗಳನ್ನು ನಗರಪಾಲಿಕೆಯ ನಿಯಂತ್ರಣದಿಂದ ಹಿಂತೆಗೆದುಕೊಳ್ಳಬಹುದು.

**266. ಬೀದಿಗಳ ನಿರ್ವಹಣೆ ಮತ್ತು ದುರಸ್ತಿ.–** ನಗರಪಾಲಿಕೆಯು ಸಾರ್ವಜನಿಕ ಬೀದಿಗಳನ್ನು ನಿರ್ವಹಣೆ ಮಾಡಿಸತಕ್ಕದ್ದು ಮತ್ತು ದುರಸ್ತಿ ಮಾಡಿಸತಕ್ಕದ್ದು ಮತ್ತು ಸಾರ್ವಜನಿಕರ ಸುರಕ್ಷತೆಗಾಗಿ ಅಥವಾ ಅನುಕೂಲಕ್ಕಾಗಿ ಅವಶ್ಯವಾದಂಥ ಅಥವಾ ವಿಹಿತವಾದಂಥ ಎಲ್ಲಾ ಮೇಲ್ಪಾಟುಗಳನ್ನು ಅವುಗಳಿಗೆ ಮಾಡಬಹುದು.

**267. ಬೀದಿಗಳಿಗೆ ಸಂಬಂಧಿಸಿದಂತೆ ಪ್ರಾಧಿಕಾರಿಗಳ ಅಧಿಕಾರಗಳು.–** (1) ಆಯುಕ್ತರು, ಅಗತ್ಯವಾಗಬಹುದಾದಂಥ ಮಂಜೂರಾತಿಗೆ ಯಾವಾಗಲೂ ಒಳಪಟ್ಟು,–

(ಎ) ಹೊಸ ಸಾರ್ವಜನಿಕ ಬೀದಿಗಳನ್ನು ರೂಪಿಸಬಹುದು ಮತ್ತು ರಚಿಸಬಹುದು;

(ಬಿ) ಸೇತುವೆಗಳನ್ನು ಮತ್ತು ಸುರಂಗಮಾರ್ಗಗಳನ್ನು ನಿರ್ಮಿಸಬಹುದು;

(ಸಿ) ಯಾವುದೇ ಸಾರ್ವಜನಿಕ ಬೀದಿಯನ್ನು ಅಥವಾ ಅದರ ಭಾಗವನ್ನು ತಿರುಗಿಸಬಹುದು, ಮಾರ್ಗಪಲ್ಲಟಗೊಳಿಸಬಹುದು ಅಥವಾ ನಗರಪಾಲಿಕೆಯ ಮತ್ತು ಸರ್ಕಾರದ ವಿಶೇಷ ಮಂಜೂರಾತಿಯೊಂದಿಗೆ ಶಾಶ್ವತವಾಗಿ ಮುಚ್ಚಬಹುದು;

(ಡಿ) ಯಾವುದೇ ಸಾರ್ವಜನಿಕ ಬೀದಿಯನ್ನು ಅಗಲ ಮಾಡಬಹುದು, ತೆರೆಯಬಹುದು, ವಿಸ್ತರಿಸಬಹುದು ಅಥವಾ ಅನ್ಯಥಾ ಮೇಲ್ಪಾಟು ಮಾಡಬಹುದು.

(2) ಯಾವ ಭೂಮಿಯನ್ನು ಅಥವಾ ಕಟ್ಟಡಗಳನ್ನು ಯಾವುದೇ ಅಂಥ ಉದ್ದೇಶಗಳಿಗಾಗಿ ಆರ್ಜಿಸಲಾಗಿದೆಯೋ ಅಥವಾ ಯಾವ ಭೂಮಿಯನ್ನು ಅಥವಾ ಕಟ್ಟಡಗಳನ್ನು ಯಾವುದೇ ಅಂಥ ಉದ್ದೇಶಗಳಿಗಾಗಿ ಗೊತ್ತುಪಡಿಸಲಾಗಿದೆಯೊ ಆ ಯಾವುದೇ ಭೂಮಿಯ ಅಥವಾ ಕಟ್ಟಡಗಳ ಮಾಲೀಕರಿಗೆ ಅಥವಾ ಅಧಿಭೋಗದಾರರಿಗೆ ಸೂಕ್ತ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(3) ಅಂಥ ನಷ್ಟ ಪರಿಹಾರವನ್ನು ನಿರ್ಧರಿಸುವಾಗ ಆಯುಕ್ತರು ಮಾಡಿದ ನಿರ್ಮಾಣದಿಂದ ಅಥವಾ ಮೇಲ್ಪಾಟಿನಿಂದ ಸಂಬಂಧಪಟ್ಟ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ದೊರೆಯುವ ಯಾವುದೇ ಪ್ರಯೋಜನಕ್ಕೆ ಅವಕಾಶ ಕಲ್ಪಿಸತಕ್ಕದ್ದು.

**268. ಯಾವುದೇ ಸುರಂಗ ಮಾರ್ಗ, ಸೇತುವೆ, ಇತ್ಯಾದಿಗಳನ್ನು ವಹಿಸಿಕೊಳ್ಳುವ, ನಿರ್ಮಿಸುವ ಅಥವಾ ಬದಲಾಯಿಸುವ ಅಧಿಕಾರ.–** ಈ ಬಗ್ಗೆ ನಗರಪಾಲಿಕೆಯು ಅಧಿಕಾರ ನೀಡಿದಾಗ, ಆಯುಕ್ತರು ಯಾರೇ ವ್ಯಕ್ತಿಯೊಂದಿಗೆ,–

(ಎ) ಹಾಲಿ ಇರುವ ಅಥವಾ ಯೋಜಿಸಿರುವ ಯಾವುದೇ ಸುರಂಗ ಮಾರ್ಗ, ಸೇತುವೆ, ಮೇಲ್ಗಾಲುವೆ ಅಥವಾ ಕಮಾನು ಮತ್ತು ಅವುಗಳ ಕೂಡು ದಾರಿಗಳನ್ನು ವಹಿಸಿಕೊಳ್ಳಲು ಮತ್ತು ನಿರ್ವಹಿಸಲು ಒಡಂಬಡಿಕೆ ಮಾಡಿಕೊಳ್ಳಬಹುದು ಮತ್ತು ತದನುಸಾರವಾಗಿ ಸಾರ್ವಜನಿಕ ಬೀದಿಗಳ ಭಾಗಗಳಾಗಿ ಅಥವಾ ನಗರಪಾಲಿಕೆಯಲ್ಲಿ ನಿಹಿತವಾಗುವ ಸ್ವತ್ತಾಗಿ ಅಂಥ ಸುರಂಗ ಮಾರ್ಗ, ಸೇತುವೆ, ಮೇಲ್ಗಾಲುವೆ ಅಥವಾ ಕಮಾನು ಅಥವಾ ಕೂಡು ದಾರಿಗಳನ್ನು ವಹಿಸಿಕೊಳ್ಳಬಹುದು ಮತ್ತು ನಿರ್ವಹಿಸಬಹುದು; ಅಥವಾ

(ಬಿ) ಅಂಥ ಯಾವುದೇ ಸುರಂಗ ಮಾರ್ಗ, ಸೇತುವೆ, ಮೇಲ್ಗಾಲುವೆ ಅಥವಾ ಕಮಾನಿನ ನಿರ್ಮಾಣ ಅಥವಾ ಬದಲಾವಣೆಗಳಿಗೆ ಅಥವಾ ಅದರ ತಳಪಾಯ ಮತ್ತು ಆಧಾರಕ್ಕೆ ಅಥವಾ ಅವುಗಳ ಕೂಡು ದಾರಿಗಳಿಗೆ ಅಗತ್ಯವಾದ ಅದಕ್ಕೆ ಹೊಂದಿಕೊಂಡಿರುವ ಯಾವುದೇ ಭೂಮಿಯನ್ನು ಅಂಥ ವ್ಯಕ್ತಿಯ ಪೂರ್ಣ ವೆಚ್ಚದಲ್ಲಿ ಆಗಲಿ ಅಥವಾ ಅಂಥ ವ್ಯಕ್ತಿಯ ಭಾಗಶಃ ವೆಚ್ಚದಲ್ಲಿ ಆಗಲಿ ಮತ್ತು ನಗರಪಾಲಿಕೆಯ ಭಾಗಶಃ ವೆಚ್ಚದಲ್ಲಿ ಆಗಲಿ ಖರೀದಿಸಲು ಅಥವಾ ಆರ್ಜಿಸಲು ಒಡಂಬಡಿಕೆ ಮಾಡಿಕೊಳ್ಳಬಹುದು.

**269. ಶಾಶ್ವತವಾಗಿ ಮುಚ್ಚಿರುವ ಬೀದಿಗಳನ್ನು ವಿಲೆ ಮಾಡುವ ಅಧಿಕಾರ.–** (1) 267ನೇ ಪ್ರಕರಣದ ಮೇರೆಗೆ ಯಾವುದೇ ಸಾರ್ವಜನಿಕ ಬೀದಿಯನ್ನು ಶಾಶ್ವತವಾಗಿ ಮುಚ್ಚಿದಾಗ ನಗರಪಾಲಿಕೆಯು ಹಾಗೆ ಮುಚ್ಚಿದ್ದರಿಂದ ಹಾನಿಗೊಳಗಾದ ಯಾರೇ ವ್ಯಕ್ತಿಗೆ ಸೂಕ್ತ ನಷ್ಟಪರಿಹಾರವನ್ನು ಕೊಟ್ಟು, ನಿವೇಶನವನ್ನು ಅಥವಾ ಅದರಲ್ಲಿ ಇನ್ನು ಮುಂದೆ ಎಷ್ಟು ಅಗತ್ಯವಿಲ್ಲವೋ ಅಷ್ಟನ್ನು ವಿಲೆ ಮಾಡಬಹುದು.

(2) ಅಂಥ ನಷ್ಟಪರಿಹಾರವನ್ನು ನಿರ್ಧರಿಸುವಲ್ಲಿ, ಯಾವ ಸಾರ್ವಜನಿಕ ಬೀದಿಗಾಗಿ ನಷ್ಟಪರಿಹಾರವನ್ನು ಸಂದಾಯ ಮಾಡಲಾಗಿದೆಯೋ ಆ ಸಾರ್ವಜನಿಕ ಬೀದಿಯನ್ನು ಮುಚ್ಚಿದಾಗ ಅದೇ ಕಾಲದಲ್ಲಿ ಅಥವಾ ಆ ಸರಿಸುಮಾರಿನಲ್ಲಿ, ಇತರ ಯಾವುದೇ ಸಾರ್ವಜನಿಕ ಬೀದಿಯ ನಿರ್ಮಾಣದಿಂದಾಗಿ ಅಥವಾ ಮೇಲ್ಪಾಟಿನಿಂದಾಗಿ ಅದೇ ಮಾಲೀಕನಿಗೆ ಸೇರಿದ ಅದೇ ಆವರಣಕ್ಕೆ ಅಥವಾ ಹೊಂದಿಕೊಂಡಿರುವ ಯಾವುದೇ ಆವರಣಕ್ಕೆ ಒದಗಿಬರುವ ಯಾವುದೇ ಪ್ರಯೋಜನಕ್ಕಾಗಿ ಅವಕಾಶ ಕಲ್ಪಿಸತಕ್ಕದ್ದು.

**270. ಬೀದಿಗಳ ಮೇಲ್ಪಾಟಿಗಾಗಿ ಭೂಮಿಯ ಮತ್ತು ಕಟ್ಟಡಗಳ ಆರ್ಜನೆ.–** (1) ಅಗತ್ಯಪಡಿಸಬಹುದಾದಂಥ ಮಂಜೂರಾತಿಗೆ ಯಾವಾಗಲೂ ಒಳಪಟ್ಟು ಆಯುಕ್ತರು–

(ಎ) ಯಾವುದೇ ಸಾರ್ವಜನಿಕ ಬೀದಿಯನ್ನು ಅಗಲಗೊಳಿಸುವ, ತೆರೆಯುವ, ವಿಸ್ತರಿಸುವ ಅಥವಾ ಅನ್ಯಥಾ ಮೇಲ್ಪಾಟು ಮಾಡುವ ಅಥವಾ ಯಾವುದೇ ಹೊಸ ಸಾರ್ವಜನಿಕ ಬೀದಿಯನ್ನು ನಿರ್ಮಿಸುವ ಉದ್ದೇಶಕ್ಕಾಗಿ ಅಗತ್ಯವಾದ ಯಾವುದೇ ಭೂಮಿಯನ್ನು ಮತ್ತು ಅಂಥ ಭೂಮಿಯ ಮೇಲಿರುವ ಕಟ್ಟಡ ಯಾವುದಾದರೂ ಇದ್ದರೆ, ಅದನ್ನು;

(ಬಿ) ನಗರಪಾಲಿಕೆಯು ಆರ್ಜಿಸುವುದು ವಿಹಿತವೆಂದು ಪರಿಗಣಿಸಬಹುದಾದಂಥ ಉದ್ದೇಶಿತ ಬೀದಿಯ ಪಂಕ್ತೀಕರಣದ ಹೊರಗಡೆಯ ಯಾವುದೇ ಭೂಮಿಯನ್ನು, ಅದರ ಮೇಲೆ ಕಟ್ಟಡ ಯಾವುದಾದರೂ ಇದ್ದರೆ ಅದರ ಸಹಿತ;

– ಆರ್ಜಿಸಬಹುದು.

(2) (1)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಆರ್ಜಿಸಿದ ಯಾವುದೇ ಭೂಮಿಯನ್ನು ಅಥವಾ ಕಟ್ಟಡವನ್ನು ಸಾರ್ವಜನಿಕವಾಗಿ ಜಾಹೀರಾತು ಮಾಡಿದ ತರುವಾಯ ಮಾರಬಹುದು, ಬಾಡಿಗೆಗೆ ಕೊಡಬಹುದು ಅಥವಾ ಅನ್ಯಥಾ ವಿಲೆ ಮಾಡಬಹುದು ಮತ್ತು ಆ ಉದ್ದೇಶಕ್ಕಾಗಿ ಮಾಡಿದ ಯಾವುದೇ ಹಸ್ತಾಂತರಣ ಪತ್ರವು, ಹಾಲಿ ಇರುವ ಕಟ್ಟಡ ಯಾವುದಾದರೂ ಇದ್ದರೆ, ಅದನ್ನು ತೆಗೆದುಹಾಕುವುದು, ನಿರ್ಮಿಸಬೇಕಾದ ಹೊಸ ಕಟ್ಟಡ (ಯಾವುದಾದರೂ ಇದ್ದರೆ) ಅದರ ವರ್ಣನೆ, ಹೊಸ ಕಟ್ಟಡ ಯಾವುದಾದರೂ ಇದ್ದರೆ ಅದನ್ನು ಯಾವ ಅವಧಿಯೊಳಗೆ ಪೂರ್ಣಗೊಳಿಸಬೇಕೋ ಆ ಅವಧಿ ಮತ್ತು ಅಂಥಹುದೇ ಇತರ ವಿಷಯಗಳ ಬಗ್ಗೆ ಸ್ಥಾಯೀ ಸಮಿತಿಯು ಸೂಕ್ತವೆಂದು ಯೋಚಿಸುವಂಥ ಷರತ್ತುಗಳನ್ನು ಒಳಗೊಂಡಿರಬಹುದು.

(3) ಸ್ಥಾಯೀ ಸಮಿತಿಯು, (2)ನೇ ಉಪ–ಪ್ರಕರಣದ ಮೇರೆಗೆ ಯಾವುದೇ ಭೂಮಿಯನ್ನು ಅಥವಾ ಕಟ್ಟಡವನ್ನು ಯಾವ ವ್ಯಕ್ತಿಗೆ ವರ್ಗಾಯಿಸಲಾಗಿದೆಯೋ ಆ ಯಾರೇ ವ್ಯಕ್ತಿಯನ್ನು ಭೂಮಿ ಅಥವಾ ಕಟ್ಟಡದ ಸ್ವಾಧೀನವನ್ನು ಅವನಿಗೆ ಒಪ್ಪಿಸುವ ಮುಂಚೆ ಸದರಿ ಹಸ್ತಾಂತರಣ ಪತ್ರದಲ್ಲಿ ಒಳಗೊಂಡ ಯಾವುವೇ ಷರತ್ತುಗಳನ್ನು ಪಾಲಿಸಲು ಅಗತ್ಯಪಡಿಸಬಹುದು.

**271. ಕಟ್ಟಡದ ಸಾಲು ಮತ್ತು ಬೀದಿಯ ಪಂಕ್ತೀಕರಣವನ್ನು ನಿಯಮಿಸಲು ಅಧಿಕಾರಗಳು.–** ಸ್ಥಾಯೀ ಸಮಿತಿಯು,–

(ಎ) ಯಾವುದೇ ಸಾರ್ವಜನಿಕ ಬೀದಿಗಾಗಿ ಕಟ್ಟಡದ ಸಾಲು ಅಥವಾ ಬೀದಿಯ ಪಂಕ್ತೀಕರಣ ಅಥವಾ ಕಟ್ಟಡದ ಸಾಲು ಮತ್ತು ಬೀದಿಯ ಪಂಕ್ತೀಕರಣ ಇವೆರಡನ್ನು ನಿಯಮಿಸಬಹುದು.

(ಬಿ) ಕಾಲಕಾಲಕ್ಕೆ, ಆದರೆ ಪ್ರತಿಯೊಂದು ಪ್ರಕರಣದಲ್ಲಿ ಆ ಬಗ್ಗೆ ನಗರಪಾಲಿಕೆಯ ಅಧಿಕಾರವನ್ನು ಅದು ಸ್ವೀಕರಿಸುವುದಕ್ಕೆ ಒಳಪಟ್ಟು ಹಾಗೆ ನಿರ್ಧರಿಸಿದ ಯಾವುದೇ ಸಾಲಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಬದಲಾಗಿ ಹೊಸ ಸಾಲನ್ನು ನಿರ್ಧರಿಸಬಹುದು ಪರಂತು,–

(i) ನಗರಪಾಲಿಕೆಯ ಯಾವ ಸಭೆಯಲ್ಲಿ ಆ ವಿಷಯವನ್ನು ಪರಿಶೀಲಿಸಬೇಕಾಗಿದೆಯೋ ಆ ಸಭೆಗೆ ಕನಿಷ್ಠಪಕ್ಷ ಒಂದು ತಿಂಗಳು ಮುಂಚೆ ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಮತ್ತು ಸರ್ಕಾರೀ ರಾಜ್ಯಪತ್ರದಲ್ಲಿ ಜಾಹೀರಾತಿನ ಮೂಲಕ ಆಯುಕ್ತರು ಪ್ರಸ್ತಾವನೆಯ ಬಗ್ಗೆ ಸಾರ್ವಜನಿಕ ನೋಟೀಸನ್ನು ಕೊಟ್ಟಿದ್ದ ಹೊರತು ಮತ್ತು ಅದರ ಬಗ್ಗೆ ಆಯುಕ್ತರು ಸಹಿ ಮಾಡಿದ ವಿಶೇಷ ನೋಟೀಸನ್ನು, ಯಾವ ಬೀದಿಯ ಅಥವಾ ಬೀದಿಯ ಭಾಗಕ್ಕೆ ಹೊಸ ಸಾಲನ್ನು ನಿರ್ಧರಿಸಲು ಪ್ರಸ್ತಾವಿಸಲಾಗಿದೆಯೋ ಆ ಬೀದಿಯಲ್ಲಿ ಅಥವಾ ಬೀದಿಯ ಭಾಗದಲ್ಲಿ ಹಾಕಿದ್ದ ಹೊರತು; ಮತ್ತು

(ii) ಲಿಖಿತದಲ್ಲಿ ಸಲ್ಲಿಸಿದ ಮತ್ತು ಅಂಥ ಸಭೆಯ ದಿನಕ್ಕೆ ಮುಂಚೆ ಮೂರು ಸ್ಪಷ್ಟ ದಿನಗಳಿಗೆ ಕಡಿಮೆಯಿಲ್ಲದಂತೆ ನಗರಪಾಲಿಕೆಯ ಕಚೇರಿಯಲ್ಲಿ ಕೊಟ್ಟ ಸದರಿ ಪ್ರಸ್ತಾವಗಳಿಗೆ ಬಂದ ಎಲ್ಲಾ ಆಕ್ಷೇಪಣೆಗಳನ್ನು ನಗರಪಾಲಿಕೆಯು ಪರಿಶೀಲಿಸುವವರೆಗೆ

– ಅಂಥ ಅಧಿಕಾರವನ್ನು ಕೊಡತಕ್ಕದ್ದಲ್ಲ.

**272. ಬೀದಿಯ ಪಂಕ್ತೀಕರಣದೊಳಗೆ ಅಥವಾ ಕಟ್ಟಡಗಳ ಸಾಲಿನೊಳಗೆ ಕಟ್ಟಡಗಳ ನಿರ್ಮಾಣದ ಅಥವಾ ಕಟ್ಟಡಗಳ ವಿಸ್ತರಣೆಯ ಮೇಲೆ ನಿರ್ಬಂಧ.–** (1) ಯಾರೇ ವ್ಯಕ್ತಿಯು, 271ನೇ ಪ್ರಕರಣದ ಮೇರೆಗೆ ನಿರ್ಧರಿಸಲಾದ ಬೀದಿಯ ಪಂಕ್ತೀಕರಣದೊಳಗೆ ಯಾವುದೇ ಕಟ್ಟಡದ ಯಾವುದೇ ಭಾಗವನ್ನು ನಿರ್ಮಿಸತಕ್ಕದ್ದಲ್ಲ: ಪರಂತು ಆದಾಗ್ಯೂ ಆಯುಕ್ತರು ತಮ್ಮ ವಿವೇಚನೆಯಲ್ಲಿ ಬೀದಿ ಪಂಕ್ತೀಕರಣದೊಳಗೆ ಕಟ್ಟಡ ವಿಸ್ತರಣೆಯನ್ನು ಮಾಡಲು, ಅಂಥ ವಿಸ್ತರಣೆಯು, ಎತ್ತರವನ್ನು ಕೇವಲ ಹೆಚ್ಚಿಸಿದರೆ ಮತ್ತು ಹಾಲಿ ಇರುವ ಕಟ್ಟಡದ ಅಥವಾ ಗೋಡೆಯ ಮೇಲೆ ನಿಂತರೆ ಕಟ್ಟಡದ ಮಾಲೀಕನು ಸ್ವತಃ ಮತ್ತು ತನ್ನ ಹಿತಾಸಕ್ತಿಯ ಉತ್ತರಾಧಿಕಾರಿಗಳನ್ನು,–

(ಎ) ಅಂಥ ಅನುಮತಿಯ ಅನುಸಾರವಾಗಿ ನಿರ್ಮಿಸಿದ ಅಥವಾ ಅದಕ್ಕೆ ವಿಸ್ತರಿಸಿದ ಯಾವುದೇ ಕಟ್ಟಡವನ್ನು ಅಥವಾ ಅದರ ಯಾವುದೇ ಭಾಗವನ್ನು ತೆಗೆದುಹಾಕಲು, ಆಯುಕ್ತರು ಆ ನಂತರದ ಯಾವುದೇ ಕಾಲದಲ್ಲಿ ಅವನನ್ನು ಅಥವಾ ಅವನ ಉತ್ತರಾಧಿಕಾರಿಗಳನ್ನು, ಕೋರುವ ಸಂದರ್ಭದಲ್ಲಿ ನಷ್ಟ ಪರಿಹಾರವನ್ನು ಕ್ಲೇಮು ಮಾಡುವುದಿಲ್ಲವೆಂದು; ಮತ್ತು

(ಬಿ) ಅಂಥ ತೆಗೆದುಹಾಕುವುದರ ವೆಚ್ಚಗಳನ್ನು ಸಂದಾಯ ಮಾಡಲು

– ಬದ್ಧರಾಗಿರುವ ಬಗ್ಗೆ ಒಪ್ಪಂದವನ್ನು ಬರೆದುಕೊಟ್ಟ ಮೇಲೆ ಅನುಮತಿಸಬಹುದು:

ಪರಂತು, ಆಯುಕ್ತರು ತಾನು ಅನುಮತಿಸುವ ಪ್ರತಿಯೊಂದು ಪ್ರಕರಣದಲ್ಲಿ ಸ್ಥಾಯೀ ಸಮಿತಿಗೆ ಲಿಖಿತದಲ್ಲಿ ತನ್ನ ಕಾರಣಗಳನ್ನು ವರದಿ ಮಾಡತಕ್ಕದ್ದು.

(2) 271ನೇ ಪ್ರಕರಣದ ಮೇರೆಗೆ ನಿಯಮಿಸಿದ ಬೀದಿಯ ಪಂಕ್ತೀಕರಣದೊಳಗೆ ಸಂಪೂರ್ಣವಾಗಿ ಅಥವಾ ಭಾಗಶಃ ಪ್ರಸ್ತಾವಿಸಿದ ನಿವೇಶನವು ಬರುತ್ತದೆ ಎಂಬ ಕಾರಣದ ಮೇಲೆ ಯಾವುದೇ ಕಟ್ಟಡವನ್ನು ನಿರ್ಮಿಸಲು ಅಥವಾ ಅದಕ್ಕೆ ವಿಸ್ತರಣೆ ಮಾಡಲು, ಅನುಮತಿಯನ್ನು ಕೊಡಲು ಆಯುಕ್ತರು ನಿರಾಕರಿಸಿದರೆ, ಮತ್ತು ಅಂಥ ಪಂಕ್ತೀಕರಣದೊಳಗೆ ಬರುವ ಅಂಥ ನಿವೇಶನವನ್ನು ಅಥವಾ ಅದರ ಭಾಗವನ್ನು ಅಂಥ ನಿರಾಕರಣೆಯ ದಿನಾಂಕದ ತರುವಾಯ ಒಂದು ವರ್ಷದೊಳಗೆ ನಗರಪಾಲಿಕೆಯ ಪರವಾಗಿ ಆರ್ಜನೆ ಮಾಡದಿದ್ದರೆ, ನಗರಪಾಲಿಕೆಯು ಆ ನಿವೇಶನದ ಮಾಲೀಕನಿಗೆ ಸೂಕ್ತ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(3) ಆಯುಕ್ತರ ಅನುಮತಿಯೊಂದಿಗೆ ಹೊರತು 271ನೇ ಪ್ರಕರಣದ ಮೇರೆಗೆ ನಿರ್ಧರಿಸಿದ ಬೀದಿಯ ಪಂಕ್ತೀಕರಣ ಮತ್ತು ಕಟ್ಟಡದ ಸಾಲುಗಳ ನಡುವೆ ಯಾವುದೇ ಕಟ್ಟಡವನ್ನು ಯಾರೇ ವ್ಯಕ್ತಿಯು ನಿರ್ಮಿಸತಕ್ಕದ್ದಲ್ಲ ಅಥವಾ ಅದಕ್ಕೆ ವಿಸ್ತರಣೆ ಮಾಡತಕ್ಕದ್ದಲ್ಲ, ಆಯುಕ್ತರು ಅನುಮತಿಯನ್ನು ಕೊಡುವಾಗ ಸ್ಥಾಯೀ ಸಮಿತಿಯು ಅಂಥ ಪ್ರಕರಣಗಳಿಗೆ ನಿರೂಪಿಸಬಹುದಾದಂಥ ಷರತ್ತುಗಳನ್ನು ವಿಧಿಸಬಹುದು.

**273. ಮುಂಚಾಚಿದ ಕಟ್ಟಡವನ್ನು ಅಥವಾ ಗೋಡೆಯನ್ನು ಹಿಂದಕ್ಕೆ ಕಟ್ಟುವುದು.–** (1) ಸಾರ್ವಜನಿಕ ಬೀದಿಗೆ ಹೊಂದಿಕೊಂಡಿರುವ ಯಾವುದೇ ಕಟ್ಟಡ ಅಥವಾ ಅದರ ಭಾಗವು 271ನೇ ಪ್ರಕರಣದ ಮೇರೆಗೆ ನಿರ್ಧರಿಸಿದ ಬೀದಿಯ ಪಂಕ್ತೀಕರಣದೊಳಗೆ ಇರುವಾಗ ಆಯುಕ್ತರು–

(ಎ) ಅಂಥ ಕಟ್ಟಡವನ್ನು ಪುನಃ ಕಟ್ಟಲು ಅಥವಾ ನೆಲಮಟ್ಟದ ಮೇಲೆ ಅದರ ಅರ್ಧದಷ್ಟನ್ನು ಮೀರುವಷ್ಟರ ಮಟ್ಟಿಗೆ ಇಳಿಸಲು ಅಂಥ ಅರ್ಧದಷ್ಟನ್ನು ಕ್ಯೂಬಿಕ್ ಮೀಟರಿನಲ್ಲಿ ಅಳೆಯಬೇಕು;

(ಬಿ) ಬೀದಿಯ ಪಂಕ್ತೀಕರಣದೊಳಗೆ ಇರುವ ಅಂಥ ಕಟ್ಟಡದ ಯಾವುದೇ ಭಾಗವನ್ನು ತೆಗೆದುಹಾಕಲು, ಪುನಃ ನಿರ್ಮಿಸಲು ಅಥವಾ ಅದಕ್ಕೆ ಯಾವುದೇ ವಿಸ್ತರಣೆ ಮಾಡಲು

– ಪ್ರಸ್ತಾಪಿಸಿದಾಗಲೆಲ್ಲಾ, ಅಂಥ ಕಟ್ಟಡವನ್ನು ಪುನಃ ಕಟ್ಟುವುದು, ಬದಲಾವಣೆ ಮಾಡುವುದು ಅಥವಾ ದುರಸ್ತಿ ಮಾಡುವುದಕ್ಕೆ ಸಂಬಂಧಿಸಿದಂತೆ ಅವನು ಹೊರಡಿಸುವ ಆದೇಶದಲ್ಲಿ ಅಂಥ ಕಟ್ಟಡವನ್ನು ಆ ಬೀದಿಯ ಪಂಕ್ತೀಕರಣದ ಹಿಂದಕ್ಕೆ ಕಟ್ಟಲು ಅಗತ್ಯಪಡಿಸಬಹುದು.

(2) ಬೀದಿಯ ಪಂಕ್ತೀಕರಣದೊಳಗೆ ಬರುವ ಯಾವುದೇ ಕಟ್ಟಡವು ಅಥವಾ ಅದರ ಯಾವುದೇ ಭಾಗವು ಬಿದ್ದುಹೋಗಿದ್ದಾಗ ಅಥವಾ ಸುಟ್ಟುಹೋಗಿರುವಾಗ ಅಥವಾ ಆಯುಕ್ತರ ಆದೇಶದ ಮೂಲಕವಾಗಿಯಾಗಲಿ ಅಥವಾ ಅನ್ಯಥಾ ಆಗಲಿ ಕೆಳಗೆ ಇಳಿಸಿದಾಗ, ಸದರಿ ಕಟ್ಟಡವು ಆಕ್ರಮಿಸಿಕೊಂಡ ಬೀದಿಯ ಪಂಕ್ತೀಕರಣದೊಳಗಿನ ಭೂಮಿಯ ಭಾಗವನ್ನು ನಗರಪಾಲಿಕೆಯ ಪರವಾಗಿ ಆಯುಕ್ತರು ತತ್‌ಕ್ಷಣವೇ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು ಮತ್ತು ಅವಶ್ಯವಿದ್ದರೆ ಅದನ್ನು ಖಾಲಿ ಮಾಡಿಸಬಹುದು.

(3) ಈ ಪ್ರಕರಣದ ಮೇರೆಗೆ ಆರ್ಜಿಸಿದ ಭೂಮಿಯನ್ನು ಆ ಸಾರ್ವಜನಿಕ ಬೀದಿಯ ಭಾಗವೆಂದು ಭಾವಿಸತಕ್ಕದ್ದು ಮತ್ತು ಅದು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

(4) ಉಪ–ಪ್ರಕರಣದ (1)ರ ಮೇರೆಗೆ ಕೊಟ್ಟ ಯಾವುದೇ ಸೂಚನೆಯ ಅನುಸಾರವಾಗಿ ಯಾವುದೇ ಕಟ್ಟಡವನ್ನು ಹಿಂದಕ್ಕೆ ಕಟ್ಟಿದಾಗ ಅಥವಾ ಆಯುಕ್ತರು (2)ನೇ ಉಪ–ಪ್ರಕರಣದ ಮೇರೆಗೆ ಯಾವುದೇ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡಾಗ ಅದರಿಂದ ಮಾಲೀಕನು ಅನುಭವಿಸಬಹುದಾದ ಯಾವುದೇ ನೇರ ಹಾನಿಗಾಗಿ ಅವನಿಗೆ ಸಂಪೂರ್ಣ ನಷ್ಟಪರಿಹಾರವನ್ನು ತತ್‌ಕ್ಷಣವೇ ಕೊಡತಕ್ಕದ್ದು.

**ವಿವರಣೆ.–** ಭೂಮಿಗೆ ಸಂಬಂಧಿಸಿದಂತೆ (4)ನೇ ಉಪಪ್ರಕರಣದಲ್ಲಿ ಬಳಸಿದ 'ನೇರ ಹಾನಿ' ಎಂಬ ಪದಾವಳಿಗೆ ತೆಗೆದುಕೊಂಡ ಭೂಮಿಯ ಮಾರುಕಟ್ಟೆ ಮೌಲ್ಯ ಮತ್ತು ಆ ಪ್ರದೇಶದ ಗಾತ್ರವು ಕಡಿಮೆಯಾಗಿದ್ದರಿಂದ ಉಂಟಾಗುವ ಉಳಿದ ಭೂಮಿಯ ಸಾಮಾನ್ಯ ಮಾರುಕಟ್ಟೆ ಮೌಲ್ಯದಲ್ಲಿನ ಇಳಿತಾಯ ಯಾವುದಾದರೂ ಇದ್ದರೆ ಅದು–ಎಂದು ಅರ್ಥ. ಆದರೆ ಅಂಥ ಬಳಕೆಗೆ ಆ ನಿವೇಶನದ ಗಾತ್ರವು ಕಡಿಮೆಯಾಗಿದ್ದರಿಂದ ಹಾನಿಕರವಾಗಿ ಭಾದಕವಾಗಬಹುದಾಗಿದ್ದರೂ ಯಾವ ವಿಶಿಷ್ಟ ಬಳಕೆಗೆ ಆ ಮಾಲೀಕನು ತನ್ನ ಭೂಮಿಯನ್ನು ಬಳಸಲು ಉದ್ದೇಶಿಸಿರುವನೆಂದು ಹೇಳಬಹುದೋ ಆ ಯಾವುದೇ ವಿಶಿಷ್ಟ ಬಳಕೆಯಲ್ಲಿ ಇನ್ನು ಮುಂದೆ ಆಗುವ ನಷ್ಟದಿಂದ ಉಂಟಾಗುವ ಹಾನಿಯನ್ನು ಒಳಗೊಳ್ಳುವುದಿಲ್ಲ.

**274. ಬೀದಿಯ ನಿಯತ ರೇಖೆಯ ಹಿಂದಕ್ಕೆ ಕಟ್ಟಡಗಳನ್ನು ಕಟ್ಟುವುದಕ್ಕೆ ಆದೇಶಿಸಲು ಆಯುಕ್ತರ ಹೆಚ್ಚಿನ ಅಧಿಕಾರ.–** (1) ಸಾರ್ವಜನಿಕ ಬೀದಿಯ ರೇಖೆಯೊಳಗೆ ಯಾವುದೇ ಕಟ್ಟಡವು ಅಥವಾ ಅದರ ಯಾವುದೇ ಭಾಗವು ಇದ್ದರೆ ಮತ್ತು ಆ ಬೀದಿಯ ನಿಯತ ರೇಖೆಗೆ ಆ ಕಟ್ಟಡವನ್ನು ಹಿಂದಕ್ಕೆ ಕಟ್ಟುವುದು ಅವಶ್ಯಕವೆಂದು ಆಯುಕ್ತರು ಅಭಿಪ್ರಾಯಪಟ್ಟರೆ, 273ನೆಯ ಪ್ರಕರಣದ ಉಪಬಂಧಗಳು ಅನ್ವಯವಾಗದಿದ್ದರೆ, ಲಿಖಿತ ನೋಟೀಸಿನ ಮೂಲಕ, ಅವರು–

(ಎ) ಆ ಬೀದಿಯ ನಿಯತ ರೇಖೆಯೊಳಗಿರುವ ಆ ಕಟ್ಟಡವನ್ನು ಅಥವಾ ಅದರ ಯಾವುದೇ ಭಾಗವನ್ನು ಏಕೆ ಕೆಡವಿಹಾಕಬಾರದು ಮತ್ತು ಸದರಿ ರೇಖೆಯೊಳಗಿರುವ ಭೂಮಿಯನ್ನು ಆಯುಕ್ತರು ಏಕೆ ಆರ್ಜಿಸಬಾರದು ಎಂಬುದಕ್ಕೆ ಅಂಥ ಕಟ್ಟಡದ ಮಾಲೀಕನನ್ನು ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸುವ ಅವಧಿಯೊಳಗೆ ಅವನು ಅಥವಾ ಆ ಬಗ್ಗೆ ಅವನಿಂದ ಕ್ರಮಬದ್ಧವಾಗಿ ಅಧಿಕೃತನಾದ ಏಜೆಂಟನು ಸಹಿ ಮಾಡಿದ ಮತ್ತು ಆಯುಕ್ತರಿಗೆ ಸಂಬೋಧಿಸಿದ ಲಿಖಿತ ಹೇಳಿಕೆ ಮೂಲಕ ಕಾರಣ ತೋರಿಸಲು ಅಗತ್ಯಪಡಿಸಬಹುದು; ಅಥವಾ

(ಬಿ) ಆ ಬೀದಿಯ ನಿಯತ ರೇಖೆಯೊಳಗಿರುವ ಅಂಥ ಕಟ್ಟಡವನ್ನು ಅಥವಾ ಅದರ ಯಾವುದೇ ಭಾಗವನ್ನು ಏಕೆ ಕೆಡವಿಹಾಕಬಾರದು ಮತ್ತು ಆ ರೇಖೆಯೊಳಗಿನ ಭೂಮಿಯನ್ನು ಆಯುಕ್ತರು ಏಕೆ ಆರ್ಜಿಸಬಾರದು ಎಂಬುದಕ್ಕೆ ಕಾರಣ ತೋರಿಸಲು ಆ ಮಾಲೀಕನನ್ನು, ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿರುವ ದಿನದಂದು ಮತ್ತು ಅಂಥ ಸಮಯದಲ್ಲಿ ಮತ್ತು ಸ್ಥಳದಲ್ಲಿ ಖುದ್ದಾಗಿ ಅಥವಾ ಆ ಬಗ್ಗೆ ಅವನಿಂದ ಕ್ರಮಬದ್ಧವಾಗಿ ಅಧಿಕೃತನಾದ ಏಜೆಂಟನ ಮೂಲಕ ಹಾಜರಾಗಲು ಅಗತ್ಯಪಡಿಸಬಹುದು.

(2) ಅಂಥ ಮಾಲೀಕನು, ಬೀದಿಯ ನಿಯತ ರೇಖೆಯೊಳಗಿರುವ ಅಂಥ ಕಟ್ಟಡವನ್ನು ಅಥವಾ ಅದರ ಭಾಗವನ್ನು ಏಕೆ ಕೆಡವಿಹಾಕಬಾರದು ಮತ್ತು ಸದರಿ ರೇಖೆಯೊಳಗಿರುವ ಭೂಮಿಯನ್ನು ಮೇಲೆ ಹೇಳಿರುವಂತೆ ಏಕೆ ಆರ್ಜಿಸಬಾರದು ಎಂಬುದಕ್ಕೆ ಆಯುಕ್ತರಿಗೆ ಮನವರಿಕೆಯಾಗುವಂಥ ಸಾಕಷ್ಟು ಕಾರಣವನ್ನು ತೋರಿಸಲು ವಿಫಲನಾದರೆ, ಆಯುಕ್ತರು, ಸ್ಥಾಯೀ ಸಮಿತಿಯ ಅನುಮೋದನೆಯೊಂದಿಗೆ ಲಿಖಿತ ನೋಟೀಸಿನ ಮೂಲಕ ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಆ ಬೀದಿಯ ನಿಯತ ರೇಖೆಯೊಳಗಿರುವ ಆ ಕಟ್ಟಡವನ್ನು ಅಥವಾ ಅದರ ಭಾಗವನ್ನು ಕೆಡವಿಹಾಕುವಂತೆ ಅಂಥ ಮಾಲೀಕನನ್ನು ಅಗತ್ಯಪಡಿಸಬಹುದು.

(3) ಅಂಥ ಕಟ್ಟಡದ ಮಾಲೀಕನು ಅಂಥ ಅವಧಿಯೊಳಗೆ ಸದರಿ ರೇಖೆಯೊಳಗೆ ಬರುವ ಅಂಥ ಕಟ್ಟಡವನ್ನು ಅಥವಾ ಅದರ ಯಾವುದೇ ಭಾಗವನ್ನು ಕಡೆವಿಹಾಕಲು ವಿಫಲನಾದರೆ, ಆಯುಕ್ತರು, ಅದನ್ನು ಕೆಡವಿಹಾಕಬಹುದು ಮತ್ತು ಹಾಗೆ ಕೆಡವಿ ಹಾಕುವುದಕ್ಕಾಗಿ ವಹಿಸಿದ ಎಲ್ಲ ವೆಚ್ಚಗಳನ್ನು ಆ ಮಾಲೀಕನು ಸಂದಾಯ ಮಾಡತಕ್ಕದ್ದು.

(4) ಆಯುಕ್ತರು ನಗರಪಾಲಿಕೆಯ ಪರವಾಗಿ ಕೂಡಲೇ, ಸದರಿ ಕಟ್ಟಡಗಳು ಆ ತನಕ ಸದರಿ ರೇಖೆಯೊಳಗಿನ ಭೂಮಿಯಲ್ಲಿ ಆಕ್ರಮಿಸಿಕೊಂಡಿದ್ದಷ್ಟು ಭಾಗವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಅಂದಿನಿಂದ ಅಂಥ ಭೂಮಿಯನ್ನು ಸಾರ್ವಜನಿಕ ಬೀದಿಯ ಭಾಗವೆಂದು ಭಾವಿಸತಕ್ಕದ್ದು ಮತ್ತು ಹಾಗೆಂದು ಅದು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು.

(5) ಈ ಪ್ರಕರಣದಲ್ಲಿರುವುದು ಯಾವುದೂ, ಸರ್ಕಾರದಲ್ಲಿ ನಿಹಿತವಾಗಿರುವ ಕಟ್ಟಡಗಳಿಗೆ ಅನ್ವಯವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

**275. ಬೀದಿಯ ರೇಖೆಯನ್ನು ಮೇಲ್ಪಾಟುಗೊಳಿಸಲು ಕಟ್ಟಡವನ್ನು ಮುಂದಕ್ಕೆ ಕಟ್ಟುವುದು.–** ಸಾರ್ವಜನಿಕ ಬೀದಿಯ ರೇಖೆಯನ್ನು ಮೇಲ್ಪಾಟು ಮಾಡುವ ಉದ್ದೇಶಕ್ಕಾಗಿ ಯಾವುದೇ ಕಟ್ಟಡವನ್ನು ಮುಂದಕ್ಕೆ ಕಟ್ಟುವುದಕ್ಕೆ ಆಯುಕ್ತರು ತಾನು ಯೋಗ್ಯವೆಂದು ಯೋಚಿಸಬಹುದಾದಂಥ ನಿಬಂಧನೆಗಳ ಮೇಲೆ ಅವಕಾಶ ಮಾಡಿಕೊಡಬಹುದು ಮತ್ತು ಅವರು ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ ನೋಟೀಸಿನ ಮೂಲಕ ಯಾವುದೇ ಕಟ್ಟಡವನ್ನು ಅದರ ಪುನರ್ ನಿರ್ಮಾಣದ ಅಥವಾ ಹೊಸ ನಿರ್ಮಾಣದ ಸಂದರ್ಭದಲ್ಲಿ ಮುಂದಕ್ಕೆ ಕಟ್ಟುವಂತೆ ಅಗತ್ಯಪಡಿಸಬಹುದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ ಸಾರ್ವಜನಿಕ ಬೀದಿಯಿಂದ ಯಾವುದೇ ಆವರಣವನ್ನು ಬೇರ್ಪಡಿಸುವ ಗೋಡೆಯನ್ನು ಕಟ್ಟಡವೆಂಬುದಾಗಿ ಭಾವಿಸತಕ್ಕದ್ದು ಮತ್ತು ಆಯುಕ್ತರು ಅನುಮೋದಿಸುವಂಥ ಸಾಮಗ್ರಿ ಮತ್ತು ಉದ್ದಗಲಗಳ ಗೋಡೆಯನ್ನು ಸದರಿ ರೇಖೆಯ ಗುಂಟ ನಿರ್ಮಿಸಿದರೆ, ಆ ಬೀದಿಯ ಪಂಕ್ತೀಕರಣಕ್ಕೆ ಕಟ್ಟಡವನ್ನು ಮುಂದಕ್ಕೆ ಕಟ್ಟಲು ಅನುಮತಿ ನೀಡಿರುವುದನ್ನು ಅಥವಾ ಸೂಚನೆ ನೀಡಿರುವುದನ್ನು ಸಾಕಷ್ಟು ಪಾಲಿಸಲಾಗಿದೆ ಎಂದು ಭಾವಿಸತಕ್ಕದ್ದು.

**276. ಉದ್ದೇಶಿತ ಬೀದಿಗಳು.–** (1) ಸ್ಥಾಯೀ ಸಮಿತಿಯು, ಅಂಥ ಬೀದಿಗಳ ದಿಕ್ಕನ್ನು ಬೀದಿ ಪಂಕ್ತೀಕರಣವನ್ನು ಮತ್ತು ಅವುಗಳ ಎರಡೂ ಪಕ್ಕಗಳಲ್ಲಿ ಕಟ್ಟಡ ರೇಖೆ, ಅವುಗಳ ಉದ್ದೇಶಿತ ಅಗಲವನ್ನು ಮತ್ತು ಅಪೇಕ್ಷಣೀಯವೆಂದು ಕಂಡುಬರಬಹುದಾದಂಥ ಇತರ ವಿವರಗಳನ್ನು ತೋರಿಸುವ ಉದ್ದೇಶಿತ ಸಾರ್ವಜನಿಕ ಬೀದಿಗಳ ರೂಪುರೇಷೆಗಳನ್ನು ಮತ್ತು ನಕ್ಷೆಗಳನ್ನು ತಯಾರಿಸಬಹುದು.

(2) ಅಂಥ ಉದ್ದೇಶಿತ ಬೀದಿಗಳ ಅಗಲವು ಸಾಮಾನ್ಯವಾಗಿ ಹನ್ನೆರಡು ಮೀಟರುಗಳಿಗಿಂತ ಅಥವಾ ಗುಡಿಸಲುಗಳಿಂದ ಆವೃತವಾದ ಯಾವುದೇ ಪ್ರದೇಶದಲ್ಲಿ ಆರು ಮೀಟರುಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

(3) ಉಪ–ಪ್ರಕರಣ (1)ರ ಮೇರೆಗೆ ಯಾವುದೇ ನಕ್ಷೆಯನ್ನು ತಯಾರಿಸಿರುವಾಗ ಆ ಉದ್ದೇಶಿತ ಬೀದಿಯ ಪಂಕ್ತೀಕರಣಕ್ಕೆ ಕಟ್ಟಡಗಳು ಅಡ್ಡಲಾಗಿ ಬರುವಷ್ಟರಮಟ್ಟಿಗೆ 273ನೇ ಪ್ರಕರಣದ ಉಪಬಂಧಗಳು ಎಲ್ಲ ಕಟ್ಟಡಗಳಿಗೆ ಅನ್ವಯವಾಗತಕ್ಕದ್ದು.

**277. ಬೀದಿಗಳನ್ನು ತಾತ್ಕಾಲಿಕವಾಗಿ ಮುಚ್ಚುವುದು.–** ಆಯುಕ್ತರು, ಆದೇಶದ ಮೂಲಕ ದುರಸ್ತಿಗಾಗಿ ಅಥವಾ ಒಳಚರಂಡಿ ವ್ಯವಸ್ಥೆಗೆ ಅಥವಾ ನೀರು ಸರಬರಾಜಿಗೆ ಮತ್ತು ದೀಪದ ವ್ಯವಸ್ಥೆಗೆ ಸಂಬಂಧಿಸಿದ ಯಾವುದೇ ಕಾಮಗಾರಿಗಳನ್ನು ಅಥವಾ ಈ ಅಧಿನಿಯಮದ ಯಾವುದೇ ಉದ್ದೇಶಗಳನ್ನು ಕಾರ್ಯಗತ ಗೊಳಿಸುವುದಕ್ಕಾಗಿ ಯಾವುದೇ ಬೀದಿಯನ್ನು ಸಂಚಾರಕ್ಕೆ ತಾತ್ಕಾಲಿಕವಾಗಿ ಮುಚ್ಚಬಹುದು:

ಪರಂತು, ಸಾಧ್ಯವಾದಷ್ಟು ಶೀಘ್ರಗತಿಯಲ್ಲಿ ಅಂಥ ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು ಮತ್ತು ಅಂಥ ಬೀದಿಯನ್ನು ಸಂಚಾರಕ್ಕೆ ಪುನಃ ತೆರೆಯತಕ್ಕದ್ದು.

**278. ಬೀದಿಗಳಿಗೆ ಲಗತ್ತಾಗಿರುವವುಗಳ ಮತ್ತು ಬೀದಿಗಳ ಸಾಮಗ್ರಿಗಳ ಸಂರಕ್ಷಣೆ.–** ಆಯುಕ್ತರ ಅನುಮತಿ ಇಲ್ಲದೆ ಯಾರೇ ವ್ಯಕ್ತಿಯು, ಯಾವುದೇ ಸಾರ್ವಜನಿಕ ಬೀದಿಯ ಬೇಲಿಗಳನ್ನು, ಸ್ತಂಭಗಳನ್ನು, ನೆಲಗಟ್ಟುಗಳನ್ನು, ಸೂಚನಾ ಸಂಕೇತ ಬಾವುಟಗಳನ್ನು, ಅಥವಾ ಇತರ ಸಾಮಗ್ರಿಗಳನ್ನು ಸ್ಥಳಾಂತರ ಮಾಡುವುದು, ತೆಗೆದುಕೊಳ್ಳುವುದು ಅಥವಾ ಸರಿಪಡಿಸುವುದು ಅಥವಾ ಅದರಲ್ಲಿ ಯಾವುದೇ ಬದಲಾವಣೆ ಮಾಡುವುದು ಕಾನೂನು ಸಮ್ಮತವಾದುದಾಗಿರತಕ್ಕದ್ದಲ್ಲ.

**279. ಅಸಾಧಾರಣ ವಾಹನ ಸಂಚಾರದಿಂದ ಉಂಟಾದ ವೆಚ್ಚಗಳನ್ನು ವಸೂಲ್ಮಾಡಲು ನಗರಪಾಲಿಕೆಯ ಅಧಿಕಾರ.–** ಲೋಕೋಪಯೋಗಿ ಇಲಾಖೆಯ ಕಾರ್ಯನಿರ್ವಾಹಕ ಇಂಜಿನಿಯರ್ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಸರ್ಕಾರದ ಅಧಿಕಾರಿಯ ಪ್ರಮಾಣ ಪತ್ರದಿಂದ, ನೆರೆಹೊರೆಯಲ್ಲಿನ ರಸ್ತೆಗಳ ದುರಸ್ತಿ ವೆಚ್ಚವನ್ನು ಗಮನದಲ್ಲಿ ಇಟ್ಟುಕೊಂಡಾಗ, ಒಂದು ಬೀದಿಯಲ್ಲಿ ಹೆಚ್ಚಿನ ಭಾರ ಹೊತ್ತ ವಾಹನಗಳು ಹಾದು ಹೋಗುವುದರಿಂದ ಅಥವಾ ಅದರ ಮೇಲೆ ಅಸಾಧಾರಣ ವಾಹನ ಸಂಚಾರದಿಂದ, ಅಥವಾ ಅದರ ಮೇಲೆ ವಾಹನಕ್ಕೆ ಹೆಚ್ಚಿನ ಭಾರವನ್ನು ಭರ್ತಿ ಮಾಡುವ ಅಥವಾ ಹೆಚ್ಚಿನ ಭಾರಗಳನ್ನು ವಾಹನದಿಂದ ಇಳಿಸುವ ಅಥವಾ ಹೆಚ್ಚಿನ ಭಾರವನ್ನು ತಂದು ಅದರ ಮೇಲೆ ರಾಶಿಹಾಕುವ ಯಾವುದೇ ಕಾರ್ಯವಿಧಾನದಿಂದ ಉಂಟಾದ ಹಾನಿಯ ಕಾರಣದಿಂದಾಗಿ ಆ ಬೀದಿಯನ್ನು ದುರಸ್ತಿ ಮಾಡುವುದಕ್ಕೆ ನಗರಪಾಲಿಕೆಯು ಅಸಾಧಾರಣ ವೆಚ್ಚಗಳನ್ನು ವಹಿಸಿರುವುದಾಗಿ ಆಯುಕ್ತರಿಗೆ ಕಂಡುಬಂದಾಗ, ಆಯುಕ್ತರು ಯಾವ ವ್ಯಕ್ತಿಯ ಆದೇಶದಿಂದ ಅಥವಾ ಆದೇಶದ ಪರಿಣಾಮವಾಗಿ ಅಂಥ ಹಾನಿಯು ಉಂಟಾಗಿದೆಯೋ ಆ ಯಾರೇ ವ್ಯಕ್ತಿಯಿಂದ ಸಿವಿಲ್ ನ್ಯಾಯಾಲಯದಲ್ಲಿ ಹಿಂದೆ ಹೇಳಿದಂಥ ಭಾರದಿಂದ ಅಥವಾ ವಾಹನ ಸಂಚಾರದಿಂದ ಉಂಟಾದ ಹಾನಿಯ ಕಾರಣದಿಂದಾಗಿ ನಗರಪಾಲಿಕೆಯು ವಹಿಸಿದೆ ಎಂದು ಅಂಥ ನ್ಯಾಯಾಲಯಕ್ಕೆ ಮನವರಿಕೆಯಾಗುವಂತೆ ರುಜುವಾತು ಪಡಿಸಬಹುದಾದಂಥ ವೆಚ್ಚಗಳ ಮೊಬಲಗನ್ನು ವಸೂಲು ಮಾಡಬಹುದು:

ಪರಂತು, ಈ ಪ್ರಕರಣದ ಮೇರೆಗೆ ಯಾವ ವ್ಯಕ್ತಿಯಿಂದ ವೆಚ್ಚಗಳನ್ನು ವಸೂಲಿ ಮಾಡಬೇಕಾಗಿದೆಯೋ ಅಥವಾ ವಸೂಲಿ ಮಾಡಬಹುದಾಗಿದೆಯೋ ಆ ಯಾರೇ ವ್ಯಕ್ತಿಯು ಅಂಥ ಭಾರ ಅಥವಾ ಸಂಚಾರಕ್ಕೆ ಸಂಬಂಧಿಸಿದಂತೆ ರಾಜಿ ಒಪ್ಪಂದದ ಹಣವನ್ನು ನಗರಪಾಲಿಕೆಗೆ ಸಂದಾಯ ಮಾಡುವುದಕ್ಕಾಗಿ ಅದರೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳಬಹುದು ಮತ್ತು ಆ ತರುವಾಯ ಹಾಗೆ ಸಂದಾಯ ಮಾಡುವ ವ್ಯಕ್ತಿಯು ಈ ಪ್ರಕರಣದ ಮೇರೆಗೆ ಯಾವುದೇ ವ್ಯವಹರಣೆಗಳಿಗೆ ಒಳಪಡತಕ್ಕದ್ದಲ್ಲ.

**280. ಕಟ್ಟಡ ನಿವೇಶನಗಳಾಗಿ ಭೂಮಿಯನ್ನು ವಿಲೆ ಮಾಡುವಾಗ ಬೀದಿಯನ್ನು ರಚಿಸಲು ಮಾಲೀಕನ ಹೊಣೆಗಾರಿಕೆ.–** ಯಾವುದೇ ಭೂಮಿಯ ಮಾಲೀಕನು ಕಟ್ಟಡಗಳ ನಿರ್ಮಾಣಕ್ಕಾಗಿ ಅಂಥ ಭೂಮಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಅಥವಾ ಭಾಗಗಳನ್ನು ನಿವೇಶನಗಳಾಗಿ ಬಳಸಿಕೊಂಡರೆ, ಮಾರಾಟ ಮಾಡಿದರೆ, ಗುತ್ತಿಗೆಗೆ ಕೊಟ್ಟರೆ ಅಥವಾ ಅನ್ಯಥಾ ವಿಲೆ ಮಾಡಿದರೆ, ಹಾಲಿ ಇರುವ ಸಾರ್ವಜನಿಕ ಅಥವಾ ಖಾಸಗಿ ಬೀದಿಯಲ್ಲಿರಬಹುದಾದಂಥ ನಿವೇಶನ ಅಥವಾ ನಿವೇಶನಗಳ ಸಂದರ್ಭದಲ್ಲಿ ಹೊರತು, ಅವನು ನಿವೇಶನಕ್ಕೆ ಅಥವಾ ನಿವೇಶನಗಳಿಗೆ ಪ್ರವೇಶಾವಕಾಶ ಕಲ್ಪಿಸುವ ಮತ್ತು ಹಾಲಿ ಇರುವ ಸಾರ್ವಜನಿಕ ಅಥವಾ ಖಾಸಗಿ ಬೀದಿಗೆ ಸಂಪರ್ಕ ಕಲ್ಪಿಸುವ ಬೀದಿಯನ್ನು ಅಥವಾ ಬೀದಿಗಳನ್ನು ಅಥವಾ ರಸ್ತೆಯನ್ನು ಅಥವಾ ರಸ್ತೆಗಳನ್ನು ರೂಪಿಸತಕ್ಕದ್ದು ಮತ್ತು ರಚಿಸತಕ್ಕದ್ದು.

**281. ಹೊಸ ಖಾಸಗಿ ಬೀದಿಗಳನ್ನು ರಚಿಸುವುದು.–** (1) ಹೊಸ ಖಾಸಗಿ ಬೀದಿಯನ್ನು ರೂಪಿಸಲು ಅಥವಾ ರಚಿಸಲು ಉದ್ದೇಶಿಸುವ ಯಾರೇ ವ್ಯಕ್ತಿಯು, ಈ ಕೆಳಕಂಡ ವಿವರಗಳನ್ನು ತೋರಿಸುವ ನಕ್ಷೆಗಳ ಮತ್ತು ಖಂಡ ಚಿತ್ರಗಳೊಂದಿಗೆ ಲಿಖಿತದಲ್ಲಿ ಅರ್ಜಿಯನ್ನು ಆಯುಕ್ತರಿಗೆ ಕಳುಹಿಸತಕ್ಕದ್ದು, ಎಂದರೆ:–

(ಎ) ಬೀದಿಯ ಉದ್ದೇಶಿತ ಮಟ್ಟ, ದಿಕ್ಕು ಮತ್ತು ಅಗಲ;

(ಬಿ) ಬೀದಿಯ ಪಂಕ್ತೀಕರಣ ಮತ್ತು ಕಟ್ಟಡದ ರೇಖೆ; ಮತ್ತು

(ಸಿ) ಬೀದಿಯನ್ನು ಮಟ್ಟಗೊಳಿಸುವುದಕ್ಕೆ, ನೆಲಗಟ್ಟು ಮಾಡುವುದಕ್ಕೆ, ಜಲ್ಲಿ ಹಾಕುವುದಕ್ಕೆ, ಚಪ್ಪಡಿ ಹಾಸುವುದಕ್ಕೆ, ಕಾಲುವೆ ಮಾಡುವುದಕ್ಕೆ, ಒಳಚರಂಡಿಯನ್ನು ಮಾಡುವುದಕ್ಕೆ, ಚರಂಡಿಗಳನ್ನು ಮಾಡುವುದಕ್ಕೆ, ನಿರ್ಮಲೀಕರಿಸುವುದಕ್ಕೆ ಮತ್ತು ದೀಪದ ವ್ಯವಸ್ಥೆ ಮಾಡುವುದಕ್ಕೆ ಮಾಡಬೇಕಾದ ವ್ಯವಸ್ಥೆಗಳು.

(2) ಸಾರ್ವಜನಿಕ ಬೀದಿಗಳ ಮಟ್ಟ ಮತ್ತು ಅಗಲಕ್ಕೆ ಹಾಗೂ ಅವುಗಳಿಗೆ ಹೊಂದಿಕೊಂಡಿರುವ ಕಟ್ಟಡಗಳ ಎತ್ತರಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಅಥವಾ ಉಪವಿಧಿಗಳ ಉಪಬಂಧಗಳು, (1)ನೇ ಉಪಪ್ರಕರಣದಲ್ಲಿ ತಿಳಿಸಿದ ಬೀದಿಗಳಿಗೂ ಸಹ ಅನ್ವಯವಾಗತಕ್ಕದ್ದು ಮತ್ತು ಆ ಉಪ–ಪ್ರಕರಣದಲ್ಲಿ ತಿಳಿಸಿದ ಎಲ್ಲ ವಿವರಗಳು ಸ್ಥಾಯೀ ಸಮಿತಿಯ ಅನುಮೋದನೆಗೆ ಒಳಪಟ್ಟಿರತಕ್ಕದ್ದು.

(3) ಉಪ–ಪ್ರಕರಣ (1)ರ ಮೇರೆಗೆ ಯಾವುದೇ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಅರವತ್ತು ದಿನಗಳೊಳಗೆ ಸ್ಥಾಯೀ ಸಮಿತಿಯು, ತಾನು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳ ಮೇಲೆ ಬೀದಿಯನ್ನು ರಚಿಸುವುದಕ್ಕೆ ಮಂಜೂರಾತಿಯನ್ನು ಕೊಡತಕ್ಕದ್ದು. ಅಥವಾ ಅದನ್ನು ತಳ್ಳಿಹಾಕತಕ್ಕದ್ದು ಅಥವಾ ಅದಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಯನ್ನು ಕೇಳತಕ್ಕದ್ದು.

(4) ಅಂಥ ಮಂಜೂರಾತಿಯನ್ನು,–

(i) ಬೀದಿಯ ಮೇಲ್ಪಾಟಿಗೆ ಸಂಬಂಧಿಸಿದ ಯಾವುದೇ ಸಾಮಾನ್ಯ ಕಾರ್ಯಯೋಜನೆಯನ್ನು ಕಾರ್ಯಗತ ಮಾಡುವುದಕ್ಕಾಗಿ ಮಾಡಲಾದ ಅಥವಾ ಸ್ಥಾಯೀ ಸಮಿತಿಯ ಅಭಿಪ್ರಾಯದಲ್ಲಿ ಮಾಡುವ ಸಂಭವವಿರುವ ಯಾವುದೇ ವ್ಯವಸ್ಥೆಗಳಿಗೆ ಉದ್ದೇಶಿತ ಬೀದಿಯು ವ್ಯತಿರಿಕ್ತವಾಗಿದ್ದರೆ;

(ii) ಉದ್ದೇಶಿತ ಬೀದಿಯು, (2)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಿದ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಉಪಬಂಧಕ್ಕೆ ಅನುಗುಣವಾಗಿಲ್ಲದಿದ್ದರೆ; ಅಥವಾ

(iii) ಉದ್ದೇಶಿತ ಬೀದಿಯನ್ನು, ಅದರ ಒಂದು ತುದಿಯು ಈಗಾಗಲೇ ತೆರೆದಿರುವ ಬೀದಿಯೊಂದಿಗೆ, ಕೂಡುವ ಹಾಗೆ ವಿನ್ಯಾಸಗೊಳಿಸಿರದಿದ್ದರೆ

– ತಿರಸ್ಕರಿಸಬಹುದು.

(5) ಯಾರೇ ವ್ಯಕ್ತಿಯು, ಸ್ಥಾಯೀ ಸಮಿತಿಯ ಆದೇಶವಿಲ್ಲದೆ ಅಥವಾ ಆ ಆದೇಶಕ್ಕೆ ಅನುಸಾರವಾಗಿಯಲ್ಲದೆ ಅನ್ಯಥಾ ಯಾವುದೇ ಹೊಸ ಖಾಸಗಿ ಬೀದಿಯನ್ನು ರೂಪಿಸತಕ್ಕದ್ದಲ್ಲ ಅಥವಾ ರಚಿಸತಕ್ಕದ್ದಲ್ಲ. ಹೆಚ್ಚಿನ ಮಾಹಿತಿಯನ್ನು ಕೇಳಿದ್ದರೆ, ಅಂಥ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಆದೇಶಗಳನ್ನು ಮಾಡುವವರೆಗೆ ಆ ಬೀದಿಯನ್ನು ರೂಪಿಸಲು ಅಥವಾ ರಚಿಸಲು ಯಾವುದೇ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದಲ್ಲ:

ಪರಂತು, ಅಂಥ ಆದೇಶ ಮಾಡಲು, ಸದರಿ ಅರ್ಜಿಯ ಬಗ್ಗೆ ಅಂತಿಮವಾಗಿ ವ್ಯವಹರಿಸಲು ಸ್ಥಾಯೀ ಸಮಿತಿಗೆ ಸಾಧ್ಯವಾಗಿಸುವುದಕ್ಕಾಗಿ ಅದು ಅವಶ್ಯವೆಂದು ಪರ್ಯಾಲೋಚಿಸುವಂಥ ಎಲ್ಲ ಮಾಹಿತಿಯನ್ನು ಸ್ಥಾಯಿ ಸಮಿತಿಯು ಸ್ವೀಕರಿಸಿದ ತರುವಾಯ, ಯಾವುದೇ ಸಂದರ್ಭದಲ್ಲಿ, ಅರವತ್ತು ದಿನಗಳಿಗಿಂತ ಹೆಚ್ಚಿಗೆ ವಿಳಂಬಮಾಡತಕ್ಕದ್ದಲ್ಲ.

(6) ಸ್ಥಾಯೀ ಸಮಿತಿಯು (1)ನೇ ಉಪ–ಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದಂದಿನಿಂದ ಅಥವಾ (5)ನೇ ಉಪಪ್ರಕರಣದ ಮೇರೆಗೆ ಕೇಳಲಾಗಿದ್ದ ಎಲ್ಲ ಮಾಹಿತಿಯನ್ನು ಸ್ವೀಕರಿಸಿದಂದಿನಿಂದ ಅರವತ್ತು ದಿನಗಳೊಳಗೆ ಮಂಜೂರಾತಿಯನ್ನು ತಿರಸ್ಕರಿಸದಿದ್ದರೆ, ಅಂಥ ಮಂಜೂರಾತಿಯನ್ನು ಕೊಡಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಆ ಅರ್ಜಿದಾರನು ಬೀದಿಯನ್ನು ರಚಿಸಲು ಮುಂದುವರಿಯಬಹುದು, ಆದರೆ ಈ ಅಧಿನಿಯಮದ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಅಥವಾ ಉಪವಿಧಿಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸುವ ಹಾಗೆ ಅಲ್ಲ.

**282. 281ನೇ ಪ್ರಕರಣವನ್ನು ಉಲ್ಲಂಘಿಸಿ ರಚಿಸಿರುವ ಬೀದಿಯ ಬದಲಾವಣೆ ಅಥವಾ ನಾಶ.–** (1) ಯಾರೇ ವ್ಯಕ್ತಿಯು, ಸ್ಥಾಯೀ ಸಮಿತಿಯ ಆದೇಶವಿಲ್ಲದೆ ಅಥವಾ ಅದರ ಆದೇಶಕ್ಕೆ ಅನುಗುಣವಾಗಿಯಲ್ಲದೆ ಅನ್ಯಥಾ, 281ನೇ ಪ್ರರಕಣದಲ್ಲಿ ಉಲ್ಲೇಖಿಸಿದ ಯಾವುದೇ ಬೀದಿಯನ್ನು ರೂಪಿಸಿದರೆ ಅಥವಾ ಗುರುತು ಮಾಡಿದರೆ, ಈ ಅಧಿನಿಯಮದ ಮೇರೆಗೆ ಅಪರಾಧಿಯನ್ನು ಪ್ರಾಸಿಕ್ಯೂಟ್ ಮಾಡಲಿ ಅಥವಾ ಮಾಡದೇ ಇರಲಿ, ಆಯುಕ್ತರು ನೋಟೀಸಿನ ಮೂಲಕ, ಅಪರಾಧಿಯನ್ನು,–

(ಎ) ಅಂಥ ಬೀದಿಯನ್ನು ಏಕೆ ಬದಲಾಯಿಸಬಾರದು ಅಥವಾ ಅಂಥ ಬದಲಾವಣೆಯು ಕಾರ್ಯಸಾಧ್ಯವಾಗದಿದ್ದರೆ ಅಂಥ ಬೀದಿಯನ್ನು ಏಕೆ ನಾಶ ಮಾಡಬಾರದು ಎಂಬುದಕ್ಕೆ ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನದಂದು ಅಥವಾ ಅದಕ್ಕೆ ಮುಂಚೆ, ಅವನು ಸಹಿ ಮಾಡಿದ ಮತ್ತು ಆಯುಕ್ತರಿಗೆ ಕಳುಹಿಸಿದ ಲಿಖಿತ ಹೇಳಿಕೆಯ ಮೂಲಕ ಆಯುಕ್ತರಿಗೆ ಮನವರಿಕೆಯಾಗುವ ಹಾಗೆ ಸಾಕಷ್ಟು ಕಾರಣ ತೋರಿಸುವಂತೆ, ಅಥವಾ

(ಬಿ) ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನದಂದು ಮತ್ತು ಅಂಥ ಕಾಲದಲ್ಲಿ ಮತ್ತು ಅಂಥ ಸ್ಥಳದಲ್ಲಿ ಆಯುಕ್ತರ ಮುಂದೆ ಖುದ್ದಾಗಿಯಾಗಿ ಆಗಲಿ ಇಲ್ಲವೇ ಕ್ರಮಬದ್ಧವಾಗಿ ಅಧಿಕೃತಗೊಂಡ ಏಜೆಂಟನ ಮೂಲಕವಾಗಿಯಾಗಲಿ ಹಾಜರಾಗುವಂತೆ ಮತ್ತು ಹಿಂದೆ ಹೇಳಿದ ಹಾಗೆ ಕಾರಣ ತೋರಿಸುವಂತೆ

– ಅಗತ್ಯಪಡಿಸಬಹುದು.

(2) ಅಂಥ ನೋಟೀಸನ್ನು ಯಾರಿಗೆ ಜಾರಿಮಾಡಲಾಗಿದೆಯೋ ಆ ಯಾರೇ ವ್ಯಕ್ತಿಯು, ಅಂಥ ಬೀದಿಯನ್ನು ಏಕೆ ಹಾಗೆ ಬದಲಾಯಿಸಬಾರದು ಅಥವಾ ನಾಶಗೊಳಿಸಬಾರದು ಎಂಬುದಕ್ಕೆ ಆಯುಕ್ತರಿಗೆ ಮನವರಿಕೆಯಾಗುವ ಹಾಗೆ ಸಾಕಷ್ಟು ಕಾರಣವನ್ನು ತೋರಿಸಲು ತಪ್ಪಿದರೆ, ಆಯುಕ್ತರು ಅಂಥ ಬೀದಿಯನ್ನು ಬದಲಾಯಿಸುವಂತೆ ಅಥವಾ ನಾಶಪಡಿಸುವಂತೆ ನಿರ್ದೇಶಿಸಿ ಆದೇಶವನ್ನು ಹೊರಡಿಸಬಹುದು.

**283. ಕಾಮಗಾರಿಯನ್ನು ಕಾರ್ಯಗತಗೊಳಿಸುವಂತೆ ಆದೇಶಿಸಲು ಅಥವಾ ಅದಕ್ಕೆ ತಪ್ಪಿದಲ್ಲಿ ತಾವೇ ಕಾರ್ಯಗತಗೊಳಿಸಲು ಆಯುಕ್ತರ ಅಧಿಕಾರ.–** (1) ಆಯುಕ್ತರಿಗೆ ಸಮಾಧಾನವಾಗುವಂತೆ ಯಾವುದೇ ಖಾಸಗಿ ಬೀದಿಯನ್ನು ಅಥವಾ ಅದರ ಭಾಗವನ್ನು ಮಟ್ಟ ಮಾಡದಿದ್ದರೆ, ಅದಕ್ಕೆ ನೆಲಗಟ್ಟು ಮಾಡದಿದ್ದರೆ, ಜಲ್ಲಿ ಹಾಕದಿದ್ದರೆ, ಚಪ್ಪಡಿ ಹಾಸದಿದ್ದರೆ, ಕಾಲುವೆ ಮಾಡದಿದ್ದರೆ, ಒಳಚರಂಡಿಯನ್ನು ಮಾಡದಿದ್ದರೆ, ಚರಂಡಿಯನ್ನು ಮಾಡದಿದ್ದರೆ, ನಿರ್ಮಲೀಕರಿಸದಿದ್ದರೆ ಅಥವಾ ದೀಪದ ವ್ಯವಸ್ಥೆ ಮಾಡಿಲ್ಲದಿದ್ದರೆ ಆಯುಕ್ತರು ನೋಟೀಸಿನ ಮೂಲಕ, ಅಂಥ ಬೀದಿಯ ಅಥವಾ ಅದರ ಭಾಗದ ಮಾಲೀಕರನ್ನು ಮತ್ತು ಆ ಭೂಮಿಯ ಮತ್ತು ಅದರ ಮೇಲಿನ ಕಟ್ಟಡದ ಮಾಲೀಕರು ಬೇರೆ ಬೇರೆಯವರಾಗಿರುವ ಸಂದರ್ಭಗಳಲ್ಲಿ, ಆ ಭೂಮಿ ಮತ್ತು ಕಟ್ಟಡ ಇವೆರಡರ ಮಾಲೀಕರೂ ಸೇರಿದಂತೆ ಅಂಥ ಬೀದಿಗೆ ಅಥವಾ ಅದರ ಭಾಗಕ್ಕೆ ಮುಖ ಮಾಡಿರುವ ಅಥವಾ ಅಂಥ ಬೀದಿಗೆ ಅಥವಾ ಅದರ ಭಾಗಕ್ಕೆ ಲಗತ್ತಾಗಿರುವ ಕಟ್ಟಡಗಳ ಅಥವಾ ಭೂಮಿಗಳ ಮಾಲೀಕರನ್ನು, ಆಯುಕ್ತರ ಅಭಿಪ್ರಾಯದಲ್ಲಿ ಅವಶ್ಯವಾಗಬಹುದಾದ ಯಾವುದೇ ಕಾಮಗಾರಿಯನ್ನು ಮತ್ತು ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಕಾರ್ಯಗತಗೊಳಿಸುವಂತೆ ಅಗತ್ಯಪಡಿಸಬಹುದು.

(2) ಅಂಥ ಕಾಮಗಾರಿಯನ್ನು, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಕಾಲದೊಳಗೆ ಕಾರ್ಯಗತಗೊಳಿಸದಿದ್ದರೆ, ಆಯುಕ್ತರು, ತಾವು ಸೂಕ್ತ ಎಂದು ಭಾವಿಸಿದರೆ, ಆ ಕಾಮಗಾರಿಯನ್ನು ಕಾರ್ಯಗತಗೊಳಿಸಬಹುದು ಮತ್ತು ಅದಕ್ಕೆ ತಗಲಿದ ವೆಚ್ಚಗಳನ್ನು ಆಯುಕ್ತರು ನಿರ್ಧರಿಸಬಹುದಾದಂಥ ಪ್ರಮಾಣಗಳಲ್ಲಿ (1)ನೇ ಉಪ–ಪ್ರಕರಣದಲ್ಲಿ ತಿಳಿಸಿದ ಮಾಲೀಕನು ಸಂದಾಯ ಮಾಡತಕ್ಕದ್ದು.

**284. ಬೀದಿಗಳನ್ನು ಸಾರ್ವಜನಿಕ ಬೀದಿಗಳೆಂದು ಘೋಷಿಸುವಂತೆ ಅಗತ್ಯ ಪಡಿಸಲು ಮಾಲೀಕರ ಹಕ್ಕು.–** 283ನೇ ಪ್ರಕರಣದ ಉಪಬಂಧಗಳ ಮೇರೆಗೆ ಯಾವುದೇ ಬೀದಿಯನ್ನು ಮಟ್ಟ ಮಾಡಿದ್ದರೆ, ಅದಕ್ಕೆ ನೆಲಗಟ್ಟು ಮಾಡಿದ್ದರೆ, ಜಲ್ಲಿ ಹಾಕಿದ್ದರೆ, ಚಪ್ಪಡಿ ಹಾಸಿದ್ದರೆ, ಕಾಲುವೆ ಮಾಡಿದ್ದರೆ,

ಒಳಚರಂಡಿಯನ್ನು ಮಾಡಿದ್ದರೆ, ಚರಂಡಿಯನ್ನು ಮಾಡಿದ್ದರೆ, ನಿರ್ಮಲೀಕರಿಸಿದ್ದರೆ ಮತ್ತು ದೀಪದ ವ್ಯವಸ್ಥೆ ಮಾಡಿದ್ದರೆ, ಅಂಥ ಬೀದಿಯನ್ನು ಆ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ ತಿಳಿಸಿದ ಮಾಲೀಕರಲ್ಲಿ ಹೆಚ್ಚು ಮಂದಿಯ ಕೋರಿಕೆಯ ಮೇಲೆ ಸಾರ್ವಜನಿಕ ಬೀದಿ ಎಂದು ಘೋಷಿಸತಕ್ಕದ್ದು.

**285. ಬೀದಿಗಳಲ್ಲಿ ಅಡೆತಡೆಗಳಿಗೆ ನಿಷೇಧ.–** ಇಲ್ಲಿ ಇನ್ನು ಮುಂದೆ ಉಪಬಂಧಿಸಿರುವಂತೆ ಹೊರತು, ಯಾವ ಬೀದಿಯ ಅಥವಾ ಯಾವ ಸಾರ್ವಜನಿಕ ಸ್ಥಳದ ನಿಯಂತ್ರಣವು ನಗರಪಾಲಿಕೆಯಲ್ಲಿ ನಿಹಿತವಾಗಿದೆಯೋ ಆ ಯಾವುದೇ ಬೀದಿಯಲ್ಲಿ ಅಥವಾ ಆ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಥವಾ ಅದರ ಮೇಲೆ ಯಾರೇ ವ್ಯಕ್ತಿಯು ಯಾವುದೇ ಗೋಡೆಯನ್ನು ಕಟ್ಟತಕ್ಕದ್ದಲ್ಲ ಅಥವಾ ಯಾವುದೇ ಬೇಲಿಯನ್ನು ಅಥವಾ ಇತರ ಅಡೆ ತಡೆಯನ್ನು ಅಥವಾ ಮುಂಚಾಚನ್ನು ನಿರ್ಮಿಸತಕ್ಕದ್ದಲ್ಲ ಅಥವಾ ಯಾವುದೇ ಒತ್ತುವರಿಯನ್ನು ಮಾಡತಕ್ಕದ್ದಲ್ಲ.

**286. ಹೊರಮುಖವಾಗಿ ತೆರೆಯುವ ಬಾಗಿಲುಗಳು, ನೆಲಮಹಡಿಯ ಕಿಟಕಿಗಳು ಮತ್ತು ಸರಳುಗಳ ನಿಷೇಧ ಮತ್ತು ನಿಯಂತ್ರಣ.–** (1) ಆಯುಕ್ತರಿಂದ ಲೈಸೆನ್ಸ್ ಪಡೆಯದೆ ಯಾವುದೇ ಬಾಗಿಲು, ಗೇಟು, ಸರಳು ಅಥವಾ ನೆಲಮಹಡಿಯ ಕಿಟಕಿಯನ್ನು ಯಾವುದೇ ಬೀದಿಯ ಮೇಲೆ ಹೊರಮುಖವಾಗಿ ತೆರೆದುಕೊಳ್ಳುವ ಹಾಗೆ ಅಳವಡಿಸತಕ್ಕದ್ದಲ್ಲ ಅಥವಾ ಇರಿಸತಕ್ಕದ್ದಲ್ಲ.

(2) ಆಯುಕ್ತರು, ಅಂಥ ಬಾಗಿಲು, ಗೇಟು, ಸರಳು ಅಥವಾ ಕಿಟಕಿಯ ಮಾಲೀಕನನ್ನು, ಅವುಗಳನ್ನು ತೆರೆದಾಗ ಅವುಗಳ ಯಾವುದೇ ಭಾಗವು ಬೀದಿಯ ಮೇಲೆ ಮುಂಚಾಚಿಕೊಳ್ಳದಂತೆ ಹಾಗೆ ಅದನ್ನು ಬದಲಾಯಿಸುವಂತೆ ನೋಟೀಸು ಮೂಲಕ ಅಗತ್ಯಪಡಿಸಬಹುದು.

**287. ಒತ್ತುವರಿ ತೆರವು ಮಾಡುವುದು.–** (1) ಆಯುಕ್ತರು, ಯಾವುದೇ ಆವರಣದ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು, ಅಂಥ ಆವರಣದ ಎದುರಿಗೆ ಅಥವಾ ಮುಂದೆ ಮತ್ತು ಯಾವ ಸಾರ್ವಜನಿಕ ಬೀದಿಯ ಅಥವಾ ಯಾವ ಸಾರ್ವಜನಿಕ ಸ್ಥಳದ ನಿಯಂತ್ರಣವು ನಗರಪಾಲಿಕೆಯಲ್ಲಿ ನಿಹಿತವಾಗಿದೆಯೋ ಆ ಯಾವುದೇ ಬೀದಿಯಲ್ಲಿ ಅಥವಾ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಥವಾ ಅದರ ಮೇಲೆ ಇರುವ (ಬಾಗಿಲು, ಗೇಟು, ಸರಳು ಅಥವಾ ನೆಲಮಹಡಿಯ ಕಿಟಕಿಯನ್ನು ಹೊರತುಪಡಿಸಿ) ಯಾವುದೇ ಮುಂಚಾಚನ್ನು, ಒತ್ತುವರಿಯನ್ನು ಅಥವಾ ಅಡ್ಡಿಯನ್ನು ತೆರವು ಮಾಡುವಂತೆ ಅಥವಾ ಬದಲಾಯಿಸುವಂತೆ ನೋಟೀಸಿನ ಮೂಲಕ ಅಗತ್ಯ ಪಡಿಸಬಹುದು.

(2) ಆವರಣದ ಮಾಲೀಕನು ಅಥವಾ ಅಧಿಭೋಗದಾರನು, ಅಂಥ ಮುಂಚಾಚು, ಒತ್ತುವರಿ ಅಥವಾ ಅಡ್ಡಿಯು ಕಾಲಪರಿಮಿತಿ ಕಾನೂನಿನ ಮೇರೆಗೆ ಅವನಿಗೆ ಚಿರಭೋಗ ಸ್ವಾಮ್ಯವನ್ನು ಕೊಡಲು (ಅಥವಾ ಅಂಥ ಅವಧಿಯು ಮೂವತ್ತು ವರ್ಷಗಳಿಗಿಂತ ಕಡಿಮೆಯಿರುವಲ್ಲಿ, ಮೂವತ್ತು ವರ್ಷಗಳ ಅವಧಿಗೆ) ಸಾಕಷ್ಟು ಅವಧಿಗೆ ಅಸ್ತಿತ್ವದಲ್ಲಿದ್ದರೆ ಅಥವಾ ಆ ಬಗ್ಗೆ ಕ್ರಮಬದ್ಧವಾಗಿ ಅಧಿಕಾರ ಪಡೆದ ಯಾವುದೇ ಪೌರ ಪ್ರಾಧಿಕಾರದ ಸಮ್ಮತಿಯ ಮೇರೆಗೆ ಅದನ್ನು ನಿರ್ಮಿಸಲಾಗಿದ್ದರೆ ಮತ್ತು ಯಾವ ಅವಧಿಗೆ ಸಮ್ಮತಿಯು ಸಿಂಧುವಾಗಿದೆಯೋ ಆ ಅವಧಿ ಯಾವುದಾದರೂ ಇದ್ದು ಅದು ಮುಕ್ತಾಯವಾಗಿರದಿದ್ದರೆ ನಗರಪಾಲಿಕೆಯು ಆ ಮುಂಚಾಚನ್ನು, ಒತ್ತುವರಿಯನ್ನು ಅಥವಾ ಅಡ್ಡಿಯನ್ನು ತೆರವು ಮಾಡುವುದರಿಂದ ಅಥವಾ ಬದಲಾಯಿಸುವುದರಿಂದ ಹಾನಿಯನ್ನು ಅನುಭವಿಸುವ ಪ್ರತಿಯೊಬ್ಬ ವ್ಯಕ್ತಿಗೆ ಯುಕ್ತ ನಷ್ಟಪರಿಹಾರವನ್ನು ಕೊಡತಕ್ಕದ್ದು.

**288. ಕೆಲವು ಮುಂಚಾಚುಗಳಿಗೆ ಮತ್ತು ನಿರ್ಮಾಣಗಳಿಗೆ ಅವಕಾಶ ಕೊಡಲು ಅಧಿಕಾರ.–** (1) ಆಯುಕ್ತರು, ತಾವು ಸೂಕ್ತವೆಂದು ಭಾವಿಸುವಂತಹ ಷರತ್ತುಗಳು ಮತ್ತು ನಿರ್ಬಂಧಗಳಿಗೆ ಒಳಪಟ್ಟು, ಯಾವುದೇ ಆವರಣದ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ,–

(ಎ) ವರಾಂಡಗಳು, ಬಾಲ್ಕನಿಗಳು, ಬಿಸಿಲು ಮರೆಗಳು, ಗಾಳಿಮಳೆ ಚೌಕಟ್ಟುಗಳು ಮತ್ತು ಅಂತಹವುಗಳನ್ನು ಬೀದಿಯ ಮೇಲೆ ಮುಂಚಾಚಿದಂತೆ ನಿರ್ಮಿಸಲು ಅಥವಾ ಅವುಗಳನ್ನು ಹಾಗೆ ಉಳಿಸಿಕೊಂಡು ಹೋಗಲು; ಅಥವಾ

(ಬಿ) ಯಾವ ಬೀದಿಗಳಲ್ಲಿ ಆರ್ಕೇಡ್‌ಗಳನ್ನು ನಿರ್ಮಿಸಲು ಅಥವಾ ಆರ್ಕೇಡ್‌ಗಳನ್ನು ಉಳಿಸಿಕೊಂಡು ಹೋಗಲು ನಗರಪಾಲಿಕೆಯು ಮಂಜೂರಾತಿಯನ್ನು ನೀಡಿದೆಯೋ ಆ ಬೀದಿಗಳಲ್ಲಿ ಆರ್ಕೇಡ್‌ಗಳನ್ನು ನಿರ್ಮಿಸಲು ಅಥವಾ ಉಳಿಸಿಕೊಂಡು ಹೋಗಲು; ಅಥವಾ

(ಸಿ) ಆವರಣದೊಳಗೆ ಪ್ರವೇಶಿಸುವುದಕ್ಕಾಗಿ ಅಗತ್ಯವಾದ ಯಾವುದೇ ಮೆಟ್ಟಿಲನ್ನು ಅಥವಾ ಚರಂಡಿ ಮುಚ್ಚಿಕೆಯನ್ನು ನಿರ್ಮಿಸಲು

– ಲೈಸೆನ್ಸ್‌ನ್ನು ಕೊಡಬಹುದು.

(2) ಆಯುಕ್ತರು, ಯಾವ ಬೀದಿಯ ಅಥವಾ ಸಾರ್ವಜನಿಕ ಸ್ಥಳದ ನಿಯಂತ್ರಣವು ನಗರಪಾಲಿಕೆಯಲ್ಲಿ ನಿಹಿತವಾಗಿದೆಯೋ ಆ ಯಾವುದೇ ಬೀದಿಯಲ್ಲಿ ಅಥವಾ ಆ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ತಾವು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳಿಗೆ ಮತ್ತು ನಿರ್ಬಂಧಗಳಿಗೆ ಒಳಪಟ್ಟು ಯಾವುದೇ ತಾತ್ಕಾಲಿಕ ನಿರ್ಮಾಣಕ್ಕೆ ಲೈಸೆನ್ಸ್ ಕೊಡಬಹುದು.

(3) ಆ ಮುಂಚಾಚು ಅಥವಾ ನಿರ್ಮಾಣವು ಆರೋಗ್ಯಕ್ಕೆ ಹಾನಿಕರವಾಗುವ ಅಥವಾ ಸಾರ್ವಜನಿಕರಿಗೆ ಅನಾನುಕೂಲ ಉಂಟುಮಾಡುವ ಅಥವಾ ರಸ್ತೆಯನ್ನು ಹಾಗೆ ಉಪಯೋಗಿಸುವುದಕ್ಕೆ ವಾಸ್ತವವಾಗಿ ಅನ್ಯಥಾ ಅಡ್ಡಿ ಉಂಟು ಮಾಡುವ ಸಂಭವವಿದ್ದರೆ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಲೈಸೆನ್ಸ್ ಕೊಡತಕ್ಕದ್ದಲ್ಲ.

(4) ಈ ಪ್ರಕರಣದ ಮೇರೆಗೆ ಯಾವ ಅವಧಿಗೆ ಲೈಸೆನ್ಸನ್ನು ಕೊಡಲಾಗಿದೆಯೋ ಆ ಯಾವುದೇ ಅವಧಿಯು ಮುಕ್ತಾಯವಾದ ಮೇಲೆ ಅಥವಾ ಅಂಥ ಲೈಸೆನ್ಸನ್ನು ಅಮಾನತುಗೊಳಿಸುವ ಅಥವಾ ರದ್ದುಗೊಳಿಸುವ ಆದೇಶವನ್ನು ಕ್ರಮಬದ್ಧವಾಗಿ ತಿಳಿಸಿದ ತರುವಾಯ ಆಯುಕ್ತರು, ನೋಟೀಸು ಕೊಡದೆ (1) ಅಥವಾ (2)ನೇ ಉಪಪ್ರಕರಣದ ಮೇರೆಗೆ ನಿರ್ಮಿಸಿದ ಯಾವುದೇ ಮುಂಚಾಚನ್ನು ಅಥವಾ ನಿರ್ಮಾಣವನ್ನು ತೆಗೆದುಹಾಕಿಸಬಹುದು ಮತ್ತು ಹಾಗೆ ಮಾಡಿದ್ದಕ್ಕೆ ಆದ ಖರ್ಚನ್ನು, ಯಾವ ವ್ಯಕ್ತಿಗೆ ಲೈಸೆನ್ಸನ್ನು ಕೊಡಲಾಗಿತ್ತೋ ಆ ವ್ಯಕ್ತಿಯಿಂದ 470ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ವಸೂಲಿ ಮಾಡುವಂಥದ್ದಾಗಿರತಕ್ಕದ್ದು.

(5) ನಗರಪಾಲಿಕೆಯು, ನಗರಪಾಲಿಕೆಯಲ್ಲಿ ನಿಹಿತವಾಗಿರುವ ರಸ್ತೆಯ ಬದಿಗಳನ್ನು, ಬೀದಿಯ ಅಂಚುಗಳನ್ನು ಅದು ನಿಗದಿಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮತ್ತು ಅಂಥ ಅವಧಿಗೆ ಬಾಡಿಗೆಗೆ ಕೊಡಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಸರ್ಕಾರದ ಪೂರ್ವ ಮಂಜೂರಾತಿಯಿಲ್ಲದೆ ಅಂಥ ಯಾವುದೇ ರಸ್ತೆ ಬದಿಗಳನ್ನು ಮತ್ತು ಬೀದಿಯ ಅಂಚುಗಳನ್ನು ಮೂರು ವರ್ಷಗಳಿಗೆ ಮೀರಿದ ಯಾವುದೇ ಅವಧಿಗೆ ಬಾಡಿಗೆಗೆ ಕೊಡತಕ್ಕದ್ದಲ್ಲ:

ಮತ್ತೂ ಪರಂತು, ಈ ಪ್ರಕರಣದ ಮೇರೆಗೆ ನಗರಪಾಲಿಕೆಯು ಬಾಡಿಗೆಗೆ ಕೊಟ್ಟ ರಸ್ತೆ ಬದಿಯ ಅಥವಾ ಬೀದಿ ಅಂಚಿನ ಯಾವುದೇ ಅಧಿಭೋಗವು ಆರೋಗ್ಯಕ್ಕೆ ಹಾನಿಕಾರಕವಾಗುವ ಅಥವಾ ಸಾರ್ವಜನಿಕರಿಗೆ ಅನಾನುಕೂಲ ಉಂಟುಮಾಡುವ ಅಥವಾ ರಸ್ತೆಯ ಬದಿಯನ್ನು ಅಥವಾ

ಬೀದಿಯ ಅಂಚನ್ನು ಹಾಗೆ ಉಪಯೋಗಿಸಲು ವಾಸ್ತವವಾಗಿ ಅನ್ಯಥಾ ಅಡ್ಡಿಉಂಟುಮಾಡುವ ಸಂಭವವಿದೆ ಎಂದು ಸರ್ಕಾರವು ಪರಿಗಣಿಸಿದರೆ, ಸರ್ಕಾರವು ಬಾಡಿಗೆಗೆ ಕೊಟ್ಟಿರುವುದನ್ನು ರದ್ದುಗೊಳಿಸಲು ಅಥವಾ ಮಾರ್ಪಾಟು ಮಾಡಲು ನಗರಪಾಲಿಕೆಗೆ ನಿರ್ದೇಶಿಸಬಹುದು ಮತ್ತು ನಗರಪಾಲಿಕೆಯು ಆ ತರುವಾಯ ತದನುಸಾರವಾಗಿ ಬಾಡಿಗೆಗೆ ಕೊಟ್ಟಿರುವುದನ್ನು ರದ್ದುಪಡಿಸತಕ್ಕದ್ದು ಅಥವಾ ಮಾರ್ಪಾಟು ಮಾಡತಕ್ಕದ್ದು.

[1][**288ಎ. ಸಾರ್ವಜನಿಕ ಬೀದಿಗಳಲ್ಲಿ ಅಡ್ಡಿಯನ್ನುಂಟುಮಾಡುವ ರಚನೆಗಳ ಅಥವಾ ಜೋಡಣೆಗಳ ನಿಷೇಧ.–** ಯಾರೇ ವ್ಯಕ್ತಿಯು 288ನೇ ಪ್ರಕರಣದ ಮೇರೆಗೆ ಆಯುಕ್ತರ ಲಿಖಿತ ಅನುಮತಿಯನ್ನು ಪಡೆದ ಹೊರತು, ಯಾವುದೇ ಸಾರ್ವಜನಿಕ ಬೀದಿಯಲ್ಲಿ ಅಥವಾ ಅದರ ಮೇಲೆ ಅಥವಾ ಯಾವುದೇ ಬೀದಿಯಲ್ಲಿನ ಯಾವುದೇ ತೆರೆದ ಕಾಲುವೆಯ, ಬಾವಿಯ ಅಥವಾ ಕೆರೆಯ ಮೇಲೆ ಅಥವಾ ಮೇಲ್ಭಾಗದಲ್ಲಿ ಅಂಥ ಬೀದಿ, ಕಾಲುವೆ, ಚರಂಡಿ, ಬಾವಿ ಅಥವಾ ಕೆರೆಯ ಯಾವುದೇ ಭಾಗಕ್ಕೆ ಅಡ್ಡಿಯನ್ನು ಉಂಟುಮಾಡುವ ಹಾಗೆ ಅಥವಾ ಅದರ ಮೇಲೆ ಒತ್ತುವರಿ ಮಾಡುವ ಹಾಗೆ ಅಥವಾ ಅದರ ಮೇಲೆ ಮುಂಚಾಚುಗೊಳ್ಳುವ ಹಾಗೆ ಅಥವಾ ಅದನ್ನು ಆಕ್ರಮಿಸಿಕೊಳ್ಳುವ ಹಾಗೆ ಯಾವುದೇ ಗೋಡೆ, ಬೇಲಿ, ಕಂಬಿ, ಸ್ಥಂಭ, ಮೆಟ್ಟಲು, ಬೂತು ಅಥವಾ ಇತರ ರಚನೆಗಳನ್ನು ಅಥವಾ ಜೋಡಣೆಗಳನ್ನು ನಿರ್ಮಿಸತಕ್ಕದ್ದಲ್ಲ ಅಥವಾ ಸ್ಥಾಪಿಸತಕ್ಕದ್ದಲ್ಲ.

**288ಬಿ. ಸಾರ್ವಜನಿಕ ಬೀದಿಗಳಲ್ಲಿ ವಸ್ತುಗಳನ್ನು ತಂದು ರಾಶಿ ಹಾಕುವುದು, ಇತ್ಯಾದಿಗಳ ನಿಷೇಧ.–** ಯಾರೇ ವ್ಯಕ್ತಿಯು, ಆಯುಕ್ತರ ಲಿಖಿತ ಅನುಮತಿಯಿಲ್ಲದೆ ಯಾವುದೇ ಸಾರ್ವಜನಿಕ ಬೀದಿಯ ಮೇಲೆ ಅಥವಾ ಯಾವುದೇ ಬೀದಿಯಲ್ಲಿನ ಅಥವಾ ಯಾವುದೇ ಸಾರ್ವಜನಿಕ ಸ್ಥಳದಲ್ಲಿನ ಯಾವುದೇ ತೆರೆದ ಕಾಲುವೆಯ, ಚರಂಡಿಯ ಅಥವಾ ಬಾವಿಯ ಮೇಲೆ ಅದಕ್ಕೆ ಅಡ್ಡಿಯುಂಟಾಗುವ ಹಾಗೆ ಅಥವಾ ಅದನ್ನು ಒತ್ತುವರಿ ಮಾಡುವ ಹಾಗೆ ಯಾವುದೇ ಅಂಗಡಿ, ಕುರ್ಚಿ, ಬೆಂಚು, ಪೆಟ್ಟಿಗೆ, ಏಣಿ, ಮೂಟೆ ಅಥವಾ ಇತರ ವಸ್ತುಗಳನ್ನು ಇಡತಕ್ಕದ್ದಲ್ಲ ಅಥವಾ ತಂದು ರಾಶಿಹಾಕತಕ್ಕದ್ದಲ್ಲ.

**288ಸಿ. ಸಾರ್ವಜನಿಕ ಸ್ಥಳಗಳಲ್ಲಿ ಮಾರಾಟ ಮಾಡುವುದಕ್ಕೆ ಲೈಸೆನ್ಸ್.–** ಈ ಬಗ್ಗೆ ಆಯುಕ್ತರು ಮಂಜೂರು ಮಾಡಿದ ಲೈಸೆನ್ಸ್‌ನ ನಿಬಂಧನೆಗಳು ಮತ್ತು ಉಪಬಂಧಗಳ ಮೇರೆಗೆ ಮತ್ತು ಅವುಗಳಿಗೆ ಅನುಸಾರವಾಗಿ ಹೊರತು ಯಾರೇ ವ್ಯಕ್ತಿಯು ಯಾವುದೇ ಬಗೆಯ ವಸ್ತುವನ್ನು, ಅದು ಮಾನವರು ಬಳಸುವಂಥದ್ದು ಆಗಿರಲಿ ಅಥವಾ ಆಗಿಲ್ಲದಿರಲಿ, ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಥವಾ ಯಾವುದೇ ಸಾರ್ವಜನಿಕ ಬೀದಿಯಲ್ಲಿ ತಿರುಗಾಡಿ ಮಾರತಕ್ಕದ್ದಲ್ಲ ಅಥವಾ ಮಾರಾಟಕ್ಕಾಗಿ ಪ್ರದರ್ಶಿಸತಕ್ಕದ್ದಲ್ಲ.

**288ಡಿ. ಆಯುಕ್ತರು ನೋಟೀಸು ಕೊಡದೆ ಒತ್ತುವರಿಯನ್ನು ತೆಗೆದುಹಾಕುವುದು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ ಆಯುಕ್ತರು ನೋಟೀಸನ್ನು ಕೊಡದೆ,–

(ಎ) 288ಎ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿದ ಅಥವಾ ಸ್ಥಾಪಿಸಿದ ಯಾವುದೇ ಗೋಡೆ, ಬೇಲಿ, ಕಂಬಿ, ಮೆಟ್ಟಲು, ಬೂತು ಅಥವಾ ಇತರ ರಚನೆಯನ್ನು ಅಥವಾ ಜೋಡಣೆಯನ್ನು;

(ಬಿ) 288ಬಿ ಪ್ರಕರಣವನ್ನು ಉಲ್ಲಂಘಿಸಿ ಇಟ್ಟ ಯಾವುದೇ ಅಂಗಡಿ, ಕುರ್ಚಿ, ಬೆಂಚು, ಪೆಟ್ಟಿಗೆ, ಏಣಿ, ಮೂಟೆ ಅಥವಾ ಯಾವುದೇ ಇತರ ವಸ್ತುವನ್ನು;

(ಸಿ) 288ಸಿ ಪ್ರಕರಣವನ್ನು ಉಲ್ಲಂಘಿಸಿ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಥವಾ ಯಾವುದೇ ಸಾರ್ವಜನಿಕ ಬೀದಿಯಲ್ಲಿ ತಿರುಗಾಡಿ ಮಾರಾಟ ಮಾಡುವ ಅಥವಾ ಮಾರಾಟಕ್ಕಾಗಿ ಪ್ರದರ್ಶಿಸುವ ಯಾವುದೇ ಬಗೆಯ ವಸ್ತುವನ್ನು ಮತ್ತು ಮಾರಾಟದ ಉದ್ದೇಶಕ್ಕಾಗಿ ಅಂಥ ವಸ್ತುವನ್ನು ಯಾವುದರಲ್ಲಿ ಅಥವಾ ಯಾವುದರ ಮೇಲೆ ಇಡಲಾಗಿದೆಯೋ ಅಂಥ ಯಾವುದೇ ವಾಹನ, ಪ್ಯಾಕೇಜು, ಪೆಟ್ಟಿಗೆ, ಹಲಗೆ, ಷೆಲ್ಫ್ ಅಥವಾ ಇತರ ಯಾವುದೇ ವಸ್ತುವನ್ನು

– ತೆಗೆದುಹಾಕಿಸಬಹುದು.][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 288ಎ ಯಿಂದ 288ಡಿ ವರೆಗಿನ ಪ್ರಕರಣಗಳನ್ನು 17.06.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**289. ಬೀದಿಗಳನ್ನು ದುರಸ್ತಿ ಮಾಡುವಾಗ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು.–** (1) ಆಯುಕ್ತರು, ನಗರಪಾಲಿಕೆಯಲ್ಲಿ ನಿಹಿತವಾಗಿರುವ ಯಾವುದೇ ಬೀದಿ, ಚರಂಡಿ ಅಥವಾ ಆವರಣಗಳನ್ನು ನಿರ್ಮಿಸುವಾಗ ಅಥವಾ ದುರಸ್ತಿ ಮಾಡುವಾಗ ಕಾರ್ಯಸಾಧ್ಯವಾಗುವಷ್ಟರ ಮಟ್ಟಿಗೆ,–

(ಎ) ಅದಕ್ಕೆ ಬೇಲಿ ಹಾಕಿಸತಕ್ಕದ್ದು ಮತ್ತು ಕಾವಲು ವ್ಯವಸ್ಥೆ ಮಾಡತಕ್ಕದ್ದು.

(ಬಿ) ಪಕ್ಕದಲ್ಲಿರುವ ಕಟ್ಟಡಕ್ಕೆ ಊರೆ ಕೊಡುವ ಮತ್ತು ರಕ್ಷಣೆ ಒದಗಿಸುವುದರ ಮೂಲಕ ಆಕಸ್ಮಿಕ ಘಟನೆ ಸಂಭವಿಸದಂತೆ ಸರಿಯಾದ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು; ಮತ್ತು

(ಸಿ) ಯಾವ ಬೀದಿಯಲ್ಲಿ ಅಂಥ ಕಾಮಗಾರಿಯನ್ನು ಮಾಡಲಾಗುತ್ತಿದೆಯೋ ಆ ಯಾವುದೇ ಬೀದಿಯಲ್ಲಿ, ವಾಹನಗಳ ಅಥವಾ ಪ್ರಾಣಿಗಳ ಓಡಾಟವನ್ನು ತಡೆಗಟ್ಟುವ ಮತ್ತು ಅಪಾಯವನ್ನು ತಪ್ಪಿಸುವ ಸಲುವಾಗಿ ಅವಶ್ಯವಾಗಬಹುದಾದಂತೆ ಸರಳುಗಳನ್ನು, ಸರಪಳಿಗಳನ್ನು ಅಥವಾ ಸ್ತಂಭಗಳನ್ನು ಆ ಬೀದಿಗೆ ಅಡ್ಡಲಾಗಿ ಹಾಕಿಸತಕ್ಕದ್ದು.

(2) ಆಯುಕ್ತರು, ನಿರ್ಮಾಣ ಅಥವಾ ದುರಸ್ತಿ ನಡೆಯುತ್ತಿರುವಾಗ ರಾತ್ರಿಯ ವೇಳೆಯಲ್ಲಿ ಅಂಥ ಚರಂಡಿ, ಬೀದಿ ಅಥವಾ ಆವರಣದಲ್ಲಿ ಸಾಕಷ್ಟು ಬೆಳಕು ಅಥವಾ ಕಾವಲು ವ್ಯವಸ್ಥೆ ಮಾಡಿಸತಕ್ಕದ್ದು.

(3) ಆಯುಕ್ತರು, ಆದಷ್ಟು ಶೀಘ್ರವಾಗಿ ಸದರಿ ಕಾಮಗಾರಿಯನ್ನು ಮುಗಿಸುವಂತೆ, ದುರಸ್ತಿಯಾಗಬೇಕಾದ ಸದರಿ ಚರಂಡಿ, ಬೀದಿ ಅಥವಾ ಆವರಣದಲ್ಲಿನ ನೆಲವನ್ನು ಭರ್ತಿ ಮಾಡುವಂತೆ ಮತ್ತು ಅದರಿಂದ ಉಂಟಾದ ಕಸವನ್ನು ತೆಗೆದುಹಾಕುವಂತೆ ಮಾಡತಕ್ಕದ್ದು.

**290. ಸರಳುಗಳನ್ನು ಮತ್ತು ದೀಪಗಳನ್ನು ತೆಗೆದುಹಾಕುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು, ಕಾನೂನು ಸಮ್ಮತ ಅಧಿಕಾರವಿಲ್ಲದೆ, 289ನೇ ಪ್ರಕರಣದ ಮೇರೆಗೆ ಹಾಕಿದ ಯಾವುದೇ ಸರಳು, ಸರಪಳಿ, ಸ್ತಂಭ ಅಥವಾ ಊರೆ ಮರವನ್ನು ತೆಗೆದುಹಾಕತಕ್ಕದ್ದಲ್ಲ ಅಥವಾ ಯಾವುದೇ ದೀಪವನ್ನು ತೆಗೆದುಹಾಕತಕ್ಕದ್ದಲ್ಲ ಅಥವಾ ಆರಿಸತಕ್ಕದ್ದಲ್ಲ.

**291. ಗುಂಡಿಗಳನ್ನು ತೋಡುವುದು ಮತ್ತು ಅಡಚಣೆ ಉಂಟುಮಾಡುವುದು.–** (1) ಯಾರೇ ವ್ಯಕ್ತಿಯು, ಆಯುಕ್ತರ ಅನುಮತಿಯನ್ನು ಮೊದಲೇ ಪಡೆದ ಮತ್ತು ಅವರು ವಿಧಿಸಬಹುದಾದಂಥ ಷರತ್ತುಗಳನ್ನು ಪಾಲಿಸಿದ ಹೊರತು, ಯಾವುದೇ ಬೀದಿಯಲ್ಲಿ ಗುಂಡಿ ತೋಡತಕ್ಕದ್ದಲ್ಲ ಅಥವಾ ಯಾವುದೇ ಅಡಚಣೆಯನ್ನುಂಟುಮಾಡತಕ್ಕದ್ದಲ್ಲ.

(2) ಅಂಥ ಅನುಮತಿಯನ್ನು ಕೊಟ್ಟಾಗ, ಅಂಥ ವ್ಯಕ್ತಿಯು ಗುಂಡಿಯನ್ನು ಮುಚ್ಚುವ ತನಕ ಅಥವಾ ಅಡಚಣೆಯನ್ನು ನಿವಾರಿಸುವ ತನಕ ತನ್ನ ಸ್ವಂತ ವೆಚ್ಚದಲ್ಲಿ ಅಂಥ ಗುಂಡಿಗೆ ಅಥವಾ ಅಡಚಣೆಗೆ ಸಾಕಷ್ಟು ಬೇಲಿ ಹಾಕಿಸತಕ್ಕದ್ದು ಮತ್ತು ಅದನ್ನು ಆವೃತಗೊಳಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಗುಂಡಿಗೆ ಅಥವಾ ಅಡಚಣೆಗೆ ರಾತ್ರಿ ವೇಳೆಯಲ್ಲಿ ಸಾಕಷ್ಟು ಬೆಳಕಿನ ವ್ಯವಸ್ಥೆ ಮಾಡತಕ್ಕದ್ದು.

(3) ರಚನೆಗಳು, ಮರಗಳು ಅಥವಾ ಬೇಲಿಗಳು ಬಿದ್ದಿರುವುದರಿಂದಾಗಿ ಯಾವುದೇ ಬೀದಿಯಲ್ಲಿ ಯಾವುದೇ ಅಡಚಣೆ ಉಂಟಾಗಿದ್ದರೆ, ಸಂಬಂಧಪಟ್ಟ ಆವರಣದ ಮಾಲೀಕನು ಅಥವಾ ಅಧಿಭೋಗದಾರನು ಹಾಗೆ ಬಿದ್ದ ಹನ್ನೆರಡು ಗಂಟೆಗಳೊಳಗೆ ಅಥವಾ ಆಯುಕ್ತರು ಲಿಖಿತ ಆದೇಶದ ಮೂಲಕ ಅನುಮತಿಸಬಹುದಾದಂಥ ಹೆಚ್ಚಿನ ಅವಧಿಯೊಳಗೆ ಬೀದಿಯಲ್ಲಿನ ಅಂಥ ಅಡಚಣೆಯನ್ನು ತೆಗೆದುಹಾಕತಕ್ಕದ್ದು.

**292. ಅಡಚಣೆಯನ್ನುಂಟುಮಾಡುವ ಸಂಭವವಿರುವ ಕಟ್ಟಡಗಳ ಕಾಮಗಾರಿಗೆ ಲೈಸೆನ್ಸು.–** ಯಾರೇ ವ್ಯಕ್ತಿಯು, ಯಾವುದೇ ಕಟ್ಟಡವನ್ನು ನಿರ್ಮಿಸಲು ಅಥವಾ ಕೆಡವಿಹಾಕಲು ಅಥವಾ ಅದರ ಹೊರಭಾಗವನ್ನು ಬದಲಾಯಿಸಲು ಅಥವಾ ದುರಸ್ತಿ ಮಾಡಲು ಉದ್ದೇಶಿಸಿದರೆ ಮತ್ತು ಅಂಥ ಕಾಮಗಾರಿಯಿಂದಾಗಿ ಯಾವುದೇ ಬೀದಿಗೆ ಅಥವಾ ಪಾದಚಾರಿ ಮಾರ್ಗಕ್ಕೆ ಅಡಚಣೆವುಂಟಾಗುವ ಸಂಭವವಿದ್ದರೆ ಅಥವಾ ಅನಾನುಕೂಲವಾಗುವ ಸಂಭವವಿದ್ದರೆ ಅವನು ಆ ಬಗ್ಗೆ ಮೊದಲು ಆಯುಕ್ತರಿಂದ ಲೈಸೆನ್ಸನ್ನು ಪಡೆಯತಕ್ಕದ್ದು, ಮತ್ತು

(ಎ) ಸದರಿ ಕಟ್ಟಡಕ್ಕೆ ಬೇಲಿ ಹಾಕಿಸತಕ್ಕದ್ದು ಮತ್ತು ಕಾವಲು ವ್ಯವಸ್ಥೆ ಮಾಡಿಸತಕ್ಕದ್ದು;

(ಬಿ) ರಾತ್ರಿ ವೇಳೆಯಲ್ಲಿ ಅದಕ್ಕೆ ಸಾಕಷ್ಟು ಬೆಳಕಿನ ವ್ಯವಸ್ಥೆ ಮಾಡತಕ್ಕದ್ದು; ಮತ್ತು

(ಸಿ) ಸಾರ್ವಜನಿಕ ಸುರಕ್ಷೆ ಅಥವಾ ಅನುಕೂಲತೆಯ ಅಗತ್ಯವಿರುವಂಥ ವೇಳೆಯಲ್ಲಿ ಅಪಘಾತಗಳಾಗದಂತೆ ಸರಿಯಾದ ಮುನ್ನೆಚ್ಚರಿಕೆ ಕ್ರಮಗಳನ್ನು ಸಹ ತೆಗೆದುಕೊಳ್ಳತಕ್ಕದ್ದು.

**293. ಸಾರ್ವಜನಿಕ ಬೀದಿಗಳಿಗೆ ಹೆಸರಿಡುವುದು ಅಥವಾ ಸಂಖ್ಯೆಯನ್ನು ಕೊಡುವುದು.–** (1) ನಗರಪಾಲಿಕೆಯು ಹೊಸ ಸಾರ್ವಜನಿಕ ಬೀದಿಗಳಿಗೆ ಹೆಸರಿಡತಕ್ಕದ್ದು ಅಥವಾ ಸಂಖ್ಯೆ ಕೊಡತಕ್ಕದ್ದು ಮತ್ತು ಸರ್ಕಾರದ ಅನುಮೋದನೆಗೆ ಒಳಪಟ್ಟು ಯಾವುದೇ ಸಾರ್ವಜನಿಕ ಬೀದಿಯ ಹೆಸರನ್ನು ಅಥವಾ ಸಂಖ್ಯೆಯನ್ನು ಬದಲಾಯಿಸಬಹುದು.

(2) ಆಯುಕ್ತರು, ಪ್ರತಿಯೊಂದು ಸಾರ್ವಜನಿಕ ಬೀದಿಯ ಕೊನೆಯಲ್ಲಿನ ಅಥವಾ ತಿರುವಿನಲ್ಲಿನ ಅಥವಾ ಪ್ರವೇಶ ಸ್ಥಳದಲ್ಲಿನ ಯಾವುದೇ ಕಟ್ಟಡ, ಗೋಡೆ ಅಥವಾ ಸ್ಥಳದ ಎದ್ದು ಕಾಣುವ ಭಾಗದ ಮೇಲೆ, ಯಾವ ಹೆಸರಿನಿಂದ ಅಥವಾ ಸಂಖ್ಯೆಯಿಂದ ಆ ಬೀದಿ ಪರಿಚಿತವಾಗಬೇಕೋ ಆ ಹೆಸರನ್ನು ಅಥವಾ ಸಂಖ್ಯೆಯನ್ನು ಬಣ್ಣದಲ್ಲಿ ಬರೆಸತಕ್ಕದ್ದು.

(3) ಯಾರೇ ವ್ಯಕ್ತಿಯು, ಕಾನೂನು ಸಮ್ಮತ ಅಧಿಕಾರವಿಲ್ಲದೆ ಯಾವುದೇ ಅಂಥ ಹೆಸರನ್ನು ಅಥವಾ ಸಂಖ್ಯೆಯನ್ನು ನಾಶಪಡಿಸತಕ್ಕದ್ದಲ್ಲ ತೆಗೆದುಹಾಕತಕ್ಕದ್ದಲ್ಲ ಅಥವಾ ವಿರೂಪಗೊಳಿಸತಕ್ಕದ್ದಲ್ಲ ಅಥವಾ ಆಯುಕ್ತರ ಆದೇಶದಂತೆ ಬರೆಸಲಾದ ಯಾವುದೇ ಹೆಸರಿಗೆ ಅಥವಾ ಸಂಖ್ಯೆಗೆ ಭಿನ್ನವಾದ ಯಾವುದೇ ಹೆಸರು ಅಥವಾ ಸಂಖ್ಯೆಯನ್ನು ಬರೆಸತಕ್ಕದ್ದಲ್ಲ.

**294. ಕಟ್ಟಡಗಳಿಗೆ ಸಂಖ್ಯೆ ಕೊಡುವುದು.–** (1) ಆಯುಕ್ತರು, ಯಾವುದೇ ಕಟ್ಟಡದ ಪಕ್ಕಕ್ಕೆ ಅಥವಾ ಹೊರ ಬಾಗಿಲಿಗೆ ಅಥವಾ ಅದರ ಆವರಣದ ಪ್ರವೇಶದಲ್ಲಿನ ಯಾವುದೇ ಸ್ಥಳಕ್ಕೆ ಸಂಖ್ಯೆಯನ್ನು ಹಾಕುವಂತೆ ಮಾಡಬಹುದು.

(2) ಯಾರೇ ವ್ಯಕ್ತಿಯು ಕಾನೂನು ಸಮ್ಮತ ಅಧಿಕಾರವಿಲ್ಲದೆ ಯಾವುದೇ ಅಂಥ ಸಂಖ್ಯೆಯನ್ನು ನಾಶಪಡಿಸತಕ್ಕದ್ದಲ್ಲ, ತೆಗೆದುಹಾಕತಕ್ಕದ್ದಲ್ಲ ಅಥವಾ ವಿರೂಪಗೊಳಿಸತಕ್ಕದ್ದಲ್ಲ.

(3) ಉಪ-ಪ್ರಕರಣ (1)ರ ಮೇರೆಗೆ ಸಂಖ್ಯೆಯನ್ನು ಹಾಕಿರುವಾಗ ಕಟ್ಟಡದ ಮಾಲೀಕನು ಅಂಥ ಸಂಖ್ಯೆಯನ್ನು ಹಾಗೆ ಉಳಿಸಿಕೊಂಡು ಬರಲು ಮತ್ತು ಅದನ್ನು ತೆಗೆದುಹಾಕಿದರೆ ಅಥವಾ ವಿರೂಪಗೊಳಿಸಿದರೆ ಮತ್ತೆ ಅದನ್ನು ಹಾಕಲು ಬದ್ಧನಾಗಿರತಕ್ಕದ್ದು ಮತ್ತು ಅವನು ಹಾಗೆ ಮಾಡಲು ತಪ್ಪಿದರೆ ಆಯುಕ್ತರು, ನೋಟೀಸಿನ ಮೂಲಕ ಅದನ್ನು ಮತ್ತೆ ಹಾಕುವಂತೆ ಅವನನ್ನು ಅಗತ್ಯಪಡಿಸಬಹುದು.

## ಅಧ್ಯಾಯ – XV

## ಕಟ್ಟಡಗಳ ನಿಯಂತ್ರಣ

### ಸಾಮಾನ್ಯ ಅಧಿಕಾರಗಳು

**295. ಕಟ್ಟಡ ಉಪವಿಧಿಗಳು.–** (1) ನಗರಪಾಲಿಕೆಯು, ಸರ್ಕಾರದ ಅನುಮೋದನೆಯೊಂದಿಗೆ,–

(ಎ) ನಿವೇಶನಗಳ ಅಥವಾ ಕಟ್ಟಡಗಳ ಬಳಕೆಯನ್ನು ನಿಯಂತ್ರಿಸುವುದಕ್ಕಾಗಿ ಅಥವಾ ನಿರ್ಬಂಧಿಸುವುದಕ್ಕಾಗಿ, ಮತ್ತು

(ಬಿ) ಕಟ್ಟಡವನ್ನು ನಿಯಂತ್ರಿಸುವುದಕ್ಕಾಗಿ ಅಥವಾ ನಿರ್ಬಂಧಿಸುವುದಕ್ಕಾಗಿ

– ಉಪವಿಧಿಗಳನ್ನು ರಚಿಸಬಹುದು.

(2) ಉಪ-ಪ್ರಕರಣದ (1)ರ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಆ ಖಂಡದ ಮೇರೆಗೆ ರಚಿಸಿದ ಉಪವಿಧಿಗಳು,–

(ಎ) ಯಾವುದೇ ನಿರ್ಮಲವಾಗಿಲ್ಲದ ಅಥವಾ ಅಪಾಯಕರವಾದ ನಿವೇಶನವನ್ನು ಕಟ್ಟಡಕ್ಕೆ ಬಳಸತಕ್ಕದ್ದಲ್ಲವೆಂದು, ಮತ್ತು

(ಬಿ) ನಿವೇಶನಗಳಲ್ಲಿ ಸಾರ್ವಜನಿಕ ಆರಾಧನೆಗಾಗಿ ಉದ್ದೇಶಿಸಲಾದ ಕಟ್ಟಡಗಳ ನಿರ್ಮಾಣವನ್ನು ನಿಯಂತ್ರಿಸುವುದಕ್ಕಾಗಿ ಅಥವಾ ನಿರ್ಬಂಧಿಸುವುದಕ್ಕಾಗಿ,

– ಉಪಬಂಧ ಕಲ್ಪಿಸಬಹುದು.

(3) ಉಪ-ಪ್ರಕರಣದ (1)ರ (ಎ) ಖಂಡದ ಮೂಲಕ ಪ್ರದತ್ತವಾದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಆ ಖಂಡದ ಮೇರೆಗೆ ರಚಿಸಿದ ಉಪವಿಧಿಗಳು ಈ ಕೆಳಕಂಡ ವಿಷಯಗಳಿಗೆ ಉಪಬಂಧ ಕಲ್ಪಿಸಬಹುದು:–

(ಎ) ಕಟ್ಟಡ ಕಟ್ಟಲು ಅನುಮತಿಗಾಗಿ ಸಲ್ಲಿಸುವ ಅರ್ಜಿಗಳೊಂದಿಗೆ ಒಪ್ಪಿಸಬೇಕಾದ ಮಾಹಿತಿ ಮತ್ತು ನಕ್ಷೆಗಳು;

(ಬಿ) ಕಟ್ಟಡಗಳ ಎತ್ತರ, ಅದು ಬೀದಿಗಳ ಅಗಲಕ್ಕೆ ಸಮರ್ಪಕವಾಗಿರಲಿ ಅಥವಾ ಸಮರ್ಪಕವಾಗಿಲ್ಲದಿರಲಿ;

(ಸಿ) ತಳಪಾಯದ ಮಟ್ಟ ಮತ್ತು ಅಗಲ, ಅತ್ಯಂತ ಕೆಳಗಿನ ಅಂತಸ್ತಿನ ಮಟ್ಟ ಮತ್ತು ರಚನೆಯ ಸ್ಥಿರತೆ;

(ಡಿ) ಕಟ್ಟಡದಲ್ಲಿನ ಮಹಡಿಗಳ ಸಂಖ್ಯೆ ಮತ್ತು ಎತ್ತರ ಮತ್ತು ಕೊಠಡಿಗಳ ಎತ್ತರ;

(ಇ) ಹೊರಗೆ ಅಥವಾ ಒಳಗೆ ಸಾಕಷ್ಟು ಮುಕ್ತ ಸ್ಥಳಕ್ಕೆ ವ್ಯವಸ್ಥೆ ಮತ್ತು ಸಾಕಷ್ಟು ವಾತಾಯನ ಸಾಧನಗಳ ವ್ಯವಸ್ಥೆ;

(ಎಫ್) ಬೆಂಕಿ ಹೊತ್ತಿಕೊಂಡ ಸಂದರ್ಭದಲ್ಲಿ ನಿರ್ಗಮನಕ್ಕಾಗಿ ಸಾಧನಗಳ ವ್ಯವಸ್ಥೆ;

(ಜಿ) ಮನೆಯ ಕಸಕಡ್ಡಿಯನ್ನು ತೆಗೆದುಹಾಕುವುದಕ್ಕಾಗಿ ಪೂರಕ ಪ್ರವೇಶ ಮಾರ್ಗದ ವ್ಯವಸ್ಥೆ;

(ಎಚ್) ಹೊರಗೋಡೆಗಳು ಮತ್ತು ನಡುಗೋಡೆಗಳು, ಚಾವಣಿಗಳು ಮತ್ತು ಅಂತಸ್ತುಗಳ ನಿರ್ಮಾಣದ ಸಾಮಗ್ರಿಗಳು ಮತ್ತು ವಿಧಾನಗಳು;

(ಐ) ಒಲೆಗಳು, ಹೊಗೆ ಕಿಂಡಿಗಳು, ಚಿಮಣಿಗಳು, ಮೆಟ್ಟಿಲು ಸಾಲುಗಳು, ಕಕ್ಕಸುಗಳು, ಚರಂಡಿಗಳು, ರೊಚ್ಚುಗುಂಡಿಗಳ ಸ್ಥಳ, ಸಾಮಗ್ರಿಗಳು ಮತ್ತು ವಿಧಾನಗಳು;

(ಜೆ) ಅಂಗಳಗಳ ನೆಲಗಟ್ಟು;

(ಕೆ) ಕಟ್ಟಡಗಳಲ್ಲಿ ಸುಲಭ ದಹ್ಯ ಸಾಮಗ್ರಿಗಳ ಬಳಕೆಯ ಮೇಲೆ ನಿರ್ಬಂಧಗಳು;

(ಎಲ್) ಬಾವಿಗಳ ಸಂದರ್ಭದಲ್ಲಿ ಬಾವಿಯ ಆಳತೆಗಳು, ಅದನ್ನು ಆವೃತಗೊಳಿಸುವ ರೀತಿ, ಮತ್ತು ಬಾವಿಯು ಕುಡಿಯುವ ನೀರಿನ ಉದ್ದೇಶಗಳಿಗಾಗಿದ್ದರೆ ನೀರಿನ ಮಾಲಿನ್ಯವನ್ನು ತಡೆಗಟ್ಟಲು ಅನುಸರಿಸಬೇಕಾದ ಮಾರ್ಗಗಳು.

(4) ಕಟ್ಟಡದ ನಿರ್ಮಾಣ ಅಥವಾ ಪುನರ್‌ನಿರ್ಮಾಣಕ್ಕಾಗಿ ಲೈಸೆನ್ಸ್‌ನ್ನು ಮಂಜೂರು ಮಾಡುವುದಕ್ಕೆ ಸಂಬಂಧಪಟ್ಟಂತೆ (1)ನೇ ಉಪಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ಉಪವಿಧಿಯು, ಆವರಣದಲ್ಲಿ ಮರಗಿಡಗಳನ್ನು ಬೆಳೆಸುವುದು, ಯಾವುದೇ ಅಂಥ ಕಟ್ಟಡದ ನಿರ್ಮಾಣ ಅಥವಾ ಪುನರ್ ನಿರ್ಮಾಣಕ್ಕಾಗಿ ಮಂಜೂರು ಮಾಡಿದ ಪ್ರತಿಯೊಂದು ಲೈಸೆನ್ಸಿನ ಒಂದು ಷರತ್ತು ಆಗಿರತಕ್ಕದ್ದೆಂದು ಉಪಬಂಧಿಸತಕ್ಕದ್ದು.

(5) ಕಟ್ಟಡಗಳ ನಿರ್ಮಾಣಕ್ಕಾಗಿ ಯಾವುದೇ ತುಂಡು ಭೂಮಿಯನ್ನು ನಿವೇಶನವಾಗಿ ಬಳಸತಕದ್ದಲ್ಲ ಮತ್ತು ಯಾವುದೇ ಕಟ್ಟಡವನ್ನು ಈ ಅಧಿನಿಯಮದ ಮತ್ತು ಕಟ್ಟಡ ನಿವೇಶನಗಳ ಬಳಕೆಗೆ ಅಥವಾ ಕಟ್ಟಡಗಳ ನಿರ್ಮಾಣಕ್ಕೆ ಅಥವಾ ಪುನರ್‌ನಿರ್ಮಾಣಕ್ಕೆ ಸಂಬಂಧಪಟ್ಟಂತೆ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮಗಳು ಅಥವಾ ಉಪವಿಧಿಗಳಿಗೆ ಅನುಸಾರವಾಗಿ ಅಲ್ಲದೆ ಅನ್ಯಥಾ ನಿರ್ಮಿಸತಕ್ಕದ್ದಲ್ಲ ಅಥವಾ ಪುನರ್‌ನಿರ್ಮಿಸತಕ್ಕದ್ದಲ್ಲ.

**296. ನಿರ್ದಿಷ್ಟ ಬೀದಿಗಳಲ್ಲಿ ಅಥವಾ ಸ್ಥಳಗಳಲ್ಲಿ ಕೆಲವು ವರ್ಗಗಳ ಕಟ್ಟಡಗಳ ಭಾವೀ ನಿರ್ಮಾಣವನ್ನು ನಿಯಂತ್ರಿಸಲು ನಗರಪಾಲಿಕೆಯ ಅಧಿಕಾರ.–** (1) ನಗರಪಾಲಿಕೆಯು,–

(ಎ) ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಬೀದಿಗಳಲ್ಲಿ ಅಥವಾ ಬೀದಿಗಳ ಭಾಗಗಳಲ್ಲಿ,–

(i) ನಿರಂತರವಾಗಿ ಕಟ್ಟಡಗಳನ್ನು ಕಟ್ಟಲು ಅನುಮತಿಸಲಾಗುವುದೆಂದು;

(ii) ಅನಂತರ ನಿರ್ಮಿಸಿದ ಅಥವಾ ಪುನಃ ನಿರ್ಮಿಸಿದ ಕಟ್ಟಡಗಳ ಮುಂಭಾಗದ ಹೊರನೋಟವು ಮತ್ತು ನಿರ್ಮಾಣವು ಅದಕ್ಕೆ ಸಂಬಂಧಿಸಿದ ವಾಸ್ತುಶಿಲ್ಪದ ಗುಣಲಕ್ಷಣಗಳ ಬಗ್ಗೆ ಸ್ಥಾಯೀ ಸಮಿತಿಯು ಆ ಸ್ಥಳಕ್ಕೆ ಸೂಕ್ತವೆಂದು ಪರಿಗಣಿಸಬಹುದಾದಂತೆ ಇರತಕ್ಕದ್ದೆಂದು; ಅಥವಾ

(ಬಿ) ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ಸ್ಥಳಗಳಲ್ಲಿ ಒಂದಕ್ಕೊಂದು ಅಂಟಿಕೊಂಡಿರದಂಥ ಕಟ್ಟಡಗಳ ನಿರ್ಮಾಣಕ್ಕೆ ಮಾತ್ರ ಅನುಮತಿಸಲಾಗುವುದೆಂದು; ಅಥವಾ

(ಸಿ) ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳ ಯಾವುವೇ ಬೀದಿಗಳಲ್ಲಿ, ಬೀದಿಗಳ ಭಾಗಗಳಲ್ಲಿ ನಿರ್ದಿಷ್ಟಪಡಿಸಿದ ವಾಸ್ತುಶಿಲ್ಪ ಲಕ್ಷಣದ ಅಂಗಡಿಗಳು, ಉಗ್ರಾಣಗಳು, ಕಾರ್ಖಾನೆಗಳು, ಕುಟೀರಗಳು ಅಥವಾ ಕಟ್ಟಡಗಳ ಅಥವಾ ವಿಶಿಷ್ಟ ಬಳಕೆಗಾಗಿ ವಿನ್ಯಾಸಗೊಳಿಸಿದ ಕಟ್ಟಡಗಳ ನಿರ್ಮಾಣಕ್ಕೆ, ಸ್ಥಾಯೀ ಸಮಿತಿಯ ವಿಶೇಷ ಅನುಮತಿಯಿಲ್ಲದೆ ಅವಕಾಶ ನೀಡಲಾಗುವುದಿಲ್ಲವೆಂದು

– ಘೋಷಿಸುವ ತನ್ನ ಉದ್ದೇಶದ ಬಗ್ಗೆ ಸಾರ್ವಜನಿಕ ನೋಟೀಸನ್ನು ಕೊಡಬಹುದು.

(2) ಅಂಥ ನೋಟೀಸು ಪ್ರಕಟವಾದಂದಿನಿಂದ ಮೂರು ತಿಂಗಳುಗಳ ಅವಧಿಯ ತರುವಾಯ ಅಂಥ ಯಾವುದೇ ಘೋಷಣೆಯ ಬಗ್ಗೆ ಯಾವುವೇ ಆಕ್ಷೇಪಣೆಗಳನ್ನು ಸ್ವೀಕರಿಸತಕ್ಕದ್ದಲ್ಲ.

(3) ಸ್ಥಾಯೀ ಸಮಿತಿಯು, ಸದರಿ ಅವಧಿಯೊಳಗೆ ಸ್ವೀಕರಿಸಿದ ಎಲ್ಲಾ ಆಕ್ಷೇಪಣೆಗಳನ್ನು ಪರ್ಯಾಲೋಚಿಸತಕ್ಕದ್ದು ಮತ್ತು ಅನಂತರ ಘೋಷಣೆಯನ್ನು ಸ್ಥಿರೀಕರಿಸಬಹುದು ಮತ್ತು ಹಾಗೆ ಮಾಡುವುದಕ್ಕೆ ಮೊದಲು ಅದನ್ನು ಮಾರ್ಪಾಡು ಮಾಡಬಹುದು. ಆದರೆ ಅದರ ಪರಿಣಾಮವನ್ನು ವಿಸ್ತರಿಸುವ ಹಾಗೆ ಮಾಡತಕ್ಕದ್ದಲ್ಲ.

(4) ಆಯುಕ್ತರು, ಹಾಗೆ ಸ್ಥಿರೀಕರಿಸಿದ ಯಾವುದೇ ಘೋಷಣೆಯನ್ನು ಪ್ರಕಟಿಸತಕ್ಕದ್ದು ಮತ್ತು ಅದು ಪ್ರಕಟವಾದ ದಿನಾಂಕದಿಂದ ಪರಿಣಾಮಕಾರಿಯಾಗಿರತಕ್ಕದ್ದು.

(5) ಯಾರೇ ವ್ಯಕ್ತಿಯು ಅಂಥ ಘೋಷಣೆಯು ಪ್ರಕಟವಾದ ದಿನಾಂಕದ ತರುವಾಯ ಅಂಥ ಯಾವುದೇ ಘೋಷಣೆಯನ್ನು ಉಲ್ಲಂಘಿಸಿ ಯಾವುದೇ ಕಟ್ಟಡವನ್ನು ನಿರ್ಮಿಸತಕ್ಕದ್ದಲ್ಲ ಅಥವಾ ಪುನರ್ ನಿರ್ಮಿಸತಕ್ಕದ್ದಲ್ಲ.

**297. ಬೀದಿಗಳ ಮೂಲೆಯಲ್ಲಿ ಕಟ್ಟಡ ಕಟ್ಟುವುದು.–** (1) ನಗರಪಾಲಿಕೆಯು, ಎರಡು ಬೀದಿಗಳ ಮೂಲೆಯಲ್ಲಿ ನಿರ್ಮಿಸಲು ಉದ್ದೇಶಿಸಿರುವ ಯಾವುದೇ ಕಟ್ಟಡವನ್ನು ತಾನು ಅನ್ಯಥಾ ನಿರ್ಧರಿಸಬಹುದಾದಂಥ ಎತ್ತರಕ್ಕೆ ಮತ್ತು ಅಂಥ ವಿಸ್ತೀರ್ಣಕ್ಕೆ ನೇರ್ಪಡಿಸಲು ಅಥವಾ ಎದ್ದು ಕಾಣುವಂತೆ

ಮಾಡಲು ಅಗತ್ಯಪಡಿಸಬಹುದು ಮತ್ತು ಸಾರ್ವಜನಿಕರ ಅನುಕೂಲತೆ ಅಥವಾ ಸೌಕರ್ಯಕ್ಕಾಗಿ ಅದು ಅವಶ್ಯವೆಂದು ಪರಿಗಣಿಸಬಹುದಾದಂತೆ ಮೂಲೆಯಲ್ಲಿನ ನಿವೇಶನದ ಅಂಥ ಭಾಗವನ್ನು ಆರ್ಜಿಸಬಹುದು.

(2) ಹಾಗೆ ಆರ್ಜಿಸಿದ ಯಾವುದೇ ಭೂಮಿಗೆ ನಗರಪಾಲಿಕೆಯು ಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(3) ಅಂಥ ಪರಿಹಾರವನ್ನು ನಿರ್ಧರಿಸುವಲ್ಲಿ, ಬೀದಿಗಳ ಮೇಲ್ಪಾಟಿನಿಂದ ಅದೇ ಆವರಣಕ್ಕೆ ಪ್ರಾಪ್ತವಾಗುವ ಯಾವುದೇ ಪ್ರಯೋಜನಕ್ಕಾಗಿ ಅವಕಾಶ ಕಲ್ಪಿಸತಕ್ಕದ್ದು.

**298. ಅನುಮತಿಯಿಲ್ಲದೆ ಸುಲಭ ದಹ್ಯವಾದ ಸಾಮಗ್ರಿಗಳನ್ನು ಕಟ್ಟಡಗಳು, ಇತ್ಯಾದಿಗಳಿಗೆ ಬಳಸುವುದಕ್ಕೆ ನಿಷೇಧ.–** (1) ಆಯುಕ್ತರ ಅನುಮತಿಯಿಲ್ಲದೆ ಕಟ್ಟಡದ ಯಾವುದೇ ಹೊರ ಚಾವಣಿ, ವರಾಂಡ, ಚಪ್ಪರ ಅಥವಾ ಗೋಡೆಯನ್ನು ಮತ್ತು ಯಾವುದೇ ಷೆಡ್ ಅಥವಾ ಬೇಲಿಯನ್ನು, ಬಟ್ಟೆ, ಹುಲ್ಲು, ಎಲೆಗಳು, ಚಾಪೆಗಳು ಅಥವಾ ಇತರ ಸುಲಭ ದಹ್ಯ ಸಾಮಗ್ರಿಗಳಿಂದ ನಿರ್ಮಿಸತಕ್ಕದ್ದಲ್ಲ ಅಥವಾ ಪುನರ್ ನಿರ್ಮಿಸತಕ್ಕದ್ದಲ್ಲ ಅಥವಾ ಯಾವುದೇ ವರ್ಷದಲ್ಲಿ ನಿರ್ಮಿಸಿದ ಅಥವಾ ಪುನರ್ ನಿರ್ಮಿಸಿದ ಯಾವುವೇ ಅಂಥ ಚಾವಣಿಗಳು, ವರಾಂಡ, ಚಪ್ಪರ, ಗೋಡೆ, ಷೆಡ್ ಅಥವಾ ಬೇಲಿಯನ್ನು ಅಂತ ಅನುಮತಿ ಇಲ್ಲದೆ ತರುವಾಯದ ವರ್ಷದಲ್ಲಿ ಉಳಿಸಿಕೊಳ್ಳತಕ್ಕದ್ದಲ್ಲ.

(2) ಉಪ–ಪ್ರಕರಣ (1)ರ ಮೇರೆಗೆ ನೀಡಿದ ಪ್ರತಿಯೊಂದು ಅನುಮತಿಯು ಅದನ್ನು ಯಾವ ವರ್ಷಕ್ಕೆ ನೀಡಲಾಗಿದೆಯೋ ಆ ವರ್ಷದ ಕೊನೆಯಲ್ಲಿ ಮುಕ್ತಾಯವಾಗತಕ್ಕದ್ದು.

**299. ಕಟ್ಟಡದ ನಿರ್ಮಾಣ ಅಥವಾ ಪುನರ್ ನಿರ್ಮಾಣಕ್ಕೆ ಅರ್ಜಿ.–** (1) ಯಾರೇ ವ್ಯಕ್ತಿಯು, ಕಟ್ಟಡವನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಉದ್ದೇಶಿಸಿದರೆ, ಅವನು ಕಾಮಗಾರಿಯನ್ನು ನಿರ್ವಹಿಸಲು ಅನುಮತಿಗಾಗಿ ಲಿಖಿತ ಅರ್ಜಿಯನ್ನು, ಭೂಮಿಯ ನಿವೇಶನ ಸ್ಥಳದ ನಕ್ಷೆ, ನೆಲನಕ್ಷೆ, ಕಟ್ಟಡದ ಹೊರನೋಟ ನಕ್ಷೆಗಳು ಮತ್ತು ಖಂಡ ಚಿತ್ರಗಳು, ಕಾಮಗಾರಿಯ ತಪಶೀಲು ಮತ್ತು ನಿಯಮಿಸಬಹುದಾದಂಥ ಇತರ ದಸ್ತಾವೇಜುಗಳೊಂದಿಗೆ ಕಳುಹಿಸತಕ್ಕದ್ದು.

**ವಿವರಣೆ:**– ಈ ಉಪ–ಪ್ರಕರಣದಲ್ಲಿ 'ಕಟ್ಟಡ' ಎಂಬುದು ಯಾವುದೇ ಸಾರ್ವಜನಿಕ ಬೀದಿಯ ಎಲ್ಲೆ ಗೆರೆಯಲ್ಲಿರುವ ಅಥವಾ ಅದಕ್ಕೆ ಲಗತ್ತಾಗಿರುವ ಯಾವುದೇ ಎತ್ತರದ ಗೋಡೆ ಅಥವಾ ಬೇಲಿಯನ್ನು ಒಳಗೊಳ್ಳತಕ್ಕದ್ದು.

(2) ಉಪ–ಪ್ರಕರಣ (1)ರ ಮೇರೆಗೆ ಒದಗಿಸಿದ ಪ್ರತಿಯೊಂದು ದಸ್ತಾವೇಜು, ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಬಹುದಾದಂತಹ ವಿವರಗಳನ್ನು ಒಳಗೊಂಡಿರತಕ್ಕದ್ದು ಮತ್ತು ಅದನ್ನು ಅಂಥ ರೀತಿಯಲ್ಲಿ ಸಿದ್ಧಪಡಿಸತಕ್ಕದ್ದು.

**300. ಅನುಮತಿಯಿಲ್ಲದೆ ಕಾಮಗಾರಿಯನ್ನು ಪ್ರಾರಂಭಿಸುವುದಕ್ಕೆ ನಿಷೇಧ.–** ಆಯುಕ್ತರು, ಕಾಮಗಾರಿಯನ್ನು ನಿರ್ವಹಿಸಲು ಅನುಮತಿಯನ್ನು ಕೊಟ್ಟ ಹೊರತು, ಮತ್ತು ಕೊಡುವವರೆಗೆ ಕಟ್ಟಡದ ನಿರ್ಮಾಣವನ್ನು ಅಥವಾ ಪುನರ್ ನಿರ್ಮಾಣವನ್ನು ಪ್ರಾರಂಭಿಸತಕ್ಕದ್ದಲ್ಲ.

**301. ಕಾಮಗಾರಿಯನ್ನು ನಿರ್ವಹಿಸಲು ಆಯುಕ್ತರು ಯಾವ ಅವಧಿಯೊಳಗೆ ಅನುಮತಿಯನ್ನು ಕೊಡಬಹುದೋ ಅಥವಾ ಅನುಮತಿಯನ್ನು ನಿರಾಕರಿಸಬಹುದೋ ಆ ಅವಧಿ.–** [1][(1)][1] ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಅನುಮತಿಗಾಗಿ 299ನೇ ಪ್ರಕರಣದ ಮೇರೆಗೆ ಸಲ್ಲಿಸಿದ ಯಾವುದೇ ಅರ್ಜಿಯನ್ನು ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದ ಯಾವುದೇ ಮಾಹಿತಿಯನ್ನು ಅಥವಾ ದಸ್ತಾವೇಜುಗಳನ್ನು ಅಥವಾ ಯಾವುದೇ ಹೆಚ್ಚಿನ ಮಾಹಿತಿಯನ್ನು ಅಥವಾ ದಸ್ತಾವೇಜುಗಳನ್ನು ಸ್ವೀಕರಿಸಿದ ತರುವಾಯ ಮೂವತ್ತು ದಿವಸಗಳೊಳಗಾಗಿ ಆಯುಕ್ತರು ಲಿಖಿತ ಆದೇಶದ ಮೂಲಕ ಅಂಥ ಅನುಮತಿಯನ್ನು ನೀಡತಕ್ಕದ್ದು ಅಥವಾ 303ನೇ ಪ್ರಕರಣದಲ್ಲಿ ಅಥವಾ 304ನೇ ಪ್ರಕರಣಗಳಲ್ಲಿ ತಿಳಿಸಿದ ಒಂದು ಅಥವಾ ಹೆಚ್ಚು ಕಾರಣಗಳ ಮೇಲೆ ಅನುಮತಿಯನ್ನು ನೀಡಲು ನಿರಾಕರಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.

[1][(2) ಆಯುಕ್ತರು ಸದರಿ ಮೂವತ್ತು ದಿವಸಗಳ ಅವಧಿಯೊಳಗಾಗಿ ಯಾವುದೇ ಆದೇಶವನ್ನು ಹೊರಡಿಸದಿದ್ದರೆ, ಅರ್ಜಿದಾರನು ತನ್ನ ಅರ್ಜಿಯ ಬಗ್ಗೆ ಅಗತ್ಯವಾದ ಆದೇಶವನ್ನು ಹೊರಡಿಸುವಂತೆ ಆಯುಕ್ತರನ್ನು ಕೋರಿ ಅವರ ಹೆಸರಿಗೆ ಪತ್ರವನ್ನು ಬರೆಯಬಹುದು ಮತ್ತು ಆಯುಕ್ತರು ಅಂಥ ಪತ್ರವನ್ನು ಸ್ವೀಕರಿಸಿದ ದಿನಾಂಕದಿಂದ ಇನ್ನೂ ಮೂವತ್ತು ದಿವಸಗಳ ಅವಧಿಯೊಳಗೆ ಲಿಖಿತ ಆದೇಶದ ಮೂಲಕ ಅನುಮತಿಯನ್ನು ನೀಡತಕ್ಕದ್ದು. ಇಲ್ಲವೇ 303ನೇ ಪ್ರಕರಣದಲ್ಲಿ ಅಥವಾ 304ನೇ ಪ್ರಕರಣದಲ್ಲಿ ತಿಳಿಸಿದ ಒಂದು ಅಥವಾ ಹೆಚ್ಚಿನ ಕಾರಣಗಳ ಮೇಲೆ ಅದನ್ನು ನೀಡಲು ನಿರಾಕರಿಸತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**302. ಅನುಮೋದನೆಯನ್ನು ಅಥವಾ ಅನುಮತಿಯನ್ನು ನೀಡಲು ಅಥವಾ ನಿರಾಕರಿಸಲು ಆಯುಕ್ತರು ವಿಳಂಬ ಮಾಡಿದರೆ ಸ್ಥಾಯೀ ಸಮಿತಿಗೆ ಕೋರಿಕೆ ಮಾಡಿಕೊಳ್ಳುವುದು.–** (1) [1][301ನೇ ಪ್ರಕರಣದ (2)ನೇ ಉಪಪ್ರಕರಣ][1]ದಲ್ಲಿ ಹೇಳಲಾದ ಅವಧಿಯೊಳಗೆ ಆಯುಕ್ತರು ಕಟ್ಟಡ ನಿವೇಶನಕ್ಕೆ ತಮ್ಮ ಅನುಮೋದನೆಯನ್ನು ನೀಡದಿದ್ದರೆ ಅಥವಾ ನಿರಾಕರಿಸದಿದ್ದರೆ ಅಥವಾ ಸಂದರ್ಭಾನುಸಾರ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ತನ್ನ ಅನುಮತಿಯನ್ನು ನೀಡದಿದ್ದರೆ ಅಥವಾ ನಿರಾಕರಿಸದಿದ್ದರೆ ಅರ್ಜಿದಾರನ ಲಿಖಿತ ಕೋರಿಕೆಯ ಮೇರೆಗೆ ಅಂಥ ಅನುಮೋದನೆಯನ್ನು ಅಥವಾ ಅನುಮತಿಯನ್ನು ಕೊಡಬೇಕೇ ಅಥವಾ ಬೇಡವೇ ಎಂಬುದನ್ನು ಲಿಖಿತ ಆದೇಶದ ಮೂಲಕ ನಿರ್ಧರಿಸಲು ಸ್ಥಾಯೀ ಸಮಿತಿಯು ಬದ್ಧವಾಗಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಅಂಥ ಲಿಖಿತ ಕೋರಿಕೆಯನ್ನು ಸ್ವೀಕರಿಸಿದಂದಿನಿಂದ ಒಂದು ತಿಂಗಳ ಒಳಗಾಗಿ, ಅಂಥ ಅನುಮೋದನೆಯನ್ನು ಅಥವಾ ಅನುಮತಿಯನ್ನು ಕೊಡಬೇಕೇ ಅಥವಾ ಬೇಡವೇ ಎಂಬ ಬಗ್ಗೆ ಸ್ಥಾಯೀ ಸಮಿತಿಯು ನಿರ್ಧರಿಸದಿದ್ದರೆ, ಅಂಥ ಅನುಮೋದನೆಯನ್ನು ಅಥವಾ ಅನುಮತಿಯನ್ನು ಕೊಡಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅರ್ಜಿದಾರನು ಕಾಮಗಾರಿಯನ್ನು ನಿರ್ವಹಿಸಲು ಮುಂದುವರಿಯಬಹುದು. ಆದರೆ ಈ ಅಧಿನಿಯಮದ ಯಾವುದೇ ಉಪಬಂಧಗಳ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ಉಪವಿಧಿಗಳನ್ನು ಉಲ್ಲಂಘಿಸುವ ಹಾಗೆ ಅಲ್ಲ.

**303. ಯಾವ ಕಾರಣಗಳ ಮೇಲೆ ಕಟ್ಟಡ ನಿರ್ಮಾಣಕ್ಕಾಗಿ ನಿವೇಶನಕ್ಕೆ ಅನುಮೋದನೆಯನ್ನು ಅಥವಾ ಕಟ್ಟಡ ನಿರ್ಮಾಣಕ್ಕೆ ಅನುಮತಿಯನ್ನು ನಿರಾಕರಿಸಬಹುದೋ ಆ ಕಾರಣಗಳು.–** (1) ಯಾವ ಕಾರಣಗಳ ಮೇಲೆ ಮಾತ್ರವೇ ಕಟ್ಟಡ ನಿರ್ಮಾಣಕ್ಕಾಗಿ ಅಥವಾ ಪುನರ್‌ನಿರ್ಮಾಣಕ್ಕಾಗಿ ನಿವೇಶನಕ್ಕೆ

ಅನುಮೋದನೆಯನ್ನು ಅಥವಾ ಕಟ್ಟಡ ನಿರ್ಮಾಣಕ್ಕೆ ಅಥವಾ ಪುನರ್ ನಿರ್ಮಾಣಕ್ಕೆ ಅನುಮತಿಯನ್ನು ನಿರಾಕರಿಸಬಹುದೋ, ಆ ಕಾರಣಗಳು, ಕೆಳಕಂಡಂತಿವೆ, ಎಂದರೆ,–

(ಎ) ಕಾಮಗಾರಿಯು ಅಥವಾ ಕಾಮಗಾರಿಗಾಗಿ ನಿವೇಶನದ ಬಳಕೆಯು ಅಥವಾ ನಿವೇಶನದ ನಕ್ಷೆ, ನೆಲನಕ್ಷೆ, ಕಟ್ಟಡದ ಹೊರನೋಟ ನಕ್ಷೆಗಳು, ಖಂಡಚಿತ್ರಗಳು ಅಥವಾ ತಪಶೀಲುಗಳಲ್ಲಿ ಒಳಗೊಂಡಿರುವ ಯಾವುದೇ ವಿವರವು ಯಾವುದೇ ಕಾನೂನಿನ ಯಾವುದೇ ನಿರ್ದಿಷ್ಟ ಉಪಬಂಧಗಳನ್ನು ಅಥವಾ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಯಾವುದೇ ನಿರ್ದಿಷ್ಟ ಆದೇಶವನ್ನು, ನಿಯಮವನ್ನು, ಘೋಷಣೆಯನ್ನು ಅಥವಾ ಉಪವಿಧಿಯನ್ನು ಉಲ್ಲಂಘಿಸುವುದು;

(ಬಿ) ಅಂಥ ಅನುಮತಿಗಾಗಿ ಸಲ್ಲಿಸಿದ ಅರ್ಜಿಯು ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದ ರೀತಿಯಲ್ಲಿ ವಿವರಗಳನ್ನು ಒಳಗೊಂಡಿರದಿರುವುದು ಅಥವಾ ಅಂಥ ರೀತಿಯಲ್ಲಿ ತಯಾರಿಸಿಲ್ಲದಿರುವುದು;

(ಸಿ) 299ನೇ ಪ್ರಕರಣದಲ್ಲಿ ತಿಳಿಸಿದ ಯಾವುವೇ ದಸ್ತಾವೇಜುಗಳಿಗೆ ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದಂತೆ ರುಜು ಮಾಡದಿರುವುದು;

(ಡಿ) ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಆಯುಕ್ತರು ಅಗತ್ಯಪಡಿಸಿದ ಯಾವುದೇ ಮಾಹಿತಿಯನ್ನು ಅಥವಾ ದಸ್ತಾವೇಜುಗಳನ್ನು ಯಥೋಚಿತವಾಗಿ ಒದಗಿಸಿಲ್ಲದಿರುವುದು;

(ಇ) 280ನೇ ಪ್ರಕರಣದ ಮೂಲಕ ಅಗತ್ಯಪಡಿಸಿದಂತೆ ಬೀದಿಗಳನ್ನು ಅಥವಾ ರಸ್ತೆಗಳನ್ನು ನಿರ್ಮಿಸದೇ ಇರುವುದು;

(ಎಫ್) ಉದ್ದೇಶಿತ ಕಟ್ಟಡವು ಸರ್ಕಾರದ ಅಥವಾ ನಗರಪಾಲಿಕೆಯ ಭೂಮಿಯನ್ನು ಒತ್ತುವರಿ ಮಾಡಿರುವುದು;

(ಜಿ) ಅಂಥ ಕಟ್ಟಡದ ನಿವೇಶನವು ಬೀದಿಗೆ ಅಥವಾ ಯೋಜಿತ ಬೀದಿಗೆ ಹೊಂದಿಕೊಂಡಿಲ್ಲದಿರುವುದು ಮತ್ತು ಅಂಥ ನಿವೇಶನಕ್ಕೆ ಸೇರಿಕೊಂಡಿರುವ ಮತ್ತು ಯಾವುದೇ ಭಾಗದಲ್ಲಿ ಐದು ಮೀಟರುಗಳಿಗಿಂತ ಕಡಿಮೆ ಇಲ್ಲದ ಅಗಲದ ದಾರಿಯ ಅಥವಾ ಹಾದಿಯ ಮೂಲಕ ಯಾವುದೇ ಅಂಥ ಬೀದಿಯಿಂದ ಅಂಥ ಕಟ್ಟಡಕ್ಕೆ ಪ್ರವೇಶ ಅನುಕೂಲ ಇಲ್ಲದಿರುವುದು.

(2) ಆಯುಕ್ತರು ಅಥವಾ ಸ್ಥಾಯೀ ಸಮಿತಿಯು, ಕಟ್ಟಡಕ್ಕಾಗಿ ನಿವೇಶನಕ್ಕೆ ಅನುಮೋದನೆಯನ್ನು ನೀಡಲು ಅಥವಾ ಕಟ್ಟಡದ ನಿರ್ಮಾಣಕ್ಕೆ ಅಥವಾ ಪುನರ್ ನಿರ್ಮಾಣಕ್ಕೆ ಅನುಮತಿಯನ್ನು ನೀಡಲು ನಿರಾಕರಿಸಿದಾಗಲೆಲ್ಲಾ, ಅಂಥ ನಿರಾಕರಣೆಗೆ ಕಾರಣಗಳನ್ನು ಆದೇಶದಲ್ಲಿ ನಿರ್ದಿಷ್ಟವಾಗಿ ತಿಳಿಸತಕ್ಕದ್ದು.

**304. ಕೆಲವು ಸಂದರ್ಭಗಳಲ್ಲಿ ಮನರಂಜನೆಯ ಕಟ್ಟಡದ ನಿರ್ಮಾಣಕ್ಕೆ ಮಂಜೂರಾತಿಯನ್ನು ನೀಡುವ ಅಧಿಕಾರದ ಮೇಲೆ ನಿರ್ಬಂಧ.–** ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದಲ್ಲಿ ಅಥವಾ ಉಪವಿಧಿಯಲ್ಲಿ ಏನೇ ಒಳಗೊಂಡಿದ್ದರೂ, ಸಾರ್ವಜನಿಕ ಮನರಂಜನೆಯ ಯಾವುದೇ ಕಟ್ಟಡದ ನಿರ್ಮಾಣಕ್ಕೆ ಅಥವಾ ಆ ಕಟ್ಟಡಕ್ಕೆ ಯಾವುದೇ ಹೆಚ್ಚಿನ ಸೇರ್ಪಡೆಯ ನಿರ್ಮಾಣಕ್ಕೆ ಅಥವಾ ಆ ಕಟ್ಟಡಕ್ಕೆ ಮಾಡುವ ಯಾವುದೇ ಸೇರ್ಪಡೆಗೆ ಅಂಥ ಕಟ್ಟಡದ ನಿವೇಶನವು ಅಥವಾ ಅಂಥ ಕಟ್ಟಡಕ್ಕಾಗಿ ಉದ್ದೇಶಿಸಲಾದ ನಿವೇಶನವು,–

(ಎ) (i) ಕಾಲೇಜು, ಪ್ರೌಢಶಾಲೆ ಅಥವಾ ಬಾಲಕಿಯರ ಶಾಲೆಗಳಂತಹ ಮನ್ನಣೆ ಪಡೆದ ಶಿಕ್ಷಣ ಸಂಸ್ಥೆಗೆ ಲಗತ್ತಾಗಿರುವ ಯಾವುದೇ ವಸತಿ ಸಂಸ್ಥೆಯಿಂದ; ಅಥವಾ

(ii) ಹೆಚ್ಚು ಒಳರೋಗಿಗಳ ವಾರ್ಡನ್ನು ಹೊಂದಿರುವ ಸರ್ಕಾರಿ ಆಸ್ಪತ್ರೆಯಿಂದ; ಅಥವಾ

(iii) ಒಂದು ನೂರು ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ನಿವಾಸಿಗಳನ್ನು ಒಳಗೊಂಡಿರುವ ಅನಾಥಾಲಯದಿಂದ

– ಇನ್ನೂರು ಮೀಟರುಗಳ ವ್ಯಾಸದೊಳಗೆ ಇದ್ದರೆ; ಅಥವಾ

(ಬಿ) ಯಾವ ವಸತಿ ಪ್ರದೇಶವು, ವಸತಿಗಾಗಿಯೇ ಇರುವುದೋ ಅಥವಾ ವ್ಯಾಪಾರ ವ್ಯವಹಾರ ಉದ್ದೇಶಗಳಿಗೆ ಭಿನ್ನವಾದಂಥ ವಸತಿಗಾಗಿ ಅದನ್ನು ಕಾಯ್ದಿರಿಸಲಾಗಿದೆಯೋ ಅಥವಾ ಸಾಮಾನ್ಯವಾಗಿ ಬಳಸಲಾಗಿದೆಯೋ ಆ ಯಾವುದೇ ಜನನಿಬಿಡವಾದ ವಸತಿ ಪ್ರದೇಶದಲ್ಲಿ ಇದ್ದರೆ;

(ಸಿ) ಯಾವುದೇ ಗೃಹ ನಿರ್ಮಾಣದ ಯೋಜನೆಯ ಅಥವಾ ಉದ್ದಿಷ್ಟ ಯೋಜನೆಯ ಮೂಲಕ ಅಥವಾ ಅನ್ಯಥಾ ಯಾವುದೇ ಅಧಿನಿಯಮಿತಿಯ ಮೇರೆಗೆ ವಸತಿ ಉದ್ದೇಶಗಳಿಗಾಗಿ, ಕಾಯ್ದಿರಿಸಿದ ಯಾವುದೇ ಪ್ರದೇಶದಲ್ಲಿ ಇದ್ದರೆ,

– ಸರ್ಕಾರದ ಪೂರ್ವ ಅನುಮೋದನೆ ಇಲ್ಲದೆ ಆಯುಕ್ತರು ಅಥವಾ ಸ್ಥಾಯೀ ಸಮಿತಿಯು ಮಂಜೂರಾತಿ ನೀಡತಕ್ಕದ್ದಲ್ಲ:

ಪರಂತು, ಚಲನಚಿತ್ರ ಪ್ರದರ್ಶನಕ್ಕಾಗಿ ಬಳಸಲು ಉದ್ದೇಶಿಸಿರುವ ಯಾವುದೇ ಕಟ್ಟಡದ ನಿರ್ಮಾಣಕ್ಕೆ ಕರ್ನಾಟಕ ಚಲನಚಿತ್ರಗಳ (ನಿಯಂತ್ರಣ) ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 23) ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಕ್ಷೆಗಳು ಮತ್ತು ತಪಶೀಲುಗಳಿಗೆ ಮಂಜೂರಾತಿಯನ್ನು ಪಡೆಯಲಾಗಿದೆ ಎಂದು ಸ್ಥಾಯೀ ಸಮಿತಿಗೆ ಮನವರಿಕೆಯಾದ ಹೊರತು ಯಾವುದೇ ಅನುಮತಿಯನ್ನು ಕೊಡತಕ್ಕದ್ದಲ್ಲ.

**305. ಕಟ್ಟಡಗಳನ್ನು ನಿರ್ಮಿಸಲು ಅನುಮತಿಯನ್ನು ನಿರಾಕರಿಸುವುದಕ್ಕೆ ವಿಶೇಷ ಅಧಿಕಾರಗಳು.–** (1) 303ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನಿವೇಶನದ ನಕ್ಷೆಯಲ್ಲಿ ತೋರಿಸಿರುವ ಯಾವುದೇ ಬೀದಿಯು ಉದ್ದೇಶಿತ ಖಾಸಗಿ ಬೀದಿಯಾಗಿದ್ದರೆ ಆಯುಕ್ತರು ತಮ್ಮ ವಿವೇಚನಾನುಸಾರ, ಆ ಬೀದಿಯ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸುವವರೆಗೆ ಅಥವಾ ಪೂರ್ಣಗೊಳಿಸುವವರೆಗೆ ಕಟ್ಟಡ ನಿರ್ಮಿಸಲು ಅನುಮತಿಯನ್ನು ನೀಡಲು ನಿರಾಕರಿಸಬಹುದು.

(2) 301ನೇ ಮತ್ತು 303ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಆಯುಕ್ತರು ನಿವೇಶನವನ್ನು ಅಥವಾ ಕಟ್ಟಡ ಇರುವ ನಿವೇಶನವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಆರ್ಜಿಸಲು ಉದ್ದೇಶಿಸಲಾಗಿದೆ ಎಂಬ ಕಾರಣದ ಮೇಲೆ ಕಟ್ಟಡದ ನಿರ್ಮಾಣಕ್ಕಾಗಿ ಅಥವಾ ಪುನರ್ ನಿರ್ಮಾಣಕ್ಕಾಗಿ ನಿವೇಶನಕ್ಕೆ ಅನುಮೋದನೆ ನೀಡುವುದನ್ನು ನಿರಾಕರಿಸಬಹುದು. ಪರಂತು, ಅರ್ಜಿದಾರನಿಗೆ ನಿರಾಕರಣೆಯ ಬಗ್ಗೆ ತಿಳಿಸಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯ ನಂತರ ಅಂಥ ನಿರಾಕರಣೆಯು ಪ್ರವರ್ತನೆಯಲ್ಲಿರುವುದು ನಿಂತುಹೋಗತಕ್ಕದ್ದು.

**306. ಎರಡು ವರ್ಷಗಳೊಳಗೆ ನಿರ್ಮಾಣಕಾರ್ಯ ಕೈಗೊಳ್ಳದಿದ್ದರೆ, ಅನುಮತಿಯು ರದ್ದಾಗುವುದು.–** ಕಟ್ಟಡದ ನಿರ್ಮಾಣ ಅಥವಾ ಪುನರ್‌ನಿರ್ಮಾಣ ಕಾರ್ಯವನ್ನು, ಕಾಮಗಾರಿಯನ್ನು ನಿರ್ವಹಿಸಲು ಅನುಮತಿಯನ್ನು ಕೊಟ್ಟ ದಿನಾಂಕದ ತರುವಾಯ ಎರಡು ವರ್ಷಗಳೊಳಗೆ ಪ್ರಾರಂಭಿಸದಿದ್ದರೆ, ಹೊಸ ಅರ್ಜಿಯನ್ನು ಸಲ್ಲಿಸುವವರೆಗೆ ಮತ್ತು ಈ ಅಧ್ಯಾಯದ ಮೇರೆಗೆ ಹೊಸದಾಗಿ ಅನುಮತಿಯನ್ನು ನೀಡುವವರೆಗೆ ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದಲ್ಲ.

**307. ಆಯುಕ್ತರಿಂದ ಪರಿಶೀಲನೆ.–** ಆಯುಕ್ತರು, ಯಾವುದೇ ಕಟ್ಟಡವನ್ನು, ಅದನ್ನು ನಿರ್ಮಿಸುತ್ತಿರುವಾಗ ಅಥವಾ ಪುನರ್ ನಿರ್ಮಿಸುತ್ತಿರುವಾಗ ಅಥವಾ 115ನೇ ಪ್ರಕರಣದ ಮೇರೆಗೆ ನೀಡಿದ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಪರಿಶೀಲಿಸಬಹುದು.

**308. ಕಾಮಗಾರಿಯ ಬದಲಾವಣೆಯನ್ನು ಅಗತ್ಯಪಡಿಸಲು ಆಯುಕ್ತರ ಅಧಿಕಾರ.–** (1) ಆಯುಕ್ತರು, ಆ ಕಾಮಗಾರಿಯು,–

(ಎ) ಅನುಮೋದಿತ ನಕ್ಷೆಗಳಿಗೆ ಅಥವಾ ತಪಶೀಲುಗಳಿಗೆ ಅನುಸಾರವಾಗಿ ಅಲ್ಲದ ರೀತಿಯಲ್ಲಿದೆ ಎಂದು, ಅಥವಾ

(ಬಿ) ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮ, ಉಪವಿಧಿ, ಆದೇಶ ಅಥವಾ ಘೋಷಣೆಯನ್ನು ಉಲ್ಲಂಘಿಸುತ್ತದೆ ಎಂದು

– ಆಯುಕ್ತರಿಗೆ ಕಂಡು ಬಂದರೆ, ಕಟ್ಟಡದ ಮಾಲೀಕನನ್ನು ನೋಟೀಸಿನ ಮೂಲಕ ಆ ನೋಟೀಸಿನಲ್ಲಿ ಅವರು ತಿಳಿಸಿದ ಅವಧಿಯೊಳಗೆ,–

(i) ಅಂಥ ಬದಲಾವಣೆಗಳನ್ನು ಏಕೆ ಮಾಡಬಾರದು ಎಂಬುದಕ್ಕೆ ಕಾರಣ ತೋರಿಸುವಂತೆ; ಅಥವಾ

(ii) ಸದರಿ ನಕ್ಷೆಗಳು, ತಪಶೀಲುಗಳು ಅಥವಾ ಉಪಬಂಧಗಳಿಗೆ ಅನುಗುಣವಾಗಿ ಕಾಮಗಾರಿಯನ್ನು ನಿರ್ವಹಿಸುವ ಉದ್ದೇಶದಿಂದ ಸದರಿ ನೊಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಬದಲಾವಣೆಗಳನ್ನು ಮಾಡುವಂತೆ

– ಅಗತ್ಯಪಡಿಸಬಹುದು.

(2) ಮೇಲೆ ಹೇಳಿದಂತೆ, ಮಾಲೀಕನು ಕಾರಣ ತೋರಿಸದಿದ್ದರೆ, ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಬದಲಾವಣೆಗಳನ್ನು ಮಾಡಲು ಅವನು ಬದ್ಧನಾಗಿರತಕ್ಕದ್ದು.

(3) ಮೇಲೆ ಹೇಳಿದಂತೆ ಮಾಲೀಕನು ಕಾರಣ ತೋರಿಸಿದರೆ, ಆಯುಕ್ತರು, (1)ನೇ ಉಪ-ಪ್ರಕರಣದ ಮೇರೆಗೆ ನೀಡಿದ ನೋಟೀಸನ್ನು ಆದೇಶದ ಮೂಲಕ ರದ್ದುಗೊಳಿಸತಕ್ಕದ್ದು ಅಥವಾ ತಾವು ಸೂಕ್ತವೆಂದು ಯೋಚಿಸುವಂಥ ಮಾರ್ಪಾಡುಗಳಿಗೆ ಒಳಪಟ್ಟು ಅದನ್ನು ಸ್ಥಿರೀಕರಿಸತಕ್ಕದ್ದು.

**309. ಮಾನವ ಜೀವಕ್ಕೆ ಅಪಾಯವನ್ನುಂಟುಮಾಡುವ ಕಾಮಗಾರಿಯನ್ನು ನಿಲ್ಲಿಸುವುದು.–** ಹಿಂದಿನ ಪ್ರಕರಣಗಳ ಪೈಕಿ ಯಾವುದೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ ಆಯುಕ್ತರು, ನಡೆಯುತ್ತಿರುವ ಕಾಮಗಾರಿಯು ಮಾನವ ಜೀವಕ್ಕೆ ಅಪಾಯವನ್ನುಂಟುಮಾಡುವುದೆಂದು ಅವರು ಅಭಿಪ್ರಾಯಪಟ್ಟರೆ ಯಾವುದೇ ಕಾಲದಲ್ಲಿ ಯಾವುದೇ ಕಟ್ಟಡದ ನಿರ್ಮಾಣವನ್ನು ಅಥವಾ ಪುನರ್‌ನಿರ್ಮಾಣವನ್ನು ನಿಲ್ಲಿಸಬಹುದು.

**310. ಮುಕ್ತಾಯ ಪ್ರಮಾಣಪತ್ರ ಮತ್ತು ಅಧಿಭೋಗಿಸಲು ಅಥವಾ ಬಳಸಲು ಅನುಮತಿ.–** (1) ಪ್ರತಿಯೊಬ್ಬ ವ್ಯಕ್ತಿಯು, ಕಟ್ಟಡದ ನಿರ್ಮಾಣವನ್ನು ಅಥವಾ ಅಂಥ ಯಾವುದೇ ಕಾಮಗಾರಿಯ ನಿರ್ವಹಣೆಯನ್ನು ಪೂರ್ಣಗೊಳಿಸಿದ ತರುವಾಯ ಅದು ಪೂರ್ಣವಾಗಿರುವ ಬಗ್ಗೆ ಒಂದು ತಿಂಗಳೊಳಗಾಗಿ, ಅದು ಉಪವಿಧಿಗಳಲ್ಲಿ ನಿಯಮಿಸಿದ ನಮೂನೆಯಲ್ಲಿ ಮತ್ತು ನಿಯಮಿಸಿದ ರೀತಿಯಲ್ಲಿ ರುಜು ಮಾಡಿದ ಮತ್ತು ಅನುಮೋದಿಸಿದ ಪ್ರಮಾಣಪತ್ರದೊಂದಿಗೆ ಲಿಖಿತ ನೋಟೀಸನ್ನು ಆಯುಕ್ತರಿಗೆ ಅವರ ಕಛೇರಿಯಲ್ಲಿ ತಲುಪಿಸತಕ್ಕದ್ದು ಅಥವಾ ಕಳುಹಿಸತಕ್ಕದ್ದು ಅಥವಾ ತಲುಪುವಂತೆ ಅಥವಾ ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಕಟ್ಟಡಗಳ ಅಥವಾ ಅಂಥ ಕಾಮಗಾರಿಯ ಪರಿಶೀಲನೆಗಾಗಿ ಆಯುಕ್ತರಿಗೆ ಎಲ್ಲ ಅವಶ್ಯ ಸೌಲಭ್ಯಗಳನ್ನು ನೀಡತಕ್ಕದ್ದು ಮತ್ತು ಆ ಕಟ್ಟಡವನ್ನು ಅಧಿಭೋಗಿಸಲು ಅನುಮತಿಗಾಗಿ ಅರ್ಜಿ ಸಲ್ಲಿಸತಕ್ಕದ್ದು.

[1][(1ಎ) ಉಪ-ಪ್ರಕರಣ (1)ರಲ್ಲಿ ಏನೇ ಒಳಗೊಂಡಿದ್ದರೂ ಒಂದಕ್ಕಿಂತ ಹೆಚ್ಚು ಅಂತಸ್ತುಗಳನ್ನು ಹೊಂದಿರುವ ಕಟ್ಟಡದ ನಿರ್ಮಾಣಕ್ಕೆ ಯಾರೇ ವ್ಯಕ್ತಿಗೆ ಅನುಮತಿಯನ್ನು ನೀಡಿರುವಲ್ಲಿ ಅಂಥ ವ್ಯಕ್ತಿಯು ಅಂಥ ಕಟ್ಟಡಗಳ ಅಂತಸ್ತುಗಳ ಪೈಕಿ ಯಾವುದೇ ಅಂತಸ್ತಿನ ಕೆಲಸದ ನಿರ್ವಹಣೆಯನ್ನು ಪೂರ್ಣಗೊಳಿಸಿದ ತರುವಾಯ ಅಂಥ ಕೆಲಸವನ್ನು ಪೂರ್ಣಗೊಳಿಸಿರುವ ಬಗ್ಗೆ ಒಂದು ತಿಂಗಳೊಳಗೆ ಉಪವಿಧಿಗಳಲ್ಲಿ ನಿಯಮಿಸಿದ ನಮೂನೆಯಲ್ಲಿ ಮತ್ತು ನಿಯಮಿಸಿದ ರೀತಿಯಲ್ಲಿ ರುಜು ಮಾಡಿದ ಮತ್ತು ಅನುಮೋದಿಸಿದ ಪ್ರಮಾಣ ಪತ್ರದೊಂದಿಗೆ ಲಿಖಿತ ನೋಟಿಸನ್ನು ಆಯುಕ್ತರಿಗೆ ಅವರ ಕಚೇರಿಯಲ್ಲಿ ತಲುಪಿಸತಕ್ಕದ್ದು ಅಥವಾ ಕಳುಹಿಸತಕ್ಕದ್ದು ಅಥವಾ ತಲುಪಿಸುವಂತೆ ಅಥವಾ ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಕಟ್ಟಡದ ಅಂಥ ಅಂತಸ್ತನ್ನು ಪರಿಶೀಲಿಸುವುದಕ್ಕಾಗಿ ಆಯುಕ್ತರಿಗೆ ಎಲ್ಲಾ ಅವಶ್ಯ ಸೌಲಭ್ಯಗಳನ್ನು ನೀಡತಕ್ಕದ್ದು ಮತ್ತು ಆ ಕಟ್ಟಡದ ಅಂಥ ಅಂತಸ್ತನ್ನು ಅಧಿಭೋಗಿಸಲು ಅನುಮತಿಗಾಗಿ ಅರ್ಜಿಯನ್ನು ಸಲ್ಲಿಸಬಹುದು.][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಯಾರೇ ವ್ಯಕ್ತಿಯು,–

(ಎ) ಆಯುಕ್ತರಿಂದ ಅನುಮತಿಯನ್ನು ಪಡೆಯುವವರೆಗೆ; ಅಥವಾ

(ಬಿ) ಆಯುಕ್ತರು ಮುಕ್ತಾಯ ನೋಟೀಸನ್ನು ಸ್ವೀಕರಿಸಿದ ತರುವಾಯ [1][ಮೂವತ್ತು][1] ದಿನಗಳವರೆಗೆ ಸದರಿ ಅನುಮತಿಯನ್ನು ಕೊಡಲು ಅವರು ನಿರಾಕರಿಸಿರುವುದನ್ನು ತಿಳಿಸಲು ತಪ್ಪುವವರೆಗೆ

– ಅಂಥ ಯಾವುದೇ ಕಟ್ಟಡವನ್ನು [2][ಅಥವಾ ಕಟ್ಟಡದ ಭಾಗ][2] ವನ್ನು ಅಧಿಭೋಗಿಸತಕ್ಕದ್ದಲ್ಲ ಅಥವಾ ಅಧಿಭೋಗಿಸಲು ಅನುಮತಿಸತಕ್ಕದ್ದಲ್ಲ ಅಥವಾ ಯಾವುದೇ ಕಾಮಗಾರಿಯಿಂದಾದ ಕಟ್ಟಡವನ್ನು ಅಥವಾ ಅದರ ಭಾಗವನ್ನು ಬಳಸತಕ್ಕದ್ದಲ್ಲ ಅಥವಾ ಬಳಸಲು ಅನುಮತಿಸತಕ್ಕದ್ದಲ್ಲ.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.06.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**311. ಗುಡಿಸಲುಗಳಿಗೆ ಉಪಬಂಧಗಳು ಅನ್ವಯವಾಗದಿರುವುದು.–** 299 ರಿಂದ 310 ರವರೆಗಿನ ಪ್ರಕರಣಗಳಲ್ಲಿ **"ಕಟ್ಟಡ"** ಪದವು ಗುಡಿಸಲನ್ನು ಒಳಗೊಳ್ಳುವುದಿಲ್ಲ.

**312. ಬಾವಿಗಳಿಗೆ ಕೆಲವು ಪ್ರಕರಣಗಳ ಅನ್ವಯ.–** 299, 300, 306, 307, 308 ಮತ್ತು 309ನೇ ಪ್ರಕರಣಗಳ ಉಪಬಂಧಗಳು ಸಾಧ್ಯವಾದಷ್ಟು ಮಟ್ಟಿಗೆ ಬಾವಿಗಳಿಗೆ ಅನ್ವಯವಾಗತಕ್ಕದ್ದು.

**313. ಗುಡಿಸಲುಗಳನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಅರ್ಜಿ.–** (1) ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಇಚ್ಛಿಸುವ ಪ್ರತಿಯೊಬ್ಬ ವ್ಯಕ್ತಿಯು –

(ಎ) ಕಾಮಗಾರಿಯನ್ನು ನಿರ್ವಹಿಸಲು ಅನುಮತಿಗಾಗಿ ಲಿಖಿತದಲ್ಲಿ ಅರ್ಜಿಯನ್ನು; ಮತ್ತು

(ಬಿ) ಭೂಮಿಯ ನಿವೇಶನ ನಕ್ಷೆಯನ್ನು

– ಆಯುಕ್ತರಿಗೆ ಕಳುಹಿಸಿಕೊಡತಕ್ಕದ್ದು.

(2) ಅಂಥ ಪ್ರತಿಯೊಂದು ಅರ್ಜಿಯು ಮತ್ತು ನಕ್ಷೆಯು ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದ ವಿವರಗಳನ್ನು ಒಳಗೊಂಡಿರತಕ್ಕದ್ದು ಮತ್ತು ಅಂಥ ರೀತಿಯಲ್ಲಿ ಅದನ್ನು ತಯಾರಿಸತಕ್ಕದ್ದು.

**314. ಅನುಮತಿಯಿಲ್ಲದೆ ಕಾಮಗಾರಿಯನ್ನು ಪ್ರಾರಂಭಿಸುವುದಕ್ಕೆ ನಿಷೇಧ.–** 313ನೇ ಪ್ರಕರಣದ ಮೇರೆಗೆ ಆಯುಕ್ತರಿಗೆ ಅರ್ಜಿಯನ್ನು ಕಳುಹಿಸಿದಾಗ ಕಾಮಗಾರಿಯನ್ನು ನಿರ್ವಹಿಸಲು ಅವರು ಅನುಮತಿಯನ್ನು ನೀಡಿದ ಹೊರತು ಮತ್ತು ನೀಡುವವರೆಗೆ ಗುಡಿಸಲಿನ ನಿರ್ಮಾಣವನ್ನು ಅಥವಾ ಪುನರ್‌ನಿರ್ಮಾಣವನ್ನು ಪ್ರಾರಂಭಿಸತಕ್ಕದ್ದಲ್ಲ.

**315. ಕಾಮಗಾರಿಯನ್ನು ನಿರ್ವಹಿಸಲು ಆಯುಕ್ತರು ಯಾವ ಅವಧಿಯೊಳಗೆ ಅನುಮತಿಯನ್ನು ಕೊಡಬಹುದೋ ಅಥವಾ ಅನುಮತಿಯನ್ನು ನಿರಾಕರಿಸಬಹುದೋ ಆ ಅವಧಿ.–** ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಅನುಮತಿಗಾಗಿ 313ನೇ ಪ್ರಕರಣದ ಮೇರೆಗೆ ಕಳುಹಿಸಿದ ಯಾವುದೇ ಅರ್ಜಿಯನ್ನು ಅಥವಾ ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದ ಯಾವುದೇ ಮಾಹಿತಿಯನ್ನು ಅಥವಾ ನಕ್ಷೆಯನ್ನು ಅಥವಾ ಹೆಚ್ಚಿನ ಮಾಹಿತಿಯನ್ನು ಅಥವಾ ಹೊಸ ನಕ್ಷೆಯನ್ನು ಸ್ವೀಕರಿಸಿದ ತರುವಾಯ ಹದಿನಾಲ್ಕು ದಿನಗಳೊಳಗೆ ಆಯುಕ್ತರು, ಲಿಖಿತ ಆದೇಶದ ಮೂಲಕ ಅಂಥ ಅನುಮತಿಯನ್ನು ನೀಡಬಹುದು ಅಥವಾ 317ನೇ ಪ್ರಕರಣದಲ್ಲಿ ಹೇಳಿರುವ ಒಂದು ಅಥವಾ ಹೆಚ್ಚು ಕಾರಣಗಳ ಮೇಲೆ ಅನುಮತಿಯನ್ನು ನೀಡಲು ನಿರಾಕರಿಸಬಹುದು.

**316. ಅನುಮತಿಯನ್ನು ನೀಡಲು ಆಯುಕ್ತರು ವಿಳಂಬ ಮಾಡಿದರೆ, ಸ್ಥಾಯೀ ಸಮಿತಿಗೆ ಕೋರಿಕೆ ಮಾಡಿಕೊಳ್ಳುವುದು.–** (1) ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಆಯುಕ್ತರು 315ನೇ ಪ್ರಕರಣದಲ್ಲಿ ಹೇಳಲಾದ ಅವಧಿಯೊಳಗೆ ಅನುಮತಿಯನ್ನು ನೀಡದಿದ್ದರೆ ಅಥವಾ ಅನುಮತಿ ನೀಡಲು ನಿರಾಕರಿಸಿಲ್ಲದಿದ್ದರೆ, ಅರ್ಜಿದಾರನ ಲಿಖಿತ ಕೋರಿಕೆಯ ಮೇಲೆ ಅಂಥ ಅನುಮತಿಯನ್ನು ಕೊಡಬೇಕೇ ಅಥವಾ ಬೇಡವೇ ಎಂಬ ಬಗ್ಗೆ ಲಿಖಿತ ಅದೇಶದ ಮೂಲಕ ನಿರ್ಧರಿಸಲು ಸ್ಥಾಯೀ ಸಮಿತಿಯು ಬದ್ಧವಾಗಿರತಕ್ಕದ್ದು.

(2) ಅಂಥ ಲಿಖಿತ ಕೋರಿಕೆಯನ್ನು ಸ್ವೀಕರಿಸಿದಂದಿನಿಂದ ಮೂವತ್ತು ದಿನಗಳ ಒಳಗಾಗಿ, ಅಂಥ ಅನುಮತಿಯನ್ನು ಕೊಡಬೇಕೇ ಅಥವಾ ಬೇಡವೇ ಎಂಬ ಬಗ್ಗೆ ಸ್ಥಾಯೀ ಸಮಿತಿಯು ನಿರ್ಧರಿಸದಿದ್ದರೆ, ಅಂಥ ಅನುಮತಿಯನ್ನು ಕೊಡಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಅರ್ಜಿದಾರನು ಅಂಥ ಕಾಮಗಾರಿಯನ್ನು ನಿರ್ವಹಿಸಲು ಮುಂದುವರಿಯಬಹುದು; ಆದರೆ ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮಗಳನ್ನು ಅಥವಾ ಉಪವಿಧಿಗಳನ್ನು ಉಲ್ಲಂಘಿಸುವ ಹಾಗೆ ಅಲ್ಲ.

**317. ಯಾವ ಕಾರಣಗಳ ಮೇಲೆ ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಅನುಮತಿಯನ್ನು ನಿರಾಕರಿಸಬಹುದೋ ಆ ಕಾರಣಗಳು.–** (1) ಯಾವ ಕಾರಣಗಳ ಮೇಲೆ ಮಾತ್ರವೇ ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು, ಅನುಮತಿಯನ್ನು ನಿರಾಕರಿಸಬಹುದೋ ಆ ಕಾರಣಗಳು ಈ ಕೆಳಕಂಡಂತಿವೆ, ಎಂದರೆ,–

(ಎ) ಆ ಕಾಮಗಾರಿಯು ಅಥವಾ ಆ ಕಾಮಗಾರಿಗಾಗಿ ನಿವೇಶನದ ಬಳಕೆಯು ಯಾವುದೇ ಕಾನೂನಿನ ಯಾವುದೇ ನಿರ್ದಿಷ್ಟ ಉಪಬಂಧವನ್ನು ಅಥವಾ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಯಾವುದೇ ನಿರ್ದಿಷ್ಟಪಡಿಸಿದ ನಿಯಮವನ್ನು, ಉಪವಿಧಿಯನ್ನು, ಆದೇಶವನ್ನು ಅಥವಾ ಘೋಷಣೆಯನ್ನು ಉಲ್ಲಂಘಿಸುವುದು;

(ಬಿ) ಅನುಮತಿಗಾಗಿ ಸಲ್ಲಿಸಿದ ಅರ್ಜಿಯು, ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಅಗತ್ಯಪಡಿಸಿದ ವಿವರಗಳನ್ನು ಒಳಗೊಂಡಿರದಿರುವುದು ಅಥವಾ ಅಂಥ ರೀತಿಯಲ್ಲಿ ಅದನ್ನು ತಯಾರಿಸಿಲ್ಲದಿರುವುದು;

(ಸಿ) ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಆಯುಕ್ತರು ಅಗತ್ಯಪಡಿಸಿದ ಯಾವುದೇ ಮಾಹಿತಿಯನ್ನು ಅಥವಾ ನಕ್ಷೆಯನ್ನು ಯಥೋಚಿತವಾಗಿ ಒದಗಿಸಿಲ್ಲದಿರುವುದು;

(ಡಿ) 280ನೇ ಪ್ರಕರಣವು ಅಗತ್ಯಪಡಿಸಿದಂತೆ, ಬೀದಿಗಳನ್ನು ಮತ್ತು ರಸ್ತೆಗಳನ್ನು ನಿರ್ಮಿಸದೇ ಇರುವುದು;

(ಇ) ಯಾವ ಭೂಮಿಯ ಮೇಲೆ ಗುಡಿಸಲನ್ನು ನಿರ್ಮಿಸಬೇಕಾಗಿದೆಯೋ ಆ ಭೂಮಿಯಲ್ಲಿ ಅಥವಾ ಅಂಥ ಭೂಮಿಯು ಯಾವ ಬೀದಿ ಅಥವಾ ಬೀದಿಗಳಿಗೆ ಹೊಂದಿಕೊಂಡಿದೆಯೋ ಆ ಬೀದಿಯಲ್ಲಿ ಅಥವಾ ಬೀದಿಗಳಲ್ಲಿ ಸಮರ್ಪಕವಾಗಿ ಚರಂಡಿ ವ್ಯವಸ್ಥೆಯನ್ನು, ಮಟ್ಟಗೊಳಿಸುವುದನ್ನು ಅಥವಾ ದೀಪದ ವ್ಯವಸ್ಥೆಯನ್ನು ಮಾಡಿಲ್ಲದಿರುವುದು;

(ಎಫ್) ಉದ್ದೇಶಿತ ಗುಡಿಸಲು ಸರ್ಕಾರದ ಅಥವಾ ನಗರಪಾಲಿಕೆಯ ಭೂಮಿಯನ್ನು ಒತ್ತುವರಿ ಮಾಡಿರುವುದು,

(2) ಗುಡಿಸಲನ್ನು ನಿರ್ಮಿಸಲು ಅಥವಾ ಪುನರ್ ನಿರ್ಮಿಸಲು ಆಯುಕ್ತರು ಅಥವಾ ಸ್ಥಾಯೀ ಸಮಿತಿಯು ಅನುಮತಿ ಕೊಡುವುದನ್ನು ನಿರಾಕರಿಸಿದಾಗಲೆಲ್ಲಾ, ಅಂಥ ನಿರಾಕರಣೆಗೆ ಕಾರಣವನ್ನು ಆದೇಶದಲ್ಲಿ ನಿರ್ದಿಷ್ಟವಾಗಿ ತಿಳಿಸತಕ್ಕದ್ದು.

**318. ಆರು ತಿಂಗಳೊಳಗೆ ನಿರ್ಮಾಣಕಾರ್ಯ ಕೈಗೊಳ್ಳದಿದ್ದರೆ ಅನುಮತಿಯು ರದ್ದಾಗುವುದು.–** ನಿರ್ಮಾಣ ಕಾಮಗಾರಿಯನ್ನು ನಿರ್ವಹಿಸಲು ಯಾವ ದಿನಾಂಕದಂದು ಅನುಮತಿಯನ್ನು ಕೊಡಲಾಗಿತ್ತೋ ಆ ದಿನಾಂಕದ ತರುವಾಯ ಆರು ತಿಂಗಳೊಳಗೆ ಯಾವುದೇ ಗುಡಿಸಲಿನ ನಿರ್ಮಾಣ ಕಾರ್ಯವನ್ನು ಅಥವಾ ಪುನರ್‌ನಿರ್ಮಾಣ ಕಾರ್ಯವನ್ನು ಪ್ರಾರಂಭಿಸದಿದ್ದರೆ ಆ ಕಾರ್ಯವನ್ನು ಈ ಅಧ್ಯಾಯದ ಮೇರೆಗೆ ಹೊಸದಾಗಿ ಅರ್ಜಿಯನ್ನು ಸಲ್ಲಿಸುವವರೆಗೆ ಮತ್ತು ಹೊಸದಾಗಿ ಅನುಮತಿಯನ್ನು ನೀಡುವವರೆಗೆ ಪ್ರಾರಂಭಿಸತಕ್ಕದ್ದಲ್ಲ.

**319. ಹೊರಗೋಡೆಗಳನ್ನು ಸುಸ್ಥಿತಿಯಲ್ಲಿಡುವುದು.–** ಬೀದಿಗೆ ಹೊಂದಿಕೊಂಡಿರುವ ಯಾವುದೇ ಕಟ್ಟಡದ ಮಾಲೀಕನು ಅಥವಾ ಅಧಿಭೋಗದಾರನು ಅದರ ಹೊರಭಾಗವನ್ನು ಆಯುಕ್ತರಿಗೆ ಸಮಾಧಾನವಾಗುವಂತೆ ಗಾರೆ ಅಥವಾ ಇತರ ಸಾಮಗ್ರಿಯನ್ನು ಬಳಸಿ ಸುಸ್ಥಿತಿಯಲ್ಲಿಡತಕ್ಕದ್ದು.

**320. ಬದಲಾವಣೆಗಳಿಗೆ ಮತ್ತು ಸೇರ್ಪಡೆಗಳಿಗೆ ಉಪಬಂಧಗಳ ಅನ್ವಯ.–** (1) ಕಟ್ಟಡಗಳ ಅಥವಾ ಗುಡಿಸಲುಗಳ ನಿರ್ಮಾಣಕ್ಕೆ ಅಥವಾ ಪುನರ್ ನಿರ್ಮಾಣಕ್ಕೆ ಸಂಬಂಧಪಟ್ಟ ಈ ಅಧ್ಯಾಯದ ಉಪಬಂಧಗಳು ಮತ್ತು ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮಗಳು ಅಥವಾ ಉಪವಿಧಿಗಳು, ಅವುಗಳಿಗೆ ಮಾಡಿದ ಯಾವುದೇ ಬದಲಾವಣೆಗೆ ಅಥವಾ ಅವುಗಳಿಗೆ ಮಾಡಿದ ಸೇರ್ಪಡೆಗೂ ಸಹ ಅನ್ವಯವಾಗತಕ್ಕದ್ದು:

ಪರಂತು, ಯಾವ ಅವಶ್ಯಕ ದುರಸ್ತಿ ಕಾಮಗಾರಿಯಿಂದ ಕಟ್ಟಡದಲ್ಲಿನ ಅಥವಾ ಗುಡಿಸಲಿನಲ್ಲಿನ ಅಥವಾ ಯಾವುದೇ ಕೊಠಡಿಯ ಸ್ಥಾನವು ಅಥವಾ ಉದ್ದಗಲವು ವ್ಯತ್ಯಾಸವಾಗುವುದಿಲ್ಲವೋ ಆ ಕಾಮಗಾರಿಯನ್ನು ಈ ಪ್ರಕರಣದ ಉದ್ದೇಶಕ್ಕಾಗಿ ಬದಲಾವಣೆ ಅಥವಾ ಸೇರ್ಪಡೆ ಎಂದು ಭಾವಿಸತಕ್ಕದ್ದಲ್ಲ.

(2) ಯಾವುದೇ ಸೇರ್ಪಡೆಯು ಅಥವಾ ಬದಲಾವಣೆಯು ಕಟ್ಟಡದ ಅಥವಾ ಗುಡಿಸಲಿನ ಅಥವಾ ಯಾವುದೇ ಕೊಠಡಿಯ ಸ್ಥಾನವನ್ನು ಅಥವಾ ಉದ್ದಗಲವನ್ನು ವ್ಯತ್ಯಾಸ ಮಾಡದಂಥ ಅವಶ್ಯಕ ದುರಸ್ತಿಯೇ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಅಂಥ ಪ್ರಶ್ನೆಯನ್ನು ಸ್ಥಾಯೀ ಸಮಿತಿಗೆ ಒಪ್ಪಿಸತಕ್ಕದ್ದು ಅದರ ತೀರ್ಮಾನವು ಅಂತಿಮವಾದುದು ಆಗಿರತಕ್ಕದ್ದು.

**321. ಕಾನೂನುಬಾಹಿರವಾಗಿ ಪ್ರಾರಂಭಿಸಿದ, ನಿರ್ವಹಿಸುತ್ತಿರುವ ಅಥವಾ ಪೂರ್ಣಗೊಳಿಸಿದ ಕಟ್ಟಡಗಳ ಅಥವಾ ಬಾವಿಯ ಕಾಮಗಾರಿಯನ್ನು ಕೆಡವಿಹಾಕುವುದು ಅಥವಾ ಬದಲಾಯಿಸುವುದು.–** (1) ಆಯುಕ್ತರಿಗೆ,–

(i) ಯಾವುದೇ ಕಟ್ಟಡದ ಅಥವಾ ಗುಡಿಸಲಿನ ಅಥವಾ ಬಾವಿಯ ನಿರ್ಮಾಣವನ್ನು ಅಥವಾ ಪುನರ್ ನಿರ್ಮಾಣವನ್ನು,–

(ಎ) ತನ್ನ ಅನುಮತಿಯನ್ನು ಪಡೆಯದೆ ಅಥವಾ ಸ್ಥಾಯೀ ಸಮಿತಿಗೆ, ಅಪೀಲನ್ನು ಅಥವಾ ಕೋರಿಕೆಯನ್ನು ಮಾಡಿಕೊಂಡಿದ್ದರೆ, ಸ್ಥಾಯೀ ಸಮಿತಿಯು ಮಾಡಿದ ಯಾವುದೇ ಆದೇಶವನ್ನು ಉಲ್ಲಂಘಿಸಿ ಪ್ರಾರಂಭಿಸಲಾಗಿದೆ ಎಂದು; ಅಥವಾ

(ಬಿ) ಯಾವ ನಕ್ಷೆಗಳ ಅಥವಾ ವಿವರಗಳ ಮೇಲೆ ಅಂಥ ಅನುಮತಿಯು ಅಥವಾ ಆದೇಶವು ಆಧಾರಿತವಾಗಿದೆಯೋ ಅಂಥ ನಕ್ಷೆಗಳಿಗೆ ಅಥವಾ ವಿವರಗಳಿಗೆ ಅನುಸಾರವಾಗಿ ಅಲ್ಲದೆ, ಅನ್ಯಥಾ ನಿರ್ವಹಿಸಲಾಗುತ್ತಿದೆ ಎಂದು ಅಥವಾ ಪೂರ್ಣಗೊಳಿಸಲಾಗಿದೆ ಎಂದು; ಅಥವಾ

(ಸಿ) ಈ ಅಧಿನಿಯಮದ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ ಯಾವುದೇ ಉಪಬಂಧಗಳನ್ನು ಅಥವಾ ಈ ಅಧಿನಿಯಮದ ಅಥವಾ ಅಂಥ ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಕಾನೂನು ಸಮ್ಮತವಾಗಿ ನೀಡಿದ ಯಾವುದೇ ನಿರ್ದೇಶನವನ್ನು ಅಥವಾ ಕೋರಿಕೆಯನ್ನು ಉಲ್ಲಂಘಿಸಿ ನಿರ್ವಹಿಸಲಾಗುತ್ತಿದೆ ಎಂದು ಅಥವಾ ಪೂರ್ಣಗೊಳಿಸಲಾಗಿದೆ ಎಂದು; ಅಥವಾ

(ii) 308ನೇ ಪ್ರಕರಣದ ಮೇರೆಗೆ ಹೊರಡಿಸಿದ ಯಾವುದೇ ನೋಟೀಸಿನ ಮೂಲಕ ಅಗತ್ಯಪಡಿಸಿದ ಯಾವುದೇ ಬದಲಾವಣೆಯನ್ನು ಸೂಕ್ತವಾಗಿ ಮಾಡಿಲ್ಲವೆಂದು; ಅಥವಾ

(iii) ಯಾವುದೇ ಕಟ್ಟಡಕ್ಕೆ ಅಥವಾ ಗುಡಿಸಲಿಗೆ ಯಾವುದೇ ಬದಲಾವಣೆಯನ್ನು ಅಥವಾ ಸೇರ್ಪಡೆಯನ್ನು ಅಥವಾ ಯಾವುದೇ ಉದ್ದೇಶಕ್ಕಾಗಿ ಯಾವುದೇ ಕಟ್ಟಡದ ಅಥವಾ ಗುಡಿಸಲಿನ ಒಳಗಡೆ ಅಥವಾ ಅದರ ಮೇಲೆ ಯಾವುದೇ ಇತರ ಕಾಮಗಾರಿಯನ್ನು 320ನೇ ಪ್ರಕರಣವನ್ನು ಉಲ್ಲಂಘಿಸಿ ಪ್ರಾರಂಭಿಸಲಾಗಿದೆ ಎಂದು ಅಥವಾ ನಿರ್ವಹಿಸಲಾಗುತ್ತಿದೆ ಎಂದು ಅಥವಾ ಪೂರ್ಣಗೊಳಿಸಲಾಗಿದೆ ಎಂದು ಮನವರಿಕೆಯಾದರೆ ಅವರು

– ಮಾಡಿದ ಕಾಮಗಾರಿಯನ್ನು ಅಥವಾ ಕಾನೂನು ಬಾಹಿರವಾಗಿ ಮಾಡಲಾಗಿದೆ ಎಂದು ಆಯುಕ್ತರು ಅಭಿಪ್ರಾಯಪಡುವಷ್ಟನ್ನು ಕೆಡವಿಹಾಕುವಂತೆ ಅಥವಾ ಮೇಲೆ ಹೇಳಿದಂತೆ, ಕಾಮಗಾರಿಯನ್ನು ಈ ಅಧಿನಿಯಮ, ನಿಯಮಗಳು, ಉಪವಿಧಿಗಳು, ನಿರ್ದೇಶನಗಳು ಅಥವಾ ಕೋರಿಕೆಗಳಿಗೆ ಅಥವಾ ಅಂಥ ಅನುಮತಿಯು ಅಥವಾ ಆದೇಶಗಳು ಯಾವ ನಕ್ಷೆಗಳ ಅಥವಾ ವಿವರಗಳ ಮೇಲೆ ಆಧಾರಿತವಾಗಿವೆಯೋ ಅಂಥ ನಕ್ಷೆಗಳಿಗೆ ಅಥವಾ ವಿವರಗಳಿಗೆ ಅನುಗುಣವಾಗಿ ಇರುವಂತೆ ಮಾಡಲು ಯಾವ ಬದಲಾವಣೆಗಳು ಅವಶ್ಯಕವೆಂದು ಆಯುಕ್ತರು ಅಭಿಪ್ರಾಯಪಡುವರೋ ಅಂಥ ಬದಲಾವಣೆಯನ್ನು ಮಾಡುವಂತೆ ಅವರು, ಕಟ್ಟಡದ ಮಾಲೀಕನನ್ನು ಅಗತ್ಯಪಡಿಸಿರುವ ತಾತ್ಕಾಲಿಕ ಆದೇಶವನ್ನು ಹೊರಡಿಸಬಹುದು ಮತ್ತು ಆದೇಶವನ್ನು ಪಾಲಿಸುವವರೆಗೆ ಮಾಲೀಕ ಅಥವಾ ನಿರ್ಮಾಣಕಾರನಿಗೆ ಕಟ್ಟಡದ ಅಥವಾ ಬಾವಿಯ ಅಥವಾ ಗುಡಿಸಲಿನ ಕಾರ್ಯವನ್ನು ಮುಂದುವರೆಸತಕ್ಕದ್ದಲ್ಲವೆಂದು ಸಹ ನಿರ್ದೇಶಿಸಬಹುದು.

(2) ಆಯುಕ್ತರು, (1)ನೇ ಉಪಪ್ರಕರಣದ ಮೇರೆಗೆ ಮಾಡಿದ ತಾತ್ಕಾಲಿಕ ಆದೇಶದ ಪ್ರತಿಯನ್ನು ಕಟ್ಟಡದ ಅಥವಾ ಗುಡಿಸಲಿನ ಅಥವಾ ಬಾವಿಯ ಮಾಲೀಕನಿಗೆ ಅಥವಾ ನಿರ್ಮಾಣಕಾರನಿಗೆ, ಆ ಆದೇಶವನ್ನು ಏಕೆ ಸ್ಥಿರೀಕರಿಸಬಾರದು ಎಂಬುದಕ್ಕೆ ಅಂಥ ನೋಟೀಸಿನಲ್ಲಿ ತಿಳಿಸಿದ ಸಮಂಜಸ ಕಾಲದೊಳಗೆ ಕಾರಣ ತೋರಿಸುವಂತೆ ಅವನನ್ನು ಅಗತ್ಯಪಡಿಸುವ ನೋಟೀಸಿನೊಂದಿಗೆ ಜಾರಿ ಮಾಡತಕ್ಕದ್ದು.

(3) ಮಾಲೀಕನು ಅಥವಾ ನಿರ್ಮಾಣಕಾರನು ಆಯುಕ್ತರಿಗೆ ಮನವರಿಕೆಯಾಗುವಂತೆ ಕಾರಣ ತೋರಿಸಲು ತಪ್ಪಿದರೆ, ಆಯುಕ್ತರು ತಾವು ಸೂಕ್ತವೆಂದು ಯೋಚಿಸಬಹುದಾದ ಯಾವುದೇ ಮಾರ್ಪಾಟಿನೊಂದಿಗೆ ಆದೇಶವನ್ನು ಸ್ಥಿರೀಕರಿಸಬಹುದು ಮತ್ತು ಅಂಥ ಆದೇಶಕ್ಕೆ ಮಾಲೀಕನು ಬದ್ಧವಾಗಿರತಕ್ಕದ್ದು.

(4) 300ನೇ ಅಥವಾ 314ನೇ ಪ್ರಕರಣದ ಉಪಬಂಧಗಳಿಗೆ ತದ್ವಿರುದ್ಧವಾಗಿ ಯಾವುದೇ ಕಟ್ಟಡದ ಅಥವಾ ಗುಡಿಸಲಿನ ನಿರ್ಮಾಣವನ್ನು ಅಥವಾ ಪುನರ್‌ನಿರ್ಮಾಣವನ್ನು ಪ್ರಾರಂಭಿಸಿದ್ದರೆ ಮತ್ತು ಕೂಡಲೇ ಕ್ರಮ ತೆಗೆದುಕೊಳ್ಳಬೇಕೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಆಗ, ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, (2)ನೇ ಉಪಪ್ರಕರಣದ ಮೇರೆಗೆ, ಕೊಡಬೇಕಾದ ನೋಟೀಸು ಇಪ್ಪತ್ತನಾಲ್ಕು ಗಂಟೆಗಳಿಗಿಂತ ಕಡಿಮೆ ಅವಧಿಯದಾಗಿರತಕ್ಕದ್ದಲ್ಲ ಮತ್ತು ಯಾವ ಕಟ್ಟಡಕ್ಕೆ ಅಥವಾ ಗುಡಿಸಲಿಗೆ ಆ ನೋಟೀಸು ಸಂಬಂಧಪಡುವುದೋ ಆ ಕಟ್ಟಡದ ಅಥವಾ ಗುಡಿಸಲಿನ ಎದ್ದು ಕಾಣುವ ಯಾವುದೇ ಭಾಗದಲ್ಲಿ ಅದನ್ನು ಅಂಟಿಸಿದ್ದರೆ ಮತ್ತು ಡಂಗುರದ ಮೂಲಕ ಅಂಥ ಕಟ್ಟಡದ ಅಥವಾ ಗುಡಿಸಲಿನ ಹತ್ತಿರ ಸಾರುವ ಮೂಲಕ ಪ್ರಕಟಿಸಿದರೆ ಆ ನೋಟಿಸನ್ನು

ಕ್ರಮಬದ್ಧವಾಗಿ ಜಾರಿ ಮಾಡಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಹಾಗೆ ಅಂಟಿಸಿದ ಮತ್ತು ಹಾಗೆ ಪ್ರಕಟಣೆ ಮಾಡಿದ ತರುವಾಯ ಸಂಬಂಧಪಟ್ಟ ಎಲ್ಲ ವ್ಯಕ್ತಿಗಳಿಗೆ ಅದರಲ್ಲಿ ನಿರೂಪಿಸಿದ ವಿಷಯಗಳನ್ನು ಕ್ರಮಬದ್ಧವಾಗಿ ತಿಳಿಸಲಾಗಿದೆಯೆಂದು ಭಾವಿಸತಕ್ಕದ್ದು.

[1][**321ಎ. ಕಾನೂನುಬಾಹಿರವಾದ ಕೆಲವು ಕಟ್ಟಡಗಳನ್ನು ಸಕ್ರಮಗೊಳಿಸುವುದು.**– (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, 300ನೇ ಪ್ರಕರಣವನ್ನು, 321ನೇ ಪ್ರಕರಣವನ್ನು ಮತ್ತು 423ನೇ ಪ್ರಕರಣದ ಮೇರೆಗೆ ರಚಿಸಿದ ಯಾವುವೇ ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ಯಾವುದೇ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದ್ದಲ್ಲಿ, ಆಯುಕ್ತರು ಕೆಳಕಂಡ ನಿರ್ಬಂಧಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಹಾಗೂ ಇತರ ಕೆಲವು ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ ಮೊದಲು ನಿರ್ಮಿಸಿದ ಕಟ್ಟಡವನ್ನು ಸಕ್ರಮಗೊಳಿಸಬಹುದು.

(ಎ) ಕಟ್ಟಡವನ್ನು ಪಕ್ಕದ ಸ್ವತ್ತಿಗೆ ಹೊಂದಿಕೊಂಡಿರುವಂತೆ ನಿರ್ಮಿಸಿರುವಲ್ಲಿ ಅಥವಾ ಹಿಂದಕ್ಕೆ ಕಟ್ಟಲು ಕಲ್ಪಿಸಿರುವ ಜಾಗವು ಉಪವಿಧಿಗಳಲ್ಲಿ ನಿಯಮಿಸಲಾದ ಮಿತಿಗಳಿಗಿಂತ ಕಡಿಮೆ ಇದ್ದಲ್ಲಿ, ನಿವಾಸೇತರ ಕಟ್ಟಡಗಳ ಸಂದರ್ಭದಲ್ಲಿ ಶೇಕಡಾ ಇಪ್ಪತ್ತೈದರವರೆಗಿನ ಮತ್ತು ನಿವಾಸದ ಕಟ್ಟಡಗಳ ಸಂದರ್ಭದಲ್ಲಿ ಶೇಕಡಾ ಐವತ್ತರವರೆಗಿನ ಉಲ್ಲಂಘನೆಯನ್ನು ಸಕ್ರಮಗೊಳಿಸತಕ್ಕದ್ದು.

(ಬಿ) ನೆಲ ಮಹಡಿಯಲ್ಲಿ ಮಾಡಿದ ಯಾವ ಅಭಿವೃದ್ಧಿಯನ್ನೂ ಅಥವಾ ಉಪವಿಧಿಯನ್ನು ಉಲ್ಲಂಘಿಸಿ ಮಾಡಿದ ಯಾವ ಬಳಕೆಯನ್ನೂ ಸಕ್ರಮಗೊಳಿಸತಕ್ಕದ್ದಲ್ಲ.

(ಸಿ) ಕಟ್ಟಡದ ನಿರ್ಮಾಣವು ಅದು ಯಾವ ನಿರ್ದಿಷ್ಟ ರಸ್ತೆಯ ಮೇಲಿರುವ ನಿರ್ದಿಷ್ಟ ಕಟ್ಟಡ ರೇಖೆಯನ್ನು ಉಲ್ಲಂಘಿಸಿದ್ದರೆ ಅಂಥ ಕಟ್ಟಡದ ಮಾಲೀಕರು, ಕಟ್ಟಡ ರೇಖೆಯ ಹಾಗೂ ರಸ್ತೆಯ ಅಥವಾ ಪಾದಚಾರಿ ರಸ್ತೆಯ ಅಥವಾ ಅಂಚಿನ ನಡುವಿನ ಸ್ಥಳವನ್ನು, ಆ ರಸ್ತೆಯನ್ನು ಅಗಲ ಮಾಡುವ ಉದ್ದೇಶಕ್ಕಾಗಿ ಅವಶ್ಯಕವಾದಾಗ, ಉಚಿತವಾಗಿ ಬಿಟ್ಟುಕೊಡುವುದಾಗಿ ಮುಚ್ಚಳಿಕೆಯನ್ನು ಬರೆದುಕೊಟ್ಟ ಹೊರತು ಆ ಕಟ್ಟಡದ ನಿರ್ಮಾಣವನ್ನು ಸಕ್ರಮಗೊಳಿಸತಕ್ಕದ್ದಲ್ಲ.

(ಡಿ) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ 76ಎಫ್ಎಫ್ ಪ್ರಕರಣದ (2) ರಿಂದ (14)ರ ವರೆಗಿನ ಉಪಪ್ರಕರಣದ ಉಪಬಂಧಗಳು, ಯಥೋಚಿತ ಬದಲಾವಣೆಗಳೊಂದಿಗೆ, ಈ ಪ್ರಕರಣದ ಮೇರೆಗೆ ಕಟ್ಟಡವನ್ನು ಸಕ್ರಮಗೊಳಿಸುವುದಕ್ಕೆ ಅನ್ವಯವಾಗತಕ್ಕದ್ದು ಮತ್ತು ಸಕ್ರಮಗೊಳಿಸುವುದಕ್ಕಾಗಿ ಅರ್ಜಿಯನ್ನು ಆಯುಕ್ತರಿಗೆ ಸಲ್ಲಿಸತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಯಾವುದೇ ಕಟ್ಟಡ ನಿರ್ಮಾಣವನ್ನು ಸಕ್ರಮಗೊಳಿಸುವುದು, ನಿಯಮಿಸಲಾದ ಮೊಬಲಗನ್ನು ಸಂದಾಯ ಮಾಡುವುದಕ್ಕೆ ಒಳಪಟ್ಟಿರತಕ್ಕದ್ದು, ಅಂಥ ನಿಯಮಿಸಲಾದ ಮೊಬಲಗು ಕಟ್ಟಡ ನಿರ್ಮಾಣ ಉಪವಿಧಿಗಳ ಬೇರೆ ಬೇರೆ ಬಗೆಯ ಉಲ್ಲಂಘನೆಗಳಿಗೆ ಬೇರೆ ಬೇರೆಯಾಗಿರತಕ್ಕದ್ದು:

ಪರಂತು, ಹಾಗೆ ನಿಯಮಿಸಿದ ಮೊಬಲಗು,–

(i) ಮೇಲೆ ಹೇಳಿದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡದ ಭಾಗದ, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಿದ, ಮಾರುಕಟ್ಟೆ ಮೌಲ್ಯವು ಹಿಂದಕ್ಕೆ ಕಟ್ಟಲು ಕಲ್ಪಿಸಿರುವ ನಿಬಂಧನೆಗಳನ್ನು ಅಂಥ ಉಲ್ಲಂಘನೆಯ ಅನುಮತಿಸಬಹುದಾದ ನೆಲ ವಿಸ್ತೀರ್ಣದ ಪ್ರಮಾಣವು ಶೇಕಡಾ ಇಪ್ಪತ್ತೈದನ್ನು ಮೀರದಿದ್ದರೆ ಮಾರುಕಟ್ಟೆ ಮೌಲ್ಯವು ಶೇಕಡಾ ಹತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ.

(ii) ಮೇಲೆ ಹೇಳಿದ ಉಪಬಂಧಗಳನ್ನು ಉಲ್ಲಂಘಿಸಿ, ನಿರ್ಮಿಸಿದ ಕಟ್ಟಡದ ಭಾಗದ, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಿದ ಮಾರುಕಟ್ಟೆ ಮೌಲ್ಯವು ಹಿಂದಕ್ಕೆ ಕಟ್ಟಲು ಕಲ್ಪಿಸಿರುವ ನಿಬಂಧನೆಗಳ ಅಂಥ ಉಲ್ಲಂಘನೆಯ ಅನುಮತಿಸಬಹುದಾದ ನೆಲ ವಿಸ್ತೀರ್ಣದ ಪ್ರಮಾಣವು ಶೇಕಡಾ ಇಪ್ಪತ್ತೈದನ್ನು ಮೀರಿದ್ದು ಆದರೆ ಶೇಕಡಾ ಐವತ್ತನ್ನು ಮೀರದಿದ್ದರೆ, ಮಾರುಕಟ್ಟೆ ಮೌಲ್ಯವು ಶೇಕಡಾ ಇಪ್ಪತ್ತೈದಕ್ಕಿಂತ ಕಡಿಮೆ ಇರತಕ್ಕದ್ದಲ್ಲ:

ಮತ್ತೂ ಪರಂತು, ಮೇಲೆ ಹೇಳಿದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡದ ಭಾಗವನ್ನು ನಿವಾಸೇತರ ಉದ್ದೇಶಕ್ಕಾಗಿ ಬಳಸುತ್ತಿದ್ದರೆ ಅಥವಾ ಅದಕ್ಕೆಂದು ಉದ್ದೇಶಿಸಿದ್ದರೆ ಮತ್ತು ಅಂಥ ಭಾಗವನ್ನು ಸಕ್ರಮಗೊಳಿಸಲು ಸಂದಾಯವಾಗತಕ್ಕ ಮೊಬಲಗು,–

(ಎ) ಮೇಲೆ ಹೇಳಿದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡದ ಭಾಗದ, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಿದ ಮಾರುಕಟ್ಟೆ ಮೌಲ್ಯವು ಹಿಂದಕ್ಕೆ ಕಟ್ಟಲು ಕಲ್ಪಿಸಿರುವ ನಿಬಂಧನೆಗಳ ಅಂಥ ಉಲ್ಲಂಘನೆಯು ಮತ್ತು ಅನುಮತಿಸಬಹುದಾದ ನೆಲ ವಿಸ್ತೀರ್ಣದ ಪ್ರಮಾಣವು ಶೇಕಡಾ ಹನ್ನೆರಡುವರೆಯನ್ನು ಮೀರದಿದ್ದರೆ, ಶೇಕಡಾ ಇಪ್ಪತ್ತೈದರಷ್ಟು ಆಗಿರತಕ್ಕದ್ದು.

(ಬಿ) ಮೇಲೆ ಹೇಳಿದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡದ ಭಾಗದ, ಕರ್ನಾಟಕ ಸ್ಟಾಂಪ್ ಅಧಿನಿಯಮ, 1957ರ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಿದ ಮಾರುಕಟ್ಟೆ ಮೌಲ್ಯವು, ಹಿಂದಕ್ಕೆ ಕಟ್ಟಲು ಕಲ್ಪಿಸಿರುವ ನಿಬಂಧನೆಗಳ ಅಂಥ ಉಲ್ಲಂಘನೆಯು ಮತ್ತು ಅನುಮತಿಸಬಹುದಾದ ನೆಲ ವಿಸ್ತೀರ್ಣದ ಪ್ರಮಾಣವು ಶೇಕಡಾ ಹನ್ನೆರಡುವರೆಯನ್ನು ಮೀರಿದ್ದು, ಆದರೆ ಶೇಕಡಾ ಇಪ್ಪತ್ತೈದನ್ನು ಮೀರದಿದ್ದರೆ, ಶೇಕಡಾ ನಲವತ್ತು ಆಗಿರತಕ್ಕದ್ದು.

(3) ಯಾರೇ ವ್ಯಕ್ತಿಯು, ಅದೇ ಉಲ್ಲಂಘನೆಗಳಿಗಾಗಿ ಈ ಅಧಿನಿಯಮದ ಮೇರೆಗೆ, ಸಕ್ರಮೀಕರಣ ಫೀಜನ್ನು ಅವನು ಸಂದಾಯ ಮಾಡಿದರೆ, ಯಾವುದೇ ಇತರೆ ಕಾನೂನಿನ ಮೇರೆಗೆ ಸಕ್ರಮೀಕರಣಕ್ಕಾಗಿ ದಂಡವನ್ನು ಅಥವಾ ಫೀಜನ್ನು ಸಂದಾಯ ಮಾಡುವುದಕ್ಕೆ ಗುರಿಯಾಗತಕ್ಕದ್ದಲ್ಲ.

(4) ಉಪ–ಪ್ರಕರಣ (1)ರ ಮೇರೆಗೆ ಮಾಡಿದ ಎಲ್ಲಾ ಸಂದಾಯಗಳನ್ನು ಸಂಬಂಧಪಟ್ಟ ಸ್ಥಳೀಯ/ಯೋಜನಾ ಪ್ರಾಧಿಕಾರದಲ್ಲಿ ಇಟ್ಟಿರುವ, ನಗರ ಪ್ರದೇಶ ಮೂಲ ಸೌಲಭ್ಯ ಅಭಿವೃದ್ಧಿ ನಿಧಿ ಎಂದು ಕರೆಯಲಾಗುವ ಪ್ರತ್ಯೇಕ ನಿಧಿಗೆ ಜಮೆ ಮಾಡತಕ್ಕದ್ದು ಹಾಗೂ ಮೂಲ ಸೌಲಭ್ಯ ಅಭಿವೃದ್ಧಿ, ನಾಗರಿಕ ಸೌಲಭ್ಯಗಳು, ವಿದ್ಯುತ್ ದೀಪಗಳು, ಉದ್ಯಾನವನಗಳು, ಕುಡಿಯುವ ನೀರಿನ ಸೌಲಭ್ಯ, ಚರಂಡಿ ವ್ಯವಸ್ಥೆ ಮತ್ತು ಇತರೆ ಯಾವುದೇ ಮೂಲ ಸೌಲಭ್ಯಗಳನ್ನು ಒದಗಿಸಲು, ಅದನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಬಳಸಿಕೊಳ್ಳತಕ್ಕದ್ದು.

**321ಬಿ. ಬೇರೆ ರೀತಿಯಲ್ಲಿ ಅನಧಿಕೃತವಾಗಿ ಕಟ್ಟುವುದನ್ನು ಅಥವಾ ಅನಧಿಕೃತ ನಿರ್ಮಾಣಗಳನ್ನು ತಡೆಯಲು ವಿಫಲನಾದ ಆ ಪ್ರದೇಶದ ಅಧಿಕಾರ ವ್ಯಾಪ್ತಿಯುಳ್ಳ ಅಧಿಕಾರಿಗೆ ದಂಡ.–** ತನ್ನ ಅಧಿಕಾರ ವ್ಯಾಪ್ತಿಯುಳ್ಳ ಪ್ರದೇಶದಲ್ಲಿ ಬೇರೆ ರೀತಿಯಲ್ಲಿ ಅನಧಿಕೃತವಾಗಿ ಕಟ್ಟುವುದನ್ನು ಅಥವಾ ಅನಧಿಕೃತ ನಿರ್ಮಾಣಗಳನ್ನು ತಡೆಯಲು ಅಂಥ ಅಧಿಕಾರಿಯು ವಿಫಲನಾಗಿರುವನೆಂದು ರುಜುವಾತಾದಲ್ಲಿ ಅವನು, ನಿಯಮಿಸಬಹುದಾದಂಥ ಶಿಕ್ಷೆಗೆ ಗುರಿಯಾಗತಕ್ಕದ್ದು.][1]

1. 2007ರ ಅಧಿನಿಯಮ ಸಂಖ್ಯೆ 1ರ ಮೂಲಕ 321–ಎ ಮತ್ತು 321–ಬಿ ಪ್ರಕರಣಗಳನ್ನು 15.9.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯಲ್ಲಿದೆ.

## ಅಧ್ಯಾಯ – XVI

### ಉಪದ್ರವಗಳು

**322. ಅಪಾಯಕಾರಿ ರಚನೆಗಳ ಬಗ್ಗೆ ಮುನ್ನೆಚ್ಚರಿಕೆಗಳು.–** (1) ಯಾವುದೇ ರಚನೆಯು ಹಾಳಾಗುವ ಸ್ಥಿತಿಯಲ್ಲಿದೆ ಎಂದು ಅಥವಾ ಹತ್ತಿರ ಹಾದುಹೋಗುವವರಿಗೆ ಅಥವಾ ನೆರೆಹೊರೆಯ ರಚನೆಗಳ ಅಧಿಭೋಗದಾರರಿಗೆ ಅಪಾಯಕಾರಿಯಾಗಿದೆಯೆಂದು ಆಯುಕ್ತರು ಭಾವಿಸಿದರೆ, ಆಯುಕ್ತರು ನೋಟೀಸಿನ ಮೂಲಕ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅದರಿಂದ ಉಂಟಾಗುವ ಯಾವುದೇ ಅಪಾಯವನ್ನು ತಡೆಗಟ್ಟುವ ಹಾಗೆ ಅಂಥ ರಚನೆಗೆ ಬೇಲಿ ಹಾಕಲು, ಅದನ್ನು ಕೆಡವಿಹಾಕಲು, ಭದ್ರ ಪಡಿಸಲು ಅಥವಾ ದುರಸ್ತಿ ಮಾಡಲು ಅಗತ್ಯಪಡಿಸಬಹುದು.

(2) ಕೂಡಲೇ ಕ್ರಮ ಕೈಗೊಳ್ಳುವುದು ಅವಶ್ಯವಾದರೆ, ಆಯುಕ್ತರು ಅಂಥ ನೋಟೀಸನ್ನು ಕೊಡುವುದಕ್ಕೆ ಮುಂಚೆ ಅಥವಾ ನೋಟೀಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ತಾವಾಗಿಯೇ ಅಂಥ ರಚನೆಗೆ ಬೇಲಿ ಹಾಕಿಸಬಹುದು, ಅದನ್ನು ಕೆಡವಿ ಹಾಕಿಸಬಹುದು, ಭದ್ರಪಡಿಸಬಹುದು ಅಥವಾ ದುರಸ್ತಿ ಮಾಡಿಸಬಹುದು ಅಥವಾ ಅಪಾಯವನ್ನು ತಡೆಗಟ್ಟುವುದಕ್ಕೆ ಯಾವುದೇ ಬೀದಿಯ ಭಾಗಕ್ಕೆ ಬೇಲಿ ಹಾಕಿಸಬಹುದು ಅಥವಾ ತಾನು ಸೂಕ್ತವೆಂದು ಯೋಚಿಸುವಂಥ ತಾತ್ಕಾಲಿಕ ಕ್ರಮಗಳನ್ನು ತೆಗೆದುಕೊಳ್ಳಬಹುದು ಮತ್ತು ಹಾಗೆ ಮಾಡುವುದಕ್ಕಾಗಿ ತಗಲುವ ಖರ್ಚನ್ನು 470ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

(3) ಸದರಿ ರಚನೆಯು, ಅದರಲ್ಲಿ ವಾಸಿಸುವವರಿಗೆ ಸನ್ನಿಹಿತ ಅಪಾಯ ಉಂಟುಮಾಡುವಂಥದ್ದೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಆಯುಕ್ತರು ಅದರಲ್ಲಿ ವಾಸಿಸುವವರು ಕೂಡಲೇ ಅದನ್ನು ಖಾಲಿ ಮಾಡಲು ಆದೇಶಿಸತಕ್ಕದ್ದು. ಮತ್ತು ಆದೇಶ ಪಾಲನೆ ಮಾಡದಿರುವ ಯಾರೇ ವ್ಯಕ್ತಿಗಳನ್ನು ಯಾರೇ ಪೋಲೀಸು ಅಧಿಕಾರಿಯು ಹೊರಹಾಕಬಹುದು.

**323. ಅಪಾಯಕಾರಿ ಮರಗಳ ಬಗ್ಗೆ ಮುನ್ನೆಚ್ಚರಿಕೆಗಳು.–** (1) ಆಯುಕ್ತರು, ಯಾವುದೇ ಮರವು ಅಥವಾ ಮರದ ಯಾವುದೇ ಕೊಂಬೆಯು ಅಥವಾ ಯಾವುದೇ ಮರದ ಹಣ್ಣು ಬೀಳುವ ಸಂಭವವಿದೆ ಎಂದು ಮತ್ತು ಅದರಿಂದಾಗಿ ಯಾರೇ ವ್ಯಕ್ತಿಗೆ ಅಥವಾ ಯಾವುದೇ ರಚನೆಗೆ ಅಪಾಯವುಂಟಾಗುವುದೆಂದು ಭಾವಿಸಿದರೆ, ಆಯುಕ್ತರು ನೋಟೀಸಿನ ಮೂಲಕ ಸದರಿ ಮರದ ಮಾಲೀಕನನ್ನು ಅದರಿಂದ ಉಂಟಾಗುವ ಯಾವುದೇ ಅಪಾಯವನ್ನು ತಡೆಗಟ್ಟುವ ಹಾಗೆ ಅದನ್ನು ಭದ್ರಪಡಿಸಲು, ಸವರಲು, ಕತ್ತರಿಸಿಹಾಕಲು ಅಥವಾ ಹಣ್ಣನ್ನು ಕೀಳಲು ಅಗತ್ಯಪಡಿಸಬಹುದು.

(2) ಕೂಡಲೇ ಕ್ರಮಕೈಗೊಳ್ಳುವುದು ಅವಶ್ಯವಾದರೆ ಆಯುಕ್ತರು ಅಂಥ ನೋಟೀಸನ್ನು ಕೊಡುವ ಮುಂಚೆ ಅಥವಾ ಅಂಥ ನೋಟೀಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ತಾವಾಗಿಯೇ ಸದರಿ ಮರವನ್ನು ಭದ್ರಪಡಿಸಬಹುದು, ಸವರಿಹಾಕಿಸಬಹುದು ಅಥವಾ ಕತ್ತರಿಸಿಹಾಕಿಸಬಹುದು ಅಥವಾ ಅದರ ಹಣ್ಣನ್ನು ಕೀಳಿಸಬಹುದು ಅಥವಾ ಯಾವುದೇ ಬೀದಿಯ ಭಾಗಕ್ಕೆ ಬೇಲಿ ಹಾಕಿಸಬಹುದು ಅಥವಾ ಅಪಾಯವನ್ನು ತಪ್ಪಿಸಲು ತಾನು ಸೂಕ್ತವೆಂದು ಯೋಚಿಸಬಹುದಾದಂಥ ತಾತ್ಕಾಲಿಕ ಕ್ರಮಗಳನ್ನು ತೆಗೆದುಕೊಳ್ಳಬಹುದು ಮತ್ತು ಹಾಗೆ ಮಾಡುವುದಕ್ಕಾಗಿ ತಗಲುವ ಖರ್ಚನ್ನು 470ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ಮರದ ಮಾಲೀಕನಿಂದ ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

**324. ಅಪಾಯಕಾರಿ ಕೆರೆಗಳು, ಬಾವಿಗಳು, ಗುಂಡಿಗಳು ಇತ್ಯಾದಿಗಳ ಬಗ್ಗೆ ಮುನ್ನೆಚ್ಚರಿಕೆಗಳು.–** (1) ಆಯುಕ್ತರು, ಯಾವುದೇ ಕೆರೆ, ಕೊಳ, ಬಾವಿ, ಗುಂಡಿ, ತೊರೆ, ಒಡ್ಡು, ದಂಡೆ ಅಥವಾ ಇತರ ಸ್ಥಳವು ಸಾಕಷ್ಟು ದುರಸ್ತಿ, ಸಂರಕ್ಷಣೆ ಅಥವಾ ಸುತ್ತುಗಟ್ಟು ಇಲ್ಲದಿರುವುದಕ್ಕಾಗಿ ಹಾದುಹೋಗುವವರಿಗೆ ಅಥವಾ ನೆರೆಹೊರೆಯಲ್ಲಿ ವಾಸಿಸುತ್ತಿರುವ ವ್ಯಕ್ತಿಗಳಿಗೆ ಅಪಾಯಕಾರಿಯಾಗಿರುವುದಾಗಿ ಭಾವಿಸಿದರೆ, ಆಯುಕ್ತರು, ಅದರಿಂದ ಅಪಾಯವನ್ನು ತಡೆಗಟ್ಟುವ ಹಾಗೆ ಅದನ್ನು ಮುಚ್ಚಿಸಲು, ತೆಗೆದುಹಾಕಿಸಲು, ದುರಸ್ತಿ ಮಾಡಿಸಲು, ಸಂರಕ್ಷಿಸಲು ಅಥವಾ ಸುತ್ತುಗಟ್ಟು ನಿರ್ಮಿಸಲು ಮಾಲೀಕನನ್ನು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

(2) ಕೂಡಲೇ ಕ್ರಮ ಕೈಗೊಳ್ಳುವುದು ಅವಶ್ಯವಾದರೆ ಆಯುಕ್ತರು ಅಂಥ ನೋಟೀಸನ್ನು ಕೊಡುವುದಕ್ಕೆ ಮುಂಚೆ ಅಥವಾ ನೋಟೀಸಿನ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಅಪಾಯವನ್ನು ತಡೆಗಟ್ಟುವುದಕ್ಕೆ ತಾನು ಸೂಕ್ತವೆಂದು ಯೋಚಿಸುವಂಥ ತಾತ್ಕಾಲಿಕ ಕ್ರಮಗಳನ್ನು ತಾವಾಗಿಯೇ ತೆಗೆದುಕೊಳ್ಳಬಹುದು ಮತ್ತು ಹಾಗೆ ಮಾಡುವುದಕ್ಕಾಗಿ ತಗಲುವ ಖರ್ಚನ್ನು 470ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ಮಾಲೀಕನಿಂದ ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

**325. ಬೆಂಕಿಯ ವಿರುದ್ಧ ಮುನ್ನೆಚ್ಚರಿಕೆ.–** (1) ಆಯುಕ್ತರು, ಯಾವುದೇ ರಚನೆಯ ಭಾಗಶಃ ಅಥವಾ ಸಂಪೂರ್ಣವಾಗಿ ಹೊರಚಾವಣಿಯಿಂದ ಕೂಡಿರುವ ಅಥವಾ ಹೊಂದಿರುವ ಯಾವುದೇ ಬೂತಿನ ಅಥವಾ ಟೆಂಟಿನ, ವರಾಂಡದ, ಪೆಂಡಾಲಿನ ಅಥವಾ ಬೇಲಿಯ ಅಥವಾ ಬಟ್ಟೆಯಿಂದ ಅಥವಾ ಹುಲ್ಲಿನಿಂದ, ಎಲೆಗಳಿಂದ ಅಥವಾ ಚಾಪೆಗಳಿಂದ ಅಥವಾ ಇತರ ಸುಲಭ ದಹನ ಸಾಮಗ್ರಿಗಳಿಂದ ಕೂಡಿರುವ ಗೋಡೆಯ ಮಾಲೀಕನನ್ನು, ಅಂಥ ರಚನೆಯನ್ನು, ಬೂತನ್ನು, ಟೆಂಟನ್ನು, ಚಾವಣಿಯನ್ನು, ವರಾಂಡವನ್ನು, ಪೆಂಡಾಲನ್ನು, ಬೇಲಿಯನ್ನು ಅಥವಾ ಗೋಡೆಯನ್ನು ತೆಗೆದುಹಾಕುವಂತೆ ಅಥವಾ ಬದಲಾಯಿಸುವಂತೆ ಅಗತ್ಯಪಡಿಸಬಹುದು ಅಥವಾ ಬೆಂಕಿಯಿಂದ ಅಪಾಯವನ್ನು ತಪ್ಪಿಸಲು ಆಯುಕ್ತರು ಅವಶ್ಯವೆಂದು ಯೋಚಿಸಬಹುದಾದಂಥ ಷರತ್ತುಗಳ ಮೇಲೆ ಅವುಗಳನ್ನು ಉಳಿಸಿಕೊಳ್ಳಲು ಅವನಿಗೆ ಅನುಮತಿಯನ್ನು ಕೊಡಬಹುದು.

(2) ಆಯುಕ್ತರು, ಮರಮುಟ್ಟು, ಸೌದೆ ಅಥವಾ ಇತರ ದಹನ ವಸ್ತುಗಳನ್ನು ಖಾಸಗಿ ಬಳಕೆಗಾಗಿ ದಾಸ್ತಾನು ಮಾಡಲು ಯಾವುದೇ ಸ್ಥಳವನ್ನು ಬಳಸುತ್ತಿರುವ ಯಾರೇ ವ್ಯಕ್ತಿಯನ್ನು ಬೆಂಕಿಯಿಂದ ಅಪಾಯವಾಗದಂತೆ ರಕ್ಷಿಸಲು ವಿಶೇಷ ಕ್ರಮಗಳನ್ನು ತೆಗೆದುಕೊಳ್ಳುವಂತೆ ನೋಟೀಸು ಮೂಲಕ ಅಗತ್ಯಪಡಿಸಬಹುದು.

(3) ಬೆಂಕಿಯು ಹೊತ್ತಿಕೊಂಡ ಸಂದರ್ಭದಲ್ಲಿ ಯಾವುದೇ ರಚನೆಯಿಂದ ಸುರಕ್ಷಿತವಾಗಿ ಹೊರ ಹೋಗಲು ಕಲ್ಪಿಸಿರುವ ಸಾಧನಗಳು ಸಾಕಷ್ಟಿಲ್ಲವೆಂದು ಆಯುಕ್ತರು ಅಭಿಪ್ರಾಯಪಟ್ಟರೆ ಅವರು ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ ನೋಟೀಸು ಮೂಲಕ ರಚನೆಯ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅವರು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಯಾವುದೇ ಮೆಟ್ಟಿಲ ಸಾಲುಗಳನ್ನು ಬದಲಾಯಿಸಲು ಅಥವಾ ಪುನರ್‌ರಚಿಸಲು ಅಥವಾ ಅಂಥ ಹೆಚ್ಚಿನ ಅಥವಾ ತುರ್ತು ಮೆಟ್ಟಿಲ ಸಾಲುಗಳನ್ನು ಕಲ್ಪಿಸುವಂತೆ ಅಗತ್ಯಪಡಿಸಬಹುದು; ಮತ್ತು ಸಾರ್ವಜನಿಕ ಮನೋರಂಜನೆಯ ಉದ್ದೇಶಗಳಿಗಾಗಿ ಯಾವುದೇ ರಚನೆಯನ್ನು, ಬೂತನ್ನು ಅಥವಾ ಟೆಂಟನ್ನು ಬಳಸುವಾಗ ಮೇಲೆ ಹೇಳಿದಂತೆ ಮಂಜೂರಾತಿಗೆ ಒಳಪಟ್ಟು ಅವರು, ಪ್ರೇಕ್ಷಕರು ಸುರಕ್ಷಿತವಾಗಿ ಹೊರಗೆ ಹೋಗುವುದಕ್ಕೆ ಸಾಕಷ್ಟು ಸಾಧನಗಳನ್ನು ಇಟ್ಟಿರುವ ಮತ್ತು ನಿರ್ವಹಿಸಿರುವ, ಸ್ಪಷ್ಟವಾಗಿ ತೋರಿಸಿರುವ ಸಾಕಷ್ಟು ಸಂಖ್ಯೆಯ ಮಾರ್ಗಗಳನ್ನು ಒದಗಿಸತಕ್ಕದ್ದೆಂದು, ಹೊರಗೆ ಹೋಗುವ ಮಾರ್ಗಗಳಿಗೆ ಮುಕ್ತ ಪ್ರವೇಶಕ್ಕೆ ಅಡಚಣೆ ಉಂಟಾಗದ ಹಾಗೆ ಆಸನ ವ್ಯವಸ್ಥೆಯನ್ನು ಕಲ್ಪಿಸಬೇಕೆಂದು ಮತ್ತು ಹೊರಹೋಗುವ ದಾರಿಗಳಿಗೆ ಸಂಪರ್ಕವಿರುವ ನಡುದಾರಿಗಳನ್ನು, ದಾರಿಗಳನ್ನು ಮತ್ತು ಮೆಟ್ಟಿಲಸಾಲುಗಳನ್ನು ಸಾರ್ವಜನಿಕರು ಇರುವಾಗ ಅಡಚಣೆಗಳಿಂದ ಮುಕ್ತವಾಗಿ ಇಟ್ಟಿರತಕ್ಕದ್ದೆಂದು ಅಗತ್ಯಪಡಿಸಬಹುದು.

**326. ಆಯುಕ್ತರ ಅನುಮತಿಯಿಲ್ಲದೆ ಬಾವಿಗಳು, ಕೆರೆಗಳು, ಇತ್ಯಾದಿಗಳ ನಿರ್ಮಾಣಕ್ಕೆ ನಿಷೇಧ.–** (1) ಆಯುಕ್ತರ ಅನುಮತಿಯಿಲ್ಲದೆ, ಯಾವುದೇ ಹೊಸ ಬಾವಿ, ಕೆರೆ, ಕೊಳ, ನೀರಿನ ತೊಟ್ಟಿ, ಕಾರಂಜಿಯನ್ನು ಅಥವಾ ಅಂಥವುಗಳನ್ನು ತೋಡತಕ್ಕದ್ದಲ್ಲ ಅಥವಾ ನಿರ್ಮಿಸತಕ್ಕದ್ದಲ್ಲ.

(2) ಆಯುಕ್ತರು, ಷರತ್ತುಗಳೊಂದಿಗೆ ಅಥವಾ ಷರತ್ತುಗಳಿಲ್ಲದೆ ಅನುಮತಿ ನೀಡಬಹುದು ಅಥವಾ ಆ ಕಾರ್ಯಕೈಗೊಳ್ಳದಂತೆ ನಿರಾಕರಿಸಬಹುದು.

(3) ಯಾವುದೇ ಅಂಥ ಕಾರ್ಯವನ್ನು ಅಂಥ ಅನುಮತಿಯಿಲ್ಲದೆ ಪ್ರಾರಂಭಿಸಿದ್ದರೆ ಅಥವಾ ಪೂರ್ಣಗೊಳಿಸಿದ್ದರೆ, ಆಯುಕ್ತರು,–

(ಎ) ಅಂಥ ಕಾರ್ಯವನ್ನು ಮಾಡಿದ ಮಾಲೀಕನನ್ನು ಅಥವಾ ಇತರ ವ್ಯಕ್ತಿಯನ್ನು, ಹಾಗೆ ತೋಡಿರುವುದನ್ನು ಮತ್ತು ನಿರ್ಮಿಸಿರುವುದನ್ನು ತಾವು ನಿರ್ದೇಶಿಸುವಂಥ ರೀತಿಯಲ್ಲಿ ಮುಚ್ಚಿಬಿಡಲು ಅಥವಾ ಕೆಡವಿಹಾಕಲು ನೋಟೀಸು ಮೂಲಕ ಅಗತ್ಯಪಡಿಸಬಹುದು, ಅಥವಾ

(ಬಿ) ಅಂಥ ಕಾಮಗಾರಿಯನ್ನು ಉಳಿಸಿಕೊಳ್ಳಲು ಅನುಮತಿ ಕೊಡಬಹುದು, ಆದರೆ ಅಂಥ ಅನುಮತಿಯು (1)ನೇ ಉಪ–ಪ್ರಕರಣದ ಉಪಬಂಧಗಳು ಅಂಥ ಮಾಲೀಕನ ವಿರುದ್ಧ ಉಲ್ಲಂಘನೆಗಾಗಿ ವ್ಯವಹರಣೆಗಳನ್ನು ಹೂಡದಿರಲು ವಿನಾಯಿತಿಗೊಳಿಸತಕ್ಕದ್ದಲ್ಲ.

**327. ಅಪಾಯಕಾರಿ ಕಲ್ಲುಗಣಿ ಕೆಲಸವನ್ನು ನಿಲ್ಲಿಸಲು ಅಧಿಕಾರ.–** ಆಯುಕ್ತರು, ಯಾವುದೇ ಕಲ್ಲುಗಣಿಯ ಕೆಲಸವು ಅಥವಾ ಯಾವುದೇ ಸ್ಥಳದಿಂದ ಕಲ್ಲು, ಮಣ್ಣು ಅಥವಾ ಇತರ ಸಾಮಗ್ರಿಗಳನ್ನು ಸ್ಥಳಾಂತರಿಸುವುದು ಆ ಸ್ಥಳದಲ್ಲಿ ವಾಸಿಸುತ್ತಿರುವ ಅಥವಾ ಆ ಸ್ಥಳದ ಅಕ್ಕಪಕ್ಕದ ಸ್ಥಳಕ್ಕೆ ಕಾನೂನು ಸಮ್ಮತ ಪ್ರವೇಶಾವಕಾಶವನ್ನು ಹೊಂದಿರುವ ವ್ಯಕ್ತಿಗಳಿಗೆ ಅಪಾಯಕಾರಿಯಾಗಿದೆ ಎಂದು ಅಥವಾ ಉಪದ್ರವವನ್ನು ಉಂಟುಮಾಡುತ್ತದೆ ಎಂದು ಅಥವಾ ಉಂಟುಮಾಡುವ ಸಂಭವ ಇದೆ ಎಂದು ಅಭಿಪ್ರಾಯಪಟ್ಟರೆ ಆಯುಕ್ತರು ಸ್ಥಾಯೀ ಸಮಿತಿಯ ಅನುಮೋದನೆಯೊಂದಿಗೆ ಆ ಸದರಿ ಕಲ್ಲುಗಣಿಯ ಕೆಲಸದ ಮೇಲೆ ಅಥವಾ ಸ್ಥಳದ ಮೇಲೆ ನಿಯಂತ್ರಣವನ್ನು ಹೊಂದಿರುವ ಮಾಲೀಕನನ್ನು ಅಥವಾ ವ್ಯಕ್ತಿಯನ್ನು ಆ ಕೆಲಸವನ್ನು ಮುಂದುವರೆಸದಂತೆ ಅಥವಾ ಅಂಥ ಸ್ಥಳದಿಂದ ಕಲ್ಲು, ಮಣ್ಣು ಅಥವಾ ಇತರ ಸಾಮಗ್ರಿಯನ್ನು ಸ್ಥಳಾಂತರಿಸುವುದನ್ನು ಮುಂದುವರೆಸದಂತೆ ಅಥವಾ ಅಂಥ ಕೆಲಸದಿಂದ ಉಂಟಾಗುವ ಅಥವಾ ಉಂಟಾಗುವ ಸಂಭವವಿರುವ ಅಪಾಯವನ್ನು ತಪ್ಪಿಸುವ ಅಥವಾ ಉಪದ್ರವವನ್ನು ಉಪಶಮನಗೊಳಿಸುವುದಕ್ಕಾಗಿ ಅಂಥ ಕಲ್ಲುಗಣಿಗೆ ಅಥವಾ ಸ್ಥಳದ ಬಗ್ಗೆ ಅವಶ್ಯವೆಂದು ತಾವು ಭಾವಿಸುವಂಥ ಆದೇಶವನ್ನು ಪಡೆದುಕೊಳ್ಳಬೇಕೆಂದು ಅಗತ್ಯಪಡಿಸಬಹುದು.

**328. ಉಪದ್ರವಕಾರಿಯಾಗಿರುವಂಥ ಹೊಂಡಗಳು, ಇತ್ಯಾದಿಗಳನ್ನು ಮುಚ್ಚುವಂತೆ ಆದೇಶಿಸಲು ಮತ್ತು ನಗರದೊಳಗೆ ಕೃಷಿಯನ್ನು ನಿಯಂತ್ರಿಸಲು ಅಧಿಕಾರ.–** (1) ಆಯುಕ್ತರು–

(ಎ) ಯಾವುದೇ ಹೊಂಡ, ಗುಂಡಿ, ಕೆರೆ, ಬಾವಿ, ಕೊಳ, ಕೆಸರು ಭೂಮಿ, ಜೌಗುನೆಲ, ಕಲ್ಲುಗುಣಿ, ಚರಂಡಿ, ರೊಚ್ಚುಗುಂಡಿ, ಗುಂಡಿ, ಜಲಮಾರ್ಗ ಅಥವಾ ನೀರು ಯಾವುದೇ ರೀತಿಯಲ್ಲಿ ಸಂಗ್ರಹವಾಗಿರುವುದು; ಅಥವಾ

(ಬಿ) ಯಾವ ಭೂಮಿಯ ಮೇಲೆ ಯಾವುದೇ ಕಾಲದಲ್ಲಿ ನೀರು ಶೇಖರವಾಗುವುದೋ ಆ ಯಾವುದೇ ಭೂಮಿಯು ಸೊಳ್ಳೆಗಳ ಉತ್ಪತ್ತಿಯ ಸ್ಥಳ ಅಥವಾ ಇತರ ಯಾವುದೇ ರೀತಿಯಲ್ಲಿ ಉಪದ್ರವಕಾರಿಯಾಗಿದೆ ಎಂದು ಅಥವಾ ಆಗುವ ಸಂಭವವಿದೆ ಎಂದು ಅಭಿಪ್ರಾಯಪಟ್ಟರೆ, ಆಯುಕ್ತರು, ನೋಟೀಸಿನ ಮೂಲಕ ಮಾಲೀಕನನ್ನು ಅಥವಾ ಅದರ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯನ್ನು ಆಯುಕ್ತರು ನಿರ್ದೆಶಿಸುವಂಥ ರೀತಿಯಲ್ಲಿ ಮತ್ತು ಅಂಥ ಸಾಮಗ್ರಿಗಳೊಂದಿಗೆ ಅದನ್ನು ಮುಚ್ಚಲು, ಸುತ್ತುಗಟ್ಟು ನಿರ್ಮಿಸಲು, ಕಳೆ ತೆಗೆಯಲು, ಕಳೆ ತೆಗೆದು ಶೇಖರಣೆ ಮಾಡಲು, ಮರಿಹುಳು ನಾಶಕ ಮೀನನ್ನು ಸಂಗ್ರಹಿಸಲು, ಸೀಮೆ ಎಣ್ಣೆಯಿಂದ ಸಂಸ್ಕರಿಸಲು ಅಥವಾ ಅದನ್ನು ಬರಿದು ಮಾಡಲು ಅಥವಾ ಆಯುಕ್ತರು ನಿರ್ದೇಶಿಸುವಂಥ ರೀತಿಯಲ್ಲಿ ಉಪದ್ರವವನ್ನು ನಿವಾರಿಸುವುದಕ್ಕಾಗಿ ಅಥವಾ ಉಪಶಮನಗೊಳಿಸುವುದಕ್ಕಾಗಿ ಅದರ ಬಗ್ಗೆ ಅಂಥ ಆದೇಶವನ್ನು ಪಡೆದುಕೊಳ್ಳುವಂತೆ ಅಗತ್ಯ ಪಡಿಸಬಹುದು.

(2) ಬಾವಿಯನ್ನು ಮುಚ್ಚಲು, ಮೇಲೆ ಸುತ್ತುಗಟ್ಟು ನಿರ್ಮಿಸಲು ಅಥವಾ ಬಾವಿಯನ್ನು ಬರಿದು ಮಾಡಲು (1)ನೇ ಉಪ–ಪ್ರಕರಣದ ಮೇರೆಗೆ ಯಾವ ವ್ಯಕ್ತಿಗೆ ಕಡ್ಡಾಯವಾಗಿ ಕೋರಲಾಗಿದೆಯೋ ಆ ವ್ಯಕ್ತಿಯು ಅದನ್ನು ಪಾಲಿಸಲು ನಿಗದಿಪಡಿಸಿದ ಕಾಲದೊಳಗೆ ಆಯುಕ್ತರಿಗೆ ಹಾಗೆ ಕಡ್ಡಾಯವಾಗಿ ಕೋರಿರುವುದಕ್ಕೆ ಲಿಖಿತದಲ್ಲಿ ಆಕ್ಷೇಪಣೆಗಳನ್ನು ತಲುಪಿಸಿದರೆ, ಸ್ಥಾಯೀ ಸಮಿತಿಗೆ ಆಯುಕ್ತರು ಅಂಥ ಆಕ್ಷೇಪಣೆಗಳನ್ನು ವರದಿ ಮಾಡತಕ್ಕದ್ದು ಹಾಗೂ ಪ್ರಕರಣದ ಬಗ್ಗೆ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು ಮತ್ತು ಅಂಥ ಕಡ್ಡಾಯ ಕೋರಿಕೆಯನ್ನು ಪಾಲನೆ ಮಾಡಲು ತಪ್ಪಿದ್ದಕ್ಕಾಗಿ ಯಾವುದೇ ಪ್ರಾಸಿಕ್ಯೂಷನನ್ನು ಸ್ಥಾಯೀ ಸಮಿತಿಯ ಅನುಮೋದನೆಯನ್ನು ಪಡೆದ ಹೊರತು ಅವರು ಹೂಡತಕ್ಕದ್ದಲ್ಲ. ಆದರೆ ಆಯುಕ್ತರು, ಆದಾಗ್ಯೂ ಅಂಥ ಕಡ್ಡಾಯ ಕೋರಿಕೆಯಲ್ಲಿ ಅಪೇಕ್ಷಿಸಿದಂಥ ಕಾಮಗಾರಿಯನ್ನು ನಿರ್ವಹಿಸುವುದು, ತುರ್ತು ಮಹತ್ವದ್ದೆಂದು ಅವರು ಭಾವಿಸಿದರೆ, 462ನೇ ಪ್ರಕರಣಕ್ಕೆ ಅನುಸಾರವಾಗಿ ಮುಂದುವರಿಯಬಹುದು ಹಾಗೂ ಆ ಸದರಿ ಬಾವಿಯನ್ನು ಶಾಶ್ವತವಾಗಿ ಮುಚ್ಚಬೇಕೇ, ಮೇಲೆ ಸುತ್ತುಗಟ್ಟು ನಿರ್ಮಿಸಬೇಕೇ ಅಥವಾ ಬೇರೆ ಏನನ್ನಾದರೂ ಮಾಡಬೇಕೇ ಎಂಬ ಪ್ರಶ್ನೆಯನ್ನು ಸ್ಥಾಯೀ ಸಮಿತಿಯು ಇತ್ಯರ್ಥ ಮಾಡುವವರೆಗೆ ಅಂಥ ಬಾವಿಯನ್ನು ಸೊಳ್ಳೆಗಳು ಒಳಹೋಗುವುದನ್ನು ತಪ್ಪಿಸುವ ಹಾಗೆ ಸುಭದ್ರವಾಗಿ ಮೇಲೆ ಸುತ್ತುಗಟ್ಟು ನಿರ್ಮಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಪ್ರತಿಯೊಂದು ಸಂದರ್ಭದಲ್ಲಿ ಆಯುಕ್ತರು ಸ್ಥಾಯೀ ಸಮಿತಿಯ ಅನುಮೋದನೆಯೊಂದಿಗೆ ಮೇಲೆ ಹೇಳಿದಂತೆ ಈಗಾಗಲೇ ಮಾಡಿದ ಯಾವುದೇ ಕಾಮಗಾರಿಯ ವೆಚ್ಚಗಳನ್ನು, ಆ ಮಾಲೀಕನು ಸಂದಾಯ ಮಾಡಬೇಕೇ ಅಥವಾ ನಗರಪಾಲಿಕೆಯ ನಿಧಿಯಿಂದ ಆಯುಕ್ತರು ಸಂದಾಯ ಮಾಡಬೇಕೇ ಅಥವಾ ಭಾಗಮಾಡಿಕೊಳ್ಳಬೇಕೇ ಮತ್ತು ಹಾಗಾದರೆ ಯಾವ ಪ್ರಮಾಣಗಳಲ್ಲಿ ಸಂದಾಯ ಮಾಡಬೇಕು ಎಂಬುದನ್ನು ನಿರ್ಧರಿಸತಕ್ಕದ್ದು.

(3) ನಗರದ ಎಲ್ಲೆಗಳ ಒಳಗೆ ಇರುವ ಯಾವುದೇ ಸ್ಥಳದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಬೆಳೆಯ ಸಾಗುವಳಿಯು ಅಥವಾ ನಿರ್ದಿಷ್ಟಪಡಿಸಿದ ಯಾವುದೇ ಗೊಬ್ಬರದ ಬಳಕೆಯು ಅಥವಾ ಭೂಮಿಯ ನೀರಾವರಿಯು ಸಾರ್ವಜನಿಕ ಆರೋಗ್ಯಕ್ಕೆ ಹಾನಿಕಾರಕವಾಗಿದೆಯೆಂಬ, ಆರೋಗ್ಯಾಧಿಕಾರಿಯ ವರದಿಯ ಮೇಲೆ, ನಗರಪಾಲಿಕೆಯು ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಸಾರ್ವಜನಿಕ ನೋಟೀಸಿನ ಮೂಲಕ ಹಾನಿಕಾರಕವಾಗಿರುವುದಾಗಿ ಹಾಗೆ ವರದಿ ಮಾಡಲಾದ ಸಾಗುವಳಿಯನ್ನು, ಗೊಬ್ಬರದ ಬಳಕೆಯನ್ನು ಅಥವಾ ನೀರಾವರಿಯನ್ನು ನಿಯಂತ್ರಿಸಬಹುದು ಅಥವಾ ನಿಷೇಧಿಸಬಹುದು:

ಪರಂತು, ಅಂಥ ಸಾಗುವಳಿಯನ್ನು ಅಥವಾ ನೀರಾವರಿಯನ್ನು ಅಂಥ ಸಾರ್ವಜನಿಕ ನೋಟೀಸಿನ ದಿನಾಂಕಕ್ಕೆ ಹಿಂದಿನ ಐದು ವರ್ಷಗಳ ಅವಧಿಯಲ್ಲಿ, ವಾಡಿಕೆಯಂತೆ ಬೇಸಾಯದ ನಿರ್ವಹಣೆಯನುಸಾರ ಸತತವಾಗಿ ನಡೆಸಿಕೊಂಡು ಬರುತ್ತಿರುವ ಪದ್ಧತಿಯಾಗಿದ್ದರೆ ಅಂಥ ನಿಷೇಧದಿಂದ ಅವರಿಗೆ ಉಂಟಾದ ಯಾವುದೇ ಹಾನಿಗಾಗಿ ಹಿತಾಸಕ್ತಿಯುಳ್ಳ ಎಲ್ಲ ವ್ಯಕ್ತಿಗಳಿಗೆ ನಗರಪಾಲಿಕೆಯ ನಿಧಿಯಿಂದ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು.

**329. ಕುಡಿಯುವುದಕ್ಕಾಗಿ ಬಳಸುವ ಅನಾರೋಗ್ಯಕರ ಖಾಸಗೀ ಜಲಮಾರ್ಗ, ಚಿಲುಮೆ, ಕೆರೆ, ಬಾವಿ, ಇತ್ಯಾದಿಯನ್ನು ಸ್ವಚ್ಛ ಮಾಡುವುದಕ್ಕಾಗಿ ಆದೇಶಿಸಲು ಅಧಿಕಾರ.–** (1) ಆಯುಕ್ತರು, ನೋಟೀಸಿನ ಮೂಲಕ, ಯಾವ ಖಾಸಗೀ ಜಲಮಾರ್ಗವನ್ನು, ಚಿಲುಮೆಯನ್ನು, ಕೆರೆಯನ್ನು, ಬಾವಿಯನ್ನು ಅಥವಾ ಇತರ ಸ್ಥಳದ ನೀರನ್ನು ಕುಡಿಯಲು, ಸ್ನಾನ ಮಾಡಲು ಅಥವಾ ಬಟ್ಟೆ ಒಗೆಯಲು, ಬಳಸಲಾಗುತ್ತಿದೆಯೋ, ಆ ಯಾವುದೇ ಖಾಸಗಿ ಜಲಮಾರ್ಗದ, ಚಿಲುಮೆಯ, ಕೆರೆಯ, ಬಾವಿಯ ಅಥವಾ ಇತರ ಸ್ಥಳದ ಮಾಲೀಕನನ್ನು, ಅಥವಾ ಅದರ ಮೇಲೆ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯನ್ನು ಅದನ್ನು ಒಳ್ಳೆಯ ಸ್ಥಿತಿಯಲ್ಲಿಡಲು, ಆಯುಕ್ತರು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಅದನ್ನು ಸ್ವಚ್ಛಗೊಳಿಸಲು ಮತ್ತು ಮೇಲ್ಮೈ ಚರಂಡಿಯಿಂದ ಅಥವಾ ಇತರ ವಸ್ತುವಿನಿಂದ ಮಾಲಿನ್ಯ ಉಂಟಾಗದಂತೆ, ನೋಟೀಸಿನಲ್ಲಿ ಉಪಬಂಧಿಸಬಹುದಾದಂಥ ರೀತಿಯಲ್ಲಿ ಅವುಗಳನ್ನು ಸಂರಕ್ಷಿಸಲು ಅಗತ್ಯಪಡಿಸಬಹುದು.

(2) ಸಂದರ್ಭಾನುಸಾರ ಕುಡಿಯುವುದಕ್ಕಾಗಿ ಅಥವಾ ಬಟ್ಟೆ ಒಗೆಯುವುದಕ್ಕಾಗಿ ಬಳಸುವ ಯಾವುದೇ ಖಾಸಗಿ ಕೆರೆಯು, ಬಾವಿಯು ಅಥವಾ ಇತರ ಸ್ಥಳದ ನೀರು ಆ ಉದ್ದೇಶಕ್ಕಾಗಿ ಸೂಕ್ತ ಅಲ್ಲವೆಂದು ಆಯುಕ್ತರಿಗೆ ಮನವರಿಕೆಯಾಗುವಂತೆ ರುಜುವಾತುಪಡಿಸಿದರೆ, ಆಯುಕ್ತರು ಅದರ ಮೇಲೆ ನಿಯಂತ್ರಣ ಹೊಂದಿರುವ ಮಾಲೀಕನನ್ನು ಅಥವಾ ವ್ಯಕ್ತಿಯನ್ನು,–

(ಎ) ಅಂಥ ನೀರನ್ನು ಬಳಸದಂತೆ ಅಥವಾ ಅದರ ಬಳಕೆಗೆ ಅನುಮತಿ ನೀಡದಂತೆ;

(ಬಿ) ಅಂಥ ಸ್ಥಳಕ್ಕೆ ಪ್ರವೇಶ ಇಲ್ಲದಂತೆ ಮಾಡಲು ಅಥವಾ ಮುಚ್ಚಿಬಿಡಲು ಅಥವಾ ಅದನ್ನು ಭದ್ರವಾದ ಗೋಡೆಯಿಂದ ಅಥವಾ ಬೇಲಿಯಿಂದ ಸುತ್ತುಗಟ್ಟು ಹಾಕಲು,

– ನೋಟೀಸು ಮೂಲಕ ಅಗತ್ಯಪಡಿಸಬಹುದು.

**330. ಸಾರ್ವಜನಿಕ ಬಾವಿಗೆ ಅಥವಾ ತೊಟ್ಟಿಗೆ ಅಥವಾ ನಿಂತ ನೀರಿಗೆ ಸಂಬಂಧಿಸಿದಂತೆ ಆಯುಕ್ತರ ಕರ್ತವ್ಯ.–** ಯಾವುದೇ ಸಾರ್ವಜನಿಕ ಬಾವಿಯು, ಅಥವಾ ತೊಟ್ಟಿಯು ಅಥವಾ ನಿಂತ ನೀರು ಆರೋಗ್ಯಕ್ಕೆ ಹಾನಿಕರವಾಗುವ ಅಥವಾ ಅಕ್ಕಪಕ್ಕದವರಿಗೆ ಅಸಹ್ಯಕರವಾಗುವ ಸಂಭವವಿದೆಯೆಂದು ಆಯುಕ್ತರಿಗೆ ಕಂಡುಬಂದರೆ, ಅವರು ಅದನ್ನು ಸ್ವಚ್ಛಗೊಳಿಸುವಂತೆ, ಬರಿದು ಮಾಡುವಂತೆ, ಅಥವಾ ಮುಚ್ಚಿಬಿಡುವಂತೆ ಮಾಡಬಹುದು.

**331. ನೀರು ಸರಬರಾಜನ್ನು ಕಲುಷಿತಗೊಳಿಸುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು,–

(ಎ) ಕುಡಿಯುವ ನೀರಿನ ಉದ್ದೇಶಗಳಿಗಾಗಿ ನಗರಪಾಲಿಕೆಯು ಅಥವಾ ಅದರ ಮಾಲೀಕನು ಪ್ರತ್ಯೇಕವಾಗಿ ಮೀಸಲಿಟ್ಟಿರುವ ಯಾವುದೇ ಕೆರೆ, ಜಲಾಶಯ, ಕೊಳವೆ, ಕಾರಂಜಿ, ಬಾವಿ ಅಥವಾ ಇತರ ಸ್ಥಳಗಳಲ್ಲಿ ಸ್ನಾನ ಮಾಡುವುದು;

(ಬಿ) ಅಂಥ ಯಾವುದೇ ಸ್ಥಳದಲ್ಲಿ ಯಾವುದೇ ಪ್ರಾಣಿಯನ್ನು ಅಥವಾ ವಸ್ತುವನ್ನು ತೊಳೆಯುವುದು ಅಥವಾ ತೊಳೆಸುವುದು;

(ಸಿ) ಅಂಥ ಯಾವುದೇ ಸ್ಥಳದಲ್ಲಿ, ನೀರಿನೊಳಕ್ಕೆ ಯಾವುದೇ ಪ್ರಾಣಿಯನ್ನು ಅಥವಾ ವಸ್ತುವನ್ನು, ನೀರು ಹೊಲಸಾಗುವಂತೆ ಅಥವಾ ಮಲಿನವಾಗುವಂತೆ ಎಸೆಯುವುದು, ಇಡುವುದು ಅಥವಾ ಅದರೊಳಗೆ ಪ್ರವೇಶಿಸುವಂತೆ ಮಾಡುವುದು; ಅಥವಾ

(ಡಿ) ನೀರು ಹೊಲಸಾಗುವಂತೆ ಅಥವಾ ಮಲಿನವಾಗುವಂತೆ ಅಂಥ ಯಾವುದೇ ಸ್ಥಳದೊಳಕ್ಕೆ ಅಥವಾ ಮೇಲೇನಾದರೂ ಹರಿದುಹೋಗುವಂತೆ ಮಾಡುವುದು ಅಥವಾ ಮಾಡಿಸುವುದು ಅಥವಾ ಅದರೊಳಕ್ಕೆ ಯಾವುದೇ ವಸ್ತುವನ್ನು ತರುವಂತೆ ಮಾಡುವುದು ಅಥವಾ ತರಲು ಅವಕಾಶ ಕೊಡುವುದು ಅಥವಾ ಇನ್ನೇನನ್ನಾದರೂ ಮಾಡುವುದು

– ಕಾನೂನುಬದ್ಧವಾಗಿರತಕ್ಕದ್ದಲ್ಲ.

**332. ಒಕ್ಕಲಿಲ್ಲದ ಕಟ್ಟಡಗಳು ಅಥವಾ ಭೂಮಿಗಳು.–** ಯಾವುದೇ ಕಟ್ಟಡ ಅಥವಾ ಭೂಮಿಯು, ತ್ಯಜಿಸಿರುವುದರಿಂದ, ಮಾಲೀಕತ್ವ ವಿವಾದದಿಂದ ಅಥವಾ ಇತರ ಕಾರಣದಿಂದಾಗಿ ಒಕ್ಕಲಿಲ್ಲದೆ ಉಳಿದಿದ್ದರೆ ಮತ್ತು ಆ ಮೂಲಕ ಸೋಮಾರಿಗಳ ಅಥವಾ ಪುಂಡ ಪೋಕರಿಗಳ ತಾಣವಾದರೆ ಅಥವಾ ಅದು ಉಪದ್ರವವಾಗುವುದೆಂದು, ಆಯುಕ್ತರು ಅಭಿಪ್ರಾಯಪಟ್ಟರೆ, ಆಯುಕ್ತರು ಯುಕ್ತ ವಿಚಾರಣೆ ನಡೆಸಿದ ತರುವಾಯ, ಮಾಲೀಕನನ್ನು ಅಥವಾ ಮಾಲೀಕನೆಂದು ಕ್ಲೇಮು ಮಾಡುವ ವ್ಯಕ್ತಿಯನ್ನು ಅದನ್ನು ಭದ್ರಪಡಿಸಲು, ಸುತ್ತುಗಟ್ಟು ಹಾಕಲು, ತೆರವುಗೊಳಿಸಲು ಅಥವಾ ಸ್ವಚ್ಛ ಮಾಡಲು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

**333. ಹೊಲಸು ಅಥವಾ ಹಾನಿಕರ ಸಸ್ಯಗಳನ್ನು ತೆಗೆದುಹಾಕುವುದು.–** ಆಯುಕ್ತರು, ನೋಟೀಸಿನ ಮೂಲಕ (ಹೊಲಸು ಅಥವಾ ಅನಾರೋಗ್ಯಕರ ಸ್ಥಿತಿಯಲ್ಲಿರುವುದೆಂದು ಅಥವಾ ಆರೋಗ್ಯಕ್ಕೆ ಹಾನಿಕರವಾದ ಅಥವಾ ನೆರೆಹೊರೆಗೆ ಅಸಹ್ಯಕರವಾದ ಯಾವುದೇ ದಟ್ಟ ಅಥವಾ ಹಾನಿಕರ ಸಸ್ಯಗಳು, ಮರಗಳು ಅಥವಾ ಗಿಡಗಂಟೆಗಳು ಮಿತಿಮೀರಿ ಬೆಳೆದಿರುವುದಾಗಿ ಅವರಿಗೆ ಕಂಡು ಬರುವ) ಯಾವುದೇ ಕಟ್ಟಡದ ಅಥವಾ ಭೂಮಿಯ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಆ ಕಟ್ಟಡವನ್ನು ಅಥವಾ ಭೂಮಿಯನ್ನು ಸ್ವಚ್ಛಗೊಳಿಸಲು, ತೆರವುಗೊಳಿಸಲು ಅಥವಾ ಅನ್ಯಥಾ ಅದನ್ನು ಸರಿಯಾದ ಸ್ಥಿತಿಯಲ್ಲಿಡಲು ಅಥವಾ ಅಂಥ ಸಸ್ಯಗಳು, ಮರಗಳು ಅಥವಾ ಗಿಡ ಗಂಟೆಗಳನ್ನು ಇಪ್ಪತ್ನಾಲ್ಕು ಗಂಟೆಗಳೊಳಗಾಗಿ ಅಥವಾ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಹೆಚ್ಚಿನ ಅವಧಿಯೊಳಗಾಗಿ ಮತ್ತು ಅಂಥ ರೀತಿಯಲ್ಲಿ ಕತ್ತರಿಸಿ ತೆಗೆದುಹಾಕಲು ಅಗತ್ಯಪಡಿಸಬಹುದು.

**334. ಧೂಳು, ಹೊಗೆ, ಇತ್ಯಾದಿಗಳಿಂದ ಆಗುವ ಉಪದ್ರವವನ್ನು ನಿವಾರಿಸುವುದು.–** ಯಾವುದೇ ಕಟ್ಟಡದಲ್ಲಿ ಅಥವಾ ಭೂಮಿಯಲ್ಲಿ ಕಲ್ಲಿದ್ದಲು, ಇದ್ದಲು, ಬೂದಿ, ಕಿಟ್ಟ, ಗೋಣಿಚೀಲಗಳು, ಉಣ್ಣೆ, ಹತ್ತಿ ಅಥವಾ ಯಾವುದೇ ಸಾಮಗ್ರಿಯನ್ನು ದಾಸ್ತಾನು ಮಾಡುವುದು, ರಾಶಿ ಹಾಕುವುದು, ಅಥವಾ ಸಂಗ್ರಹಿಸುವುದರಿಂದಾಗಿ ಅಥವಾ ಅಂಥ ಕಲ್ಲಿದ್ದಲು, ಇದ್ದಲು, ಬೂದಿ, ಕಿಟ್ಟ ಅಥವಾ ಸಾಮಗ್ರಿಯನ್ನು ಸ್ಥಳಾಂತರಿಸುವುದು, ಒಡೆಯುವುದು, ಕತ್ತರಿಸುವುದು,

ಅಥವಾ ಸುಡುವುದರಿಂದಾಗಿ ಅಥವಾ ಅದನ್ನು ಯಾವುದೇ ಸಂಸ್ಕರಣೆಗೆ ಒಳಪಡಿಸುವುದರಿಂದಾಗಿ, ಧೂಳು, ತೇಲುವ ಕಣಗಳು, ಹೊಗೆ, ದುರ್ವಾಸನೆ ಅಥವಾ ಶಬ್ದ ಹೊರಹೊಮ್ಮುವುದರಿಂದ ಅಥವಾ ಅನ್ಯಥಾ ಅಂಥ ಕಟ್ಟಡದ ಅಥವಾ ಭೂಮಿಯ ನೆರೆಹೊರೆಯಲ್ಲಿನ ನಿವಾಸಿಗಳಿಗೆ ಉಪದ್ರವವಾಗುತ್ತದೆ ಅಥವಾ ಉಪದ್ರವವಾಗುವ ಸಂಭವವಿದೆಯೆಂದು, ಆಯುಕ್ತರು ಅಭಿಪ್ರಾಯಪಟ್ಟರೆ ಅವರು, ಅಂಥ ಕಟ್ಟಡ ಅಥವಾ ಭೂಮಿಯ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಂಥ ಉಪದ್ರವವನ್ನು ನಿವಾರಿಸುವುದಕ್ಕಾಗಿ ನೋಟೀಸಿನ ಮೂಲಕ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕ್ರಮಕೈಗೊಳ್ಳಲು ಅಗತ್ಯಪಡಿಸಬಹುದು.

**335. ಕಟ್ಟಡಗಳು ಅಥವಾ ಭೂಮಿಗಳಿಗೆ ಬೇಲಿ ಹಾಕುವುದು ಮತ್ತು ಹಸಿರು ಬೇಲಿಗಳನ್ನು ಮತ್ತು ಮರಗಳನ್ನು ಸವರುವುದು.–** ಆಯುಕ್ತರು, ಸಾರ್ವಜನಿಕ ಬೀದಿಗೆ ಸಮೀಪವಿರುವ ಯಾವುದೇ ಕಟ್ಟಡದ ಅಥವಾ ಭೂಮಿಯ ಮಾಲೀಕನನ್ನು ಅಥವಾ ಅಧಿಭೋಗದಾರರನ್ನು–

(ಎ) ಆಯುಕ್ತರಿಗೆ ಸಮಾಧಾನವಾಗುವಂತೆ ಅದಕ್ಕೆ ಬೇಲಿ ಹಾಕಲು; ಅಥವಾ

(ಬಿ) ಸದರಿ ಬೀದಿಯ ಅಂಚಿನಲ್ಲಿರುವ ಯಾವುದೇ ಹಸಿರು ಬೇಲಿಗಳು, ಪಕ್ಕದಲ್ಲಿರುವ ರಸ್ತೆಯ ಮಟ್ಟದಿಂದ ಆಯುಕ್ತರು ನಿರ್ಧರಿಸಬಹುದಾದಂಥ ಎತ್ತರವನ್ನು ಮೀರದ ಹಾಗೆ ಅವುಗಳನ್ನು ಕತ್ತರಿಸಿ ಸಮಮಾಡಲು ಅಥವಾ ಸವರಲು; ಅಥವಾ

(ಸಿ) ಸದರಿ ಬೀದಿಯ ಮೇಲೆ ಚಾಚಿಕೊಂಡಿರುವ ಮತ್ತು ಅದನ್ನು ಅಥವಾ ಅದರಲ್ಲಿ ಸಂಚರಿಸುವ ವಾಹನಗಳು ಕಾಣದ ಹಾಗೆ ಅಡ್ಡಿಯುಂಟು ಮಾಡುವ ಅಥವಾ ಅದಕ್ಕೆ ಹಾನಿಯುಂಟು ಮಾಡುವ ಯಾವುದೇ ಹಸಿರು ಬೇಲಿಗಳನ್ನು ಮತ್ತು ಮರಗಳನ್ನು ಕತ್ತರಿಸಲು ಮತ್ತು ಕತ್ತರಿಸಿ ಸಮಮಾಡಲು; ಅಥವಾ

(ಡಿ) ಗೋಡೆಯ ಅಥವಾ ಬೇಲಿಯ ಎತ್ತರ ಮತ್ತು ಅದು ಇರುವ ಸ್ಥಳದ ಕಾರಣದಿಂದಾಗಿ ಅಪಾಯವನ್ನು ಉಂಟುಮಾಡುವ ಹಾಗೆ, ಸಂಚರಿಸುವ ವಾಹನಗಳು ಕಾಣದಂತೆ ಅಡ್ಡಿಯುಂಟುಮಾಡುವ ಸುತ್ತುಗಟ್ಟಿರುವ ಗೋಡೆಯ ಅಥವಾ ಬೇಲಿಯ ಎತ್ತರವನ್ನು ತಗ್ಗಿಸಲು

– ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

**336. ಕಟ್ಟಡಗಳಿಗೆ ಸುಣ್ಣ ಬಳಿಯುವುದು ಮತ್ತು ಅವುಗಳನ್ನು ಸ್ವಚ್ಛಗೊಳಿಸುವುದು.–** ನೈರ್ಮಲ್ಯದ ದೃಷ್ಟಿಯಿಂದ ಆ ಕಟ್ಟಡದ ಒಳಗಡೆ ಮತ್ತು ಹೊರಗಡೆ ಸುಣ್ಣ ಬಳಿಯುವುದು ಅಥವಾ ಸ್ವಚ್ಛಗೊಳಿಸುವುದು ಅವಶ್ಯವೆಂದು ಆಯುಕ್ತರಿಗೆ ಕಂಡುಬಂದರೆ, ಅವರು ಯಾವುದೇ ಕಟ್ಟಡದ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನೋಟೀಸು ಕೊಡುವ ಮೂಲಕ ಆ ಕಟ್ಟಡದ ಒಳಗಡೆ ಮತ್ತು ಹೊರಗಡೆ ಆದೇಶದಲ್ಲಿ ನಿರ್ದಿಷ್ಟಪಡಿಸುವಂಥ ರೀತಿಯಲ್ಲಿ ಮತ್ತು ಅಂಥ ಅವಧಿಯೊಳಗೆ ಸುಣ್ಣ ಬಳಿಯುವಂತೆ ಇಲ್ಲವೆ ಅನ್ಯಥಾ ಸ್ವಚ್ಛಗೊಳಿಸುವಂತೆ ಅಗತ್ಯಪಡಿಸಬಹುದು.

**337. ನೈರ್ಮಲ್ಯಕರವಲ್ಲದ ಕಟ್ಟಡಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧಿಕಾರಗಳು.–** (1) ಆಯುಕ್ತರು,–

(ಎ) ಯಾವುದೇ ಕಟ್ಟಡವು ಅಥವಾ ಅದರ ಭಾಗವು ಅದು ಯಾವುದೇ ಮೇಲ್ಛಾವಣಿಯನ್ನು ಹೊಂದಿರದ ಅಥವಾ ಸಾಕಷ್ಟು ಎತ್ತರವಲ್ಲದ ಮೇಲ್ಛಾವಣಿಯನ್ನು ಹೊಂದಿರುವ ಕಾರಣದಿಂದಾಗಿ ಅಥವಾ ಸರಿಯಾದ ಚರಂಡಿ ವ್ಯವಸ್ಥೆ ಅಥವಾ ವಾತಾಯನ ವ್ಯವಸ್ಥೆ ಇಲ್ಲದ ಕಾರಣದಿಂದಾಗಿ ಅಥವಾ ಸ್ವಚ್ಛಗೊಳಿಸುವುದು ಕಾರ್ಯ ಸಾಧ್ಯವಾಗದ ಕಾರಣದಿಂದಾಗಿ, ಅದರ ಅಧಿಭೋಗದಾರನಿಗೆ ಅಥವಾ ನೆರೆಹೊರೆಯ ನಿವಾಸಿಗಳಿಗೆ ರೋಗ ತಗಲುವ ಅಪಾಯವಿದೆಯೆಂದು ಅಥವಾ ಯಾವುದೇ ಕಾರಣಕ್ಕಾಗಿ ಸಾರ್ವಜನಿಕ ಆರೋಗ್ಯ ಅಥವಾ ಸುರಕ್ಷೆಗೆ ಅಪಾಯವನ್ನುಂಟುಮಾಡುವ ಸಂಭವವಿದೆಯೆಂದು; ಅಥವಾ

(ಬಿ) ಸದರಿ ಯಾವುದೇ ಕಾರಣಕ್ಕಾಗಿ ಅಥವಾ ಕಟ್ಟಡಗಳು ಯಾವ ರೀತಿಯಲ್ಲಿ ಒತ್ತೊತ್ತಾಗಿವೆಯೋ ಆ ರೀತಿಯ ಕಾರಣದಿಂದಾಗಿ ಕಟ್ಟಡಗಳ ಬ್ಲಾಕು ಅಥವಾ ಸಮೂಹವು ಮೇಲೆ ಹೇಳಿದಂಥ ಅಪಾಯವನ್ನುಂಟುಮಾಡುವುದೆಂದು

– ಪರಿಭಾವಿಸಿದಾಗಲೆಲ್ಲಾ, ಅವರು ನೋಟೀಸಿನ ಮೂಲಕ ಅಂಥ ಕಟ್ಟಡಗಳ ಅಥವಾ ಕಟ್ಟಡಗಳ ಭಾಗಗಳ ಮಾಲೀಕರನ್ನು ಅಥವಾ ಅವರು ಇಚ್ಛಿಸುವಂಥ, ಅಂಥ ಕಟ್ಟಡಗಳು ಅಥವಾ ಕಟ್ಟಡಗಳ ಭಾಗಗಳು ಆವರಿಸಿಕೊಂಡಿರುವ ಭೂಮಿಯ ಮಾಲೀಕರನ್ನು, ಅಂಥ ಅಪಾಯವನ್ನು ತಪ್ಪಿಸುವುದಕ್ಕಾಗಿ ಅವರು ಅವಶ್ಯವೆಂದು ಭಾವಿಸಬಹುದಾದಂಥ ಕಾಮಗಾರಿಗಳನ್ನು ನಿರ್ವಹಿಸಲು ಅಥವಾ ಅಂಥ ಕ್ರಮಗಳನ್ನು ಕೈಗೊಳ್ಳಲು ಅಗತ್ಯಪಡಿಸಬಹುದು.

(2) ಈ ಪ್ರಕರಣದ ಮೇರೆಗೆ ಮಾಡಿದ ಆದೇಶಕ್ಕೆ ಅನುಸಾರವಾಗಿ ಕಟ್ಟಡವನ್ನು ಕೆಡವಿಹಾಕಿರುವ ಅಥವಾ ಕಟ್ಟಡದ ಪುನರ್ ನಿರ್ಮಾಣಕ್ಕೆ ಅನುವು ಮಾಡಿಕೊಡುವಂತೆ ಅದನ್ನು ಕೆಡವಿಹಾಕುವ ಸಂದರ್ಭಗಳಲ್ಲಿ ನಗರಪಾಲಿಕೆಯು ಅದರ ಮಾಲೀಕನಿಗೆ ಯುಕ್ತ ನಷ್ಟಪರಿಹಾರವನ್ನು ಕೊಡಬೇಕಾಗುವುದನ್ನು ಹೊರತುಪಡಿಸಿ ಈ ಪ್ರಕರಣದ ಮೇರೆಗೆ ಅಥವಾ ಅದರ ಅನುಸಾರವಾಗಿ ಕೈಗೊಂಡ ಯಾವುದೇ ಕ್ರಮದ ಕಾರಣದಿಂದಾಗಿ ಅನುಭವಿಸಿದ ಹಾನಿಗಳಿಗೆ ಯಾರೇ ವ್ಯಕ್ತಿಯು ನಷ್ಟಪರಿಹಾರಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

(3) ಈ ಪ್ರಕರಣದ ಮೇರೆಗೆ ಯಾವುದೇ ಕಟ್ಟಡವನ್ನು ಪೂರ್ಣವಾಗಿ ಕೆಡವಿಹಾಕಿದಾಗ ಮತ್ತು ಅದನ್ನು ಕೆಡವಿಹಾಕುವುದರಿಂದ ನಿಕಟ ಸಾಮೀಪ್ಯದಲ್ಲಿನ ಇತರ ಕಟ್ಟಡಗಳ ಮೌಲ್ಯವು ಹೆಚ್ಚಾಗುವಂತಿದ್ದಾಗ, ಅಂಥ ಇತರ ಕಟ್ಟಡಗಳ ಮಾಲೀಕರು, ಅವರವರ ಕಟ್ಟಡಗಳಿಗೆ ಪ್ರಾಪ್ತವಾಗುವ ಹೆಚ್ಚಿನ ಮೌಲ್ಯದಲ್ಲಿ ಆಯುಕ್ತರು ನಿರ್ಧರಿಸಬಹುದಾದಂಥ ಪ್ರಮಾಣದಲ್ಲಿ, ಸಂಪೂರ್ಣವಾಗಿ ಕೆಡವಿ ಹಾಕಿದ ಕಟ್ಟಡದ ಮಾಲೀಕನಿಗೆ ಸಂದಾಯ ಮಾಡಬೇಕಾದ ನಷ್ಟಪರಿಹಾರಕ್ಕಾಗಿ, ವಂತಿಗೆ ಕೊಡಲು ಬದ್ಧರಾಗಿರತಕ್ಕದ್ದು.

(4) ಪುನರ್ ನಿರ್ಮಾಣಕ್ಕೆ ಅನುವು ಮಾಡಿಕೊಡುವುದಕ್ಕಾಗಿ ಈ ಪ್ರಕರಣದ ಮೇರೆಗೆ ಯಾವುದೇ ಕಟ್ಟಡವನ್ನು ಕೆಡವಿಹಾಕಿದಾಗ, ನಷ್ಟಪರಿಹಾರವನ್ನು ನಿರ್ಧರಿಸುವಾಗ, ಅದನ್ನು ಸುಧಾರಣೆ ಮಾಡಿದ್ದರಿಂದಾಗಿ ಆವರಣಕ್ಕೆ ಪ್ರಾಪ್ತವಾಗುವ ಪ್ರಯೋಜನಕ್ಕೆ ಅವಕಾಶ ಕಲ್ಪಿಸತಕ್ಕದ್ದು.

**338. ಮನುಷ್ಯರ ವಾಸಕ್ಕೆ ಯೋಗ್ಯವಲ್ಲದ ಕಟ್ಟಡ.–** (1) ವಾಸಸ್ಥಳಕ್ಕೆ ಉದ್ದೇಶಿಸಲಾದ ಅಥವಾ ವಾಸಸ್ಥಳವಾಗಿ ಬಳಸುತ್ತಿರುವ ಯಾವುದೇ ಕಟ್ಟಡವು ಅಥವಾ ಅದರ ಭಾಗವು ಮನುಷ್ಯರ ವಾಸಕ್ಕೆ ಯೋಗ್ಯವಾಗಿಲ್ಲವೆಂದು ಆಯುಕ್ತರಿಗೆ ಕಂಡುಬಂದರೆ, ಅವರು ಅಂಥ ಉದ್ದೇಶಕ್ಕಾಗಿ ಅಂಥ ಕಟ್ಟಡವನ್ನು ಮುಂದೆ ಬಳಸುವುದನ್ನು ನಿಷೇಧಿಸಲು ಸ್ಥಾಯೀ ಸಮಿತಿಗೆ ಮನವಿ ಮಾಡಿಕೊಳ್ಳಬಹುದು ಮತ್ತು ಸ್ಥಾಯೀ ಸಮಿತಿಯು, ಅದರ ಮಾಲೀಕನಿಗೆ ಮತ್ತು ಅಧಿಭೋಗದಾರರಿಗೆ ಅಂಥ ಆದೇಶವನ್ನು ಏಕೆ ಮಾಡಬಾರದು ಎಂಬುದಕ್ಕೆ ಕಾರಣ ತೋರಿಸಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ, ಮೇಲೆ ಹೇಳಿದಂತೆ ನಿಷೇಧಾಜ್ಞೆಯನ್ನು ಮಾಡಬಹುದು.

(2) ಯಾವುದೇ ಅಂಥ ನಿಷೇಧಾಜ್ಞೆಯನ್ನು ಮಾಡಿರುವಾಗ, ಆಯುಕ್ತರು ಕಟ್ಟಡದ ಮಾಲೀಕನಿಗೆ ಮತ್ತು ಅಧಿಭೋಗದಾರನಿಗೆ ಅದರ ತಾತ್ಪರ್ಯವನ್ನು ತಿಳಿಸತಕ್ಕದ್ದು ಮತ್ತು ನೋಟೀಸನ್ನು ಜಾರಿ ಮಾಡಿದ ನಂತರ, ಮೂವತ್ತು ದಿನಗಳಿಗಿಂತ ಕಡಿಮೆಯಿರದ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ಮುಕ್ತಾಯವಾದ ಮೇಲೆ ಆಯುಕ್ತರು ಮನುಷ್ಯರ ವಾಸಕ್ಕೆ ಅದನ್ನು ಯೋಗ್ಯವಲ್ಲದನ್ನಾಗಿಸುವ ಸ್ಥಿತಿಗಳನ್ನು ತಮಗೆ ಮನವರಿಕೆಯಾಗುವಂತೆ ನಿವಾರಿಸಲಾಗಿದೆಯೆಂದು ಲಿಖಿತದಲ್ಲಿ ಪ್ರಮಾಣೀಕರಿಸುವವರೆಗೆ ಅಥವಾ ಸ್ಥಾಯೀ ಸಮಿತಿಯ ನಿಷೇಧವನ್ನು ಹಿಂತೆಗೆದುಕೊಳ್ಳುವವರೆಗೆ ಯಾರೇ ಮಾಲೀಕನು ಅಥವಾ ಅಧಿಭೋಗದಾರನು ಆ ಕಟ್ಟಡವನ್ನು ಮನುಷ್ಯರ ವಾಸಕ್ಕೆ ಬಳಸತಕ್ಕದ್ದಲ್ಲ ಅಥವಾ ಬಳಸಲು ಅವಕಾಶ ನೀಡತಕ್ಕದ್ದಲ್ಲ.

(3) ಅಂಥ ನಿಷೇಧಾಜ್ಞೆಯು ಮೂರು ತಿಂಗಳವರೆಗೆ ಪ್ರವರ್ತನೆಯಲ್ಲಿರುವಾಗ, ಆಯುಕ್ತರು, ಸ್ಥಾಯೀ ಸಮಿತಿಗೆ ಆ ಪ್ರಕರಣವನ್ನು ವರದಿ ಮಾಡತಕ್ಕದ್ದು, ಸ್ಥಾಯೀ ಸಮಿತಿಯು ಆ ನಂತರ ಕಟ್ಟಡವನ್ನು ಕೆಡವಿಹಾಕಬಾರದೇ ಹೇಗೆ ಎಂಬ ಬಗ್ಗೆ ಪರ್ಯಾಲೋಚಿಸತಕ್ಕದ್ದು. ಸ್ಥಾಯೀ ಸಮಿತಿಯು, ಆ ಪ್ರಶ್ನೆಯನ್ನು ಯಾವ ಕಾಲದಲ್ಲಿ ಮತ್ತು ಸ್ಥಳದಲ್ಲಿ ಪರ್ಯಾಲೋಚಿಸಲಾಗುತ್ತದೋ ಆ ಕಾಲದ ಮತ್ತು ಸ್ಥಳದ ಬಗ್ಗೆ ಮೂವತ್ತು ದಿನಗಳಿಗೆ ಕಡಿಮೆಯಿಲ್ಲದ ನೋಟೀಸನ್ನು ಮಾಲೀಕನಿಗೆ ನೀಡತಕ್ಕದ್ದು. ಆ ಪ್ರಶ್ನೆಯನ್ನು ಪರ್ಯಾಲೋಚನೆಗೆ ತೆಗೆದುಕೊಂಡಾಗ ಅಹವಾಲನ್ನು ಹೇಳಿಕೊಳ್ಳಲು ಮಾಲೀಕನು ಹಕ್ಕುಳ್ಳವನಾಗಿರತಕ್ಕದ್ದು.

(4) ಅಂಥ ಪರ್ಯಾಲೋಚನೆಯ ತರುವಾಯ ಸ್ಥಾಯೀ ಸಮಿತಿಯು, ಆ ಕಟ್ಟಡವನ್ನು ಮನುಷ್ಯರ ವಾಸಕ್ಕೆ ಯೋಗ್ಯವಾದುದನ್ನಾಗಿ ಮಾಡಿಲ್ಲವೆಂದು ಮತ್ತು ಅದನ್ನು ಹಾಗೆ ಯೋಗ್ಯವಾದುದನ್ನಾಗಿ ಮಾಡಲು ಯುಕ್ತ ಶ್ರದ್ಧೆಯಿಂದ ಕ್ರಮಗಳನ್ನು ತೆಗೆದುಕೊಳ್ಳುತ್ತಿಲ್ಲವೆಂದು ಮತ್ತು ಅದರ ಮುಂದುವರಿಕೆಯು ಸಾರ್ವಜನಿಕ ಆರೋಗ್ಯಕ್ಕೆ ಅಥವಾ ನೆರೆಹೊರೆಯ ನಿವಾಸಿಗಳಿಗೆ ಉಪದ್ರವಕಾರಿ ಅಥವಾ ಅಪಾಯಕಾರಿ ಅಥವಾ ಹಾನಿಕರವೆಂದು ಅಭಿಪ್ರಾಯಪಟ್ಟರೆ, ತೀರ್ಮಾನಕ್ಕೆ ಕಾರಣಗಳ ಸಹಿತ ಆ ಮಟ್ಟಿಗೆ ಒಂದು ತೀರ್ಮಾನವನ್ನು ದಾಖಲ್ಮಾಡತಕ್ಕದ್ದು ಮತ್ತು ಆಯುಕ್ತರು ಸದರಿ ತೀರ್ಮಾನದ ಅನುಸಾರವಾಗಿ ಆ ಕಟ್ಟಡವನ್ನು ಕೆಡವಿಹಾಕಲು ಮಾಲೀಕನನ್ನು ನೋಟೀಸಿನ ಮೂಲಕ ಅಗತ್ಯಪಡಿಸತಕ್ಕದ್ದು.

(5) ಮನುಷ್ಯರ ವಾಸಕ್ಕೆ ಕಟ್ಟಡವನ್ನು ಯೋಗ್ಯವಾದುದನ್ನಾಗಿಸಲು ಅವಶ್ಯವಾದ ಕೆಲಸಗಳನ್ನು ತತ್‌ಕ್ಷಣವೇ ನಿರ್ವಹಿಸುವುದಾಗಿ ಮಾಲೀಕನು ಮುಚ್ಚಳಿಕೆ ಬರೆದುಕೊಟ್ಟರೆ, ಮತ್ತು ಅದನ್ನು ಹಾಗೆ ಯೋಗ್ಯವಾದುದನ್ನಾಗಿಸಬಹುದೆಂದು ಆಯುಕ್ತರು ಪರ್ಯಾಲೋಚಿಸಿದರೆ, ಆಯುಕ್ತರು, ಅವಶ್ಯವಾದ ಕೆಲಸಗಳನ್ನು ನಿರ್ವಹಿಸಲು ಮಾಲೀಕನಿಗೆ ಅವಕಾಶವನ್ನು ಕೊಡುವ ಉದ್ದೇಶಕ್ಕಾಗಿ ತಾವು ಸಾಕಷ್ಟು ಎಂದು ಭಾವಿಸುವಂಥ ಆರು ತಿಂಗಳುಗಳಿಗೆ ಮೀರದಂಥ ಕಾಲದವರೆಗೆ ಸ್ಥಾಯೀ ಸಮಿತಿಯ ತೀರ್ಮಾನವನ್ನು ಜಾರಿಗೊಳಿಸುವುದನ್ನು ಮುಂದೂಡಬಹುದು.

**339. ವಾಸದ ಮನೆಯಲ್ಲಿ ಅಥವಾ ವಾಸಸ್ಥಳದಲ್ಲಿ ಜನಸಂದಣಿಯನ್ನು ಕಡಿಮೆ ಮಾಡುವುದು.–** (1) ಯಾವುದೇ ವಾಸದ ಮನೆಯು ಅಥವಾ ವಾಸದ ಸ್ಥಳವಾಗಿ ಬಳಸುತ್ತಿರುವ ಯಾವುದೇ ಇತರ ಕಟ್ಟಡವು ಅಥವಾ ಅಂಥ ಯಾವುದೇ ವಾಸದ ಮನೆಯಲ್ಲಿನ ಅಥವಾ ಕಟ್ಟಡದಲ್ಲಿನ ಯಾವುದೇ ಕೊಠಡಿಯು ಅದರ ನಿವಾಸಿಗಳ ಆರೋಗ್ಯಕ್ಕೆ ಅಪಾಯವನ್ನುಂಟುಮಾಡುವ ಹಾಗೆ ಮಿತಿಮೀರಿದ ಜನಸಂದಣಿಯಿಂದ ಕೂಡಿದೆಯೆಂದು ಆಯುಕ್ತರಿಗೆ ಕಂಡುಬಂದರೆ, ಅವರು ಅಂಥ ಮಿತಿಮೀರಿದ ಜನಸಂದಣಿಯನ್ನು ಕಡಿಮೆ ಮಾಡಲು ಮ್ಯಾಜಿಸ್ಟ್ರೇಟರಿಗೆ ಅರ್ಜಿ ಸಲ್ಲಿಸಬಹುದು ಮತ್ತು ಮ್ಯಾಜಿಸ್ಟ್ರೇಟರು ತಾವು ಮಾಡುವುದು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ಮಾಡಿದ ತರುವಾಯ, ಲಿಖಿತ ಆದೇಶದ ಮೂಲಕ, ಸದರಿ ಆದೇಶದಲ್ಲಿ ಗೊತ್ತುಪಡಿಸುವಂಥ ನಾಲ್ಕು ವಾರಗಳಿಗೆ ಮೀರದ ಯುಕ್ತ ಕಾಲದೊಳಗೆ, ಆ ಕಟ್ಟಡದಲ್ಲಿ ಅಥವಾ ಕೊಠಡಿಯಲ್ಲಿ ತಂಗಿರುವವರ, ಬಾಡಿಗೆದಾರರ ಅಥವಾ ಇತರ ನಿವಾಸಿಗಳ ಸಂಖ್ಯೆಯನ್ನು ಕಡಿಮೆ ಮಾಡುವ ಮೂಲಕ ಅಂಥ ಮಿತಿಮೀರಿದ ಜನಸಂದಣಿಯನ್ನು ಕಡಿಮೆ ಮಾಡಲು ಆ ಕಟ್ಟಡದ ಅಥವಾ ಕೊಠಡಿಯ ಮಾಲೀಕನನ್ನು ಅಗತ್ಯಪಡಿಸಬಹುದು ಅಥವಾ ಅವರು ನ್ಯಾಯಸಮ್ಮತವೆಂದು ಮತ್ತು ಸರಿಯೆಂದು ತಾವು ಭಾವಿಸಬಹುದಾದಂಥ ಇತರ ಆದೇಶವನ್ನು ಮಾಡಬಹುದು.

(2) ಸ್ಥಾಯೀ ಸಮಿತಿಯು, ಕಟ್ಟಡದ ಅಥವಾ ಕೊಠಡಿಯ ಅಂಥ ಅಧಿಭೋಗದಾರನಿಗೆ (1) ನೇ ಉಪ–ಪ್ರಕರಣದ ಉದ್ದೇಶಗಳಿಗಾಗಿ ಎಷ್ಟು ಮೇಲ್ಮೈ ಘನ ಜಾಗವು ಅವಶ್ಯವೆಂದು ಭಾವಿಸಬೇಕು ಎಂಬುದನ್ನು ಘೋಷಿಸಬಹುದು.

(3) (1)ನೇ ಉಪ–ಪ್ರಕರಣದಲ್ಲಿ ತಿಳಿಸಿದ ಯಾವುದೇ ಕಟ್ಟಡವನ್ನು ಅಥವಾ ಕೊಠಡಿಯನ್ನು ಒಳಬಾಡಿಗೆಗೆ ಕೊಟ್ಟಿದ್ದರೆ, ತಂಗಿರುವವರು, ಬಾಡಿಗೆದಾರರು ಅಥವಾ ಇತರ ವಾಸ್ತವ ನಿವಾಸಿಗಳು ಇರುವ ಕಟ್ಟಡದ ಯಜಮಾನನನ್ನು ಈ ಪ್ರಕರಣದ ಉದ್ದೇಶಗಳಿಗಾಗಿ ಕಟ್ಟಡದ ಅಥವಾ ಕೊಠಡಿಯ ಮಾಲೀಕನೆಂದು ಭಾವಿಸತಕ್ಕದ್ದು.

(4) (1)ನೇ ಉಪ–ಪ್ರಕರಣದ ಮೇರೆಗೆ ನೀಡಲಾದ ಯಾವುದೇ ಕಡ್ಡಾಯ ಸೂಚನೆಯನ್ನು ಪಾಲಿಸಿ ಮಾಲೀಕನು ಕಟ್ಟಡವನ್ನು ಅಥವಾ ಕೊಠಡಿಯನ್ನು ಖಾಲಿ ಮಾಡುವಂತೆ ಅದರಲ್ಲಿರುವ ಬಾಡಿಗೆದಾರನನ್ನು, ತಂಗಿರುವವನನ್ನು ಅಥವಾ ಇತರ ನಿವಾಸಿಯನ್ನು ಅಗತ್ಯಪಡಿಸಿದರೆ ಕಟ್ಟಡವನ್ನು ಅಥವಾ ಕೊಠಡಿಯನ್ನು ಖಾಲಿ ಮಾಡುವುದು; ಆ ಪ್ರತಿಯೊಬ್ಬ ಬಾಡಿಗೆದಾರನ, ತಂಗಿರುವವನ ಅಥವಾ ಇತರ ನಿವಾಸಿಯ ಕರ್ತವ್ಯವಾಗಿರತಕ್ಕದ್ದು.

**340. ಕೆಡವಿದ ಅಪಾಯಕಾರಿ ಕಟ್ಟಡದ ಸಾಮಗ್ರಿಗಳು, ಇತ್ಯಾದಿಗಳನ್ನು ಬಳಸಲು ಅಥವಾ ಮಾರಾಟ ಮಾಡಲು ಆಯುಕ್ತರ ಅಧಿಕಾರ.–** (1) ಆಯುಕ್ತರು, ಈ ಅಧ್ಯಾಯದ ಮೇರೆಗಿನ ಅಥವಾ 462ನೇ ಪ್ರಕರಣದ ಮೇರೆಗಿನ ತಮ್ಮ ಅಧಿಕಾರಗಳ ಬಲದಿಂದಾಗಿ, ಯಾವುದೇ ಕಟ್ಟಡವನ್ನು ಅಥವಾ ಅದರ ಭಾಗವನ್ನು ಕೆಡವಿದಾಗ ಅಥವಾ ಯಾವುದೇ ಮರ ಅಥವಾ ಹಸಿರು ಬೇಲಿ ಅಥವಾ ಪೊದೆ ಅಥವಾ ಅದರ ಭಾಗವನ್ನು ಕತ್ತರಿಸಿಹಾಕಿದಾಗ ಅಥವಾ ಯಾವುದೇ ಹಣ್ಣನ್ನು ಕಿತ್ತಾಗ, ಆಯುಕ್ತರು ಕೆಡವಿದ ಅಥವಾ ಕತ್ತರಿಸಿಹಾಕಿದ ಅಥವಾ ಕಿತ್ತ ಸಾಮಗ್ರಿಗಳನ್ನು ಅಥವಾ ವಸ್ತುಗಳನ್ನು ಮಾರಾಟ ಮಾಡಬಹುದು ಮತ್ತು ಮಾರಾಟದ ಸಂದರ್ಭದಲ್ಲಿ ವಹಿಸಿದ ವೆಚ್ಚಗಳ ಸಂದಾಯಕ್ಕಾಗಿ ಅಥವಾ ಸಂದಾಯದ ಸಲುವಾಗಿ ಮಾರಾಟದ ಹುಟ್ಟುವಳಿಯನ್ನು ವಿನಿಯೋಗಿಸತಕ್ಕದ್ದು ಮತ್ತು ಅಂಥ ಮಾರಾಟದಿಂದ ಪ್ರಾಪ್ತವಾಗುವ ಹೆಚ್ಚುವರಿ ಹಣ ಯಾವುದಾದರೂ ಇದ್ದರೆ, ಅದನ್ನು ಮಾರಾಟದ ದಿನಾಂಕದಿಂದ ಹನ್ನೆರಡು ತಿಂಗಳ ಒಳಗೆ ತಗಾದೆ ಮಾಡಿದಾಗ ಅದಕ್ಕೆ ಹಕ್ಕುಳ್ಳ ಮಾಲೀಕನಿಗೆ ಅಥವಾ ಇತರ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು. ಅಂಥ ತಗಾದೆಯನ್ನು ಮಾಡದಿದ್ದರೆ, ಅಂಥ ಹೆಚ್ಚುವರಿ ಹಣವನ್ನು ನಗರಪಾಲಿಕೆಗೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು.

(2) ಯುಕ್ತ ವಿಚಾರಣೆ ಮಾಡಿದ ತರುವಾಯ, ಈ ಅಧ್ಯಾಯದಲ್ಲಿನ ಯಾವುದೇ ಪ್ರಕರಣದ ಮೇರೆಗೆ ಯಾವ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನೋಟೀಸನ್ನು ಕೊಡಬಹುದಾಗಿದೆಯೋ ಆ ಮಾಲೀಕನು ಅಥವಾ ಅಧಿಭೋಗದಾರನು ಇಲ್ಲದಿರುವುದು ಆಯುಕ್ತರಿಗೆ ಕಂಡುಬಂದರೆ, ಅವರು ತಮಗೆ ಅವಶ್ಯವೆಂದು ಕಂಡುಬರಬಹುದಾದಂತೆ ಅಂಥ ಪ್ರಕರಣದಲ್ಲಿ ತಿಳಿಸಿದ ಸ್ವತ್ತಿನ ಬಗ್ಗೆ ತಾವಾಗಿಯೇ ಅಂಥ ಕ್ರಮವನ್ನು ತೆಗೆದುಕೊಳ್ಳಬಹುದು ಮತ್ತು ಅಂಥ (ಭೂಮಿಯಾಗಿರದ) ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ಮಾರಾಟ ಮಾಡುವುದಕ್ಕಾಗಿ ವಹಿಸಿದ ವೆಚ್ಚವನ್ನು ವಸೂಲು ಮಾಡಬಹುದು.

**341. ನಷ್ಟಪರಿಹಾರದ ಮಿತಿ.–** 328ನೇ ಮತ್ತು 337ನೇ ಪ್ರಕರಣಗಳಲ್ಲಿ ಉಪಬಂಧಿಸಿದಂತೆ ಹೊರತು, ಈ ಅಧ್ಯಾಯದ ಮೇರೆಗಿನ ತನ್ನ ಅಧಿಕಾರಗಳ ಅನುಸಾರವಾಗಿ ಪೌರ ಪ್ರಾಧಿಕಾರವು ಕೈಗೊಂಡ ಯಾವುದೇ ಕ್ರಮದ ಕಾರಣದಿಂದಾಗಿ ಅನುಭವಿಸಿದ ಯಾವುದೇ ಹಾನಿಗಳಿಗಾಗಿನ ನಷ್ಟ ಪರಿಹಾರಕ್ಕೆ ಯಾರೇ ವ್ಯಕ್ತಿಯು ಹಕ್ಕುಳ್ಳವನಾಗಿರತಕ್ಕದ್ದಲ್ಲ.

## ಅಧ್ಯಾಯ – XVII

## ಲೈಸೆನ್ಸುಗಳು ಮತ್ತು ಫೀಜುಗಳು

**342. ವಿನಾಯಿತಿಗಳು.–** (1) ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದಲ್ಲಿ ಅಥವಾ ಉಪವಿಧಿಯಲ್ಲಿ ಇರುವುದು ಯಾವುದೂ, ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಸ್ವಾಧೀನದಲ್ಲಿ ಅಥವಾ ನಿಯಂತ್ರಣದಲ್ಲಿ ಇರುವ ಯಾವುದೇ ಸ್ಥಳಕ್ಕೆ ಸಂಬಂಧಿಸಿದಂತೆ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಯಾವುದೇ ಸ್ವತ್ತಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಅಥವಾ ಅಂಥ ಯಾವುದೇ ನಿಯಮದ ಅಥವಾ ಉಪವಿಧಿಯ ಮೇರೆಗೆ ಯಾವುದೇ ಲೈಸೆನ್ಸನ್ನು ತೆಗೆದುಕೊಳ್ಳುವುದಕ್ಕೆ ಅಥವಾ ಯಾವುದೇ ಅನುಮತಿಯನ್ನು ಪಡೆಯುವುದಕ್ಕೆ ಅಗತ್ಯಪಡಿಸುತ್ತದೆಂದು ಅರ್ಥೈಸತಕ್ಕದ್ದಲ್ಲ.

(2) ಒಕ್ಕೂಟದ ಯಾವುದೇ ಸ್ವತ್ತಿನ ಮೇಲೆ ಯಾವುದೇ ತೆರಿಗೆ ವಿಧಿಸುವುದನ್ನು ಅಥವಾ ಯಾವುದೇ ತೆರಿಗೆ ವಿಧಿಸುವುದನ್ನು ಮುಂದುವರಿಸುವುದನ್ನು ಭಾರತದ ಸಂವಿಧಾನದ 285ನೇ ಅನುಚ್ಛೇದದ ಮೇರೆಗೆ ಅನುಮತಿಸಲಾಗಿರುವಷ್ಟರಮಟ್ಟಿಗೆ ಹೊರತು, ಒಕ್ಕೂಟದ ಸ್ವತ್ತು, ಈ ಅಧಿನಿಯಮದ ಮೇರೆಗೆ ವಿಧಿಸಿದ ಯಾವುದೇ ತೆರಿಗೆಯಿಂದ ವಿನಾಯಿತಿ ಹೊಂದಿರತಕ್ಕದ್ದು.

(3) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ನಗರಪಾಲಿಕೆಯಲ್ಲಿ ನಿಹಿತವಾದ ಯಾವುದೇ ರಸ್ತೆಯ ಅಥವಾ ಭೂಮಿಯ ಮೇಲೆ ಬಸ್ಸುಗಳ ನಿಲುಗಡೆಯ ಸ್ಥಳಗಳನ್ನು ತೋರಿಸುವ ಸ್ತಂಭಗಳನ್ನು ನಿಲ್ಲಿಸುವುದಕ್ಕೆ ಅಥವಾ ಸ್ಥಾಪಿಸುವುದಕ್ಕೆ ಅಥವಾ ಪ್ರಯಾಣಿಕರ ಆಶ್ರಯತಾಣಗಳನ್ನು, ಟಿಕೆಟ್ ಬೂತುಗಳನ್ನು ಮತ್ತು ಬಸ್ ನಿಲ್ದಾಣಗಳನ್ನು ಸ್ಥಾಪಿಸುವುದಕ್ಕೆ ಅಥವಾ ನಿರ್ಮಿಸುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಯಾವುದೇ ಲೈಸೆನ್ಸು ಅಥವಾ ಅನುಮತಿಯನ್ನು ಪಡೆಯುವುದು ಅವಶ್ಯವಿರತಕ್ಕದ್ದಲ್ಲ:

ಪರಂತು, ಸರ್ಕಾರದ ಪೂರ್ವ ಮಂಜೂರಾತಿ ಪಡೆದ ಹೊರತು, ಈ ಪ್ರಕರಣದ ಮೇರೆಗೆ ಯಾವುದೇ ಪ್ರಯಾಣಿಕ ಆಶ್ರಯ ತಾಣವನ್ನು, ಟಿಕೆಟ್ ಬೂತನ್ನು ಅಥವಾ ಬಸ್ ನಿಲ್ದಾಣವನ್ನು ಸ್ಥಾಪಿಸತಕ್ಕದ್ದಲ್ಲ ಅಥವಾ ನಿರ್ಮಿಸತಕ್ಕದ್ದಲ್ಲ.

(4) ಈ ಪ್ರಕರಣದ ಮೇರೆಗೆ ಸ್ಥಾಪಿಸಿದ ಅಥವಾ ನಿರ್ಮಿಸಿದ ಪ್ರಯಾಣಿಕ ಆಶ್ರಯ ತಾಣಗಳು, ಟಿಕೆಟ್ ಬೂತುಗಳು ಮತ್ತು ಬಸ್ ನಿಲ್ದಾಣಗಳಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು, ಸಂಸ್ಥೆಯ ಮತ್ತು ನಗರಪಾಲಿಕೆಯ ನಡುವೆ ಒಪ್ಪಂದ ಮಾಡಿಕೊಳ್ಳಬಹುದಾದಂಥ ಮತ್ತು ಅಂಥ ಒಪ್ಪಂದವು ಇಲ್ಲದಿರುವಲ್ಲಿ, ಸರ್ಕಾರವು ನಿರ್ಧರಿಸಬಹುದಾದಂತೆ ವಾರ್ಷಿಕ ನೆಲಬಾಡಿಗೆಯನ್ನು ನಗರಪಾಲಿಕೆಗೆ ಸಂದಾಯ ಮಾಡಲು ಹೊಣೆಯಾಗಿರತಕ್ಕದ್ದು.

**343. ವಸತಿ ಗೃಹಗಳಿಗೆ ಸಂಬಂಧಿಸಿದಂತೆ ನಿಷೇಧ.–** (1) ಯಾರೇ ವ್ಯಕ್ತಿಯು, ಆಯುಕ್ತರು ಈ ಬಗ್ಗೆ ಮಂಜೂರ್ಮಾಡಿದ ಲೈಸೆನ್ಸು ಇಲ್ಲದೆ ಅಥವಾ ಲೈಸೆನ್ಸಿನ ನಿಬಂಧನೆಗಳಿಗೆ ಅನುಸಾರವಾಗಿ ಅಲ್ಲದೆ ಅನ್ಯಥಾ ಯಾವುದೇ ವಸತಿ ಗೃಹ, ಖಾನಾವಳಿ, ಚಹದ ಅಂಗಡಿ, ಕಾಫಿಮನೆ, ಕೆಫೆ, ಉಪಹಾರ ಗೃಹ, ಉಪಾಹಾರ ಕೋಣೆಯನ್ನು, ವಿಶ್ರಾಂತಿಗಾಗಿ ಅಥವಾ ಯಾವುದೇ ಆಹಾರ ಅಥವಾ ಪಾನೀಯದ ಸೇವನೆಗಾಗಿ ಸಾರ್ವಜನಿಕರಿಗೆ ಪ್ರವೇಶಾವಕಾಶವಿರುವ ಯಾವುದೇ ಸ್ಥಳವನ್ನು ಅಥವಾ ಆಹಾರವನ್ನು ಮಾರಾಟ ಮಾಡುವ ಅಥವಾ ಮಾರಾಟಕ್ಕಾಗಿ ಆಹಾರವನ್ನು ತಯಾರಿಸುವ ಯಾವುದೇ ಸ್ಥಳವನ್ನು ಇಟ್ಟುಕೊಳ್ಳತಕ್ಕದ್ದಲ್ಲ.

**ವಿವರಣೆ.–** ಈ ಉಪ–ಪ್ರಕರಣದಲ್ಲಿ "ವಸತಿ ಗೃಹ" ಎಂದರೆ ಸರ್ಕಾರವು ಅಥವಾ ಸ್ಥಳೀಯ ಪ್ರಾಧಿಕಾರವು ನಿರ್ವಹಿಸುತ್ತಿರುವ ಛತ್ರ ಅಥವಾ ವಿಶ್ರಾಂತಿ ಗೃಹವನ್ನು ಹೊರತುಪಡಿಸಿ, ಹೋಟೆಲು, ಭೋಜನಗೃಹ, ಛತ್ರ ಅಥವಾ ವಿಶ್ರಾಂತಿ ಗೃಹ ಅಥವಾ ಆಗಾಗ್ಗೆ ಬರುವ ಅಭ್ಯಾಗತರನ್ನು ಬರಮಾಡಿಕೊಳ್ಳುವ ಮತ್ತು ಹಣ ಸಂದಾಯದ ಮೇಲೆ ಆಹಾರವನ್ನು ಒದಗಿಸಿ ಅಥವಾ ಒದಗಿಸದೆಯೇ ಮಲಗಲು ಸ್ಥಳಾವಕಾಶವನ್ನು ಒದಗಿಸುವ ಯಾವುದೇ ಸ್ಥಳ, ಆದರೆ ಸಾರ್ವಜನಿಕ ಅಥವಾ ಅಂಗೀಕೃತ ನಿಯಂತ್ರಣದಲ್ಲಿರುವ ವಿದ್ಯಾರ್ಥಿ ನಿಲಯವನ್ನು ಒಳಗೊಳ್ಳುವುದಿಲ್ಲ.

(2) ಲೈಸೆನ್ಸ್‌ಗೆ ಒಳಪಟ್ಟಿರುವ ಆವರಣವನ್ನು ಅಂಥ ಲೈಸೆನ್ಸಿನ ಷರತ್ತುಗಳಿಗೆ ಅಥವಾ ಅಂಥ ಆವರಣಕ್ಕೆ ಸಂಬಂಧಿಸಿದಂತೆ 423ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ಉಪವಿಧಿಯ ಉಪಬಂಧಗಳಿಗೆ ಅನುಸಾರವಾಗಿ ಇಟ್ಟುಕೊಂಡಿಲ್ಲವೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆದವನನ್ನು ಪ್ರಾಸಿಕ್ಯೂಟ್ ಮಾಡಿರಲಿ ಅಥವಾ ಮಾಡಿಲ್ಲದಿರಲಿ ಅವರು (1)ನೇ ಉಪ–ಪ್ರಕರಣದ ಮೇರೆಗೆ ಮಂಜೂರ್ಮಾಡಿದ ಯಾವುದೇ ಲೈಸೆನ್ಸನ್ನು ರದ್ದುಗೊಳಿಸಬಹುದು ಅಥವಾ ಅಮಾನತಿನಲ್ಲಿಡಬಹುದು.

**344. ಪ್ರಾಣಿಗಳನ್ನು ಮತ್ತು ಪಕ್ಷಿಗಳನ್ನು ಸಾಕುವುದಕ್ಕೆ ಮತ್ತು ಪ್ರಾಣಿಗಳಿಗೆ ಆಹಾರವನ್ನು ಉಣಿಸುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು,–

(ಎ) ಆಯುಕ್ತರ ಅನುಮತಿಯಿಲ್ಲದೆ ಅಥವಾ ಅಂಥ ಅನುಮತಿಯ ನಿಬಂಧನೆಗಳಿಗೆ ಅನುಸಾರವಾಗಿ ಅಲ್ಲದೆ, ಅನ್ಯಥಾ ನಗರದ ಯಾವುದೇ ಭಾಗದಲ್ಲಿ ಹಂದಿಗಳನ್ನು ಸಾಕತಕ್ಕದ್ದಲ್ಲ.

(ಬಿ) ಉಪದ್ರವಕಾರಿಯಾಗುವಂತೆ ಅಥವಾ ಅಪಾಯಕಾರಿಯಾಗುವಂತೆ ತನ್ನ ಆವರಣದಲ್ಲಿ ಯಾವುದೇ ಪ್ರಾಣಿಯನ್ನು ಅಥವಾ ಪಕ್ಷಿಯನ್ನು ಸಾಕತಕ್ಕದ್ದಲ್ಲ.

(ಸಿ) ಹೈನುಗಾರಿಕೆ ಉದ್ದೇಶಗಳಿಗಾಗಿ ಸಾಕಿರುವ ಅಥವಾ ಆಹಾರಕ್ಕಾಗಿ ಉಪಯೋಗಿಸಬಹುದಾದ ಯಾವುದೇ ಪ್ರಾಣಿಗೆ ಹೊಲಸನ್ನು ತಿನ್ನಿಸತಕ್ಕದ್ದಲ್ಲ ಅಥವಾ ತಿನ್ನಿಸಲು ಅನುಮತಿಸತಕ್ಕದ್ದಲ್ಲ.

**345. ತೊಂಡಲೆಯುವ ಹಂದಿಗಳ ಮತ್ತು ನಾಯಿಗಳ ನಾಶ.–** ಯಾವುವೇ ನಾಯಿಗಳು [1][XXX][1] ಅಥವಾ ಹಂದಿಗಳು ತೊಂಡಲೆಯುವುದು ಕಂಡುಬಂದರೆ, ಅವುಗಳನ್ನು, ಆಯುಕ್ತರು ಲಿಖಿತದಲ್ಲಿ ಆ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಕ್ಷಿಪ್ರವಾಗಿ ನಾಶಗೊಳಿಸಬಹುದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 01.06.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**346. ಪ್ರಾಣಿಗಳನ್ನು ಸಾಕಿರುವಂಥ ಸ್ಥಳಗಳಿಗೆ ಲೈಸೆನ್ಸುಗಳು.–** (1) ಲಾಭದ ಉದ್ದೇಶಗಳಿಗಾಗಿ ನಾಲ್ಕು ಕಾಲಿನ ಪ್ರಾಣಿಗಳನ್ನು ಸಾಕಿರುವ ಅಥವಾ ಅವುಗಳನ್ನು ಸೇರಿಸಿಕೊಂಡಿರುವ ಯಾವುದೇ ಲಾಯ, ಪಶುರೋಗ ಚಿಕಿತ್ಸಾಲಯ, ಸ್ಟ್ಯಾಂಡು, ಕೊಟ್ಟಿಗೆ, ಅಂಗಳ ಅಥವಾ ಇತರ ಸ್ಥಳದ ಮಾಲೀಕನು ಅಥವಾ ಅಧಿಭೋಗದಾರನು [1][ಪ್ರತಿ ಐದನೇ ವರ್ಷ][1]ದ ಮೊದಲನೆಯ ತಿಂಗಳಿನಲ್ಲಿ ಅಥವಾ ಹೊಸದಾಗಿ ತೆರೆಯುವ ಸ್ಥಳದ ಸಂದರ್ಭದಲ್ಲಿ ಅಂಥ ಸ್ಥಳವನ್ನು ತೆರೆಯುವುದಕ್ಕೆ ಒಂದು ತಿಂಗಳ ಮೊದಲು ಲೈಸೆನ್ಸ್‌ಗಾಗಿ ಆಯುಕ್ತರಿಗೆ ಅರ್ಜಿ ಸಲ್ಲಿಸತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಆಯುಕ್ತರು ಆದೇಶದ ಮೂಲಕ ಮತ್ತು ಅವರು ಸೂಕ್ತವೆಂದು ಬಾವಿಸುವಂಥ ನಿರ್ಬಂಧಗಳು ಮತ್ತು ನಿಯಂತ್ರಣಗಳ ಮೇರೆಗೆ ಅಂಥ ಲೈಸೆನ್ಸನ್ನು ಮಂಜೂರ್ಮಾಡಬಹುದು ಅಥವಾ ಮಂಜೂರ್ಮಾಡಲು ನಿರಾಕರಿಸಬಹುದು.

(3) ಯಾರೇ ವ್ಯಕ್ತಿಯು ಲೈಸೆನ್ಸು ಇಲ್ಲದೆ ಅಥವಾ ಲೈಸೆನ್ಸ್‌ಗೆ ಅನುಸಾರವಾಗಿ ಅಲ್ಲದೆ ಅನ್ಯಥಾ, ಅಂಥ ಯಾವುದೇ ಉದ್ದೇಶಕ್ಕಾಗಿ ಯಾವುದೇ ಸ್ಥಳವನ್ನು ಉಪಯೋಗಿಸತಕ್ಕದ್ದಲ್ಲ ಅಥವಾ ಯಾವುದೇ ಸ್ಥಳವನ್ನು ಉಪಯೋಗಿಸಲು ಅನುಮತಿಸತಕ್ಕದ್ದಲ್ಲ.

**347. ಲಾಯಗಳು, ದನದ ಕೊಟ್ಟಿಗೆಗಳು ಮತ್ತು ಗೋಶಾಲೆಗಳ ಮೇಲಿನ ನಿಯಂತ್ರಣದ ಬಗ್ಗೆ ಸಾಮಾನ್ಯ ಅಧಿಕಾರಗಳು.–** (1) ಎಲ್ಲ ಲಾಯಗಳು, ದನದ ಕೊಟ್ಟಿಗೆಗಳು ಮತ್ತು ಗೋಶಾಲೆಗಳು ಅವುಗಳ ಸ್ಥಳ, ನಿರ್ಮಾಣ, ಸಾಮಗ್ರಿ ಮತ್ತು ಅಳತೆಗಳಿಗೆ ಸಂಬಂಧಿಸಿದಂತೆ ಆಯುಕ್ತರ ಪರಿಶೀಲನೆಗೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕದ್ದು.

(2) ಆಯುಕ್ತರು, ಯಾವುದೇ ಲಾಯ, ದನದ ಕೊಟ್ಟಿಗೆ ಅಥವಾ ಗೋಶಾಲೆಯನ್ನು ಬದಲಾಯಿಸಲು, ನೆಲಗಟ್ಟು ಹಾಕಲು, ಚರಂಡಿ ವ್ಯವಸ್ಥೆ ಕಲ್ಪಿಸಲು, ದುರಸ್ತಿ ಮಾಡಲು, ಸೋಂಕು ನಿವಾರಿಸಲು ಅಥವಾ ಅದನ್ನು ಸಾಕಷ್ಟು ಸ್ವಚ್ಛಗೊಳಿಸಲು ಅವಕಾಶವಿರುವಂಥ ಸ್ಥಿತಿಯಲ್ಲಿಡಲು ಅಥವಾ ಅದಕ್ಕೆ ನೀರನ್ನು ಸರಬರಾಜು ಮಾಡಲು ಅಥವಾ ಒಳಚರಂಡಿಯೊಂದಿಗೆ ಸಂಪರ್ಕ ಕಲ್ಪಿಸಲು ಅಥವಾ ಕೆಡವಿಹಾಕಲು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

(3) ಅಂಥ ಪ್ರತಿಯೊಂದು ನೋಟೀಸನ್ನು, ಲಾಯದ, ದನದ ಕೊಟ್ಟಿಗೆಯ ಅಥವಾ ಗೋಶಾಲೆಯ ಮಾಲೀಕನ ಅಥವಾ ಅದರ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯ ಹೆಸರಿಗೆ ಕಳುಹಿಸತಕ್ಕದ್ದು.

(4) ಅಂಥ ಯಾವುದೇ ನೋಟೀಸಿನ ಅನುಸಾರವಾಗಿ ಯಾವುದೇ ಕೆಲಸವನ್ನು ನಿರ್ವಹಿಸುವುದಕ್ಕೆ ತಗಲಿದ ವೆಚ್ಚವನ್ನು ಮಾಲೀಕನು ಭರಿಸತಕ್ಕದ್ದು.

(5) ಯಾವುದೇ ಲಾಯ, ದನದ ಕೊಟ್ಟಿಗೆ ಅಥವಾ ಗೋಶಾಲೆಯನ್ನು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಗತ್ಯಪಡಿಸಿದ ರೀತಿಯಲ್ಲಿ ನಿರ್ಮಿಸದೆ ಇದ್ದರೆ ಅಥವಾ ಇಟ್ಟುಕೊಂಡು ಬರದಿದ್ದರೆ ಆಯುಕ್ತರು ನೋಟೀಸಿನ ಮೂಲಕ ಅದನ್ನು ಇನ್ನುಮುಂದೆ ಲಾಯ, ದನದ ಕೊಟ್ಟಿಗೆ ಅಥವಾ ಗೋಶಾಲೆಯಾಗಿ ಬಳಸಬಾರದೆಂದು ನಿರ್ದೇಶಿಸಬಹುದು. ಅಂಥ ಪ್ರತಿಯೊಂದು ನೋಟೀಸಿನಲ್ಲಿ ಅದನ್ನು ಯಾವ ಕಾರಣಗಳ ಮೇಲೆ ನೀಡಲಾಗಿದೆಯೋ ಆ ಕಾರಣಗಳನ್ನು ತಿಳಿಸತಕ್ಕದ್ದು.

**348. ತಂಗುದಾಣಗಳು, ಗಾಡಿ ನಿಲ್ದಾಣಗಳು, ಇತ್ಯಾದಿಗಳನ್ನು ಒದಗಿಸುವುದು.–** (1) ಆಯುಕ್ತರು, ಸಾರ್ವಜನಿಕ ತಂಗುದಾಣಗಳು, ಗಾಡಿ ನಿಲ್ದಾಣಗಳು, ದನದ ಕೊಟ್ಟಿಗೆಗಳು ಮತ್ತು ಗೋಶಾಲೆಗಳನ್ನು ನಿರ್ಮಿಸಬಹುದು ಅಥವಾ ಒದಗಿಸಬಹುದು ಮತ್ತು ಅವುಗಳನ್ನು ಬಳಸುವುದಕ್ಕಾಗಿ ಸ್ಥಾಯೀ ಸಮಿತಿಯು ನಿಗದಿಪಡಿಸಬಹುದಾದಂಥ ಫೀಜುಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು.

**ವಿವರಣೆ.–** ಈ ಅಧಿನಿಯಮದ ಉದ್ದೇಶಗಳಿಗಾಗಿ ಗಾಡಿ ನಿಲ್ದಾಣವು, ಮೋಟಾರು ವಾಹನಗಳ ಅಧಿನಿಯಮ 1939ರ (1939ರ ಕೇಂದ್ರ ಅಧಿನಿಯಮ IV) ಅರ್ಥವ್ಯಾಪ್ತಿಯೊಳಗೆ ಮೋಟಾರು ವಾಹನಗಳನ್ನು ಒಳಗೊಂಡತೆ ಸಾಗಣೆ ವಾಹನಗಳ ಮತ್ತು ಪ್ರಾಣಿಗಳ ನಿಲ್ದಾಣವನ್ನು ಒಳಗೊಳ್ಳುತ್ತದೆ.

(2) ಅಂಥ ಪ್ರತಿಯೊಂದು ಸ್ಥಳವನ್ನು ಬಳಸುವುದಕ್ಕಾಗಿ ಸ್ಥಾಯೀ ಸಮಿತಿಯು ನಿಗದಿಪಡಿಸಿದ ಫೀಜುಗಳ ಪಟ್ಟಿಯನ್ನು ಆ ಸ್ಥಳದ ಎದ್ದು ಕಾಣುವ ಭಾಗದಲ್ಲಿ ಕನ್ನಡ ಮತ್ತು ಇಂಗ್ಲೀಷಿನಲ್ಲಿ ಹಾಕತಕ್ಕದ್ದು.

(3) ಆಯುಕ್ತರು, ತಾವು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಒಂದು ಬಾರಿಗೆ [1][ಐದು ವರ್ಷ][1]ಗಳಿಗೆ ಮೀರದ ಯಾವುದೇ ಅವಧಿಗೆ ಅಂಥ ಫೀಜುಗಳ ಸಂಗ್ರಹಣೆಯನ್ನು ಗುತ್ತಿಗೆಗೆ ನೀಡಬಹುದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**349. ಸಾರ್ವಜನಿಕ ಸ್ಥಳಗಳನ್ನು ಅಥವಾ ಸಾರ್ವಜನಿಕ ಬೀದಿಯ ಬದಿಗಳನ್ನು ಗಾಡಿ ನಿಲ್ದಾಣಗಳು, ಇತ್ಯಾದಿಗಳಾಗಿ ಬಳಸುವುದಕ್ಕೆ ನಿಷೇಧ.–** ಆಯುಕ್ತರು, ಸಾರ್ವಜನಿಕ ತಂಗುದಾಣ, ಗಾಡಿ ನಿಲ್ದಾಣ, ದನದ ಕೊಟ್ಟಿಗೆ, ಅಥವಾ ಗೋಶಾಲೆಯನ್ನು ಒದಗಿಸಿರುವಲ್ಲಿ, ಅವುಗಳಿಂದ, ಸ್ಥಾಯೀ ಸಮಿತಿಯು ನಿರ್ಧರಿಸಬಹುದಾದಂಥ ಅಂತರದೊಳಗೆ ಯಾವುದೇ ಸಾರ್ವಜನಿಕ ಸ್ಥಳವನ್ನು ಅಥವಾ ಯಾವುದೇ ಸಾರ್ವಜನಿಕ ಬೀದಿಯ ಬದಿಗಳನ್ನು ಯಾರೇ ವ್ಯಕ್ತಿಯು ಅದೇ ಉದ್ದೇಶಕ್ಕಾಗಿ ಬಳಸುವುದನ್ನು ಅವರು ನಿಷೇಧಿಸಬಹುದು.

**350. ಗಾಡಿ ನಿಲ್ದಾಣಗಳ ಫೀಜುಗಳ ವಸೂಲಿ, ಇತ್ಯಾದಿ.–** (1) 348ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೇರೆಗೆ ವಿಧಿಸಬಹುದಾದ ಫೀಜನ್ನು ತಗಾದೆ ಮಾಡಿದಾಗ ಸಂದಾಯ ಮಾಡದಿದ್ದರೆ, ಅಂಥ ಫೀಜನ್ನು ಸಂಗ್ರಹಿಸಲು ನೇಮಕಗೊಂಡ ವ್ಯಕ್ತಿಯು, ಬಾಕಿಯಿರುವ ಮೊಬಗಲನ್ನು ತೀರಿಸಲು ಸಾಕಷ್ಟು ಆಗುವುದೆಂದು ಅವನು ಅಭಿಪ್ರಾಯಪಟ್ಟರೆ, ಅಂಥ ಗಾಡಿ, ವಾಹನ, ಮೋಟಾರು ವಾಹನ ಅಥವಾ ಪ್ರಾಣಿಯ ಮೇಲೆ ಹೇರಿರುವ ಸಾಮಗ್ರಿಗಳು ಅಥವಾ ಸರಕುಗಳ ಅಂಥ ಭಾಗವನ್ನು ವಶಕ್ಕೆ ತೆಗೆದುಕೊಳ್ಳಬಹುದು ಮತ್ತು ತಡೆಹಿಡಿದಿಟ್ಟುಕೊಳ್ಳಬಹುದು. ಅಂಥ ಯಾವುದೇ ಸಾಮಗ್ರಿಗಳು ಅಥವಾ ಸರಕುಗಳು ಇಲ್ಲದಿರುವಲ್ಲಿ ಅಥವಾ ಅವುಗಳ ಮೌಲ್ಯವು ಬಾಕಿಯಿರುವ ಮೊಬಲಗನ್ನು ತೀರಿಸಲು ಸಾಕಷ್ಟು ಆಗದಿರುವ ಸಂದರ್ಭದಲ್ಲಿ ಅವನು ಗಾಡಿ, ವಾಹನ, ಮೋಟಾರು ವಾಹನ ಅಥವಾ ಪ್ರಾಣಿಯನ್ನು ವಶಕ್ಕೆ ತೆಗೆದುಕೊಳ್ಳಬಹುದು ಅಥವಾ ತಡೆಹಿಡಿದಿಟ್ಟುಕೊಳ್ಳಬಹುದು.

(2) ಉಪ–ಪ್ರಕರಣ (1)ರ ಮೇರೆಗೆ ವಶಕ್ಕೆ ತೆಗೆದುಕೊಂಡ ಎಲ್ಲ ಸ್ವತ್ತನ್ನು ಇಪ್ಪತ್ನಾಲ್ಕು ಗಂಟೆಗಳೊಳಗೆ ಆಯುಕ್ತರಿಗೆ ಅಥವಾ ಅಂಥ ಸ್ವತ್ತನ್ನು ಸ್ವೀಕರಿಸಲು ಅಥವಾ ಮಾರಾಟ ಮಾಡಲು ಅವರು ಅಧಿಕೃತಗೊಳಿಸಿರಬಹುದಾದಂಥ ವ್ಯಕ್ತಿಗೆ ಕಳುಹಿಸತಕ್ಕದ್ದು ಮತ್ತು ಆಯುಕ್ತರು, ತತ್‌ಕ್ಷಣ, ವಶಕ್ಕೆ ತೆಗೆದುಕೊಂಡ ಸ್ವತ್ತಿನ ಮಾಲೀಕನಿಗೆ ಅಥವಾ ಮಾಲೀಕನು ಗೊತ್ತಿರದಿದ್ದರೆ ಅಥವಾ ಅವನು ನಗರದೊಳಗೆ ವಾಸವಾಗಿಲ್ಲದಿದ್ದರೆ, ಅಂಥ ಸ್ವತ್ತನ್ನು ವಶಕ್ಕೆ ತೆಗೆದುಕೊಂಡ ಕಾಲದಲ್ಲಿ ಅದರ ಪ್ರಭಾರದಲ್ಲಿದ್ದ ವ್ಯಕ್ತಿಗೆ ನೋಟೀಸನ್ನು ಅಥವಾ ಅಂಥ ವ್ಯಕ್ತಿಯು ಸಿಗದಿದ್ದರೆ ಸಾರ್ವಜನಿಕ ನೋಟೀಸಿನಲ್ಲಿ

ನಿರ್ದಿಷ್ಟಪಡಿಸಲಾಗುವ ಸ್ಥಳದಲ್ಲಿ, ಆ ಸ್ವತ್ತನ್ನು ಬಹಿರಂಗ ಹರಾಜಿನಲ್ಲಿ, ಅಂಥ ನೋಟೀಸನ್ನು ಜಾರಿ ಮಾಡಿದ ಅಥವಾ ಪ್ರಕಟಿಸಿದ ದಿನಾಂಕದಿಂದ ಭಾನುವಾರವನ್ನು ಹೊರತುಪಡಿಸಿ ಎರಡು ದಿನಗಳು ಮುಕ್ತಾಯವಾದ ತರುವಾಯ ಮಾರಾಟ ಮಾಡಲಾಗುವುದೆಂದು ಅಂಥ ನೋಟೀಸನ್ನು ನೀಡತಕ್ಕದ್ದು.

(3) ಮಾರಾಟವು ಪ್ರಾರಂಭವಾಗುವುದಕ್ಕೆ ಮುಂಚೆ ಯಾವುದೇ ಕಾಲದಲ್ಲಿ, ಫೀಜಿನ ಬಾಬ್ತು ಬಾಕಿ ಇರುವ ಮೊಬಲಗನ್ನು, ಸ್ವತ್ತನ್ನು ವಶಕ್ಕೆ ತೆಗೆದುಕೊಳ್ಳುವುದಕ್ಕೆ, ತಡೆಹಿಡಿದಿಟ್ಟುಕೊಳ್ಳುವುದಕ್ಕೆ ಮತ್ತು ಅದರ ಉದ್ದೇಶಿತ ಮಾರಾಟಕ್ಕೆ ಸಂಬಂಧಪಟ್ಟಂತೆ ವಹಿಸಿದ ವೆಚ್ಚಗಳೊಂದಿಗೆ, ಆಯುಕ್ತರಿಗೆ ಅಥವಾ ಮೇಲೆ ಹೇಳಿದಂತೆ ಅಧಿಕೃತನಾದ ಇತರ ವ್ಯಕ್ತಿಗೆ ಕೊಟ್ಟರೆ ವಶಕ್ಕೆ ತೆಗೆದುಕೊಂಡ ಸ್ವತ್ತನ್ನು ತತ್‌ಕ್ಷಣವೇ ಬಿಡುಗಡೆ ಮಾಡತಕ್ಕದ್ದು.

(4) ಅಂಥ ಯಾವುದೇ ಮೊಬಲಗನ್ನು ಕೊಡದಿದ್ದರೆ ಸ್ವತ್ತನ್ನು ಅಥವಾ ಅದರ ಸಾಕಷ್ಟು ಭಾಗವನ್ನು ಮಾರಾಟ ಮಾಡಬಹುದು ಮತ್ತು ಮಾರಾಟದ ಹುಟ್ಟುವಳಿಯನ್ನು,-

(i) ಫೀಜಿನ ಬಾಬ್ತು ಬಾಕಿಯಿರುವ ಮೊಬಲಗನ್ನು;

(ii) ಆಯುಕ್ತರು ನಿರ್ದೇಶಿಸಬಹುದಾದಂತೆ ಫೀಜಿನ ಮೊಬಲಗನ್ನು ಮೀರದಂಥ ದಂಡವನ್ನು;

(iii) ವಶಕ್ಕೆ ತೆಗೆದುಕೊಳ್ಳುವುದಕ್ಕೆ, ತಡೆಹಿಡಿದಿಟ್ಟುಕೊಳ್ಳವುದಕ್ಕೆ ಮತ್ತು ಮಾರಾಟಕ್ಕೆ ಸಂಬಂಧಪಟ್ಟಂತೆ ವಹಿಸಿದ ವೆಚ್ಚಗಳನ್ನು

– ಸಂದಾಯ ಮಾಡುವುದಕ್ಕಾಗಿ ವಿನಿಯೋಗಿಸಬಹುದು.

(5) (4)ನೇ ಉಪ-ಪ್ರಕರಣದಲ್ಲಿ ತಿಳಿಸಿದ ಸಂದಾಯಗಳನ್ನು ಮಾಡಿದ ತರುವಾಯ ಮಾರಾಟದ ಹುಟ್ಟುವಳಿಯಲ್ಲಿ ಹೆಚ್ಚುವರಿ ಹಣ ಏನಾದರೂ ಇದ್ದರೆ ಅಥವಾ ಮಾರಾಟವಾಗದೇ ಉಳಿದಿರುವ ಯಾವುದೇ ಸ್ವತ್ತು ಇದ್ದರೆ, ಅದನ್ನು ಮಾಲೀಕನಿಗೆ ಅಥವಾ ಅದಕ್ಕೆ ಹಕ್ಕುಳ್ಳ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು ಅಥವಾ ವಶಕ್ಕೆ ಒಪ್ಪಿಸತಕ್ಕದ್ದು.

**351. ಖಾಸಗಿ ಗಾಡಿ ನಿಲ್ದಾಣಕ್ಕೆ ಲೈಸೆನ್ಸು.-** (1) ಯಾರೇ ವ್ಯಕ್ತಿಯು, ಹೊಸ ಖಾಸಗಿ ಗಾಡಿ ನಿಲ್ದಾಣವನ್ನು ಪ್ರಾರಂಭಿಸಲು ಅಥವಾ ಖಾಸಗಿ ಗಾಡಿ ನಿಲ್ದಾಣವನ್ನು ಇಟ್ಟುಕೊಂಡು ಬರಲು ಆಯುಕ್ತರಿಂದ ಲೈಸೆನ್ಸು ಪಡೆದ ಹೊರತು ಹಾಗೆ ಮಾಡತಕ್ಕದ್ದಲ್ಲ.

(2) ಯಾವ ಸ್ಥಳಕ್ಕೆ ಸಂಬಂಧಿಸಿದಂತೆ ಲೈಸೆನ್ಸು ಕೋರಲಾಗಿದೆಯೋ ಆ ಸ್ಥಳದ ಮಾಲೀಕನು, ಸಂದರ್ಭಾನುಸಾರ ಗಾಡಿ ನಿಲ್ದಾಣವಾಗಿ ಅಂಥ ಸ್ಥಳವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಮೂವತ್ತು ದಿನಗಳಿಗೆ ಕಡಿಮೆಯಿಲ್ಲದ ಅಥವಾ [1][ಲೈಸನ್ಸಿನ ಅವಧಿ ಮುಕ್ತಾಯವಾಗುವುದಕ್ಕೆ][1] ಮುಂಚೆ ಮೂವತ್ತು ದಿನಗಳಿಗೆ ಕಡಿಮೆಯಿಲ್ಲದ ಅವಧಿಯೊಳಗೆ ಅಂಥ ಲೈಸೆನ್ಸ್‌ಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಆಯುಕ್ತರು, ಕಾನೂನುಬದ್ಧವಾಗಿ ಈಗಾಗಲೇ ಸ್ಥಾಪಿಸಿರುವ ಖಾಸಗಿ ಗಾಡಿ ನಿಲ್ದಾಣಕ್ಕೆ ಸಂಬಂಧಿಸಿದಂತೆ ಮತ್ತು ಹೊಸ ಖಾಸಗಿ ಗಾಡಿ ನಿಲ್ದಾಣಕ್ಕೆ ಸಂಬಂಧಿಸಿದಂತೆ ತಮ್ಮ ವಿವೇಚನಾನುಸಾರ, ಮೇಲ್ವಿಚಾರಣೆ ಮತ್ತು ಪರಿಶೀಲನೆಗೆ ಸಂಬಂಧಿಸಿದ ವಿನಿಯಮಗಳಿಗೆ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಅವರು ಸರಿಯೆಂದು ಭಾವಿಸುವಂಥ ಷರತ್ತುಗಳಿಗೆ ಒಳಪಟ್ಟು, ಕೋರಿರುವ ಲೈಸೆನ್ಸನ್ನು ಮಂಜೂರು ಮಾಡಬಹುದು ಅಥವಾ ಅವರು ಯಾವುದೇ ಹೊಸ ಗಾಡಿ ನಿಲ್ದಾಣಕ್ಕೆ ಅಂಥ ಯಾವುದೇ ಲೈಸೆನ್ಸನ್ನು ಮಂಜೂರು ಮಾಡಲು ನಿರಾಕರಿಸಬಹುದು. ಆಯುಕ್ತರು, ಲೈಸೆನ್ಸ್ ಷರತ್ತುಗಳ ಉಲ್ಲಂಘನೆಗಾಗಿ, ಯಾವುದೇ ಕಾಲದಲ್ಲಿ ಈ ಪ್ರಕರಣದ ಮೇರೆಗೆ ಮಂಜೂರು ಮಾಡಲಾದ, ಯಾವುದೇ ಲೈಸೆನ್ಸನ್ನು ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು. ಆಯುಕ್ತರು, ನಿರ್ದಿಷ್ಟ ದಿನಾಂಕದಿಂದ ಜಾರಿಗೆ ಬರುವಂತೆ, ಲೈಸೆನ್ಸಿನ ಷರತ್ತುಗಳನ್ನೂ ಸಹ ಮಾರ್ಪಾಟು ಮಾಡಬಹುದು.

(4) ಈ ಪ್ರಕರಣದ ಮೇರೆಗೆ ಲೈಸೆನ್ಸನ್ನು ಮಂಜೂರ್ಮಾಡಿರುವಾಗ, ನಿರಾಕರಿಸಿರುವಾಗ, ಅಮಾನತುಗೊಳಿಸಿರುವಾಗ, ರದ್ದುಗೊಳಿಸಿರುವಾಗ ಅಥವಾ ಮಾರ್ಪಾಟು ಮಾಡಿರುವಾಗ ಆಯುಕ್ತರು, ಅಂಥ ಮಂಜೂರಾತಿ, ನಿರಾಕರಣೆ, ಅಮಾನತು, ರದ್ದಿಯಾತಿ ಅಥವಾ ಮಾರ್ಪಾಟಿನ ಬಗ್ಗೆ ನೋಟೀಸನ್ನು ಇಂಗ್ಲೀಷ್‌ನಲ್ಲಿ ಮತ್ತು ಕನ್ನಡದಲ್ಲಿ ಯಾವ ಸ್ಥಳಕ್ಕೆ ಸಂಬಂಧಿಸಿದಂತೆ ಲೈಸೆನ್ಸನ್ನು ಕೋರಲಾಗಿತ್ತೋ ಅಥವಾ ಪಡೆಯಲಾಗಿತ್ತೋ ಆ ಸ್ಥಳದ ಪ್ರವೇಶ ಭಾಗದಲ್ಲಿ ಅಥವಾ ಅದರ ಹತ್ತಿರದಲ್ಲಿ ಅಥವಾ ಅದರ ಯಾವುದೇ ಎದ್ದು ಕಾಣುವ ಭಾಗದಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

(5) ಆಯುಕ್ತರು ಈ ಪ್ರಕರಣದ ಮೇರೆಗೆ ಮಂಜೂರ್ಮಾಡಿದ ಪ್ರತಿಯೊಂದು ಲೈಸೆನ್ಸಿಗೆ ಪ್ರತಿ ವರ್ಷಕ್ಕೆ ಆರು ನೂರು ರೂಪಾಯಿಗಳಿಗೆ ಮೀರದ ಫೀಜನ್ನು ವಿಧಿಸಬಹುದು:

ಪರಂತು, ಯಾವ ಗಾಡಿ ನಿಲ್ದಾಣವನ್ನು ಬಳಸುವುದಕ್ಕಾಗಿ ಯಾವುದೇ ಹೊಣೆಗಾರಿಕೆಯನ್ನು ಗೊತ್ತುಪಡಿಸಿಲ್ಲವೋ ಆ ಗಾಡಿ ನಿಲ್ದಾಣಕ್ಕೆ ಸಂಬಂಧಿಸಿದಂತೆ ಯಾವುದೇ ಫೀಜನ್ನು ವಿಧಿಸತಕ್ಕದ್ದಲ್ಲ.

(6) ಈ ಪ್ರಕರಣದ ಮೇರೆಗೆ ಮಂಜೂರ್ಮಾಡಿದ ಪ್ರತಿಯೊಂದು ಲೈಸೆನ್ಸು, ಯಾವ ಐದು ವರ್ಷಗಳ ಅವಧಿಗಾಗಿ ಅದನ್ನು ಮಂಜೂರು ಮಾಡಲಾಗಿದೆಯೋ ಆ [1][ಐದು ವರ್ಷಗಳ ಅವಧಿಯ ಕೊನೆ][1]ಯಲ್ಲಿ ಮುಕ್ತಾಯವಾಗತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**352. ಪ್ರಾಣಿಗಳ ಶವಗಳನ್ನು ತೆಗೆದು ಸಾಗಿಸುವುದು.-** (1) ಯಾವ ಆವರಣದಲ್ಲಿ ಅಥವಾ ಅದರ ಮೇಲೆ ಯಾವುದೇ ಪ್ರಾಣಿಯು ಸತ್ತಿದೆಯೋ ಅಥವಾ ಯಾವ ಆವರಣದ ಮೇಲೆ ಯಾವುದೇ ಪ್ರಾಣಿಯ ಶವವು ಕಂಡುಬರುತ್ತದೆಯೋ, ಆ ಆವರಣದ ಅಧಿಭೋಗದಾರನು ಮತ್ತು ಯಾವ ಪ್ರಾಣಿಯು ಬೀದಿಯಲ್ಲಿ ಅಥವಾ ಯಾವುದೇ ಖಾಲಿ ಜಾಗದಲ್ಲಿ ಸತ್ತಿದೆಯೋ, ಆ ಪ್ರಾಣಿಯ ಪಾಲನೆ ಪೋಷಣೆಯ ಜವಾಬ್ದಾರಿಯನ್ನು ಹೊಂದಿರುವ ವ್ಯಕ್ತಿಯು, ಅಂಥ ಪ್ರಾಣಿಯು ಸತ್ತ ಮೂರು ಗಂಟೆಯೊಳಗಾಗಿ ಅಥವಾ ಅದರ ಮರಣವು ರಾತ್ರಿಯಲ್ಲಿ ಸಂಭವಿಸಿದರೆ, ಸೂರ್ಯೋದಯದ ತರುವಾಯ ಮೂರು ಗಂಟೆಗಳೊಳಗಾಗಿ,-

(ಎ) ಅಂಥ ಪ್ರಾಣಿಯ ಶವವನ್ನು ಆ ಬಗ್ಗೆ ಆಯುಕ್ತರು ಗೊತ್ತುಪಡಿಸಬಹುದಾದಂಥ ತೊಟ್ಟಿಗೆ, ಡಿಪೋಗೆ ಅಥವಾ ಸ್ಥಳಕ್ಕೆ ಸಾಗಿಸತಕ್ಕದ್ದು; ಅಥವಾ

(ಬಿ) ನಗರದ ಯಾವ [1][ವಾರ್ಡ್][1]ನಲ್ಲಿ ಪ್ರಾಣಿಯ ಮರಣ ಸಂಭವಿಸಿದೆಯೋ ಆ [1][ವಾರ್ಡ್][1]ನ ಆರೋಗ್ಯ ವಿಭಾಗದ ಅಧಿಕಾರಿಗೆ, ಅವನು ಅದನ್ನು ಸಾಗಿಸುವಂತೆ ಮಾಡುವ ದೃಷ್ಟಿಯಿಂದ ಪ್ರಾಣಿಯ ಮರಣದ ಬಗ್ಗೆ ವರದಿ ಮಾಡತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 01.06.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಯಾವುದೇ ಪ್ರಾಣಿಯ ಶವವನ್ನು ಆರೋಗ್ಯ ವಿಭಾಗವು ಹಾಗೆ ಸಾಗಿಸಿದಾಗ, ಹಾಗೆ ಸಾಗಿಸುವುದಕ್ಕಾಗಿ, ಆಯುಕ್ತರು ನಿಗದಿಪಡಿಸತಕ್ಕಂಥ ಮೊತ್ತದ ಫೀಜನ್ನು ಪ್ರಾಣಿಯ ಒಡೆಯನು ಅಥವಾ ಒಡೆಯನು ಗೊತ್ತಿಲ್ಲದಿದ್ದರೆ ಯಾವ ಆವರಣದಲ್ಲಿ ಅಥವಾ ಅದರ ಮೇಲೆ ಪ್ರಾಣಿಯು ಸತ್ತಿತೋ ಆ ಆವರಣದ ಅಧಿಭೋಗದಾರನು ಅಥವಾ ಯಾವ ವ್ಯಕ್ತಿಯ ಪಾಲನೆ ಪೋಷಣೆಯಲ್ಲಿದ್ದಾಗ ಪ್ರಾಣಿಯು ಸತ್ತಿತೋ ಆ ವ್ಯಕ್ತಿಯು ಸಂದಾಯ ಮಾಡತಕ್ಕದ್ದು.

**353. ಯಾವ ಉದ್ದೇಶಗಳಿಗಾಗಿ ನಗರದ ಎಲ್ಲೆಗಳೊಳಗಿನ ಅಥವಾ ಅದರ ಐದು ಕಿಲೋಮೀಟರುಗಳೊಳಗಿನ ಸ್ಥಳಗಳನ್ನು ಲೈಸೆನ್ಸು ಇಲ್ಲದೆ ಬಳಸಕೂಡದೋ ಆ ಉದ್ದೇಶಗಳು ಮತ್ತು ಐದು ಕಿಲೋಮೀಟರುಗಳ ಒಳಗಿರುವ ಸ್ಥಳಗಳ ಸಂದರ್ಭದಲ್ಲಿ ಸಂಬಂಧಿಸಿದ ಸ್ಥಳೀಯ ಸಂಸ್ಥೆಗೆ ಪ್ರಮಾಣಾನುಸಾರವಾದ ತೆರಿಗೆಯ ಸಂದಾಯ.–** (1) ನಗರದ ಎಲ್ಲೆಗಳೊಳಗಿನ ಯಾವುದೇ ಸ್ಥಳವನ್ನು, ಆಯುಕ್ತರಿಂದ ಲೈಸೆನ್ಸನ್ನು ಪಡೆಯದೆ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಿದ ಷರತ್ತಿಗೆ ಅನುಸಾರವಾಗಿ ಅಲ್ಲದೆ Xನೆಯ ಅನುಸೂಚಿಯಲ್ಲಿ ತಿಳಿಸಿರುವ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

(2) ಆಯುಕ್ತರು, ನಗರದ ಎಲ್ಲೆಗಳ ಐದು ಕಿಲೋಮೀಟರುಗಳೊಳಗಿನ ಅಂತರದಲ್ಲಿರುವ ಯಾವುದೇ ಸ್ಥಳವನ್ನು ಆಯುಕ್ತರಿಂದ ಲೈಸೆನ್ಸು ಪಡೆಯದೆ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೆ ಅನುಸಾರವಾಗಿ ಅಲ್ಲದೆ Xನೆಯ ಅನುಸೂಚಿಯಲ್ಲಿ ತಿಳಿಸಿದ ಯಾವುದೇ ಒಂದು ಅಥವಾ ಹೆಚ್ಚು ಉದ್ದೇಶಗಳಿಗೆ ಬಳಸತಕ್ಕದ್ದಲ್ಲವೆಂದು ಸರ್ಕಾರಿ ರಾಜ್ಯಪತ್ರದಲ್ಲಿ ಮತ್ತು ಎರಡು ಅಥವಾ ಹೆಚ್ಚು ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಅಧಿಸೂಚನೆಯನ್ನು ಪ್ರಕಟಿಸಬೇಕೆಂದು ನಗರಪಾಲಿಕೆಯು ಅಗತ್ಯಪಡಿಸಿದರೆ ಹಾಗೆ ಮಾಡತಕ್ಕದ್ದು:

ಪರಂತು, ಅಂಥ ಯಾವುದೇ ಅಧಿಸೂಚನೆಯು,–

(ಎ) ಅದಕ್ಕೆ ಸರ್ಕಾರದ ಮಂಜೂರಾತಿಯನ್ನು ಪಡೆದಿದ್ದ ಹೊರತು; ಮತ್ತು

(ಬಿ) ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳು ಮುಕ್ತಾಯವಾಗುವವರೆಗೆ

– ಜಾರಿಗೆ ಬರತಕ್ಕದ್ದಲ್ಲ.

(3) ಯಾವುದೇ ಉದ್ದೇಶಕ್ಕಾಗಿ ಯಾವ ಸ್ಥಳವನ್ನು ಬಳಸಲು (1)ನೇ ಉಪ–ಪ್ರಕರಣ ಅಥವಾ (2)ನೇ ಉಪ–ಪ್ರಕರಣದ ಮೇರೆಗೆ ಲೈಸೆನ್ಸು ಅಗತ್ಯವೋ ಆ ಪ್ರತಿಯೊಂದು ಸ್ಥಳದ ಮಾಲೀಕನು ಅಥವಾ ಅಧಿಭೋಗದಾರನು, ಅಂಥ ಉದ್ದೇಶಕ್ಕಾಗಿ ಆ ಸ್ಥಳವನ್ನು ಬಳಸುವುದಕ್ಕೆ ಮೂವತ್ತು ದಿನಗಳಿಗಿಂತ ಕಡಿಮೆಯಿಲ್ಲದ ಅವಧಿಯೊಳಗೆ ಅಥವಾ ಸಂದರ್ಭಾನುಸಾರ ಸರ್ಕಾರಿ ರಾಜ್ಯಪತ್ರದಲ್ಲಿ (2)ನೇ ಉಪ–ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಪ್ರಕಟಿಸಿದ ಮೂವತ್ತು ದಿನಗಳೊಳಗಾಗಿ ಅಂಥ ಲೈಸೆನ್ಸಿಗಾಗಿ ಆಯುಕ್ತರಿಗೆ ಅರ್ಜಿ ಸಲ್ಲಿಸತಕ್ಕದ್ದು.

(4) ಸ್ಫೋಟಕಗಳು, ಮರಮುಟ್ಟು ಅಥವಾ ಇತರೆ ದಹ್ಯ ವಸ್ತುಗಳನ್ನು ದಾಸ್ತಾನು ಮಾಡುವ ಅಥವಾ ಮಾರಾಟ ಮಾಡುವ ಉದ್ದೇಶಕ್ಕಾಗಿ ಯಾವುದೇ ಸ್ಥಳವನ್ನು ಬಳಸಲು ಲೈಸೆನ್ಸಿಗಾಗಿ ಸಲ್ಲಿಸುವ ಪ್ರತಿಯೊಂದು ಅರ್ಜಿಯು ಅಂಥ ಸ್ಥಳದ ಚೆಕ್ಕುಬಂಧಿಯನ್ನು ಹಾಗೂ ಅಳತೆಗಳನ್ನು ತೋರಿಸುವ ವಿವರಪಟ್ಟಿಯನ್ನು ಒಳಗೊಂಡಿರತಕ್ಕದ್ದು.

(5) ಆಯುಕ್ತರು ಲೈಸನ್ಸ್ ನೀಡಿಕೆ ಕುರಿತಂತೆ ತಾವು ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಅಂಥ ಲೈಸೆನ್ಸನ್ನು ಮಂಜೂರು ಮಾಡಬಹುದು ಅಥವಾ ಅದು ನೆರೆಹೊರೆಯಲ್ಲಿ ಉಪದ್ರವವನ್ನುಂಟುಮಾಡುವ ಸಂಭವವಿದ್ದರೆ, ಅವರು ಅಂಥ ಲೈಸೆನ್ಸನ್ನು ಮಂಜೂರು ಮಾಡಲು ನಿರಾಕರಿಸಬಹುದು.

(6) ಅಂಥ ಪ್ರತಿಯೊಂದು ಲೈಸೆನ್ಸು, ಯಾವ ಐದು ವರ್ಷಗಳ ಅವಧಿಗೆ ಅದನ್ನು ಮಂಜೂರು ಮಾಡಲಾಗಿದೆಯೋ, ಆ [1][ಐದು ವರ್ಷಗಳ ಅವಧಿಯ ಕೊನೆಯಲ್ಲಿ][1] ಅಥವಾ ಆಯುಕ್ತರು ಲೈಸೆನ್ಸಿನಲ್ಲಿ ನಿರ್ದಿಷ್ಟಪಡಿಸಬಹುದಾದ ವಿಶೇಷ ಕಾರಣಗಳಿಗಾಗಿ ಅದಕ್ಕಿಂತ ಮುಂಚಿನ ದಿನಾಂಕದಂದು ಕೊನೆಗೊಳ್ಳತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(7) ಅಂಥ ಲೈಸೆನ್ಸುಗಳ ನವೀಕರಣಕ್ಕಾಗಿ, [1][ಲೈಸೆನ್ಸಿನ ಅವಧಿ ಮುಕ್ತಾಯವಾಗುವುದಕ್ಕೆ ಮುಂಚೆ][1] ಮೂವತ್ತು ದಿನಗಳಿಗಿಂತ ಕಡಿಮೆಯಿಲ್ಲದ ಅವಧಿಯೊಳಗೆ ಅರ್ಜಿಗಳನ್ನು ಸಲ್ಲಿಸತಕ್ಕದ್ದು ಅಥವಾ ಲೈಸೆನ್ಸನ್ನು ಆಯುಕ್ತರು ನಿರ್ದಿಷ್ಟಪಡಿಸಬಹುದಾದಂತಹ ಷರತ್ತುಗಳು ಅಥವಾ ನಿರ್ಬಂಧಗಳಿಗೊಳಪಟ್ಟು, ನವೀಕರಿಸಬಹುದು ಅಥವಾ ಅದು ನೆರೆಹೊರೆಯಲ್ಲಿ ಉಪದ್ರವವನ್ನುಂಟು ಮಾಡುವ ಸಂಭವವಿದ್ದರೆ ನವೀಕರಿಸಲು ಅವನು ನಿರಾಕರಿಸಬಹುದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(8) ನಗರದ ಎಲ್ಲೆಗಳ ಹೊರಗಿನ ಯಾವುದೇ ಸ್ಥಳದ ಬಳಕೆಗಾಗಿ ಈ ಪ್ರಕರಣದ ಮೇರೆಗೆ ಲೈಸೆನ್ಸನ್ನು ಮಂಜೂರು ಮಾಡಿರುವಲ್ಲಿ, ಯಾವ ಸ್ಥಳೀಯ ಪ್ರಾಧಿಕಾರದ ಎಲ್ಲೆಗಳೊಳಗೆ ಅಂಥ ಸ್ಥಳವು ಇರುವುದೋ ಆ ಸ್ಥಳೀಯ ಪ್ರಾಧಿಕಾರಕ್ಕೆ, ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ಧರಿಸಬಹುದಾದಂತೆ ಅಂಥ ಲೈಸೆನ್ಸಿನ ಮಂಜೂರಾತಿ ಅಥವಾ ನವೀಕರಣಕ್ಕಾಗಿ ನಗರಪಾಲಿಕೆಯು ಸ್ವೀಕರಿಸಿದ ಫೀಜಿನ ಅಂಥ ಪ್ರಮಾಣವನ್ನು ನಗರಪಾಲಿಕೆಯು ಸಂದಾಯ ಮಾಡತಕ್ಕದ್ದು.

**354. ಯಾವ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದಲ್ಲಿ ಆವಿ ಅಥವಾ ಇತರ ಶಕ್ತಿಯನ್ನು ಬಳಸಲಾಗುವುದೋ ಆ ಯಾವುದೇ ಕಾರ್ಖಾನೆ ಅಥವಾ ಕಾರ್ಯಾಗಾರ ಅಥವಾ ಕೆಲಸದ ಸ್ಥಳದ ನಿರ್ಮಾಣ, ಸ್ಥಾಪನೆ ಅಥವಾ ಪ್ರತಿಷ್ಠಾಪನೆಗಾಗಿ ಅರ್ಜಿಯನ್ನು ಸಲ್ಲಿಸುವುದು.–** (1) (ಎ) ಯಾವ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದಲ್ಲಿ ಆವಿ ಶಕ್ತಿ, ಜಲ ಶಕ್ತಿ, ಅಥವಾ ಇತರ ಯಾಂತ್ರಿಕ ಶಕ್ತಿ ಅಥವಾ ವಿದ್ಯುಚ್ಛಕ್ತಿಯನ್ನು ಬಳಸಲು ಉದ್ದೇಶಿಸಲಾಗಿದೆಯೋ ಆ ಯಾವುದೇ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳವನ್ನು ನಿರ್ಮಿಸಲು ಅಥವಾ ಸ್ಥಾಪಿಸಲು; ಅಥವಾ

(ಬಿ) ಮೇಲೆ ಹೇಳಿದಂತೆ ಆವಿ, ಜಲ, ವಿದ್ಯುತ್ ಅಥವಾ ಇತರ ಶಕ್ತಿಯಿಂದ ನಡೆಯುವ ಯಾವುದೇ ಯಂತ್ರೋಪಕರಣ ಅಥವಾ ತಯಾರಿಕಾ ಸ್ಥಾವರವನ್ನು ಯಾವುದೇ ಆವರಣದಲ್ಲಿ ಪ್ರತಿಷ್ಠಾಪಿಸಲು

– ಉದ್ದೇಶಿಸುವ ಪ್ರತಿಯೊಬ್ಬ ವ್ಯಕ್ತಿಯು, ಅಂಥ ನಿರ್ಮಾಣ, ಸ್ಥಾಪನೆ, ಅಥವಾ ಪ್ರತಿಷ್ಠಾಪನೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಉದ್ದೇಶಿತ ಕಾಮಗಾರಿಯನ್ನು ಕೈಗೊಳ್ಳಲು ಅನುಮತಿಗಾಗಿ ಆಯುಕ್ತರಿಗೆ ಲಿಖಿತದಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

(2) ಯಾವುದೇ ಕಾಲದಲ್ಲಿ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣದಲ್ಲಿ ಏಕಕಾಲದಲ್ಲಿ ನಿಯೋಜಿಸಿಕೊಳ್ಳಲು, ಉದ್ದೇಶಿಸಿರುವ ಕೆಲಸಗಾರರ ಗರಿಷ್ಠ ಸಂಖ್ಯೆಯನ್ನು ಅರ್ಜಿಯಲ್ಲಿ ನಿರ್ದಿಷ್ಟಪಡಿಸತಕ್ಕದ್ದು, ಮತ್ತು ಆ ಅರ್ಜಿಯ ಜೊತೆಗೆ,–

(ಎ) ಸರ್ಕಾರವು ಈ ಬಗ್ಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಬಹುದಾದಂತಹ ರೀತಿಯಲ್ಲಿ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣಕ್ಕೆ ಸಂಬಂಧಿಸಿದಂತೆ ತಯಾರಿಸಿದ ನಕ್ಷೆ; ಮತ್ತು

(ಬಿ) ನಗರಪಾಲಿಕೆಯು ಈ ಬಗ್ಗೆ ರಚಿಸಿದ ಉಪ-ವಿಧಿಗಳ ಮೂಲಕ ಅಗತ್ಯಪಡಿಸಬಹುದಾದಂಥ ಶಕ್ತಿಗಳಿಗೆ, ಯಂತ್ರ ಸ್ಥಾವರ ಅಥವಾ ಆವರಣಕ್ಕೆ ಸಂಬಂಧಿಸಿದ ಅಂಥ ವಿವರಗಳು

– ಇರತಕ್ಕದ್ದು.

(3) ಆಯುಕ್ತರು, ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಆದಷ್ಟು ಬೇಗನೆ,–

(ಎ) ಕೋರಿರುವ ಅನುಮತಿಯನ್ನು ನಿರುಪಾಧಿಕವಾಗಿಯಾಗಲಿ ಅಥವಾ ತಾವು ವಿಧಿಸಲು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟಾಗಲಿ ಮಂಜೂರಾತಿ ನೀಡತಕ್ಕದ್ದು, ಅಥವಾ

(ಬಿ) ಅಂಥ ನಿರ್ಮಾಣ, ಸ್ಥಾಪನೆ ಅಥವಾ ಪ್ರತಿಷ್ಠಾಪನೆಯು ನೆರೆಹೊರೆಯಲ್ಲಿನ ಜನದಟ್ಟಣೆಯ ಕಾರಣದಿಂದಾಗಿ ಆಕ್ಷೇಪಣೀಯವಾದುದಾಗಿದೆ ಎಂದು ಅಥವಾ ನೆರೆಹೊರೆಯಲ್ಲಿ ಉಪದ್ರವವನ್ನುಂಟುಮಾಡುವ ಸಂಭವವಿದೆ ಎಂದು ತಾವು ಅಭಿಪ್ರಾಯಪಟ್ಟರೆ, ಅನುಮತಿಯನ್ನು ನಿರಾಕರಿಸತಕ್ಕದ್ದು.

(4) (3)ನೇ ಉಪ-ಪ್ರಕರಣದ ಮೇರೆಗೆ ಅನುಮತಿಯನ್ನು ಕೊಡುವುದಕ್ಕೆ ಮುಂಚೆ, ಆಯುಕ್ತರು,–

(ಎ) ಯಾವುದೇ ಕಾಲದಲ್ಲಿ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ, ಅಥವಾ ಆವರಣದಲ್ಲಿ ಒಂಬತ್ತಕ್ಕಿಂತ ಹೆಚ್ಚು ಕೆಲಸಗಾರರನ್ನು ಏಕಕಾಲದಲ್ಲಿ ನಿಯೋಜಿಸಿಕೊಳ್ಳಲು ಉದ್ದೇಶಿಸಿದ್ದರೆ ಅಂಥ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣವು ನಗರದ ಯಾವ ಪ್ರದೇಶದಲ್ಲಿದೆಯೋ ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಕಾರ್ಖಾನೆಗಳ ಅಧಿನಿಯಮ, 1948ರ (ಕೇಂದ್ರ ಅಧಿನಿಯಮ, 1948ರ 63) ಮೇರೆಗೆ ನೇಮಕಗೊಂಡ ಕಾರ್ಖಾನೆಗಳ ಇನ್ಸ್‌ಪೆಕ್ಟರನು ಅನುಮೋದನೆಯನ್ನು,–

(i) ವಾತಾಯನ ಮತ್ತು ಬೆಳಕಿನ ವ್ಯವಸ್ಥೆ ಸಮರ್ಪಕವಾಗಿರುವುದಕ್ಕೆ;

(ii) ಕೊಠಡಿಗಳ ಹಾಗೂ ಬಾಗಿಲುಗಳ ಎತ್ತರ ಮತ್ತು ಉದ್ದಗಲಗಳು ಸಮರ್ಪಕವಾಗಿರುವುದಕ್ಕೆ;

(iii) ಬೆಂಕಿಯ ಆಕಸ್ಮಿಕದ ಸಂದರ್ಭದಲ್ಲಿ, ಬಳಸಲಾಗುವ, ನಿರ್ಗಮನ ದ್ವಾರಗಳು ಸೂಕ್ತವಾಗಿರುವುದಕ್ಕೆ;

(iv) ಸರ್ಕಾರವು ರಚಿಸಿದ ನಿಯಮಗಳ ಮೂಲಕ ನಿಯಮಿಸಬಹುದಾದಂಥ ಇತರ ವಿಷಯಗಳಿಗೆ

– ಸಂಬಂಧಿಸಿದಂತೆ ಆ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣದ ನಕ್ಷೆಯ ಸಂಬಂಧದಲ್ಲಿ ಪಡೆಯತಕ್ಕದ್ದು, ಮತ್ತು

(ಬಿ) ಅರ್ಜಿಯಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣದ ನಿವೇಶನವು ಸೂಕ್ತವಾಗಿರುವುದರ ಬಗ್ಗೆ ಆರೋಗ್ಯಾಧಿಕಾರಿಯೊಡನೆ ಸಮಾಲೋಚಿಸತಕ್ಕದ್ದು ಮತ್ತು ಅವರ ಅಭಿಪ್ರಾಯಕ್ಕೆ ಸೂಕ್ತ ಗಮನ ನೀಡತಕ್ಕದ್ದು.

(5) ಅಂಥ ಯಾವುದೇ ಕಾರ್ಖಾನೆ, ಕಾರ್ಯಾಗಾರ, ಅಥವಾ ಕೆಲಸದ ಸ್ಥಳಕ್ಕೆ ಸಂಬಂಧಿಸಿದ ಎಲ್ಲ ಚಿಮಣಿಗಳು ಅಥವಾ ಅಂಥ ಯಾವುದೇ ಯಂತ್ರ ಅಥವಾ ತಯಾರಿಕಾ ಸ್ಥಾವರವು, ಆಯುಕ್ತರು ನಿರ್ಧರಿಸಬಹುದಾದಂಥ ಎತ್ತರದ್ದು ಮತ್ತು ಉದ್ದಗಲದ್ದು ಆಗಿರತಕ್ಕದ್ದು;

(6) ಯಾವುದೇ ಕಾಲದಲ್ಲಿ ಯಾವುದೇ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣದಲ್ಲಿ ಏಕಕಾಲದಲ್ಲಿ ಒಂಬತ್ತಕ್ಕಿಂತ ಹೆಚ್ಚು ಕೆಲಸಗಾರರನ್ನು, (3)ನೇ ಉಪಪ್ರಕರಣದ ಮೇರೆಗೆ ಅದಕ್ಕೆ ಸಂಬಂಧಿಸಿದಂತೆ ನೀಡಿದ ಅನುಮತಿಯು ಅಂಥ ನಿಯೋಜನೆಯನ್ನು ಅಧಿಕೃತಗೊಳಿಸಿದ ಹೊರತು ಅಥವಾ ಅಂಥ ನಿಯೋಜನೆಯನ್ನು ಅಧಿಕೃತಗೊಳಿಸುವ ಹೊಸ ಅನುಮತಿಯನ್ನು ಆಯುಕ್ತರಿಂದ ಪಡೆದ ಹೊರತು ನಿಯೋಜಿಸಿಕೊಳ್ಳತಕ್ಕದ್ದಲ್ಲ. ಅಂಥ ಹೊಸ ಅನುಮತಿಯನ್ನು ನೀಡುವುದಕ್ಕೆ ಮುಂಚೆ ಆಯುಕ್ತರು (4)ನೇ ಉಪ-ಪ್ರಕರಣದ (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ, ವಿಷಯಗಳಿಗೆ ಸಂಬಂಧಿಸಿದಂತೆ, ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣದ ನಕ್ಷೆಯ ಸಂಬಂಧದಲ್ಲಿ ಆ ಖಂಡದಲ್ಲಿ ತಿಳಿಸಿದ ಕಾರ್ಖಾನೆಗಳ ಇನ್ಸ್‌ಪೆಕ್ಟರ್‌ರವರ ಅನುಮೋದನೆಯನ್ನು ಪಡೆಯತಕ್ಕದ್ದು.

(7) ಈ ಪ್ರಕರಣದ ಮೇರೆಗೆ ಅನುಮತಿಯನ್ನು ನೀಡುವುದು, ಸಂದರ್ಭಾನುಸಾರ 300ನೇ ಮತ್ತು 301ನೇ ಪ್ರಕರಣಗಳ ಅಥವಾ 314ನೇ ಮತ್ತು 315ನೇ ಪ್ರಕರಣಗಳ ಉಪಬಂಧಗಳನ್ನು ಪಾಲಿಸಬೇಕಾದ ಅವಶ್ಯಕತೆಯನ್ನು ಇಲ್ಲವಾಗಿಸುತ್ತದೆ ಎಂದು ಭಾವಿಸತಕ್ಕದ್ದಲ್ಲ.

**ವಿವರಣೆ:**– ಯಾವುದೇ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ ಅಥವಾ ಆವರಣಕ್ಕೆ ಸಂಬಂಧಪಟ್ಟಂತೆ (2)ನೇ, (4)ನೇ ಮತ್ತು (6)ನೇ ಉಪ-ಪ್ರಕರಣಗಳಲ್ಲಿ ಇರುವ 'ಕೆಲಸಗಾರ' ಪದವು ಕಾರ್ಖಾನೆಗಳ ಅಧಿನಿಯಮ, 1948ರಲ್ಲಿ (ಕೇಂದ್ರ ಅಧಿನಿಯಮ, 1948ರ 63) ಅದಕ್ಕಿರುವ ಅರ್ಥವನ್ನೇ ಹೊಂದಿರತಕ್ಕದ್ದು.

**355. ಆವಿ ಅಥವಾ ಇತರ ಶಕ್ತಿಯಿಂದ ಉಂಟಾಗುವ ಉಪದ್ರವದ ನಿವಾರಣೆಗಾಗಿ ಆಯುಕ್ತರು ನಿರ್ದೇಶನಗಳನ್ನು ನೀಡಬಹುದು.**– (1) ಯಾವ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದಲ್ಲಿ ಆವಿ ಶಕ್ತಿ, ಜಲ ಶಕ್ತಿ ಅಥವಾ ಇತರ ಯಾಂತ್ರಿಕ ಶಕ್ತಿಯನ್ನು ಅಥವಾ ವಿದ್ಯುಚ್ಛಕ್ತಿಯನ್ನು ಬಳಸಲಾಗುತ್ತಿದೆಯೋ ಆ ಯಾವುದೇ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದಲ್ಲಿ ಬಳಸಿದ ನಿರ್ದಿಷ್ಟ ಬಗೆಯ ಇಂಧನದಿಂದಾಗಿ ಅಥವಾ ಅಲ್ಲಿ ಉಂಟಾದ ಶಬ್ದ ಅಥವಾ ಕಂಪನದಿಂದಾಗಿ ಉಪದ್ರವ ಉಂಟಾಗುತ್ತದೆ ಎಂದು ಆಯುಕ್ತರು ಅಭಿಪ್ರಾಯಪಟ್ಟರೆ, ಅವರು ಆ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸುವಂಥ ಯುಕ್ತ ಕಾಲದೊಳಗೆ ಆ ಉಪದ್ರವವನ್ನು ನಿವಾರಿಸುವುದಕ್ಕಾಗಿ ತಾವು ಸೂಕ್ತವೆಂದು ಭಾವಿಸುವಂಥ ನಿರ್ದೇಶನಗಳನ್ನು ನೀಡಬಹುದು.

(2) ಅಂಥ ನಿರ್ದೇಶನಗಳನ್ನು ಪಾಲಿಸಲು ಉದ್ದೇಶಪೂರ್ವಕವಾಗಿ ತಪ್ಪಿದರೆ ಅಥವಾ ಉಪದ್ರವವನ್ನು ನಿವಾರಣೆ ಮಾಡುವುದು ಕಾರ್ಯಸಾಧ್ಯವಲ್ಲವೆಂದು ಕಂಡುಬಂದರೆ, ಆಯುಕ್ತರು–

(ಎ) ನಿರ್ದಿಷ್ಟ ಬಗೆಯ ಇಂಧನದ ಬಳಕೆಯನ್ನು ನಿಷೇಧಿಸಬಹುದು; ಅಥವಾ

(ಬಿ) ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದ ಕೆಲಸವನ್ನು,–

(i) ಅಂಥ ನಿರ್ದೇಶನಗಳನ್ನು ಪಾಲಿಸುವವರೆಗೆ, ಪೂರ್ತಿಯಾಗಿ; ಅಥವಾ

(ii) ಸಂಜೆ 6 ಗಂಟೆ ಮತ್ತು ಬೆಳಿಗ್ಗೆ 6 ಗಂಟೆ ನಡುವೆ ಅಥವಾ ಅಂಥ ವೇಳೆಗಳ ನಡುವಿನ ಯಾವುದೇ ನಿರ್ದಿಷ್ಟ ಕಾಲದಲ್ಲಿ ಅಥವಾ ಕಾಲಗಳಲ್ಲಿ

– ನಿಷೇಧಿಸಬಹುದು.

**356. ಆಯುಕ್ತರ ಅನುಮತಿಯಿಲ್ಲದೆ ಆವಿ-ಶಿಳ್ಳೆಯನ್ನು ಅಥವಾ ಆವಿ-ಕಹಳೆಯನ್ನು ಬಳಸುವುದಕ್ಕೆ ನಿಷೇಧ.–** (1) ಯಾರೇ ವ್ಯಕ್ತಿಯು, ಆಯುಕ್ತರ ಲಿಖಿತ ಅನುಮತಿಯಿಲ್ಲದೆ, ಯಾವುದೇ ಕಾರ್ಖಾನೆಯಲ್ಲಿ ಅಥವಾ ಯಾವುದೇ ಇತರ ಸ್ಥಳದಲ್ಲಿ, ಅಲ್ಲಿ ನಿಯೋಜಿತರಾದ ಕೆಲಸಗಾರರನ್ನು ಅಥವಾ ವ್ಯಕ್ತಿಗಳನ್ನು ಕರೆಯುವ ಅಥವಾ ಕಳುಹಿಸುವ ಉದ್ದೇಶಕ್ಕಾಗಿ ಯಾವುದೇ ಆವಿ-ಶಿಳ್ಳೆಯನ್ನು ಅಥವಾ ಆವಿ-ಕಹಳೆಯನ್ನು ಬಳಸತಕ್ಕದ್ದಲ್ಲ ಅಥವಾ ಅಳವಡಿಸತಕ್ಕದ್ದಲ್ಲ.

(2) ಆಯುಕ್ತರು, ಮೇಲೆ ಹೇಳಿದಂಥ ಯಾವುದೇ ಉಪಕರಣವನ್ನು ಬಳಸುವುದಕ್ಕೆ ತಾವು ಕೊಟ್ಟಿರುವ ಅನುಮತಿಯನ್ನು ಅದನ್ನು ಬಳಸುತ್ತಿರುವ ವ್ಯಕ್ತಿಗೆ ಒಂದು ತಿಂಗಳು ನೋಟೀಸು ಕೊಟ್ಟ ಮೇಲೆ ಯಾವುದೇ ಕಾಲದಲ್ಲಿ ರದ್ದುಪಡಿಸಬಹುದು.

**357. ಕಾರ್ಖಾನೆ, ಕಾರ್ಯಾಗಾರ, ಇತ್ಯಾದಿಗಳನ್ನು ಸ್ವಚ್ಛ ಸ್ಥಿತಿಯಲ್ಲಿ ಇಡಲು ಮತ್ತು ನಿರ್ವಹಿಸಲು ಕಾರ್ಖಾನೆ, ಕಾರ್ಯಾಗಾರ, ಇತ್ಯಾದಿಗಳ ಮಾಲೀಕರನ್ನು ಅಗತ್ಯಪಡಿಸಲು ಆಯುಕ್ತರ ಅಧಿಕಾರ.–** ಯಾವ ಕಾರ್ಖಾನೆಯಲ್ಲಿ, ಕಾರ್ಯಾಗಾರದಲ್ಲಿ, ಕೆಲಸದ ಸ್ಥಳದಲ್ಲಿ ಅಥವಾ ಯಾವುದೇ ಕಟ್ಟಡದಲ್ಲಿ ಅಥವಾ ಸ್ಥಳದಲ್ಲಿ ಆವಿ, ಜಲ ಅಥವಾ ಇತರ ಯಾಂತ್ರಿಕ ಶಕ್ತಿಯನ್ನು ಅಥವಾ ವಿದ್ಯುಚ್ಛಕ್ತಿಯನ್ನು ಬಳಸಲಾಗುತ್ತಿದೆಯೋ, ಆ ಯಾವುದೇ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳವನ್ನು ಅಥವಾ ಯಾವುದೇ ಕಟ್ಟಡವನ್ನು ಅಥವಾ ಸ್ಥಳವನ್ನು ಸ್ವಚ್ಛ ಸ್ಥಿತಿಯಲ್ಲಿ ಇಟ್ಟಿಲ್ಲವೆಂದು ಅಥವಾ ಅಲ್ಲಿ ಕೆಲಸ ನಡೆಯುತ್ತಿರುವಾಗ ಉತ್ಪತ್ತಿಯಾದ ಯಾವುದೇ ಅನಿಲ, ಹಬೆ, ಧೂಳು ಅಥವಾ ಇತರ ಕಶ್ಮಲವು ಆದಷ್ಟುಮಟ್ಟಿಗೆ ಅಪಾಯ ಉಂಟು ಮಾಡದಿರುವಂಥ ರೀತಿಯಲ್ಲಿ ವಾತಾಯನ ವ್ಯವಸ್ಥೆ ಮಾಡಿಲ್ಲವೆಂದು ಕಂಡುಬಂದಾಗಲೆಲ್ಲಾ ಮತ್ತು ಅದು ಉಪದ್ರವಕಾರಿ ಎಂದು ಆಯುಕ್ತರು ಅಭಿಪ್ರಾಯಪಟ್ಟಾಗಲೆಲ್ಲಾ ಅಥವಾ ಅಲ್ಲಿ ಕೆಲಸ ನಡೆಯುತ್ತಿರುವಾಗ ಅದರಲ್ಲಿ ನಿಯೋಜಿತರಾದ ವ್ಯಕ್ತಿಗಳ ಆರೋಗ್ಯಕ್ಕೆ ಅಪಾಯ ಉಂಟಾಗುವ ಅಥವಾ ಹಾನಿ ಉಂಟಾಗುವ ಹಾಗೆ ಕಶ್ಮಲವು ಅತಿಯಾಗಿ ದಟ್ಟೈಸಿದೆ ಎಂದು ಅಥವಾ ಜೀವಕ್ಕೆ ಅಥವಾ ಅವಯವಕ್ಕೆ ಅಪಾಯ ಉಂಟಾಗುವ ಹಾಗೆ ಅಲ್ಲಿರುವ ಯಾವುದೇ ಇಂಜಿನ್ನು, ಮಿಲ್‌ಗೇರಿಂಗ್, ಹಾಯಿಸ್ಟ್ ಅಥವಾ ಇತರ ಯಂತ್ರೋಪಕರಣವನ್ನು ಸ್ಥಾಪಿಸಲಾಗಿದೆ ಎಂದು ಅಥವಾ ಅದಕ್ಕೆ ಭದ್ರವಾಗಿ ಬೇಲಿ ಹಾಕಿಲ್ಲವೆಂದು ಆಯುಕ್ತರು ಅಭಿಪ್ರಾಯಪಟ್ಟಾಗಲೆಲ್ಲಾ, ಆಯುಕ್ತರು ಲಿಖಿತ ನೋಟೀಸಿನ ಮೂಲಕ ಅಂಥ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳದ ಅಥವಾ ಇತರ ಕಟ್ಟಡದ ಅಥವಾ ಸ್ಥಳದ ಮಾಲೀಕನನ್ನು, ಸದರಿ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳವನ್ನು ಅಥವಾ ಇತರ ಕಟ್ಟಡಗಳನ್ನು ಅಥವಾ ಸ್ಥಳವನ್ನು ಸ್ವಚ್ಛ ಸ್ಥಿತಿಯಲ್ಲಿ ಇಡುವಂತೆ ಮತ್ತು ನಿರ್ವಹಿಸುವಂತೆ ಅಥವಾ ಅದಕ್ಕೆ ವಾತಾಯನ ವ್ಯವಸ್ಥೆ ಮಾಡುವುದಕ್ಕಾಗಿ ಅಲ್ಲಿ ಯಾವುದೇ ಅನಿಲ, ಹಬೆ, ಧೂಳು ಅಥವಾ ಇತರ ಕಶ್ಮಲವು ಅತಿಯಾಗಿ ದಟ್ಟೈಸುವುದನ್ನು ತಡೆಗಟ್ಟುವುದಕ್ಕಾಗಿ ಅಥವಾ ಅದರಲ್ಲಿನ ಯಾವುದೇ ಇಂಜಿನ್ನು, ಮಿಲ್‌ಗೇರಿಂಗ್, ಹಾಯಿಸ್ಟ್, ಇತರ ಯಂತ್ರೋಪಕರಣದಿಂದ ಜೀವಕ್ಕೆ ಅಥವಾ ಅವಯವಕ್ಕೆ ಅಪಾಯವುಂಟಾಗುವುದನ್ನು ತಡೆಗಟ್ಟುವುದಕ್ಕೆ ತಾವು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳುವಂತೆ ಅಗತ್ಯಪಡಿಸಬಹುದು.

**ವಿವರಣೆ.–** ಈ ಪ್ರಕರಣದಲ್ಲಿ ಇರುವುದು ಯಾವುದು, ಭಾರತೀಯ ಬಾಯ್ಲರುಗಳ ಅಧಿನಿಯಮ, 1923ರ ಯಾವುದೇ ಉಪಬಂಧಗಳಿಗೆ ಬಾಧಕವನ್ನುಂಟುಮಾಡುವುದೆಂದು ಅಥವಾ ಕಾರ್ಖಾನೆಗಳ ಅಧಿನಿಯಮ, 1948ರ (ಕೇಂದ್ರ ಅಧಿನಿಯಮ 1948ರ 63) ಉಪಬಂಧಗಳು ಯಾವ ಕಾರ್ಖಾನೆಗೆ ಅನ್ವಯವಾಗುತ್ತವೋ ಆ ಯಾವುದೇ ಕಾರ್ಖಾನೆಯಲ್ಲಿನ ಯಾವುದೇ ಎಂಜಿನ್, ಮಿಲ್‌ಗೇರಿಂಗ್, ಆಯಿಸ್ಟ್, ಅಥವಾ ಇತರ ಯಂತ್ರೋಪಕರಣಗಳನ್ನು ಸ್ಥಾಪಿಸುವುದಕ್ಕೆ ಅಥವಾ ಅವುಗಳಿಗೆ ಬೇಲಿ ಹಾಕುವುದಕ್ಕೆ ಸಂಬಂಧಪಟ್ಟಂತೆ ಯಾವುದೇ ಆದೇಶವನ್ನು ಹೊರಡಿಸುವುದಕ್ಕೆ ಆಯುಕ್ತರಿಗೆ ಅಧಿಕಾರ ನೀಡುತ್ತದೆ ಎಂದು ಭಾವಿಸತಕ್ಕದ್ದಲ್ಲ.

**358. ಕಾರ್ಖಾನೆ, ಇತ್ಯಾದಿಗಳ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಂಥ ಕಾರ್ಖಾನೆಯನ್ನು ಬಳಸುವುದನ್ನು ಮುಂದುವರಿಸದಿರುವಂತೆ ಅಗತ್ಯಪಡಿಸಲು ಆಯುಕ್ತರ ಅಧಿಕಾರ.–** ಯಾವ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳದಲ್ಲಿ ಅಥವಾ ಯಾವುದೇ ಕಟ್ಟಡ ಅಥವಾ ಯಾವುದೇ ಸ್ಥಳದಲ್ಲಿ ಆವಿ, ಜಲ ಅಥವಾ ಇತರ ಯಾಂತ್ರಿಕ ಶಕ್ತಿಯನ್ನು ಅಥವಾ ವಿದ್ಯುಚ್ಛಕ್ತಿಯನ್ನು ಬಳಸಲಾಗುತ್ತಿದೆಯೋ ಆ ಯಾವುದೇ ಕಾರ್ಖಾನೆ, ಕಾರ್ಯಾಗಾರ ಅಥವಾ ಕೆಲಸದ ಸ್ಥಳವು ಅಥವಾ ಯಾವುದೇ ಕಟ್ಟಡವು ಅಥವಾ ಸ್ಥಳವು ಅಂಥ ಶಕ್ತಿಯ ಬಳಕೆಯ ಕಾರಣದಿಂದಾಗಿ ಅಥವಾ ಶಬ್ದದಿಂದಾಗಿ ಅಥವಾ ಅಂಥ ಸ್ಥಳದಲ್ಲಿ ಕೆಲಸ ನಡೆಯುತ್ತಿರುವಾಗ ಉತ್ಪತ್ತಿಯಾದ ಯಾವುದೇ ಅನಿಲ, ಹಬೆ, ಹೊಗೆ, ಕಂಪನ, ಧೂಳು ಅಥವಾ ಇತರ ಕಶ್ಮಲದಿಂದಾಗಿ ಅಥವಾ ಯಾವುದೇ ಇತರ ಕಾರಣದಿಂದಾಗಿ ನೆರೆಹೊರೆಯಲ್ಲಿನ ವ್ಯಕ್ತಿಗಳ ಜೀವಕ್ಕೆ, ಆರೋಗ್ಯಕ್ಕೆ ಅಥವಾ ಸ್ವತ್ತಿಗೆ ಉಪದ್ರವಕಾರಿಯಾಗಿದೆ ಎಂದು ಅಥವಾ ಅಪಾಯಕಾರಿಯಾಗಿದೆ ಎಂದು ಅಥವಾ ಹಾಗೆ ಆಗುವ ಸಂಭವವಿದೆಯೆಂದು ಆಯುಕ್ತರಿಗೆ ಕಂಡುಬಂದಾಗಲೆಲ್ಲಾ ಅವರು, ಲಿಖಿತ ನೋಟೀಸಿನ ಮೂಲಕ ಅಂಥ ಕಾರ್ಖಾನೆ, ಕಾರ್ಯಾಗಾರ, ಕೆಲಸದ ಸ್ಥಳ, ಕಟ್ಟಡ ಅಥವಾ ಸ್ಥಳದ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಂಥ ನೋಟಿಸಿನಲ್ಲಿ ನಿರ್ದಿಷ್ಟಪಡಿಸಬಹುದಾದ ಯಾವುದೇ ಉದ್ದೇಶಕ್ಕಾಗಿ ಅಂಥ ಕಾರ್ಖಾನೆಯನ್ನು ಅಥವಾ ಸ್ಥಳವನ್ನು ಬಳಸುವುದನ್ನು ಮುಂದುವರೆಸದಿರಲು ಅಗತ್ಯಪಡಿಸಬಹುದು.

**359. ಯಾವುದೇ ಕಾರ್ಖಾನೆಯನ್ನು, ಕಾರ್ಯಾಗಾರವನ್ನು ಅಥವಾ ಕೆಲಸದ ಸ್ಥಳವನ್ನು ಆಯುಕ್ತರು ಪ್ರವೇಶಿಸಬಹುದು.–** (1) ಆಯುಕ್ತರು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು ಯಾವುದೇ ಕಾರ್ಖಾನೆಯನ್ನು, ಕಾರ್ಯಾಗಾರವನ್ನು ಅಥವಾ ಕೆಲಸದ ಸ್ಥಳವನ್ನು–

(ಎ) ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವಿನ ಯಾವುದೇ ಕಾಲದಲ್ಲಿ;

(ಬಿ) ಯಾವುದೇ ಉದ್ಯಮವನ್ನು ನಡೆಸಲಾಗುತ್ತಿರುವಾಗ, ಯಾವುದೇ ಕಾಲದಲ್ಲಿ; ಮತ್ತು

(ಸಿ) 354ನೇ, 355ನೇ, 356ನೇ, 357ನೇ ಅಥವಾ 358ನೇ ಪ್ರಕರಣಗಳಿಗೆ ವಿರುದ್ಧವಾಗಿ ಯಾವುದೇ ಅಪರಾಧವನ್ನು ಮಾಡಲಾಗುತ್ತಿದೆ ಎಂದು ಅವರು ನಂಬಲು ಕಾರಣವಿದ್ದರೆ, ಹಗಲು ಅಥವಾ ರಾತ್ರಿಯಲ್ಲಿ ಯಾವುದೇ ಕಾಲದಲ್ಲಿ

– ಪ್ರವೇಶಿಸಬಹುದು.

(2) ಈ ಪ್ರಕರಣದ ಮೇರೆಗಿನ ಅಧಿಕಾರಗಳನ್ನು ಚಲಾಯಿಸುವುದರಿಂದ ಅಥವಾ ಈ ಪ್ರಕರಣದ ಮೇರೆಗೆ ಪ್ರವೇಶವನ್ನು ಮಾಡುವ ಉದ್ದೇಶಕ್ಕಾಗಿ ಅವಶ್ಯವಾದ ಬಲವನ್ನು ಪ್ರಯೋಗಿಸುವುದರಿಂದ ಅವಶ್ಯಕವಾಗಿ ಉಂಟಾಗಿಯೇ ಆಗುವ ಯಾವುದೇ ಹಾನಿ ಅಥವಾ ಅನಾನುಕೂಲಕ್ಕೆ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ಕ್ಲೇಮನ್ನು ಮಾಡಲು ಅವಕಾಶವಿರತಕ್ಕದ್ದಲ್ಲ.

**360. ಆದೇಶಗಳನ್ನು ಮಾಡಲು ಅಥವಾ ಆಯುಕ್ತರಿಗೆ ನಿರ್ದೇಶನಗಳನ್ನು ಕೊಡಲು ಸರ್ಕಾರದ ಅಧಿಕಾರ.–** 354ನೇ, 355ನೇ, 356ನೇ, 357ನೇ ಅಥವಾ 358ನೇ ಪ್ರಕರಣಗಳ ಮೇರೆಗೆ ಕೈಗೊಂಡ ಅಥವಾ ಕೈಗೊಳ್ಳಲು ತಪ್ಪಿದ ಯಾವುದೇ ಕ್ರಮಕ್ಕೆ ಸಂಬಂಧಿಸಿದಂತೆ ಸರ್ಕಾರವು ಸಾಮಾನ್ಯವಾಗಿಯಾಗಲಿ ಅಥವಾ ಯಾವುದೇ ನಿರ್ದಿಷ್ಟ ಪ್ರಕರಣದಲ್ಲಿ ಆಗಲಿ ತಾನು ಸೂಕ್ತವೆಂದು ಭಾವಿಸುವಂಥ ಆದೇಶಗಳನ್ನು ಮಾಡಬಹುದು ಅಥವಾ ಅಂಥ ನಿರ್ದೇಶನಗಳನ್ನು ಕೊಡಬಹುದು.

**361. ಸ್ನಾನ ಮಾಡುವುದಕ್ಕಾಗಿ ಮತ್ತು ಪ್ರಾಣಿಗಳನ್ನು ತೊಳೆಯುವುದಕ್ಕಾಗಿ ಸ್ಥಳಗಳ ವ್ಯವಸ್ಥೆ.–**ನಗರಪಾಲಿಕೆಯು ಸ್ನಾನದ ಉದ್ದೇಶಗಳಿಗಾಗಿ ಮತ್ತು ಪ್ರಾಣಿಗಳನ್ನು ತೊಳೆಯುವುದಕ್ಕಾಗಿ ಸಾರ್ವಜನಿಕರು ಬಳಸಲು ಸ್ಥಳಗಳನ್ನು ಪ್ರತ್ಯೇಕವಾಗಿ ವ್ಯವಸ್ಥೆ ಮಾಡತಕ್ಕದ್ದು.

**362. ಸಾರ್ವಜನಿಕ ಸ್ನಾನಗೃಹಗಳು, ಬಟ್ಟೆ ಒಗೆಯುವ ಗೃಹಗಳು, ಇತ್ಯಾದಿಗಳ ವ್ಯವಸ್ಥೆ.–** (1) ಆಯುಕ್ತರು, ಸಾರ್ವಜನಿಕ ಸ್ನಾನಗೃಹಗಳನ್ನು, ಸಾರ್ವಜನಿಕ ಬಟ್ಟೆ ಒಗೆಯುವ ಗೃಹಗಳನ್ನು ಅಥವಾ ಪಾತ್ರೆಗಳನ್ನು, ಬಟ್ಟೆಗಳನ್ನು ತೊಳೆಯುವುದಕ್ಕಾಗಿ ಸ್ಥಳಗಳನ್ನು ನಿರ್ಮಿಸಬಹುದು ಅಥವಾ ವ್ಯವಸ್ಥೆ ಮಾಡಬಹುದು ಮತ್ತು ನಿರ್ವಹಿಸಬಹುದು ಮತ್ತು ಅಂಥ ಯಾವುದೇ ಸ್ನಾನಗೃಹವನ್ನು, ಬಟ್ಟೆ ಒಗೆಯುವ ಗೃಹವನ್ನು ಅಥವಾ ಸ್ಥಳವನ್ನು ಬಳಸುವುದಕ್ಕಾಗಿ, ಸ್ಥಾಯೀ ಸಮಿತಿಯು ನಿರ್ಧರಿಸಬಹುದಾದಂಥ ಬಾಡಿಗೆಗಳನ್ನು ಮತ್ತು ಫೀಜುಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು. ಅಂಥ ಬಾಡಿಗೆಗಳು ಮತ್ತು ಫೀಜುಗಳು ಸ್ವತ್ತು ತೆರಿಗೆಯನ್ನು ವಸೂಲು ಮಾಡುವ ರೀತಿಯಲ್ಲಿಯೇ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು.

(2) ಆಯುಕ್ತರು, ತಾವು ಸೂಕ್ತವೆಂದು ಭಾವಿಸಬಹುದಾದಂಥ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಅಂಥ ಬಾಡಿಗೆಗಳ ಮತ್ತು ಫೀಜುಗಳ ಸಂಗ್ರಹಣಾ ಕಾರ್ಯವನ್ನು ಒಂದು ಬಾರಿಗೆ ಮೂರು ವರ್ಷಗಳಿಗೆ ಮೀರದ ಯಾವುದೇ ಅವಧಿಗೆ ಗುತ್ತಿಗೆಗೆ ಕೊಡಬಹುದು.

(3) ಉಪ–ಪ್ರಕರಣ (1)ರ ಮೇರೆಗೆ ಸಾಕಷ್ಟು ಸಂಖ್ಯೆಯಲ್ಲಿ ಸಾರ್ವಜನಿಕ ಸ್ನಾನಗೃಹಗಳನ್ನು ಅಥವಾ ಸ್ಥಳಗಳನ್ನು ನಿರ್ವಹಿಸದಿದ್ದರೆ, ಆಯುಕ್ತರು ಅದಕ್ಕಾಗಿ ಯಾವುದೇ ಶುಲ್ಕವನ್ನು ವಿಧಿಸದೆ ಮಡಿವಾಳರು ತಮ್ಮ ವೃತ್ತಿಯನ್ನು ನಡೆಸುವುದಕ್ಕಾಗಿ ಸೂಕ್ತ ಸ್ಥಳಗಳನ್ನು ಗೊತ್ತುಮಾಡಬಹುದು.

(4) ಸಾರ್ವಜನಿಕ ತೊಳೆಯುವ ಗೃಹಗಳಲ್ಲಿ, ಸೋಂಕು ರೋಗಗಳಿಂದ ನರಳುತ್ತಿರುವ ವ್ಯಕ್ತಿಗಳ ಮತ್ತು ಅಂಥ ರೋಗಗಳಿಂದ ನರಳುತ್ತಿರುವ ವ್ಯಕ್ತಿಗಳ ಅಧಿಭೋಗದಲ್ಲಿರುವ ಆವರಣಗಳಲ್ಲಿ ವಾಸಿಸುತ್ತಿರುವ ವ್ಯಕ್ತಿಗಳ ಬಟ್ಟೆಗಳನ್ನು ಆ ಉದ್ದೇಶಕ್ಕಾಗಿ ಪ್ರತ್ಯೇಕ ಬ್ಲಾಕುಗಳನ್ನು ಪ್ರತ್ಯೇಕವಾಗಿ ಒದಗಿಸಿರುವಲ್ಲೆಲ್ಲಾ ಆ ಪ್ರತ್ಯೇಕ ಬ್ಲಾಕುಗಳಲ್ಲಿ ಪ್ರತ್ಯೇಕವಾಗಿ ತೊಳೆಯತಕ್ಕದ್ದು ಮತ್ತು ಆ ಬಗ್ಗೆ ಆಯುಕ್ತರು ಗೊತ್ತುಪಡಿಸಬಹುದಾದಂಥ ವಿಧಾನಗಳಲ್ಲಿ ತೊಳೆಯತಕ್ಕದ್ದು.

**363. ಅನಧಿಕೃತ ಸ್ಥಳಗಳಲ್ಲಿ ಮಡಿವಾಳರು ಬಟ್ಟೆ ಒಗೆಯುವುದಕ್ಕೆ ನಿಷೇಧ.–** (1) ಮಡಿವಾಳರು ತಮ್ಮ ವೃತ್ತಿಯನ್ನು ನಡೆಸುವಾಗ,–

(ಎ) 362ನೇ ಪ್ರಕರಣದ ಮೇರೆಗೆ ನಿರ್ವಹಿಸಿರುವ ಅಥವಾ ವ್ಯವಸ್ಥೆ ಮಾಡಿರುವ ಸಾರ್ವಜನಿಕ ಒಗೆಯುವ ಗೃಹಗಳಲ್ಲಿ ಅಥವಾ ಸ್ಥಳಗಳಲ್ಲಿ; ಅಥವಾ

(ಬಿ) ಆ ಉದ್ದೇಶಕ್ಕಾಗಿ ಅವರು ಗೊತ್ತುಪಡಿಸಬಹುದಾದಂಥ ಇತರ ಸ್ಥಳಗಳಲ್ಲಿ

– ಹೊರತುಪಡಿಸಿ, ನಗರದೊಳಗಡೆಯಾಗಲಿ ಅಥವಾ ನಗರದ ಹೊರಗಡೆಯಾಗಲಿ ಅದರ ಎಲ್ಲೆಯ ಐದು ಕಿಲೋಮೀಟರುಗಳ ಒಳಗೆಯಾಗಲಿ, ಅವರು ಬಟ್ಟೆ ಒಗೆಯುವುದನ್ನು, ಆಯುಕ್ತರು ಸಾರ್ವಜನಿಕ ನೋಟೀಸಿನ ಮೂಲಕ ನಿಷೇಧಿಸಬಹುದು.

(2) ಅಂಥ ಯಾವುದೇ ನಿಷೇಧವನ್ನು ವಿಧಿಸಿರುವಾಗ ವೃತ್ತಿಯಿಂದ ಮಡಿವಾಳನಾಗಿರುವ ಯಾರೇ ವ್ಯಕ್ತಿಯು, ಅಂಥ ನಿಷೇಧವನ್ನು ಉಲ್ಲಂಘಿಸಿ, ತನಗಾಗಿ ಅಥವಾ ವೈಯಕ್ತಿಕ ಮತ್ತು ಕುಟುಂಬ ಸೇವೆಗಾಗಿ ಅಥವಾ ಬಾಡಿಗೆಗಾಗಿ, ಬಾಡಿಗೆ ಕೊಟ್ಟವನ ಆವರಣದಲ್ಲಿ ಮತ್ತು ಅದರೊಳಗೆ ಹೊರತುಪಡಿಸಿ, ಈ ಅಧಿನಿಯಮದ ಮೇರೆಗೆ ನಿರ್ವಹಿಸಿರುವ ಅಥವಾ ಗೊತ್ತುಪಡಿಸಿರುವ ಸಾರ್ವಜನಿಕ ಒಗೆಯುವ ಗೃಹದಲ್ಲಿ ಅಥವಾ ಸ್ಥಳದಲ್ಲಿ ಹೊರತು ನಗರಪಾಲಿಕೆಯ ಎಲ್ಲೆಗಳೊಳಗೆ ಅಥವಾ ಹೊರಗೆ ಯಾವುದೇ ಸ್ಥಳದಲ್ಲಿ ಬಟ್ಟೆಗಳನ್ನು ಒಗೆಯತಕ್ಕದ್ದಲ್ಲ:

ಪರಂತು, ಈ ಪ್ರಕರಣವು, ನಗರದೊಳಗೆ ಒಗೆದ ಬಟ್ಟೆಗಳಿಗೆ ಅಥವಾ ನಗರದೊಳಗೆ ತಂದ ಬಟ್ಟೆಗಳಿಗೆ ಮಾತ್ರ ಅನ್ವಯವಾಗತಕ್ಕದ್ದು.

**364. ನಗರಪಾಲಿಕೆ ಕಸಾಯಿಖಾನೆಗಳ ವ್ಯವಸ್ಥೆ.–** (1) ನಗರಪಾಲಿಕೆಯು, ನಗರಪಾಲಿಕೆಯ ಕಸಾಯಿಖಾನೆಗಳಾಗಿ ಬಳಸುವುದಕ್ಕೆ ಸಾಕಷ್ಟು ಸಂಖ್ಯೆಯ ಸ್ಥಳಗಳನ್ನು ಒದಗಿಸತಕ್ಕದ್ದು ಮತ್ತು ಅವುಗಳನ್ನು ಬಳಸುವುದಕ್ಕಾಗಿ ಸ್ಥಾಯೀ ಸಮಿತಿಯು ನಿರ್ಧರಿಸಬಹುದಾದಂಥ ಬಾಡಿಗೆಗಳನ್ನು ಮತ್ತು ಫೀಜುಗಳನ್ನು ಆಯುಕ್ತರು ವಿಧಿಸಬಹುದು ಮತ್ತು ಸಂಗ್ರಹಿಸಬಹುದು ಅಂಥ ಬಾಡಿಗೆಗಳು ಮತ್ತು ಫೀಜುಗಳು ಸ್ವತ್ತು ತೆರಿಗೆಯನ್ನು ವಸೂಲಿ ಮಾಡುವ ರೀತಿಯಲ್ಲಿ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು.

(2) ಆಯುಕ್ತರು, ತಾವು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮತ್ತು ಷರತ್ತುಗಳ ಮೇಲೆ ಅಂಥ ಬಾಡಿಗೆಗಳ ಮತ್ತು ಫೀಜುಗಳ ಸಂಗ್ರಹಣಾ ಕಾರ್ಯವನ್ನು ಒಂದು ಬಾರಿಗೆ ಮೂರು ವರ್ಷಗಳಿಗೆ ಮೀರದ ಯಾವುದೇ ಅವಧಿಗೆ ಗುತ್ತಿಗೆಗೆ ಕೊಡಬಹುದು.

(3) ನಗರಪಾಲಿಕೆಯ ಕಸಾಯಿಖಾನೆಗಳು, ಸರ್ಕಾರದ ಮಂಜೂರಾತಿಯೊಂದಿಗೆ ನಗರದ ಎಲ್ಲೆಗಳೊಳಗೆ ಅಥವಾ ನಗರದ ಎಲ್ಲೆಗಳ ಹೊರಗೆ ಇರಬಹುದು.

**365. ಕಸಾಯಿಖಾನೆಗಳಿಗೆ ಲೈಸೆನ್ಸು.–** (1) ಪ್ರಾಣಿಗಳ ವಧೆಗಾಗಿ ಅಥವಾ ಪ್ರಾಣಿಗಳ ಶವಗಳ ಚರ್ಮವನ್ನು ಸುಲಿಯುವುದಕ್ಕಾಗಿ ಅಥವಾ ಪ್ರಾಣಿಗಳ ಶವಗಳನ್ನು ಕತ್ತರಿಸುವುದಕ್ಕಾಗಿ ನಗರದ ಎಲ್ಲೆಗಳೊಳಗೆ ಅಥವಾ ಅಂಥ ಎಲ್ಲೆಗಳಿಂದ ಐದು ಕಿಲೋಮೀಟರುಗಳ ಅಂತರದೊಳಗೆ ಇರುವ ಯಾವುದೇ ಸ್ಥಳದ ಮಾಲೀಕನು, ಯಾವ ವರ್ಷಕ್ಕೆ ಲೈಸೆನ್ಸನ್ನು ಕೋರಲಾಗಿದೆಯೋ ಆ ಯಾವುದೇ ವರ್ಷದ ಪ್ರಾರಂಭಕ್ಕೆ ಮುಂಚೆ ಮೂವತ್ತು ದಿನಗಳಿಗಿಂತ ಕಡಿಮೆಯಲ್ಲದ ಅಥವಾ ಹೊಸದಾಗಿ ಪ್ರಾರಂಭಿಸಬೇಕಾಗಿರುವ ಸ್ಥಳದ ಸಂದರ್ಭದಲ್ಲಿ ಅದನ್ನು ಪ್ರಾರಂಭಿಸುವುದಕ್ಕೆ ಮುಂಚೆ ಒಂದು ತಿಂಗಳಿಗೆ ಕಡಿಮೆಯಿಲ್ಲದ ಅವಧಿಯೊಳಗೆ ಲೈಸೆನ್ಸಿಗಾಗಿ ಆಯುಕ್ತರಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು:

ಪರಂತು, ಈ ಉಪ–ಪ್ರಕರಣವು, ಸರ್ಕಾರದ ಪೂರ್ವಮಂಜೂರಾತಿಯ ಹೊರತು ನಗರದ ಎಲ್ಲೆಗಳ ಹೊರಗಡೆಯಿರುವ ಯಾವುದೇ ಪ್ರದೇಶಕ್ಕೆ ಅನ್ವಯವಾಗತಕ್ಕದ್ದಲ್ಲ.

(2) ಆಯುಕ್ತರು, ಆದೇಶದ ಮೂಲಕ ಮತ್ತು ಮೇಲ್ವಿಚಾರಣೆ ಮತ್ತು ಪರಿಶೀಲನೆಗೆ ಸಂಬಂಧಿಸಿದಂತೆ ತಾವು ಸೂಕ್ತವೆಂದು ಭಾವಿಸುವಂಥ ನಿರ್ಬಂಧಗಳು ಮತ್ತು ನಿಯಂತ್ರಣಗಳಿಗೆ ಒಳಪಟ್ಟು ಲೈಸೆನ್ಸನ್ನು ಮಂಜೂರು ಮಾಡಬಹುದು ಅಥವಾ ಮಂಜೂರು ಮಾಡಲು ನಿರಾಕರಿಸಬಹುದು.

**366. ಹಬ್ಬಗಳು ಮತ್ತು ಕರ್ಮಾಚರಣೆಗಳ ಸಂದರ್ಭಗಳಲ್ಲಿ ಪ್ರಾಣಿಗಳ ವಧೆ.–** ಆಯುಕ್ತರು, ಹಬ್ಬಗಳು ಮತ್ತು ಕರ್ಮಾಚರಣೆಗಳ ಸಂದರ್ಭಗಳಲ್ಲಿ ಅಥವಾ ವಿಶೇಷ ಕ್ರಮವಾಗಿ ತಾವು ಸೂಕ್ತವೆಂದು ಭಾವಿಸುವಂಥ ಸ್ಥಳದಲ್ಲಿ ಯಾವುದೇ ಪ್ರಾಣಿಯನ್ನು ವಧೆ ಮಾಡಲು ಅನುಮತಿಸಬಹುದು.

**367. ಮಾರಾಟಕ್ಕಾಗಿ ಅಥವಾ ಆಹಾರಕ್ಕಾಗಿ ಪ್ರಾಣಿಗಳ ವಧೆ.–** ಯಾರೇ ವ್ಯಕ್ತಿಯು ನಗರದ ಒಳಗೆ ಯಾವುದೇ ದನ, ಕುದುರೆ, ಕುರಿ, ಮೇಕೆ, ಅಥವಾ ಹಂದಿಯನ್ನು ಮಾರಾಟಕ್ಕಾಗಿ ಅಥವಾ ಆಹಾರಕ್ಕಾಗಿ ನಗರಪಾಲಿಕೆಯ ಕಸಾಯಿಖಾನೆಯಲ್ಲಿ ಅಥವಾ ಲೈಸೆನ್ಸ್ ಪಡೆದ ಕಸಾಯಿಖಾನೆಯಲ್ಲಿ ಹೊರತು, ಇನ್ನೆಲ್ಲಿಯೂ ವಧೆ ಮಾಡತಕ್ಕದ್ದಲ್ಲ ಅಥವಾ ಆಯುಕ್ತರಿಂದ ಲೈಸೆನ್ಸು ಪಡೆಯದೆ ಅಥವಾ ಲೈಸೆನ್ಸಿಗೆ ಅನುಸಾರವಾಗಿ ಅಲ್ಲದೆ ಅನ್ಯಥಾ ಯಾವುದೇ ಪ್ರಾಣಿಯ ಶವದ ಚರ್ಮವನ್ನು ಸುಲಿಯತಕ್ಕದ್ದಲ್ಲ ಅಥವಾ ಯಾವುದೇ ಪ್ರಾಣಿಯ ಶವವನ್ನು ಕತ್ತರಿಸತಕ್ಕದ್ದಲ್ಲ ಅಥವಾ ಉಪದ್ರವನ್ನುಂಟುಮಾಡುವ ರೀತಿಯಲ್ಲಿ ಯಾವುದೇ ಚರ್ಮವನ್ನು ಒಣಗಿಸತಕ್ಕದ್ದಲ್ಲ ಅಥವಾ ಒಣಗಿಸಲು ಅನುಮತಿಸತಕ್ಕದ್ದಲ್ಲ.

**368. ಸಾರ್ವಜನಿಕ ಮಾರುಕಟ್ಟೆಗಳು.–** ನಗರಪಾಲಿಕೆಯ ನಿಧಿಯಿಂದ, ಆರ್ಜಿಸಿದ, ನಿರ್ಮಿಸಿದ ದುರಸ್ತಿ ಮಾಡಿದ ಅಥವಾ ನಿರ್ವಹಿಸಿರುವ ಎಲ್ಲ ಮಾರುಕಟ್ಟೆಗಳನ್ನು ಸಾರ್ವಜನಿಕ ಮಾರುಕಟ್ಟೆಗಳೆಂದು ಭಾವಿಸತಕ್ಕದ್ದು.

**369. ಸಾರ್ವಜನಿಕ ಮಾರುಕಟ್ಟೆಗಳಿಗೆ ಸಂಬಂಧಿಸಿದಂತೆ ಪೌರ ಪ್ರಾಧಿಕಾರಗಳ ಅಧಿಕಾರ.–** (1) ಸಾರ್ವಜನಿಕ ಮಾರುಕಟ್ಟೆಗಳಾಗಿ ಬಳಸಲು ನಗರಪಾಲಿಕೆಯು ಸ್ಥಳಗಳನ್ನು ಒದಗಿಸಬಹುದು.

(2) ಆಯುಕ್ತರು, ಯಾವುದೇ ಸಾರ್ವಜನಿಕ ಮಾರುಕಟ್ಟೆಯಲ್ಲಿ ಸ್ಥಾಯೀ ಸಮಿತಿಯು ನಿರ್ಧರಿಸಬಹುದಾದಂಥ ದರಗಳಲ್ಲಿ ಈ ಕೆಳಕಂಡ ಫೀಜುಗಳಲ್ಲಿ ಯಾವುದೇ ಒಂದು ಅಥವಾ ಹೆಚ್ಚು ಫೀಜುಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು ಮತ್ತು ಅಂಥ ಫೀಜುಗಳ ಸಂಗ್ರಹಣಾ ಕಾರ್ಯವನ್ನು ತಮಗೆ ಸರಿಯೆಂದು ಕಂಡುಬರಬಹುದಾದಂಥ ವ್ಯಕ್ತಿಗಳಿಗೆ ವಹಿಸಬಹುದು ಅಥವಾ ಅವರು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮೇಲೆ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಅಂಥ ಫೀಜುಗಳ ಸಂಗ್ರಹಣಾ ಕಾರ್ಯವನ್ನು ಗುತ್ತಿಗೆಗೆ ಕೊಡಬಹುದು, ಎಂದರೆ:–

(ಎ) ಅಂಥ ಮಾರುಕಟ್ಟೆಗಳನ್ನು ಬಳಸಲು ಅಥವಾ ಅಂಥ ಮಾರುಕಟ್ಟೆಗಳಲ್ಲಿ ಮಾರಾಟಕ್ಕಾಗಿ ಸರಕುಗಳನ್ನು ಇಡಲು ಹಕ್ಕಿಗಾಗಿ ಫೀಜು;

(ಬಿ) ಅಂಥ ಮಾರುಕಟ್ಟೆಗಳಲ್ಲಿನ ಅಂಗಡಿಗಳ, ಮಳಿಗೆಗಳ, ಆವರಣಗಳ ಅಥವಾ ಕಟ್ಟೆಗಳ ಬಳಕೆಗಾಗಿ ಫೀಜು;

(ಸಿ) ಅಂಥ ಮಾರುಕಟ್ಟೆಗಳಲ್ಲಿ ಮಾರಾಟಕ್ಕಾಗಿ ಸರಕುಗಳನ್ನು ಒಯ್ಯುವ ವಾಹನಗಳು ಅಥವಾ ಭಾರ ಹೊರುವ ಪ್ರಾಣಿಗಳ ಮೇಲೆ ಅಥವಾ ಸರಕುಗಳನ್ನು ತರುವ ವ್ಯಕ್ತಿಗಳ ಮೇಲೆ ಫೀಜು;

(ಡಿ) ಅಂಥ ಮಾರುಕಟ್ಟೆಗಳ ಒಳಕ್ಕೆ ಮಾರಾಟಕ್ಕಾಗಿ ತಂದ ಅಥವಾ ಅಲ್ಲಿ ಮಾರಾಟ ಮಾಡಿದ ಪ್ರಾಣಿಗಳ ಮೇಲೆ ಫೀಜು; ಮತ್ತು

(ಇ) ಅಂಥ ಮಾರುಕಟ್ಟೆಗಳಲ್ಲಿ ತಮ್ಮ ವೃತ್ತಿಗಳನ್ನು ನಡೆಸುತ್ತಿರುವ ದಳ್ಳಾಳಿಗಳು, ಕಮಿಷನ್ ಏಜಂಟರುಗಳು, ತೂಕ ಮಾಡುವವರು ಹಾಗೂ ಅಳತೆ ಮಾಡುವವರ ಮೇಲೆ ಲೈಸೆನ್ಸು ಫೀಜು.

(3) ಅಂಥ ಫೀಜುಗಳು, ಸ್ವತ್ತು ತೆರಿಗೆಯನ್ನು ವಸೂಲು ಮಾಡುವಂಥ ರೀತಿಯಲ್ಲಿಯೇ ವಸೂಲಿ ಮಾಡುವಂಥಗಳು ಆಗಿರತಕ್ಕದ್ದು.

(4) ಸರ್ಕಾರದ ಮಂಜೂರಾತಿಯೊಂದಿಗೆ ನಗರಪಾಲಿಕೆಯು ಯಾವುದೇ ಸಾರ್ವಜನಿಕ ಮಾರುಕಟ್ಟೆಯನ್ನು ಅಥವಾ ಅದರ ಭಾಗವನ್ನು ಮುಚ್ಚಬಹುದು.

**370. ಸಾರ್ವಜನಿಕ ಮಾರುಕಟ್ಟೆಗಳ ಮೇಲೆ ಆಯುಕ್ತರ ನಿಯಂತ್ರಣ.–** (1) ಆಯುಕ್ತರ ಅನುಮತಿ ಇಲ್ಲದೆ, ಯಾರೇ ವ್ಯಕ್ತಿಯು ಅಥವಾ ಫೀಜಿನ ಸಂಗ್ರಹಣಾ ಕಾರ್ಯವನ್ನು ಗುತ್ತಿಗೆಗೆ ಕೊಟ್ಟಿದ್ದರೆ ಆ ಗುತ್ತಿಗೆದಾರನು ಯಾವುದೇ ಸಾರ್ವಜನಿಕ ಮಾರುಕಟ್ಟೆಯೊಳಗೆ ಯಾವುದೇ ಪ್ರಾಣಿಯನ್ನು ಅಥವಾ ವಸ್ತುವನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ಮಾರಾಟಕ್ಕಾಗಿ ಇಡತಕ್ಕದ್ದಲ್ಲ.

(2) ಉಪ–ಪ್ರಕರಣ (1)ನ್ನು ಅಥವಾ ಲೈಸೆನ್ಸಿನ ಯಾವುದೇ ಷರತ್ತನ್ನು ಅಥವಾ 378ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ವಿನಿಯಮವನ್ನು ಅಥವಾ 423ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ಉಪವಿಧಿಯನ್ನು ಉಲ್ಲಂಘಿಸುವ ಅಥವಾ 369ನೇ ಪ್ರಕರಣದ ಮೇರೆಗೆ ವಿಧಿಸಬಹುದಾದ ಫೀಜನ್ನು ಸಂದಾಯ ಮಾಡಲು ತಪ್ಪುವ ಯಾರೇ ವ್ಯಕ್ತಿಯನ್ನು, ಮೂರು ದಿನಗಳ ಸ್ಪಷ್ಟ ನೋಟೀಸನ್ನು ಕೊಟ್ಟ ತರುವಾಯ, ನಗರಪಾಲಿಕೆಯ ಯಾರೇ ಅಧಿಕಾರಿಯು ಅಥವಾ ನೌಕರನು ಅಂಥ ಮಾರುಕಟ್ಟೆಯಿಂದ ಕ್ಷಿಪ್ರವಾಗಿ ಹೊರಹಾಕಬಹುದು ಮತ್ತು ಯಾರೇ ವ್ಯಕ್ತಿಯು ಪಡೆದಿರಬಹುದಾದ ಯಾವುದೇ ಗುತ್ತಿಗೆ ಅಥವಾ ಹಿಡುವಳಿ ಅವಧಿಯನ್ನು, ವ್ಯಕ್ತಿಯನ್ನು ಪ್ರಾಸಿಕ್ಯೂಟ್ ಮಾಡಲು ಅಥವಾ 369ನೇ ಪ್ರಕರಣದ ಮೇರೆಗೆ ವಿಧಿಸಬಹುದಾದ ಫೀಜನ್ನು ಮತ್ತು ಹಾಗೆ ಆ ವ್ಯಕ್ತಿಯನ್ನು ಹೊರಹಾಕುವುದಕ್ಕೆ ನಗರಪಾಲಿಕೆಯು ವಹಿಸಬಹುದಾದಂಥ ವೆಚ್ಚಗಳು ಯಾವುದಾದರೂ ಇದ್ದರೆ, ಅವುಗಳನ್ನು ವಸೂಲಿ ಮಾಡಲು ನಗರಪಾಲಿಕೆಗೆ ಇರುವ ನ್ಯಾಯ ಸಮ್ಮತ ಹಕ್ಕುಗಳಿಗೆ ಬಾಧಕವಾಗದಂತೆ ಆಯುಕ್ತರು, ನಿರ್ಧರಿಸಬಹುದಾದಂಥ ಅವಧಿಗಾಗಿ ಮತ್ತು ಅಂಥ ದಿನಾಂಕದಿಂದ ಕೊನೆಗೊಳಿಸಬಹುದು.

**371. ಖಾಸಗಿ ಮಾರುಕಟ್ಟೆಗಳ ಸ್ಥಾಪನೆ.–** (1) ನಗರಪಾಲಿಕೆಯು ನಗರದಲ್ಲಿ ಅಥವಾ ನಗರದ ನಿರ್ದಿಷ್ಟಪಡಿಸಿದ ಯಾವುದೇ ಭಾಗದಲ್ಲಿ ಮನುಷ್ಯನ ಆಹಾರಕ್ಕಾಗಿ ಉದ್ದೇಶಿಸಿದ ಪ್ರಾಣಿಗಳನ್ನು ಅಥವಾ ಮನುಷ್ಯನ ಆಹಾರದ ಯಾವುದೇ ವಸ್ತುವನ್ನು ಮಾರಾಟಕ್ಕಾಗಿ ಅಥವಾ ಅವುಗಳ ಮಾರಾಟಕ್ಕಾಗಿ ಪ್ರದರ್ಶಿಸುವ ಉದ್ದೇಶಕ್ಕಾಗಿ ಹೊಸ ಖಾಸಗಿ ಮಾರುಕಟ್ಟೆಗಳನ್ನು ಸ್ಥಾಪಿಸಲು ಅನುಮತಿಸಬೇಕೇ ಎಂಬುದನ್ನು ನಿರ್ಧರಿಸತಕ್ಕದ್ದು.

(2) (ಎ) ಯಾರೇ ವ್ಯಕ್ತಿಯು ಯಾವುದೇ ಹೊಸ ಖಾಸಗಿ ಮಾರುಕಟ್ಟೆಯನ್ನು, ಸ್ಥಾಯೀ ಸಮಿತಿಯ ಮಂಜೂರಾತಿಯೊಂದಿಗೆ ಆಯುಕ್ತರು ನೀಡಿದ ಲೈಸೆನ್ಸಿಲ್ಲದೇ ಅಥವಾ ಅದಕ್ಕೆ ಅನುಸಾರವಾಗಿ ಅಲ್ಲದೇ ಅನ್ಯಥಾ ಸ್ಥಾಪಿಸತಕ್ಕದ್ದಲ್ಲ. ಮಂಜೂರಾತಿ ಕೊಡುವಾಗ ಅಥವಾ ನಿರಾಕರಿಸುವಾಗ (1)ನೇ ಉಪಪ್ರಕರಣದ ಮೇರೆಗೆ ಅಂಗೀಕರಿಸಿದ ನಗರಪಾಲಿಕೆಯ ನಿರ್ಣಯಗಳಿಂದ ಸ್ಥಾಯೀ ಸಮಿತಿಯು ಮಾರ್ಗದರ್ಶನವನ್ನು ಪಡೆಯತಕ್ಕದ್ದು.

(ಬಿ) ಅಂಥ ಲೈಸೆನ್ಸಿಗಾಗಿ ಅರ್ಜಿಗಳನ್ನು ಯಾವ ಸ್ಥಳಕ್ಕೆ ಲೈಸೆನ್ಸನ್ನು ಕೋರಲಾಗಿದೆಯೋ ಆ ಸ್ಥಳದ ಮಾಲೀಕನು ಅಂಥ ಸ್ಥಳವನ್ನು ಮಾರುಕಟ್ಟೆಯಾಗಿ ಪ್ರಾರಂಭಿಸುವುದಕ್ಕೆ ಮುಂಚೆ ಮೂವತ್ತು ದಿನಗಳಿಗೆ ಕಡಿಮೆಯಿಲ್ಲದ ಅವಧಿಯೊಳಗೆ ಸಲ್ಲಿಸತಕ್ಕದ್ದು.

**372. ಖಾಸಗಿ ಮಾರುಕಟ್ಟೆಗಳಿಗೆ ಲೈಸೆನ್ಸು ಕೊಡುವುದು.–** (1) ಯಾರೇ ವ್ಯಕ್ತಿಯು, ಈ ಬಗ್ಗೆ ಆಯುಕ್ತರಿಂದ ಮಂಜೂರಾದ [1][xxx][1] ಲೈಸೆನ್ಸ್ ಇಲ್ಲದೆ ಅಥವಾ ಅದಕ್ಕನುಸಾರವಾಗಿ ಅಲ್ಲದೆ ಅನ್ಯಥಾ ಖಾಸಗಿ ಮಾರುಕಟ್ಟೆಯನ್ನು ತೆರೆದಿಡುವುದನ್ನು ಮುಂದುವರಿಸತಕ್ಕದ್ದಲ್ಲ. ಆ ಲೈಸೆನ್ಸನ್ನು

ನವೀಕರಿಸುವುದಕ್ಕಾಗಿ ಅರ್ಜಿಯನ್ನು ಯಾವ ವರ್ಷಕ್ಕೆ ಲೈಸೆನ್ಸನ್ನು ಕೋರಲಾಗಿದೆಯೋ ಆ ವರ್ಷದ ಪ್ರಾರಂಭಕ್ಕೆ ಮುಂಚೆ ಮೂವತ್ತು ದಿನಗಳಿಗೆ ಕಡಿಮೆಯಿಲ್ಲದ ಅವಧಿಯೊಳಗೆ ಸಲ್ಲಿಸತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(2) ಆಯುಕ್ತರು, ಮೇಲ್ವಿಚಾರಣೆ ಮತ್ತು ಪರಿಶೀಲನೆಗೆ ಸಂಬಂಧಿಸಿದಂಥ ವಿನಿಯಮಗಳಿಗೆ ಒಳಪಟ್ಟು ಮತ್ತು ಅಂಥ ಮಾರುಕಟ್ಟೆಗಳಲ್ಲಿ ನೈರ್ಮಲ್ಯ, ಚರಂಡಿ ವ್ಯವಸ್ಥೆ ನೀರು ಸರಬರಾಜಿಗೆ, ಬಳಸುವ ಕಾಲುದಾರಿ ಮತ್ತು ದಾರಿಗಳ ಅಗಲ, ತೂಕ ಮತ್ತು ಅಳತೆಗಳಿಗೆ ಹಾಗೂ ಅಂಥ ಮಾರುಕಟ್ಟೆಗಳಲ್ಲಿ ವಿಧಿಸಬೇಕಾದ ಬಾಡಿಗೆಗೆ ಮತ್ತು ಫೀಜುಗಳಿಗೆ ಸಂಬಂಧಿಸಿದಂತೆ ತಾವು ಸೂಕ್ತವೆಂದು ಭಾವಿಸುವಂಥ ಷರತ್ತುಗಳಿಗೆ ಒಳಪಟ್ಟು ಆದೇಶದ ಮೂಲಕ,–

(ಎ) ಅಂಥ ಲೈಸೆನ್ಸುಗಳನ್ನು ಮಂಜೂರು ಮಾಡಬಹುದು ಅಥವಾ ಮಂಜೂರು ಮಾಡಲು ಅಥವಾ ನವೀಕರಿಸಲು ನಿರಾಕರಿಸಬಹುದು; ಅಥವಾ

(ಬಿ) ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕೆಲಸಗಳನ್ನು ಮಾಲೀಕನು ಅಥವಾ ಅಧಿಭೋಗದಾರನು ನಿರ್ವಹಿಸುವವರೆಗೆ ಲೈಸೆನ್ಸನ್ನು ತಡೆಹಿಡಿಯಬಹುದು:

ಪರಂತು, ಆಯುಕ್ತರು, ಈ ಅಧಿನಿಯಮದ ಯಾವುದೇ ಉಪಬಂಧವನ್ನು ಅಥವಾ 422ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ವಿನಿಯಮವನ್ನು ಅಥವಾ 423ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ಉಪವಿಧಿಯನ್ನು ಮಾರುಕಟ್ಟೆಯ ಮಾಲೀಕನು ಅಥವಾ ಅದರ ಅಧಿಭೋಗದಾರನು ಪಾಲಿಸಲು ತಪ್ಪಿದ್ದ ಹೊರತು ಬೇರೆ ಯಾವುದೇ ಕಾರಣಕ್ಕಾಗಿ ಸ್ಥಾಯೀ ಸಮಿತಿಯ ಅನುಮೋದನೆಯಿಲ್ಲದೆ, ಅಂಥ ಲೈಸೆನ್ಸನ್ನು ನಿರಾಕರಿಸತಕ್ಕದ್ದಲ್ಲ ಅಥವಾ ತಡೆಹಿಡಿಯತಕ್ಕದ್ದಲ್ಲ.

(3) ಆಯುಕ್ತರು, ಮಾರುಕಟ್ಟೆಗೆ ಹಾಗೆ ಲೈಸೆನ್ಸು ನೀಡಲಾಗಿದೆ ಎಂಬ ಬಗ್ಗೆ ನೋಟೀಸನ್ನು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಪ್ರತಿಯೊಂದು ಮಾರುಕಟ್ಟೆಯ ಪ್ರವೇಶ ಸ್ಥಳದ ಅಥವಾ ಅದರ ಬಳಿ ಎದ್ದುಕಾಣುವ ಜಾಗದಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

(4) ಆಯುಕ್ತರು ಮೇಲೆ ಹೇಳಿದಂತೆ ಲೈಸೆನ್ಸನ್ನು ನಿರಾಕರಿಸಿದ್ದರೆ ಅಥವಾ ತಡೆಹಿಡಿದಿದ್ದರೆ ಹಾಗೆ ನಿರಾಕರಿಸುವುದರ ಅಥವಾ ತಡೆಹಿಡಿದಿರುವುದರ ಬಗ್ಗೆ ಇಂಗ್ಲೀಷ್ ಮತ್ತು ಕನ್ನಡದಲ್ಲಿ ನೋಟೀಸನ್ನು ಆವರಣದ ಪ್ರವೇಶ ಸ್ಥಳದಲ್ಲಿ ಅಥವಾ ಅದರ ಬಳಿ ಎದ್ದು ಕಾಣುವ ಜಾಗದಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

**373. ಲೈಸೆನ್ಸಿನ ಅವಧಿ.–** 371ನೇ ಪ್ರಕರಣದ ಅಥವಾ 372ನೇ ಪ್ರಕರಣದ ಮೇರೆಗೆ ಮಂಜೂರು ಮಾಡಲಾದ ಪ್ರತಿಯೊಂದು ಲೈಸೆನ್ಸು, ಅದನ್ನು ಯಾವ ಐದು ವರ್ಷಗಳ ಅವಧಿಗೆ ಮಂಜೂರು ಮಾಡಲಾಗಿದೆಯೋ ಆ [1][ಐದು ವರ್ಷಗಳ ಅವಧಿಯ ಕೊನೆಯಲ್ಲಿ][1] ಮುಕ್ತಾಯಗೊಳ್ಳತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**374. ಖಾಸಗಿ ಮಾರುಕಟ್ಟೆಗಳಿಗೆ ಲೈಸೆನ್ಸು ಫೀಜು.–** 372ನೇ ಪ್ರಕರಣದ ಮೇರೆಗೆ ಮಂಜೂರು ಮಾಡಿದ ಲೈಸೆನ್ಸು, 369ನೇ ಪ್ರಕರಣದ (2)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸ್ವರೂಪದ ಯಾವುದೇ ಫೀಜನ್ನು ಅಥವಾ ಫೀಜುಗಳನ್ನು ವಿಧಿಸಲು ಅನುಮತಿಸಿದಾಗ, ಅಂಥ ಲೈಸೆನ್ಸಿಗೆ ಆಯುಕ್ತರು ಹಿಂದಿನ ವರ್ಷದಲ್ಲಿ ಆ ಮಾರುಕಟ್ಟೆಯಿಂದ ಮಾಲೀಕನಿಗೆ ಬಂದ ಒಟ್ಟು ಆದಾಯದ ಶೇಕಡ ಹದಿನೈದಕ್ಕೆ ಮೀರದ ಫೀಜನ್ನು ವಿಧಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು.

**375. ಲೈಸೆನ್ಸು ಇಲ್ಲದ ಖಾಸಗಿ ಮಾರುಕಟ್ಟೆಯಲ್ಲಿ ಮಾರಾಟ.–** ಲೈಸೆನ್ಸು ಇಲ್ಲದ ಖಾಸಗಿ ಮಾರುಕಟ್ಟೆಯಲ್ಲಿ ಯಾರೇ ವ್ಯಕ್ತಿಯು ಯಾವುದೇ ಪ್ರಾಣಿಯನ್ನು ಅಥವಾ ವಸ್ತುವನ್ನು ಮಾರಾಟ ಮಾಡುವುದು ಅಥವಾ ಮಾರಾಟಕ್ಕಾಗಿ ಇಡುವುದು ಕಾನೂನು ಸಮ್ಮತವಾಗಿರತಕ್ಕದ್ದಲ್ಲ.

**376. ಖಾಸಗಿ ಮಾರುಕಟ್ಟೆಗಳಿಗೆ ಸಂಬಂಧಿಸಿದಂತೆ ಆಯುಕ್ತರ ಅಧಿಕಾರಗಳು.–** ಆಯುಕ್ತರು, ನೋಟೀಸಿನ ಮೂಲಕ ಯಾವುದೇ ಪ್ರಾಣಿಯನ್ನು ಅಥವಾ ಆಹಾರ ವಸ್ತುವನ್ನು ಮಾರಾಟ ಮಾಡುವುದಕ್ಕಾಗಿ ಯಾವುದೇ ಖಾಸಗಿ ಮಾರುಕಟ್ಟೆಯ ಮಾಲೀಕನನ್ನು, ಅಧಿಭೋಗದಾರನನ್ನು ಅಥವಾ ಗುತ್ತಿಗೆದಾರನನ್ನು,–

(ಎ) ಅಂಥ ಮಾರುಕಟ್ಟೆಗೆ ಸಂಪರ್ಕ ಮಾರ್ಗಗಳು, ಪ್ರವೇಶ ಸ್ಥಳಗಳು, ದಾರಿಗಳು, ಗೇಟುಗಳು, ಚರಂಡಿಗಳು ಮತ್ತು ರೊಚ್ಚುಗುಂಡಿಗಳನ್ನು ನಿರ್ಮಿಸಲು ಮತ್ತು ಆಯುಕ್ತರು ಯುಕ್ತವೆಂದು ಭಾವಿಸಬಹುದಾದಂಥ ವರ್ಣನೆಯ ಕಕ್ಕಸುಗಳನ್ನು ಅಂಥ ಸ್ಥಳದಲ್ಲಿ ಮತ್ತು ಅಷ್ಟು ಸಂಖ್ಯೆಯಲ್ಲಿ ಒದಗಿಸಲು;

(ಬಿ) ಅಭೇದ್ಯವಾದುದೆಂದು ಹಾಗೂ ಸುಲಭವಾಗಿ ಸ್ವಚ್ಛಗೊಳಿಸುವುದನ್ನು ಸುನಿಶ್ಚಿತ ಗೊಳಿಸುವಂಥದ್ದೆಂದು ಆಯುಕ್ತರು ಅಭಿಪ್ರಾಯಪಡುವಂಥ ಸಾಮಗ್ರಿಯಿಂದ ಅದರ ಸಂಪೂರ್ಣ ಭಾಗಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಚಾವಣಿಯನ್ನು ಹಾಕಲು ಮತ್ತು ನೆಲಗಟ್ಟು ಮಾಡಲು;

(ಸಿ) ಅದಕ್ಕೆ ಸರಿಯಾಗಿ ವಾತಾಯನ ವ್ಯವಸ್ಥೆ ಮತ್ತು ಬೆಳಕಿನ ವ್ಯವಸ್ಥೆ ಮಾಡಲು ಮತ್ತು ಅದಕ್ಕೆ ನೀರನ್ನು ಸರಬರಾಜು ಮಾಡಲು;

(ಡಿ) ಆಯುಕ್ತರು ನಿರ್ದೇಶಿಸಬಹುದಾದಂತೆ ಮಳಿಗೆಗಳ ನಡುವೆ ಸಾಕಷ್ಟು ಅಗಲದ ದಾರಿಗಳನ್ನು ಒದಗಿಸಲು ಮತ್ತು ಮಳಿಗೆಗಳು, ದಾರಿಗಳು, ಅಂಗಡಿಗಳು, ಬಾಗಿಲುಗಳು ಅಥವಾ ಮಾರುಕಟ್ಟೆಯ ಇತರ ಭಾಗಗಳಲ್ಲಿ ಅಂಥ ಬದಲಾವಣೆಗಳನ್ನು ಮಾಡಲು; ಮತ್ತು

(ಇ) ಅದನ್ನು ಸ್ವಚ್ಛವಾಗಿ ಮತ್ತು ಸರಿಯಾದ ಸ್ಥಿತಿಯಲ್ಲಿ ಇಡಲು ಮತ್ತು ಅದರಿಂದ ಎಲ್ಲ ಹೊಲಸನ್ನು ಮತ್ತು ಕಸಕಡ್ಡಿಯನ್ನು ತೆಗೆದುಹಾಕಲು

– ಅಗತ್ಯಪಡಿಸಬಹುದು.

**377. ತಪ್ಪಿದಲ್ಲಿ ಲೈಸೆನ್ಸಿನ ಅಮಾನತು ಅಥವಾ ನಿರಾಕರಣೆ.–** (1) ಯಾರೇ ವ್ಯಕ್ತಿಯು, ಆಯುಕ್ತರು ಆ ಬಗ್ಗೆ ಅವನಿಗೆ ನೋಟೀಸನ್ನು ಕೊಟ್ಟ ತರುವಾಯ 376ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕೆಲಸವನ್ನು ಸದರಿ ನೋಟೀಸಿನಲ್ಲಿ ಗೊತ್ತುಪಡಿಸಿದ ಅವಧಿಯೊಳಗೆ ಮತ್ತು ಅಂಥ ರೀತಿಯಲ್ಲಿ ನಿರ್ವಹಿಸಲು ವಿಫಲನಾದರೆ, ಆಯುಕ್ತರು ಸ್ಥಾಯೀ ಸಮಿತಿಯ ಮಂಜೂರಾತಿ ಪಡೆದು ಸದರಿ ವ್ಯಕ್ತಿಯ ಲೈಸೆನ್ಸನ್ನು ಅಮಾನತುಗೊಳಿಸಬಹುದು ಅಥವಾ ಅಂಥ ಕೆಲಸಗಳನ್ನು ಪೂರ್ಣಗೊಳಿಸುವವರೆಗೆ ಅವನಿಗೆ ಲೈಸೆನ್ಸನ್ನು ಮಂಜೂರು ಮಾಡಲು ನಿರಾಕರಿಸಬಹುದು.

(2) ಅಂಥ ಅಮಾನತು ಅಥವಾ ನಿರಾಕರಣೆಯ ತರುವಾಯ ಯಾವುದೇ ಅಂಥ ಮಾರುಕಟ್ಟೆಯನ್ನು ತೆರೆಯುವುದು ಅಥವಾ ತೆರೆದಿಡುವುದು ಯಾರೇ ವ್ಯಕ್ತಿಗೆ ಕಾನೂನು ಬದ್ಧವಾಗಿರತಕ್ಕದ್ದಲ್ಲ.

**378. ಮಾರುಕಟ್ಟೆಗಳು, ಬಜಾರುಗಳು, ಕಸಾಯಿಖಾನೆಗಳು ಮತ್ತು ಪ್ರಾಣಿಗಳ ವಧೆಗಾಗಿ ಪ್ರತ್ಯೇಕವಾಗಿ ಇರಿಸಿರುವ ಸ್ಥಳಗಳಿಗೆ ವಿನಿಯಮಗಳನ್ನು ರಚಿಸಲು ಆಯುಕ್ತರ ಅಧಿಕಾರ.–** ಆಯುಕ್ತರು ಸ್ಥಾಯೀ ಸಮಿತಿಯ ಅನುಮೋದನೆ ಪಡೆದು ಈ ಅಧಿನಿಯಮದ ಯಾವುದೇ ಉಪಬಂಧಕ್ಕೆ ಅಥವಾ 423ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ಉಪವಿಧಿಗೆ ಅಸಂಗತವಾಗದಂತೆ,–

(ಎ) ಯಾವುದೇ ಮಾರುಕಟ್ಟೆ–ಕಟ್ಟಡ, ಮಾರುಕಟ್ಟೆ–ಸ್ಥಳ, ಬಜಾರು ಅಥವಾ ಕಸಾಯಿಖಾನೆಯಲ್ಲಿ ಅಥವಾ ಅದಕ್ಕೆ ಸಂಪರ್ಕ ಕಲ್ಪಿಸುವ ಮಾರ್ಗಗಳಲ್ಲಿ ಅಥವಾ ಯಾವುದೇ ಮಾರುಕಟ್ಟೆಯಲ್ಲಿನ ಅಥವಾ ಬಜಾರಿನಲ್ಲಿನ ಯಾವುದೇ ರಸ್ತೆಗಳಲ್ಲಿ ಅಥವಾ ಕಾಲುದಾರಿಗಳಲ್ಲಿ ಅಥವಾ ದಾರಿಗಳಲ್ಲಿ ಉಪದ್ರವವನ್ನು ಅಥವಾ ಅಡ್ಡಿಯನ್ನು ನಿವಾರಿಸಲು;

(ಬಿ) ಯಾವುದೇ ಮಾರುಕಟ್ಟೆ, ಬಜಾರು ಅಥವಾ ಕಸಾಯಿಖಾನೆಯ ಬಳಕೆಗಾಗಿ ಯಾವ ದಿನಗಳಂದು ಮತ್ತು ಯಾವ ವೇಳೆಯಲ್ಲಿ ನಡೆಸಬಹುದೋ ಅಥವಾ ತೆರೆದಿಡಬಹುದೋ ಆ ದಿನಗಳನ್ನು ಮತ್ತು ವೇಳೆಗಳನ್ನು ನಿಗದಿಪಡಿಸಲು;

(ಸಿ) ಪ್ರತಿಯೊಂದು ಮಾರುಕಟ್ಟೆ–ಕಟ್ಟಡ, ಮಾರುಕಟ್ಟೆ–ಸ್ಥಳ, ಬಜಾರು, ಕಸಾಯಿಖಾನೆ ಮತ್ತು 371ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಸ್ಥಳವನ್ನು ಸ್ವಚ್ಛವಾಗಿ ಮತ್ತು ಸರಿಯಾದ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಮತ್ತು ಅಲ್ಲಿಂದ ಹೊಲಸನ್ನು ಮತ್ತು ಕಸಕಡ್ಡಿಯನ್ನು ತೆಗೆದುಹಾಕಲು;

(ಡಿ) ಯಾವುದೇ ಮಾರುಕಟ್ಟೆ–ಕಟ್ಟಡ, ಮಾರುಕಟ್ಟೆ–ಸ್ಥಳ, ಬಜಾರು, ಕಸಾಯಿಖಾನೆ ಅಥವಾ ಮೇಲೆ ಹೇಳಿದಂತೆ ನಿರ್ದಿಷ್ಟಪಡಿಸಿದ ಸ್ಥಳಕ್ಕೆ ಸರಿಯಾದ ವಾತಾಯನ ವ್ಯವಸ್ಥೆ ಮತ್ತು ಸಾಕಷ್ಟು ನೀರಿನ ಸರಬರಾಜು ವ್ಯವಸ್ಥೆ ಮಾಡುವಂತೆ ಅಗತ್ಯಪಡಿಸಲು;

(ಇ) ಮಾರುಕಟ್ಟೆ–ಕಟ್ಟಡಗಳಲ್ಲಿ, ಮಾರುಕಟ್ಟೆ–ಸ್ಥಳಗಳಲ್ಲಿ, ಬಜಾರುಗಳಲ್ಲಿ, ಸಾರ್ವಜನಿಕರ ಸುಗಮ ಬಳಕೆಗಾಗಿ ಮಳಿಗೆಗಳ ನಡುವೆ ಸಾಕಷ್ಟು ಅಗಲದ ದಾರಿಗಳನ್ನು ಒದಗಿಸುವಂತೆ ಅಗತ್ಯಪಡಿಸಲು;

(ಎಫ್) ಮಾರುಕಟ್ಟೆ–ಕಟ್ಟಡ, ಮಾರುಕಟ್ಟೆ–ಸ್ಥಳಗಳು ಮತ್ತು ಬಜಾರುಗಳಲ್ಲಿ ವಿವಿಧ ವರ್ಗಗಳ ವಸ್ತುಗಳಿಗೆ ಬೇರೆ ಬೇರೆ ಪ್ರದೇಶಗಳನ್ನು ಪ್ರತ್ಯೇಕವಾಗಿ ಇರಿಸುವಂತೆ ಅಗತ್ಯಪಡಿಸಲು

– ವಿನಿಯಮಗಳನ್ನು ರಚಿಸಬಹುದು.

**379. ಕುಷ್ಠರೋಗಿಗಳು ಮುಂತಾದವರನ್ನು ಮಾರುಕಟ್ಟೆಗಳಿಂದ ಮತ್ತು ಖಾಸಗಿ ಮಾರುಕಟ್ಟೆಗಳಿಂದ ಹೊರಹಾಕುವ ಕರ್ತವ್ಯ.–** ಮಾರುಕಟ್ಟೆಯ ಪ್ರಭಾರದಲ್ಲಿರುವ ವ್ಯಕ್ತಿಯು, ಮಾರುಕಟ್ಟೆಯಲ್ಲಿ ಯಾವುದೇ ವಸ್ತುವನ್ನು ಮಾರಾಟ ಮಾಡುವ ಅಥವಾ ಮಾರಾಟಕ್ಕಾಗಿ ಇಡುವ ಅಥವಾ ಮಾರುಕಟ್ಟೆಯಲ್ಲಿ ಮಾರಾಟಕ್ಕಾಗಿ ಇಟ್ಟಿರುವ ಯಾವುದೇ ವಸ್ತುಗಳನ್ನು ಖರೀದಿ ಮಾಡದೆಯೇ ಮುಟ್ಟುವ, ಹುಣ್ಣಾಗಲು ಆರಂಭವಾಗಿರುವ ಕುಷ್ಠರೋಗದಿಂದ ಅಥವಾ ಯಾವುದೇ ಸೋಂಕು ಅಥವಾ ಅಂಟುರೋಗದಿಂದ ನರಳುತ್ತಿರುವ ಯಾರೇ ವ್ಯಕ್ತಿಯು ಮಾರುಕಟ್ಟೆಯೊಳಗೆ ಪ್ರವೇಶಿಸುವುದನ್ನು ತಡೆಗಟ್ಟತಕ್ಕದ್ದು ಮತ್ತು ಅಲ್ಲಿಂದ ಅವನನ್ನು ಹೊರಹಾಕತಕ್ಕದ್ದು ಮತ್ತು ಮಾರುಕಟ್ಟೆಯಲ್ಲಿ ಗಲಭೆಯನ್ನುಂಟುಮಾಡುತ್ತಿರುವ ಯಾರೇ ವ್ಯಕ್ತಿಯನ್ನು ಮಾರುಕಟ್ಟೆ ಪ್ರಭಾರದಲ್ಲಿರುವ ವ್ಯಕ್ತಿಯು ಅಲ್ಲಿಂದ ಹೊರಹಾಕಬಹುದು.

**380. ಗಲಭೆಕೋರನನ್ನು ಹೊರಹಾಕುವ ಅಧಿಕಾರವನ್ನು ಪಡೆಯುವ ಸಲುವಾಗಿ ಖಾಸಗಿ ವ್ಯಕ್ತಿಗಳ ಹಕ್ಕುಗಳ ಆರ್ಜನೆ.–** (1) ನಗರಪಾಲಿಕೆಯು ಯಾವುದೇ ಸ್ಥಳದಲ್ಲಿ ಖಾಸಗಿ ಮಾರುಕಟ್ಟೆಯನ್ನು ನಡೆಸಲು ಮತ್ತು ಅದರಲ್ಲಿ ಫೀಜುಗಳನ್ನು ವಿಧಿಸಲು ಯಾರೇ ವ್ಯಕ್ತಿಯು ಹೊಂದಿರುವ ಹಕ್ಕುಗಳನ್ನು ಆರ್ಜಿಸಬಹುದು. ಆ ಆರ್ಜನೆಯನ್ನು ಭೂ ಆರ್ಜನೆ ಅಧಿನಿಯಮ, 1894ರ ಮೇರೆಗೆ ಮಾಡತಕ್ಕದ್ದು ಮತ್ತು ಅಂತಹ ಹಕ್ಕುಗಳನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಭೂಮಿಯೆಂದು ಭಾವಿಸತಕ್ಕದ್ದು.

(2) ಅಂಥ ಸ್ವತ್ತಿಗೆ ಸಂಬಂಧಿಸಿದಂತೆ ಸದರಿ ಅಧಿನಿಯಮದ ಮೇರೆಗೆ ಐತೀರ್ಪು ನೀಡಿದ ನಷ್ಟ ಪರಿಹಾರವನ್ನು ಮತ್ತು ಅದನ್ನು ಆರ್ಜಿಸಲು ಮಾಡಿದ ಯಾವುದೇ ಇತರ ಖರ್ಚುಗಳನ್ನು ನಗರಪಾಲಿಕೆಯು ಸಂದಾಯ ಮಾಡಿದ ಮೇಲೆ, ಅಂಥ ಮಾರುಕಟ್ಟೆಯನ್ನು ನಡೆಸಲು ಮತ್ತು ಅದರಲ್ಲಿ ಫೀಜುಗಳನ್ನು ವಿಧಿಸಲು ಅಂಥ ವ್ಯಕ್ತಿಯು ಹೊಂದಿರುವ ಹಕ್ಕುಗಳು ನಗರಪಾಲಿಕೆಯಲ್ಲಿ ನಿಹಿತವಾಗಿರತಕ್ಕದ್ದು.

**381. ಕಟುಕನ, ಮೀನುಮಾರುವವನ ಮತ್ತು ಕೋಳಿಮಾರುವವನ ಲೈಸೆನ್ಸು.–** (1) ಯಾರೇ ವ್ಯಕ್ತಿಯು, ಆಯುಕ್ತರಿಂದ ಲೈಸೆನ್ಸ್ ಪಡೆಯದೆ ಅಥವಾ ಅದಕ್ಕೆ ಅನುಸಾರವಾಗಿ ಅಲ್ಲದೆ ಅನ್ಯಥಾ,–

(ಎ) ನಗರದ ಎಲ್ಲೆಗಳೊಳಗಿನ ಯಾವುದೇ ಸ್ಥಳದಲ್ಲಿ;

(ಬಿ) ಅಂಥ ಎಲ್ಲೆಗಳಿಂದ ಐದು ಕಿಲೋಮೀಟರುಗಳ ಒಳಗಿನ ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (ಕರ್ನಾಟಕ ಅಧಿನಿಯಮ, 1964ರ 22) ಮೇರೆಗೆ ರಚಿತವಾದ ಯಾವುದೇ ಪೌರಸಭೆಯಲ್ಲಿ ಒಳಗೊಂಡಿರದ ಯಾವುದೇ ಸ್ಥಳದಲ್ಲಿ

– ಕಟುಕನ, ಮೀನುಮಾರುವವನ ಅಥವಾ ಕೋಳಿಮಾರುವವನ ಕಸುಬನ್ನು ನಡೆಸತಕ್ಕದ್ದಲ್ಲ ಅಥವಾ ಮನುಷ್ಯನ ಆಹಾರಕ್ಕಾಗಿ ಉದ್ದೇಶಿಸಿದ ತಾಜಾ ಮೀನು ಅಥವಾ ಕೋಳಿಯನ್ನು ಮಾರಾಟ ಮಾಡುವುದಕ್ಕಾಗಿ ಯಾವುದೇ ಸ್ಥಳವನ್ನು ಬಳಸತಕ್ಕದ್ದಲ್ಲ:

ಪರಂತು, ಗಾಳಿ ತೂರದ ಮತ್ತು ಗಾಳಿ ತೂರದಂತೆ ಮುಚ್ಚಿ ಮೊಹರು ಮಾಡಿದ ಡಬ್ಬಗಳಲ್ಲಿ ಇರುವ ಮೀನಿನ ಸಿದ್ಧ ಮಾಂಸದ ಮಾರಾಟಕ್ಕಾಗಿ ಅಥವಾ ಮಾರಾಟಮಾಡಲು ದಾಸ್ತಾನು ಮಾಡುವುದಕ್ಕಾಗಿ ಬಳಸುವ ಸ್ಥಳಕ್ಕೆ ಯಾವುದೇ ಲೈಸೆನ್ಸಿನ ಅಗತ್ಯವಿರತಕ್ಕದ್ದಲ್ಲ.

(2) ಆಯುಕ್ತರು ಆದೇಶದ ಮೂಲಕ ಮತ್ತು ಮೇಲ್ವಿಚಾರಣೆ ಮತ್ತು ಪರಿಶೀಲನೆಗೆ ಸಂಬಂಧಿಸಿದಂತೆ ತಾವು ಸೂಕ್ತವೆಂದು ಭಾವಿಸುವಂಥ ನಿರ್ಬಂಧಗಳಿಗೆ ಒಳಪಟ್ಟು ಅಂಥ ಲೈಸೆನ್ಸನ್ನು ಮಂಜೂರು ಮಾಡಬಹುದು ಅಥವಾ ಮಂಜೂರು ಮಾಡಲು ನಿರಾಕರಿಸಬಹುದು.

(3) ಅಂಥ ಪ್ರತಿಯೊಂದು ಲೈಸೆನ್ಸು, ಅದನ್ನು ಯಾವ ಐದು ವರ್ಷಗಳ ಅವಧಿಗೆ ಮಂಜೂರು ಮಾಡಲಾಗಿದೆಯೋ ಆ [1][ಐದು ವರ್ಷಗಳ ಅವಧಿಯ ಕೊನೆಯಲ್ಲಿ][1] ಅಥವಾ ಆಯುಕ್ತರು ವಿಶೇಷ ಕಾರಣಗಳಿಗಾಗಿ ಲೈಸೆನ್ಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮುಂಚಿನ ದಿನಾಂಕದಂದು ಮುಕ್ತಾಯವಾಗತಕ್ಕದ್ದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.06.2003 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**382. ಸಾರ್ವಜನಿಕ ಬೀದಿಗಳಲ್ಲಿ ಪ್ರಾಣಿಗಳ, ಪಕ್ಷಿಗಳ ಅಥವಾ ವಸ್ತುಗಳ ಮಾರಾಟವನ್ನು ನಿಷೇಧಿಸಲು ಅಥವಾ ನಿಯಂತ್ರಿಸಲು ಅಧಿಕಾರ.–** ಆಯುಕ್ತರು, ಸ್ಥಾಯೀ ಸಮಿತಿಯ ಮಂಜೂರಾತಿ ಪಡೆದು, ಯಾವುದೇ ಸಾರ್ವಜನಿಕ ರಸ್ತೆಯಲ್ಲಿ ಅಥವಾ ಅದರ ಭಾಗದಲ್ಲಿ ಅಥವಾ ಅದರ ಮೇಲೆ ಯಾವುದೇ ಪ್ರಾಣಿ, ಪಕ್ಷಿ ಅಥವಾ ವಸ್ತುವನ್ನು ಮಾರಾಟ ಮಾಡುವುದನ್ನು ಅಥವಾ ಮಾರಾಟಕ್ಕಾಗಿ ಇಡುವುದನ್ನು ಸಾರ್ವಜನಿಕ ನೋಟೀಸಿನ ಮೂಲಕ ನಿಷೇಧಿಸಬಹುದು ಅಥವಾ ಅದಕ್ಕೆ ಅನುಮತಿ ನೀಡಬಹುದು ಅಥವಾ ಅದನ್ನು ನಿಯಂತ್ರಿಸಬಹುದು.

**383. ಸ್ಥಳಗಳು ಮಾರುಕಟ್ಟೆಗಳೇ, ಅಲ್ಲವೇ, ಎಂಬ ವಿವಾದಗಳ ತೀರ್ಮಾನ.–** ಆಹಾರ ವಸ್ತುಗಳ ಅಥವಾ ಬಟ್ಟೆಬರೆಗಳ ಅಥವಾ ಜಾನುವಾರುಗಳ ಅಥವಾ ಕೋಳಿಗಳ ಅಥವಾ ಹತ್ತಿ, ಶೇಂಗಾ ಅಥವಾ ಇತರ ಔದ್ಯಮಿಕ ಬೆಳೆಗಳ ಅಥವಾ ಇತರ ಯಾವುದೇ ಕಚ್ಚಾ ಅಥವಾ ತಯಾರಿಸಿದ ಉತ್ಪನ್ನಗಳ ಮಾರಾಟ ಅಥವಾ ಖರೀದಿಗಾಗಿ ವ್ಯಕ್ತಿಗಳು ಯಾವ ಸ್ಥಳದಲ್ಲಿ ಸೇರುತ್ತಾರೋ ಆ ಸ್ಥಳವು ಮಾರುಕಟ್ಟೆಯೇ ಅಥವಾ ಅಲ್ಲವೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆಯುಕ್ತರು ಅದನ್ನು ಸರ್ಕಾರಕ್ಕೆ ಒಪ್ಪಿಸತಕ್ಕದ್ದು ಮತ್ತು ಆ ಪ್ರಶ್ನೆಯ ಬಗ್ಗೆ ಸರ್ಕಾರದ ತೀರ್ಮಾನವು ಅಂತಿಮವಾದುದು ಆಗಿರತಕ್ಕದ್ದು.

**384. ಪರಿಶೀಲಿಸಲು ಆಯುಕ್ತರ ಕರ್ತವ್ಯ.–** ಮಾರಾಟಕ್ಕಾಗಿ ಇಟ್ಟಿರುವ ಅಥವಾ ಹೊತ್ತು ಮಾರುತ್ತಿರುವ ಅಥವಾ ಮಾರಾಟದ ಅಥವಾ ಮಾರಾಟಕ್ಕೆ ಸಿದ್ಧಪಡಿಸುವ ಉದ್ದೇಶಕ್ಕಾಗಿ ಯಾವುದೇ ಸ್ಥಳದಲ್ಲಿ ಶೇಖರಿಸಿಟ್ಟಿರುವ ಅಥವಾ ಯಾವುದೇ ಸ್ಥಳಕ್ಕೆ ತಂದ ಪ್ರಾಣಿಗಳು, ಪ್ರಾಣಿಗಳ ಶವಗಳು, ಮಾಂಸ, ಕೋಳಿ, ವನ್ಯಮೃಗಗಳು, ತಾಜಾ ಮೀನು, ತರಕಾರಿಗಳು, ಧಾನ್ಯ, ರೊಟ್ಟಿ, ಹಿಟ್ಟು, ಹಾಲು, ತುಪ್ಪ, ಬೆಣ್ಣೆ, ಎಣ್ಣೆ ಮತ್ತು ಯಾವುದೇ ಇತರ ಪದಾರ್ಥಗಳನ್ನು ಸತತವಾಗಿ ಮತ್ತು ಜಾಗರೂಕತೆಯಿಂದ ಪರಿಶೀಲನೆ ಮಾಡುವುದಕ್ಕಾಗಿ ವ್ಯವಸ್ಥೆ ಮಾಡುವುದು ಆಯುಕ್ತರ ಕರ್ತವ್ಯವಾಗಿರತಕ್ಕದ್ದು.

**385. ಪರಿಶೀಲನೆಯ ಉದ್ದೇಶಗಳಿಗಾಗಿ ಆಯುಕ್ತರ ಅಧಿಕಾರ.–** (1) ಆಯುಕ್ತರು ಅಥವಾ ಅವರಿಂದ ಆ ಉದ್ದೇಶಕ್ಕಾಗಿ ಲಿಖಿತದಲ್ಲಿ ಅಧಿಕೃತಗೊಂಡ ಯಾರೇ ವ್ಯಕ್ತಿಯು, ಯಾವುದೇ ಕಸಾಯಿ ಖಾನೆಯನ್ನು ಅಥವಾ ಆಹಾರಕ್ಕಾಗಿ ಉದ್ದೇಶಿಸಿದ ಪ್ರಾಣಿಗಳು, ಕೋಳಿಗಳು ಅಥವಾ ಮೀನನ್ನು ಮಾರಾಟ ಮಾಡುವುದಕ್ಕಾಗಿ ಇಟ್ಟಿರುವ ಅಥವಾ ಆಹಾರ ಪದಾರ್ಥಗಳನ್ನು ತಯಾರಿಸಲಾಗುತ್ತಿರುವ ಅಥವಾ ಮಾರಾಟಕ್ಕಾಗಿ ಇಟ್ಟಿರುವ ಯಾವುದೇ ಸ್ಥಳವನ್ನು, ಪ್ರಾಣಿಗಳನ್ನು ವಧೆ ಮಾಡುತ್ತಿರುವಾಗ, ಮಾರಾಟಕ್ಕಾಗಿ ಇಟ್ಟಿರುವಾಗ ಅಥವಾ ಆಹಾರ ಪದಾರ್ಥಗಳನ್ನು ತಯಾರಿಸುತ್ತಿರುವಾಗ ಹಗಲು ಅಥವಾ ರಾತ್ರಿಯ ಯಾವುದೇ ಸಮಯದಲ್ಲಿ ನೋಟೀಸು ಇಲ್ಲದೆಯೇ ಪ್ರವೇಶಿಸಬಹುದು ಮತ್ತು ಅದನ್ನು ಮತ್ತು ಅಂಥ ಯಾವುದೇ ಪದಾರ್ಥವನ್ನು ತಯಾರಿಸಲು, ಸಿದ್ಧಪಡಿಸಲು ಬಳಸಿದ ಅಥವಾ ಆ ಪದಾರ್ಥವನ್ನು ಒಳಗೊಂಡಿರುವ ಯವುದೇ ಪಾತ್ರೆ ಪರಡಿ ಅಥವಾ ಭಾಂಡವನ್ನು ಪರಿಶೀಲಿಸಬಹುದು.

(2) ಆಯುಕ್ತರು ಅಥವಾ ಅವರಿಂದ ಹಾಗೆ ಅಧಿಕೃತನಾದ ಯಾರೇ ವ್ಯಕ್ತಿಯು, ಯಾವುದೇ ಸ್ಥಳದಲ್ಲಿ ಮನುಷ್ಯನ ಆಹಾರಕ್ಕಾಗಿ ಉದ್ದೇಶಿಸಲಾದ ಯಾವುದೇ ಪ್ರಾಣಿಯನ್ನು ವಧೆ ಮಾಡಲಾಗುತ್ತಿದೆ ಅಥವಾ ಯಾವುದೇ ಪ್ರಾಣಿಯ ಶವದ ಚರ್ಮವನ್ನು ಸುಲಿಯಲಾಗುತ್ತಿದೆ ಅಥವಾ ಅದನ್ನು ಕತ್ತರಿಸಲಾಗುತ್ತಿದೆ ಅಥವಾ ಮಾರಾಟಕ್ಕಾಗಿ ಯಾವುದೇ ಆಹಾರವನ್ನು ತಯಾರಿಸಲಾಗುತ್ತಿದೆ, ದಾಸ್ತಾನು ಮಾಡಲಾಗುತ್ತಿದೆ, ಸಿದ್ಧಪಡಿಸಲಾಗುತ್ತಿದೆ, ಪ್ಯಾಕು ಮಾಡಲಾಗುತ್ತಿದೆ, ಸ್ವಚ್ಛಪಡಿಸಲಾಗುತ್ತಿದೆ, ಇಡಲಾಗಿದೆ ಅಥವಾ ತೆರೆದಿಡಲಾಗಿದೆ ಅಥವಾ ಲೈಸೆನ್ಸ್ ಇಲ್ಲದೆ ಅಥವಾ ಲೈಸೆನ್ಸಿನ ಅನುಸಾರವಾಗಿ ಅಲ್ಲದೆ ಅನ್ಯಥಾ ಮಾರಾಟ ಮಾಡಲಾಗುತ್ತಿದೆ ಎಂದು ನಂಬಲು ಕಾರಣವಿದ್ದರೆ, ಅವರು ಈ ಅಧಿನಿಯಮದ ಉಪವಿಧಿಗಳ ಅಥವಾ ವಿನಿಯಮಗಳ ಯಾವುದೇ ಉಪಬಂಧವನ್ನು ಅಥವಾ ಲೈಸೆನ್ಸಿನ ಯಾವುದೇ ಷರತ್ತನ್ನು ಉಲ್ಲಂಘಿಸಲಾಗುತ್ತಿದೆಯೇ, ಇಲ್ಲವೇ ಎಂಬುದರ ಬಗ್ಗೆ ತಾವು ಮನದಟ್ಟುಮಾಡಿಕೊಳ್ಳುವ ಉದ್ದೇಶಕ್ಕಾಗಿ ಹಗಲು ಅಥವಾ ರಾತ್ರಿಯಲ್ಲಿ ಯಾವುದೇ ಸಮಯದಲ್ಲಿ ನೋಟೀಸು ಕೊಡದೆಯೇ ಅಂಥ ಯಾವುದೇ ಸ್ಥಳವನ್ನು ಪ್ರವೇಶಿಸಬಹುದು.

(3) ಈ ಪ್ರಕರಣದ ಮೇರೆಗಿನ ಅಧಿಕಾರಗಳನ್ನು ಚಲಾಯಿಸುವುದರಿಂದಾಗಿ ಅಥವಾ ಈ ಪ್ರಕರಣದ ಮೇರೆಗೆ ಯಾವುದೇ ಸ್ಥಳದೊಳಕ್ಕೆ ಪ್ರವೇಶ ಮಾಡುವುದಕ್ಕಾಗಿ ಯಾವುದೇ ಅವಶ್ಯವಾದ ಬಲವನ್ನು ಪ್ರಯೋಗಿಸುವುದರಿಂದ ಉಂಟಾದ ಯಾವುದೇ ಹಾನಿಗಾಗಿ ಅಥವಾ ಅನಾನುಕೂಲಕ್ಕಾಗಿ ಆಯುಕ್ತರ ಅಥವಾ ಅವರ ಅಧಿಕಾರದ ಮೇರೆಗೆ ಕೆಲಸ ಮಾಡುತ್ತಿರುವ ಯಾರೇ ವ್ಯಕ್ತಿಯ ಅಥವಾ ನಗರಪಾಲಿಕೆಯ ವಿರುದ್ಧ ಯಾವುದೇ ಕ್ಲೇಮನ್ನು ಮಾಡಲು ಅವಕಾಶವಿರತಕ್ಕದ್ದಲ್ಲ.

(4) ಈ ಪ್ರಕರಣದ ಮೇರೆಗೆ ಚಲಾಯಿಸಿದ ಅಧಿಕಾರಗಳಿಗೆ ಸಂಬಂಧಿಸಿದಂತೆ ಯಾವ ಕಾನೂನು ವ್ಯವಹರಣೆಗಳಲ್ಲಿ ಮಾರಾಟಕ್ಕಾಗಿ ಯಾವುದೇ ಪ್ರಾಣಿಗಳು, ಕೋಳಿಗಳು, ಮೀನು ಅಥವಾ ಆಹಾರದ ಪದಾರ್ಥಗಳನ್ನು ಇಟ್ಟಿರಲಿಲ್ಲ ಅಥವಾ ತೆರೆದಿಟ್ಟಿರಲಿಲ್ಲ, ಅವುಗಳನ್ನು ಹೊತ್ತು ಮಾರುತ್ತಿರಲಿಲ್ಲ, ಮಾರಾಟಕ್ಕಾಗಿ ತಯಾರಿಸುತ್ತಿರಲಿಲ್ಲ, ಸಿದ್ಧಪಡಿಸುತ್ತಿರಲಿಲ್ಲ, ದಾಸ್ತಾನು ಮಾಡಿರಲಿಲ್ಲ, ಪ್ಯಾಕು ಮಾಡಿರಲಿಲ್ಲ ಅಥವಾ ಸ್ವಚ್ಛಗೊಳಿಸುತ್ತಿರಲಿಲ್ಲ ಅಥವಾ ಅವುಗಳನ್ನು ಮನುಷ್ಯರ ಆಹಾರಕ್ಕಾಗಿ ಉದ್ದೇಶಿಸಿರಲಿಲ್ಲ ಎಂದು ಹೇಳಲಾಗಿದೆಯೋ ಆ ಯಾವುದೇ ಕಾನೂನು ವ್ಯವಹರಣೆಗಳಲ್ಲಿ ಅದನ್ನು ರುಜುವಾತುಪಡಿಸುವ ಭಾರವು ಹಾಗೆ ಹೇಳುತ್ತಿರುವ ಪಕ್ಷಕಾರನ ಮೇಲೆ ಇರತಕ್ಕದ್ದು.

**386. ಆಯುಕ್ತರು ಮಾಡುವ ಪರಿಶೀಲನೆಯನ್ನು ತಡೆಗಟ್ಟುವುದು.–** ಯಾರೇ ವ್ಯಕ್ತಿಯು, ಆಯುಕ್ತರನ್ನು ಅಥವಾ ಹಿಂದಿನ ಪ್ರಕರಣದ ಮೇರೆಗೆ ಅವರಿಂದ ಕ್ರಮಬದ್ಧವಾಗಿ ಅಧಿಕೃತನಾದ ಯಾರೇ ವ್ಯಕ್ತಿಯನ್ನು ಹಿಂದಿನ ಪ್ರಕರಣದ ಮೇರೆಗಿನ ಅವರ ಅಧಿಕಾರಗಳನ್ನು ಚಲಾಯಿಸುವಾಗ ಯಾವುದೇ ರೀತಿಯಲ್ಲಾಗಲಿ ಅಡ್ಡಿಪಡಿಸತಕ್ಕದ್ದಲ್ಲ.

**387. ರೋಗಗ್ರಸ್ತ ಪ್ರಾಣಿ, ಹಾನಿಕರ ಆಹಾರ, ಇತ್ಯಾದಿಗಳನ್ನು ವಶಪಡಿಸಿಕೊಳ್ಳಲು ಆಯುಕ್ತರ ಅಧಿಕಾರ.–** ಆಯುಕ್ತರಿಗೆ ಅಥವಾ ಅವರಿಂದ ಕ್ರಮಬದ್ಧವಾಗಿ ಅಧಿಕೃತನಾದ ವ್ಯಕ್ತಿಗೆ–

(ಎ) ಆಹಾರಕ್ಕಾಗಿ ಉದ್ದೇಶಿಸಲಾಗಿರುವ ಯಾವುದೇ ಪ್ರಾಣಿ, ಕೋಳಿ ಅಥವಾ ಮೀನು, ರೋಗಗ್ರಸ್ತವಾಗಿದೆ ಎಂದು; ಅಥವಾ

(ಬಿ) ಯಾವುದೇ ಆಹಾರ ಪದಾರ್ಥವು ಹಾನಿಕರವಾಗಿದೆ ಎಂದು; ಅಥವಾ

(ಸಿ) ಯಾವುದೇ ಆಹಾರ ಪದಾರ್ಥವನ್ನು ತಯಾರಿಸುವಾಗ, ಸಿದ್ಧಪಡಿಸುವಾಗ ಬಳಸಲಾದ ಅಥವಾ ಅದನ್ನು ಒಳಗೊಂಡಿರುವ ಯಾವುದೇ ಪಾತ್ರೆಪರಡಿ ಅಥವಾ ಭಾಂಡವು ಆ ಪದಾರ್ಥಗಳನ್ನು ಹಾನಿಕರವಾಗಿಸುವಂಥ ಬಗೆಯದಾಗಿದೆ ಎಂದು ಅಥವಾ ಸ್ಥಿತಿಯಲ್ಲಿವೆ ಎಂದು

– ಕಂಡುಬಂದರೆ, ಅವರು ಅಂಥ ಪ್ರಾಣಿಗಳು, ಕೋಳಿಗಳು, ಮೀನು, ಪದಾರ್ಥ, ಪಾತ್ರೆಪರಡಿ ಅಥವಾ ಭಾಂಡವನ್ನು ಇಲ್ಲಿ ಇನ್ನುಮುಂದೆ ಉಪಬಂಧಿಸಿದಂತೆ ಅವುಗಳ ಬಗ್ಗೆ ಕ್ರಮಕೈಗೊಳ್ಳುವ ಸಲುವಾಗಿ ವಶಪಡಿಸಿಕೊಳ್ಳಬಹುದು ಅಥವಾ ತೆಗೆದುಕೊಂಡು ಹೋಗಬಹುದು ಅಥವಾ ಪಡೆಯಬಹುದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ ಕೊಳೆತ ಮಾಂಸವನ್ನು ಹಾನಿಕರವೆಂದು ಭಾವಿಸತಕ್ಕದ್ದು.

**388. ವಶಪಡಿಸಿಕೊಂಡ ಪದಾರ್ಥಗಳನ್ನು ತೆಗೆದುಕೊಂಡು ಹೋಗುವುದು ಅಥವಾ ಅವುಗಳ ಬಗ್ಗೆ ಹಸ್ತಕ್ಷೇಪ ಮಾಡುವುದು.–** ಹಿಂದಿನ ಪ್ರಕರಣದ ಮೇರೆಗೆ ಪಡೆಯಲಾದ ಯಾವುದೇ ಪದಾರ್ಥವನ್ನು ಯಾರೇ ವ್ಯಕ್ತಿಯು ತೆಗೆದುಕೊಂಡು ಹೋಗತಕ್ಕದ್ದಲ್ಲ ಅಥವಾ ಯಾವುದೇ ರೀತಿಯಲ್ಲಿ ಅದರ ಬಗ್ಗೆ ಹಸ್ತಕ್ಷೇಪ ಮಾಡತಕ್ಕದ್ದಲ್ಲ.

**389. ವಶಪಡಿಸಿಕೊಂಡ ಪದಾರ್ಥಗಳನ್ನು ನಾಶಪಡಿಸಲು ಅಧಿಕಾರ.–** (1) 387ನೇ ಪ್ರಕರಣದ ಮೇರೆಗೆ ಯಾವುವೇ ಪ್ರಾಣಿಗಳು, ಕೋಳಿಗಳು, ಮೀನು ಅಥವಾ ಇತರ ಆಹಾರ ಪದಾರ್ಥಗಳನ್ನು (ಅಥವಾ ಯಾವುದೇ ಪಾತ್ರೆಪರಡಿ ಅಥವಾ ಭಾಂಡ) ವಶಪಡಿಸಿಕೊಂಡಾಗ ಅದನ್ನು, ಮಾಲೀಕನ ಅಥವಾ ಅದು ಯಾವ ವ್ಯಕ್ತಿಯ ಸ್ವಾಧೀನದಲ್ಲಿ ಇದ್ದಾಗ ಸಿಕ್ಕಿತೋ ಆ ವ್ಯಕ್ತಿಯ ಸಮ್ಮತಿಯೊಂದಿಗೆ ಮತ್ತು ವಸ್ತುವು ಹಾಳಾಗುವಂಥದ್ದಾಗಿದ್ದರೆ, ಅಂಥ ಸಮ್ಮತಿಯಿಲ್ಲದೆಯೇ ತಕ್ಷಣ ನಾಶಪಡಿಸಬಹುದು.

(2) ಉಪ–ಪ್ರಕರಣ (1)ರ ಮೇರೆಗೆ ಯಾವುದೇ ವಸ್ತುವನ್ನು ನಾಶಪಡಿಸುವಾಗ ವಹಿಸಿದ ಯಾವುವೇ ವೆಚ್ಚಗಳನ್ನು, ಮಾಲೀಕನು ಅಥವಾ ಅದನ್ನು ವಶಪಡಿಸಿಕೊಳ್ಳುವ ಸಮಯದಲ್ಲಿ ಅಂಥ ವಸ್ತುವು ಯಾರ ಸ್ವಾಧೀನದಲ್ಲಿತ್ತೋ ಆ ವ್ಯಕ್ತಿಯು ಸಂದಾಯ ಮಾಡತಕ್ಕದ್ದು.

**390. ವಶಪಡಿಸಿಕೊಂಡ ವಸ್ತುಗಳು, ಇತ್ಯಾದಿಗಳನ್ನು ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸುವುದು ಮತ್ತು ಅವುಗಳ ಬಗ್ಗೆ ಕ್ರಮಕೈಗೊಳ್ಳಲು ಮ್ಯಾಜಿಸ್ಟ್ರೇಟರ ಅಧಿಕಾರ.–** (1) 387ನೇ ಪ್ರಕರಣದ ಮೇರೆಗೆ ವಶಪಡಿಸಿಕೊಂಡ ಮತ್ತು 389ನೇ ಪ್ರರಕಣದ ಮೇರೆಗೆ ನಾಶಪಡಿಸದ ಆಹಾರ ಪದಾರ್ಥಗಳು, ಪ್ರಾಣಿಗಳು, ಕೋಳಿಗಳು, ಮೀನು ಪಾತ್ರೆಪರಡಿ ಅಥವಾ ಭಾಂಡಗಳನ್ನು ಸಾಧ್ಯವಾದಷ್ಟು ಬೇಗನೇ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸತಕ್ಕದ್ದು.

(2) ಭಾರತ ದಂಡ ಸಂಹಿತೆಯ (ಕೇಂದ್ರ ಅಧಿನಿಯಮ 1860ರ 45) ಮೇರೆಗಿನ ಅಥವಾ ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧಕ್ಕಾಗಿ ಮ್ಯಾಜಿಸ್ಟ್ರೇಟರಿಗೆ ದೂರನ್ನು ಕೊಟ್ಟಿರಲಿ ಅಥವಾ ಕೊಟ್ಟಿರದಿರಲಿ, ತಾವು ಅವಶ್ಯಕವೆಂದು ಭಾವಿಸುವಂಥ ಸಾಕ್ಷ್ಯವನ್ನು ಪಡೆದ ಮೇಲೆ ಮ್ಯಾಜಿಸ್ಟ್ರೇಟರಿಗೆ, ಯಾವುದೇ ಅಂಥ ಪ್ರಾಣಿ, ಕೋಳಿ ಅಥವಾ ಮೀನು ರೋಗಗ್ರಸ್ತವಾದುದಾಗಿದೆ ಎಂದು ಅಥವಾ 387ನೇ ಪ್ರಕರಣದಲ್ಲಿ ವರ್ಣಿಸಿದಂತೆ ಅಂಥ ಯಾವುದೇ ವಸ್ತುವು ಹಾನಿಕರವಾಗಿದೆ ಎಂದು ಅಥವಾ ಅಂಥ ಯಾವುದೇ ಪಾತ್ರೆಪರಡಿ ಅಥವಾ ಭಾಂಡವು ಅಂಥ ಬಗೆಯದಾಗಿದೆ ಎಂದು ಅಥವಾ ಅಂಥ ಸ್ಥಿತಿಯಲ್ಲಿದೆಯೆಂದು ಕಂಡುಬಂದರೆ ಅವರು, ಅದನ್ನು,–

(ಎ) ನಗರಪಾಲಿಕೆಯು ಮುಟ್ಟುಗೋಲು ಹಾಕಿಕೊಳ್ಳುವಂತೆ; ಮತ್ತು

(ಬಿ) ಅದರ ಮಾಲೀಕನ ಅಥವಾ ಅದನ್ನು ವಶಪಡಿಸಿಕೊಳ್ಳುವ ಸಮಯದಲ್ಲಿ ಅದು ಯಾರ ಸ್ವಾಧೀನದಲ್ಲಿತ್ತೋ, ಆ ವ್ಯಕ್ತಿಯ ಖರ್ಚಿನಲ್ಲಿ, ಮಾರಾಟಕ್ಕಾಗಿ ಅದನ್ನು ಪುನಃ ಇಡುವುದನ್ನು ಅಥವಾ ಹೊತ್ತು ಮಾರುವುದನ್ನು ಅಥವಾ ಮನುಷ್ಯನ ಆಹಾರಕ್ಕಾಗಿ ಬಳಸುವುದನ್ನು ಅಥವಾ ಹಿಂದೆ ಹೇಳಿದಂತೆ ಅಂಥ ಯಾವುವೇ ಪದಾರ್ಥಗಳನ್ನು ತಯಾರಿಸುವುದಕ್ಕಾಗಿ ಅಥವಾ ಸಿದ್ಧಪಡಿಸುವುದಕ್ಕಾಗಿ ಬಳಸುವುದನ್ನು ಅಥವಾ ಅವುಗಳನ್ನು ತುಂಬಿಡುವುದಕ್ಕಾಗಿ ಬಳಸುವುದನ್ನು ತಡೆಗಟ್ಟುವಂಥ ರೀತಿಯಲ್ಲಿ ನಾಶಪಡಿಸುವಂತೆ

– ಆದೇಶಿಸಬಹುದು.

**391. ಮೃತರ ವಿಲೆಗಾಗಿ ಮಾಲೀಕರಿಲ್ಲದ ಸ್ಥಳಗಳ ನೋಂದಣಿ ಅಥವಾ ಅವುಗಳನ್ನು ಮುಚ್ಚುವುದು.–**ಮೃತರನ್ನು ಹೂಳಲು, ಸುಡಲು ಅಥವಾ ಅನ್ಯಥಾ ವಿಲೆ ಮಾಡಲು ಬಳಸುವ ಯಾವುದೇ ಸ್ಥಳದ ಮಾಲೀಕನು ಅಥವಾ ಅದರ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯು ಇಲ್ಲವೆಂದು ಆಯುಕ್ತರಿಗೆ ಕಂಡುಬಂದರೆ, ಅವರು ಅಂಥ ನಿಯಂತ್ರಣವನ್ನು ವಹಿಸಿಕೊಳ್ಳತಕ್ಕದ್ದು ಮತ್ತು ಅಂಥ ಸ್ಥಳವನ್ನು ನೋಂದಾಯಿಸತಕ್ಕದ್ದು ಅಥವಾ ನಗರಪಾಲಿಕೆಯ ಮಂಜೂರಾತಿ ಪಡೆದು ಅದನ್ನು ಮುಚ್ಚಬಹುದು.

**392. ಮೃತರ ವಿಲೆಗಾಗಿ ಸ್ಥಳಗಳಿಗೆ ಲೈಸೆನ್ಸು ಕೊಡುವುದು.–** (1) ಅರ್ಜಿಯನ್ನು ಸಲ್ಲಿಸಿ ಆಯುಕ್ತರಿಂದ ಲೈಸೆನ್ಸನ್ನು ಪಡೆದಿದ್ದ ಹೊರತು, ಸರ್ಕಾರದ್ದೇ ಆಗಿರಲಿ ಅಥವಾ ಖಾಸಗಿಯದ್ದೇ ಆಗಿರಲಿ ಯಾವುದೇ ಹೊಸ ಸ್ಥಳವನ್ನು ಮೃತರ ವಿಲೆಗಾಗಿ ತೆರೆಯತಕ್ಕದ್ದಲ್ಲ, ರೂಪಿಸತಕ್ಕದ್ದಲ್ಲ, ನಿರ್ಮಿಸತಕ್ಕದ್ದಲ್ಲ ಅಥವಾ ಬಳಸತಕ್ಕದ್ದಲ್ಲ.

(2) ಲೈಸೆನ್ಸಿಗಾಗಿ ಸಲ್ಲಿಸುವ ಅಂಥ ಅರ್ಜಿಯ ಜೊತೆಯಲ್ಲಿ ಆ ಸ್ಥಳ ಇರುವ ಪ್ರದೇಶ, ಅದರ ಚೆಕ್ಕುಬಂದಿ, ಮತ್ತು ಅದರ ವಿಸ್ತೀರ್ಣ, ಅದರ ಮಾಲೀಕನ ಅಥವಾ ಅದರಲ್ಲಿ ಹಿತಾಸಕ್ತಿ ಹೊಂದಿರುವ ವ್ಯಕ್ತಿಯ ಅಥವಾ ಸಮುದಾಯದ ಹೆಸರು, ಅದರ ನಿರ್ವಹಣಾ ಪದ್ಧತಿ ಮತ್ತು ಆಯುಕ್ತರು ಅಗತ್ಯಪಡಿಸಬಹುದಾದಂಥ ಹೆಚ್ಚಿನ ವಿವರಗಳನ್ನು ತೋರಿಸುವ, ನೋಂದಾಯಿಸಬೇಕಾಗಿರುವ ಸ್ಥಳದ ನಕ್ಷೆಯು ಇರತಕ್ಕದ್ದು.

(3) ನಗರಪಾಲಿಕೆಯ ಮಂಜೂರಾತಿ ಪಡೆದ ಆಯುಕ್ತರು,–

(ಎ) ಲೈಸೆನ್ಸನ್ನು ಮಂಜೂರು ಮಾಡಬಹುದು ಇಲ್ಲವೇ ನಿರಾಕರಿಸಬಹುದು; ಅಥವಾ

(ಬಿ) ನಿವೇಶನಕ್ಕೆ ಸಂಬಂಧಿಸಿದಂತೆ ತಮ್ಮ ಆಕ್ಷೇಪಣೆಗಳಿಗೆ ಉತ್ತರಿಸುವವರೆಗೆ ಅಥವಾ ತಾವು ಕೇಳಿರುವ ವಿವರಗಳನ್ನು ಒದಗಿಸುವವರೆಗೆ ಲೈಸೆನ್ಸಿನ ಮಂಜೂರಾತಿಯನ್ನು ಮುಂದೂಡಬಹುದು.

**393. ಸ್ಮಶಾನಗಳಿಗೆ ಮತ್ತು ಸುಡುಗಾಡುಗಳಿಗೆ ಮತ್ತು ಚಿತಾಗಾರಗಳಿಗೆ ನಗರಪಾಲಿಕೆಯು ಸ್ಥಳಗಳನ್ನು ಒದಗಿಸುವುದು.–** (1) ನಗರಪಾಲಿಕೆಯು, ನಗರದ ಎಲ್ಲೆಗಳ ಒಳಗಾಗಲಿ ಅಥವಾ ಸರ್ಕಾರದ ಮಂಜೂರಾತಿ ಪಡೆದು ನಗರದ ಎಲ್ಲೆಗಳ ಹೊರಗಡೆಯಾಗಲಿ ಸ್ಮಶಾನವಾಗಿ ಅಥವಾ ಸುಡುಗಾಡುಗಳಾಗಿ ಅಥವಾ ಚಿತಾಗಾರಗಳಾಗಿ ಬಳಸಲು ಸ್ಥಳಗಳನ್ನು ಸಾಕಷ್ಟು ಪ್ರಮಾಣದಲ್ಲಿ ಒದಗಿಸಿರದಿದ್ದರೆ ಅಂಥ ಸ್ಥಳಗಳನ್ನು ಒದಗಿಸಬಹುದು ಮತ್ತು ಒದಗಿಸತಕ್ಕದ್ದು ಮತ್ತು ಅವುಗಳನ್ನು ಬಳಸುವುದಕ್ಕಾಗಿ ಬಾಡಿಗೆಗಳನ್ನು ಮತ್ತು ಫೀಜುಗಳನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು:

ಪರಂತು, ವಾರಸುದಾರರಿಲ್ಲದ ಮೃತದೇಹಗಳ ಶವಸಂಸ್ಕಾರವನ್ನು ಮುಫತ್ತಾಗಿ ನಗರಪಾಲಿಕೆಯೇ ಕೈಗೊಳ್ಳತಕ್ಕದ್ದು.

(2) ನಗರಪಾಲಿಕೆಯು ಅಂತಹ ಯಾವುದೇ ಸ್ಥಳವನ್ನು ನಗರಪಾಲಿಕೆಯ ಎಲ್ಲೆಗಳ ಹೊರಗೆ ಒದಗಿಸಿದ್ದರೆ ನಗರಪಾಲಿಕೆಯ ಎಲ್ಲಗಳೊಳಗಿನ ಅಂಥ ಸ್ಥಳಗಳ ನಿರ್ವಹಣೆಗೆ ಅನ್ವಯವಾಗುವ ಈ ಅಧಿನಿಯಮದ ಎಲ್ಲ ಉಪಬಂಧಗಳು ಮತ್ತು ಈ ಅಧಿನಿಯಮದ ಮೇರೆಗೆ ರಚಿಸಲಾದ ಎಲ್ಲ ಉಪವಿಧಿಗಳು ನಗರಪಾಲಿಕೆಯ ಎಲ್ಲೆಗಳ ಹೊರಗಡೆ ಇರುವ ಅಂಥ ಸ್ಥಳಕ್ಕೂ ಅನ್ವಯವಾಗತಕ್ಕದ್ದು ಮತ್ತು ಅಂಥ ಎಲ್ಲ ಉಪಬಂಧಗಳ ಅಥವಾ ಉಪವಿಧಿಗಳ ವಿರುದ್ಧದ ಎಲ್ಲ ಅಪರಾಧಗಳು, ಅಂಥ ಸ್ಥಳಗಳು ನಗರಪಾಲಿಕೆಯ ಎಲ್ಲೆಗಳೊಳಗೆ ಇದ್ದಿದ್ದರೆ ಹೇಗೋ ಹಾಗೆ ಮ್ಯಾಜಿಸ್ಟ್ರೇಟರು ಸಂಜ್ಞೇಯಕ್ಕೆ ತೆಗೆದುಕೊಳ್ಳುವಂಥವುಗಳು ಆಗಿರತಕ್ಕದ್ದು.

**394. ನೋಂದಾಯಿತ, ಲೈಸೆನ್ಸ್ ನೀಡಿದ ಮತ್ತು ಒದಗಿಸಿದ ಸ್ಥಳಗಳ ರಿಜಿಸ್ಟರು ಮತ್ತು ಇತರ ಸ್ಥಳಗಳ ಬಳಕೆಯನ್ನು ನಿಷೇಧಿಸುವುದು.–** (1) ನಗರಪಾಲಿಕೆಯ ಕಚೇರಿಯಲ್ಲಿ ಒಂದು ಪುಸ್ತಕವನ್ನು ಇಡತಕ್ಕದ್ದು, ಅದರಲ್ಲಿ 391ನೇ ಪ್ರಕರಣ, 392ನೇ ಪ್ರಕರಣ ಅಥವಾ 393ನೇ ಪ್ರಕರಣದ ಮೇರೆಗೆ ನೋಂದಾಯಿಸಿದ, ಲೈಸೆನ್ಸು ನೀಡಿದ ಅಥವಾ ಒದಗಿಸಿದ ಸ್ಥಳಗಳನ್ನು ಮತ್ತು ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ನೋಂದಾಯಿಸಿದ, ಲೈಸೆನ್ಸು ನೀಡಿದ ಅಥವಾ ಒದಗಿಸಿದ ಸ್ಥಳಗಳನ್ನು ದಾಖಲು ಮಾಡತಕ್ಕದ್ದು ಮತ್ತು ಅಂಥ ಸ್ಥಳಗಳ ನಕ್ಷೆಗಳನ್ನು ಅಂತಹ ಕಛೇರಿಯಲ್ಲಿ ಕಡತದಲ್ಲಿ ಇರಿಸತಕ್ಕದ್ದು.

(2) ಮೇಲೆ ಹೇಳಿದಂಥ ಸ್ಥಳವನ್ನು ನೋಂದಾಯಿಸಲಾಗಿದೆ, ಅದಕ್ಕೆ ಲೈಸೆನ್ಸು ನೀಡಲಾಗಿದೆ ಅಥವಾ ಅದನ್ನು ಒದಗಿಸಲಾಗಿದೆ ಎಂಬ ಬಗ್ಗೆ ನೋಟೀಸನ್ನು ಇಂಗ್ಲಿಷ್‌ನಲ್ಲಿ ಮತ್ತು ಕನ್ನಡದಲ್ಲಿ ಆ ಸ್ಮಶಾನದ ಅಥವಾ ಸುಡುಗಾಡಿನ ಅಥವಾ ಮೇಲೆ ಹೇಳಿದ ಇತರ ಸ್ಥಳಗಳ ಪ್ರವೇಶ ಸ್ಥಳದಲ್ಲಿ ಅಥವಾ ಅದರ ಬಳಿಯಲ್ಲಿ ಎದ್ದುಕಾಣುವ ಯಾವುದೇ ಸ್ಥಳದಲ್ಲಿ ಅಂಟಿಸತಕ್ಕದ್ದು.

(3) ಆಯುಕ್ತರು, ಮೇಲೆ ಹೇಳಿದಂತೆ ನೋಂದಾಯಿಸಿದ ಅಥವಾ ಒದಗಿಸಿದ ಅಥವಾ ಸರ್ಕಾರವು ಒದಗಿಸಿದ ಎಲ್ಲ ಸ್ಥಳಗಳ ಪಟ್ಟಿಯನ್ನು ಪ್ರತಿ ವರ್ಷವೂ ಪ್ರಕಟಿಸತಕ್ಕದ್ದು.

(4) ಯಾರೇ ವ್ಯಕ್ತಿಯು, ಮೇಲೆ ಹೇಳಿದಂತೆ ನೋಂದಾಯಿಸಿದ, ಲೈಸೆನ್ಸು ನೀಡಿದ ಅಥವಾ ಒದಗಿಸಿದ ಸ್ಥಳದಲ್ಲಿ ಅಲ್ಲದೇ ಬೇರೆ ಯಾವುದೇ ಸ್ಥಳದಲ್ಲಿ ಯಾವುದೇ ಶವವನ್ನು ಹೂಳತಕ್ಕದ್ದಲ್ಲ, ಸುಡತಕ್ಕದ್ದಲ್ಲ ಅಥವಾ ಅನ್ಯಥಾ ವಿಲೆ ಮಾಡತಕ್ಕದ್ದಲ್ಲ.

(5) ಆಯುಕ್ತರು ಕೊಟ್ಟ ದೂರಿನ ಮೇಲೆ ಅಥವಾ ಅನ್ಯಥಾ ಮೇಲೆ ಹೇಳಿದಂತೆ ನೋಂದಾಯಿಸಿರದ, ಲೈಸೆನ್ಸು ನೀಡಿರದ ಅಥವಾ ಒದಗಿಸಿರದ ಸ್ಥಳದಲ್ಲಿ ಶವವನ್ನು ಹೂಳಲಾಗಿದೆಯೆಂದು ಮ್ಯಾಜಿಸ್ಟ್ರೇಟರಿಗೆ ಮನದಟ್ಟಾದರೆ ಹೂಳಿರುವ ಶವವನ್ನು ಹೊರಗೆ ತೆಗೆಯಲು ಮತ್ತು ಅಧಿಕೃತಗೊಳಿಸಿದ ಸ್ಥಳದಲ್ಲಿ ಅದನ್ನು ಹೂಳಲು ಅವರು ನಿರ್ದೇಶಿಸಬಹುದು.

**395. ಹೂಳುವುದರ ಮತ್ತು ಸುಡುವುದರ ಬಗ್ಗೆ ವರದಿ.–** ಮೃತರ ವಿಲೆಗಾಗಿ ಇರುವ ಸ್ಥಳದ ಮೇಲೆ ನಿಯಂತ್ರಣವನ್ನು ಹೊಂದಿರುವ ವ್ಯಕ್ತಿಯು ಆ ಬಗ್ಗೆ ಆಯುಕ್ತರು ನೇಮಕ ಮಾಡಿದ ಅಧಿಕಾರಿ ಯಾರಾದರೂ ಇದ್ದರೆ ಆ ಅಧಿಕಾರಿಗೆ ಅಂಥ ಸ್ಥಳದಲ್ಲಿ ಶವದ ಪ್ರತಿಯೊಂದು ಹೂಳುವಿಕೆ, ಸುಡುವಿಕೆ ಅಥವಾ ಇತರ ವಿಲೆಯ ಬಗ್ಗೆ ಮಾಹಿತಿಯನ್ನು ಕೊಡತಕ್ಕದ್ದು.

**396. ಯಾವುದೇ ಸಾರ್ವಜನಿಕ ಆರಾಧನಾ ಸ್ಥಳದಲ್ಲಿ ಗುಮ್ಮಟವನ್ನು ಅಥವಾ ಗೋರಿಯನ್ನು ಕಟ್ಟುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು ಯಾವುದೇ ಸಾರ್ವಜನಿಕ ಆರಾಧನಾ ಸ್ಥಳದ ಗೋಡೆ ಒಳಗೆ ಅಥವಾ ಅದರ ಅಡಿಯಲ್ಲಿ ಗುಮ್ಮಟವನ್ನು ಅಥವಾ ಗೋರಿಯನ್ನು ಕಟ್ಟತಕ್ಕದ್ದಲ್ಲ ಅಥವಾ ಯಾವುದೇ ಶವವನ್ನು ಅಲ್ಲಿ ಹೂಳುವುದಕ್ಕೆ ಅವಕಾಶ ನೀಡತಕ್ಕದ್ದಲ್ಲ:

ಪರಂತು, ಆಯುಕ್ತರು ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು, ಯಾವುದೇ ಸಾರ್ವಜನಿಕ ಆರಾಧನಾ ಸ್ಥಳದ ಆವರಣದೊಳಗೆ ಅಥವಾ ಅದರಡಿಯಲ್ಲಿ ಗುಮ್ಮಟ ಅಥವಾ ಗೋರಿ ಕಟ್ಟುವುದನ್ನು ಮತ್ತು ಅಂಥ ಗುಮ್ಮಟದಲ್ಲಿ ಅಥವಾ ಗೋರಿಯಲ್ಲಿ ಅಥವಾ ಪ್ರಸ್ತುತ ಇರುವ ಗುಮ್ಮಟದಲ್ಲಿ ಅಥವಾ ಗೋರಿಯಲ್ಲಿ ಪಾದ್ರಿಗಳ ಅಥವಾ ಧಾರ್ಮಿಕ ಗುರುಗಳ ಸಮಾಧಿ ಮಾಡುವುದನ್ನು ಅಧಿಕೃತಗೊಳಿಸಬಹುದು.

**397. ಆರೋಗ್ಯಕ್ಕೆ ಅಪಾಯಕಾರಿಯಾಗಿರುವ ಅಥವಾ ಗೋರಿಗಳಿಂದ ನಿಬಿಡವಾಗಿರುವ ಸ್ಮಶಾನವನ್ನು ಮತ್ತು ಸುಡುಗಾಡನ್ನು ಬಳಸುವುದಕ್ಕೆ ನಿಷೇಧ.–** (1) ಆಯುಕ್ತರು,–

(ಎ) ಮೃತರ ವಿಲೆಗಾಗಿ ಇರುವ ಯಾವುದೇ ನೋಂದಾಯಿತ ಅಥವಾ ಲೈಸೆನ್ಸು ನೀಡಿದ ಸ್ಥಳವು ಅಥವಾ ನಗರಪಾಲಿಕೆಯು ಅಥವಾ ಸರ್ಕಾರವು ಅಂಥ ವಿಲೆಗಾಗಿ ಒದಗಿಸಿದ ಯಾವುದೇ ಸ್ಥಳವು, ಅದರ ನೆರೆಹೊರೆಯಲ್ಲಿ ಜೀವಿಸುತ್ತಿರುವ ವ್ಯಕ್ತಿಗಳ ಆರೋಗ್ಯಕ್ಕೆ ಅಪಾಯಕಾರಿಯಾಗುವಂಥ ಅಥವಾ ಅಪಾಯಕಾರಿಯಾಗುವ ಸಂಭವವಿರುವಂಥ ಸ್ಥಿತಿಯಲ್ಲಿದೆ ಎಂದು ಅಥವಾ ಅಂಥ ಪರಿಸ್ಥಿತಿಯಲ್ಲಿದೆ ಎಂದು; ಅಥವಾ

(ಬಿ) ಯಾವುದೇ ಸ್ಮಶಾನವು ಅತಿಯಾಗಿ ಗೋರಿಗಳಿಂದ ತುಂಬಿ ಹೋಗಿದೆ ಎಂದು ಮತ್ತು ಮೇಲೆ ಹೇಳಿದಂತೆ ಸರ್ಕಾರಿ ಸ್ಮಶಾನದ ಅಥವಾ ಸುಡುಗಾಡಿನ ಅಥವಾ ಇತರ ಸ್ಥಳದ ಸಂದರ್ಭದಲ್ಲಿ ಮೃತರ ವಿಲೆಗಾಗಿ ಕ್ರಮಬದ್ಧವಾಗಿ ಅಧಿಕೃತಗೊಳಿಸಿದ ಮತ್ತೊಂದು ಅನುಕೂಲಕರ ಸ್ಥಳವು ಇದೆ ಎಂದು ಅಥವಾ ಅಂಥ ಸ್ಥಳವನ್ನು ಸಾಮಾನ್ಯವಾಗಿ ಬಳಸುವಂಥ ವ್ಯಕ್ತಿಗಳಿಗಾಗಿ ಒದಗಿಸಲಾಗಿದೆ ಎಂದು ಅಭಿಪ್ರಾಯಪಟ್ಟರೆ, ಅವರು ನಗರಪಾಲಿಕೆಯ ಸಮ್ಮತಿಯನ್ನು ಮತ್ತು ಸರ್ಕಾರದ ಪೂರ್ವ ಮಂಜೂರಾತಿಯನ್ನು ಪಡೆದು ನೋಟೀಸನ್ನು, ಅಂಥ ನೋಟಿಸಿನಲ್ಲಿ ತಿಳಿಸಿದ ಅವಧಿಯ ತರುವಾಯ ಅಂಥ ಸ್ಥಳದಲ್ಲಿ ಯಾವುದೇ ಶವವನ್ನು ಹೂಳುವುದು, ಸುಡುವುದು ಅಥವಾ ಅನ್ಯಥಾ ವಿಲೆ ಮಾಡುವುದು ಕಾನೂನು ಸಮ್ಮತವಾಗತಕ್ಕದ್ದಲ್ಲವೆಂದು ಕೊಡಬಹುದು.

(2) ಉಪ–ಪ್ರಕರಣದ (1)ರ ಮೇರೆಗೆ ಕೊಡಲಾದ ಪ್ರತಿಯೊಂದು ನೋಟೀಸನ್ನು ಅಂಥ ಸ್ಥಳದ ಯಾವುದೇ ಭಾಗದಲ್ಲಿ ಅಂಟಿಸತಕ್ಕದ್ದು.

(3) ಅಂಥ ನೋಟೀಸಿನಲ್ಲಿ ತಿಳಿಸಿದ ಅವಧಿಯು ಮುಕ್ತಾಯವಾದ ತರುವಾಯ, ಆಯುಕ್ತರ ಅನುಮತಿ ಪಡೆದ ಹೊರತು ಅಂಥ ಸ್ಥಳದಲ್ಲಿ ಶವವನ್ನು ಹೂಳುವುದು, ಸುಡುವುದು ಅಥವಾ ಅನ್ಯಥಾ ವಿಲೆ ಮಾಡುವುದು ಕಾನೂನು ಸಮ್ಮತವಾದುದು ಆಗಿರತಕ್ಕದ್ದಲ್ಲ.

**398. ಹೆಣಕ್ಕೆ ಸಂಬಂಧಿಸಿದಂತೆ ನಿಷೇಧ.–** ಯಾರೇ ವ್ಯಕ್ತಿಯು,–

(ಎ) ಯಾವುದೇ ಹೆಣವನ್ನು ಅಥವಾ ಅದರ ಭಾಗವನ್ನು ತೋಡಿದುದೆ ಆಗಿರಲಿ ಅಥವಾ ಕಲ್ಲಿನಿಂದ ಅಥವಾ ಅನ್ಯಥಾ ನಿರ್ಮಿಸಿದುದೇ ಆಗಿರಲಿ, ಅಂಥ ಗೋರಿಯಲ್ಲಿ ಶವದ ಪೆಟ್ಟಿಗೆಯ ಮೇಲ್ಭಾಗವು ಅಥವಾ ಯಾವುದೇ ಶವದ ಪೆಟ್ಟಿಗೆಯನ್ನು ಬಳಸದೇ ಇರುವಲ್ಲಿ ದೇಹದ ಮೇಲ್ಭಾಗವು ಭೂಮಿಯ ಮೇಲ್ಭಾಗದಿಂದ ಎಂಟು ಮೀಟರುಗಳಿಗಿಂತ ಕಡಿಮೆಯಿಲ್ಲದ ಆಳದಲ್ಲಿ ಇರುವಂಥ ರೀತಿಯಲ್ಲಿ ಹೂಳತಕ್ಕದ್ದಲ್ಲ ಅಥವಾ ಹೂಳಿಸತಕ್ಕದ್ದಲ್ಲ; ಅಥವಾ

(ಬಿ) ಯಾವುದೇ ಸ್ಮಶಾನದಲ್ಲಿ ಯಾವುದೇ ಗೋರಿಯನ್ನು ಈಗಾಗಲೇ ಇರುವ ಯಾವುದೇ ಇತರೆ ಗೋರಿಯ ಅಂಚಿನಿಂದ ನಾಲ್ಕು ಮೀಟರುಗಳಿಗಿಂತ ಕಡಿಮೆಯಿಲ್ಲದ ಅಂತರದಲ್ಲಿ ಕಟ್ಟತಕ್ಕದ್ದಲ್ಲ ಅಥವಾ ಅಗೆದು ತೋಡತಕ್ಕದ್ದಲ್ಲ ಅಥವಾ ಕಟ್ಟಿಸತಕ್ಕದಲ್ಲ ಅಥವಾ ಅಗೆದು ತೋರಿಸತಕ್ಕದ್ದಲ್ಲ; ಅಥವಾ

(ಸಿ) ಆಯುಕ್ತರ ಲಿಖಿತ ಮಂಜೂರಾತಿ ಅಥವಾ ಮ್ಯಾಜಿಸ್ಟ್ರೇಟರ ಲಿಖಿತ ಆದೇಶವಿಲ್ಲದೆಯೇ ಈಗಾಗಲೇ ಇರುವ ಗೋರಿಯನ್ನು ಪುನಃ ತೆರೆಯತಕ್ಕದ್ದಲ್ಲ; ಅಥವಾ

(ಡಿ) ಹೆಣವನ್ನು ಅಥವಾ ಅದರ ಭಾಗವನ್ನು ಯಾವುದೇ ಸ್ಮಶಾನಕ್ಕೆ ಅಥವಾ ಸುಡುಗಾಡಿಗೆ ಸಾಗಿಸತಕ್ಕದ್ದಲ್ಲ ಅಥವಾ ಸಾಗಿಸುವಂತೆ ಮಾಡತಕ್ಕದ್ದಲ್ಲ ಮತ್ತು ಅಂಥ ಸ್ಥಳಕ್ಕೆ ಅದನ್ನು ತಂದ ತರುವಾಯ ಆರು ಗಂಟೆಗಳೊಳಗೆ ಅದನ್ನು ಹೂಳುವ ಅಥವಾ ಸುಡುವ ಕಾರ್ಯ ಪ್ರಾರಂಭವಾಗುವಂತೆ ಮಾಡತಕ್ಕದ್ದಲ್ಲ; ಅಥವಾ

(ಇ) ಹೆಣವನ್ನು ಅಥವಾ ಅದರ ಭಾಗವನ್ನು ಸುಡುವಾಗ ಅಥವಾ ಸುಡಿಸುವಾಗ ಅದು ಅಥವಾ ಅದರ ಯಾವುದೇ ಭಾಗವು ಅಥವಾ ಅದರ ಬಟ್ಟೆಯು ಪೂರ್ತಿಯಾಗಿ ಬೂದಿಯಾಗದೆ ಉಳಿಯಲು ಬಿಡತಕ್ಕದ್ದಲ್ಲ; ಅಥವಾ

(ಎಫ್) ಅಂಗಾಂಗಗಳು ಕಾಣದಂತೆ ಮುಚ್ಚದೆ ಯಾವುದೇ ಹೆಣವನ್ನು ಅಥವಾ ಅದರ ಭಾಗವನ್ನು ಯಾವುದೇ ಬೀದಿಯ ಮೂಲಕ ಒಯ್ಯತಕ್ಕದ್ದಲ್ಲ; ಅಥವಾ

(ಜಿ) ನಗರದೊಳಗೆ ಹೆಣವನ್ನು ಅಥವಾ ಅದರ ಯಾವುದೇ ಭಾಗವನ್ನು ಸಾಗಿಸುತ್ತಿರುವಾಗ ಅದನ್ನು ಯಾವುದೇ ಬೀದಿಯಲ್ಲಿ ಅಥವಾ ಅದರ ಹತ್ತಿರ ಯಾವುದೇ ಉದ್ದೇಶಕ್ಕಾಗಿ ಬಿಟ್ಟುಹೋಗತಕ್ಕದ್ದಲ್ಲ; ಅಥವಾ

(ಎಚ್) ಛೇದನ ಉದ್ದೇಶಕ್ಕಾಗಿ ಇಟ್ಟಿರುವ ಅಥವಾ ಬಳಸಿದ ಯಾವುದೇ ಹೆಣವನ್ನು ಅಥವಾ ಅದರ ಭಾಗವನ್ನು ಮುಚ್ಚಿದ ಪೆಟ್ಟಿಗೆಯಲ್ಲಿ ಅಲ್ಲದೇ ಅನ್ಯಥಾ ತೆಗೆದುಕೊಂಡು ಹೋಗತಕ್ಕದ್ದಲ್ಲ.

**399. ಖಾಸಗಿ ಸ್ಮಶಾನಕ್ಕೆ ಬೇಲಿ ಹಾಕುವುದು ಇತ್ಯಾದಿ.–** ಯಾವುದೇ ಖಾಸಗಿ ಸ್ಮಶಾನದ ಮಾಲೀಕನು ಅಥವಾ ಅದರ ಮೇಲೆ ನಿಯಂತ್ರಣ ಹೊಂದಿರುವ ಇತರ ವ್ಯಕ್ತಿಯು, ಅದಕ್ಕೆ ಬೇಲಿ ಹಾಕತಕ್ಕದ್ದು ಮತ್ತು ಆಯುಕ್ತರಿಗೆ ತೃಪ್ತಿಯಾಗುವಂತೆ ಅದನ್ನು ಸರಿಯಾಗಿ ನಿರ್ವಹಿಸಿಕೊಂಡು ಬರತಕ್ಕದ್ದು.

**400. ಗೋರಿ–ಗುಂಡಿ ತೋಡುವವನ ಲೈಸೆನ್ಸು.–** ಯಾರೇ ವ್ಯಕ್ತಿಯು, ಆಯುಕ್ತರಿಂದ ಆ ಬಗ್ಗೆ ಲೈಸೆನ್ಸನ್ನು ಪಡೆದಿದ್ದ ಹೊರತು, ಗೋರಿ–ಗುಂಡಿ ತೋಡುವವನ ಅಥವಾ ಇತರ ಸಹಾಯಕನ ಕೆಲಸವನ್ನು ಮೃತರ ವಿಲೆಗಾಗಿ ಸಾರ್ವಜನಿಕ ಸ್ಥಳದಲ್ಲಿ (ಸರ್ಕಾರವು ಒದಗಿಸಿದ ಸ್ಥಳವನ್ನು ಹೊರತುಪಡಿಸಿ) ನಿರ್ವಹಿಸತಕ್ಕದ್ದಲ್ಲ.

## ಅಧ್ಯಾಯ – XVIII

### ರೋಗಗಳನ್ನು ತಡೆಗಟ್ಟುವುದು

### ಅಪಾಯಕಾರಿ ರೋಗಗಳು

**401. ಅಪಾಯಕಾರಿ ರೋಗಗಳನ್ನು ಅಧಿಸೂಚಿಸಲು ಅಧಿಕಾರ.–** ಸರ್ಕಾರವು, ಅಧಿಸೂಚನೆಯ ಮೂಲಕ 2ನೇ ಪ್ರಕರಣದ (8)ನೇ ಖಂಡದಲ್ಲಿ ನಿರ್ದಿಷ್ಟಪಡಿಸಿದ ರೋಗವನ್ನು ಹೊರತುಪಡಿಸಿ ಯಾವುದೇ ಸಾಂಕ್ರಾಮಿಕ, ಸ್ಥಳಿಕ ರೋಗ ಅಥವಾ ಸೋಂಕು ರೋಗವನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ "ಅಪಾಯಕಾರಿ ರೋಗ" ವೆಂದು ಘೋಷಿಸಬಹುದು.

**402. ಅಪಾಯಕಾರಿ ರೋಗಗಳನ್ನು ವರದಿ ಮಾಡಲು ವೈದ್ಯವೃತ್ತಿಗರ ಹೊಣೆಗಾರಿಕೆ.–** (1) ನಗರದಲ್ಲಿ ಯಾವುದೇ ಖಾಸಗಿ ಅಥವಾ ಸಾರ್ವಜನಿಕ ವಾಸದ ಮನೆಯಲ್ಲಿ ಯಾವುದೇ ಅಪಾಯಕರ ರೋಗವಿರುವುದೆಂದು ಯಾರೇ ವೈದ್ಯ ವೃತ್ತಿಗರ ತಿಳಿವಳಿಕೆಗೆ ಬಂದರೆ, ಅವರು ತುಂಬಾ ವಿಳಂಬ ಮಾಡದೆ ಆಯುಕ್ತರಿಗೆ, ಆರೋಗ್ಯಾಧಿಕಾರಿಗೆ ಅಥವಾ ಆ ವಿಭಾಗದ ಸ್ಯಾನಿಟರಿ ಇನ್‌ಸ್ಪೆಕ್ಟರನಿಗೆ ತಿಳಿಸತಕ್ಕದ್ದು.

(2) ಆ ಮಾಹಿತಿಯನ್ನು ಆಯುಕ್ತರು ಅಗತ್ಯಪಡಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ವಿವರಗಳೊಂದಿಗೆ ತಿಳಿಸತಕ್ಕದ್ದು.

(3) ಆಯುಕ್ತರು, ನಗರಪಾಲಿಕೆಯ ಎಲ್ಲೆಗಳೊಳಗೆ ಇರುವ ಪ್ರತಿಯೊಂದು ಮನೆಯ ಮಾಲೀಕನು ಅಥವಾ ಅಧಿಭೋಗದಾರನು, ಆಯುಕ್ತರು ನಿರ್ದಿಷ್ಟಪಡಿಸಬಹುದಾದಂಥ, ಅವಧಿಯಲ್ಲಿ ಮತ್ತು ಅಂಥ ಅಧಿಕಾರಿಗೆ ತನ್ನ ಮನೆಯಲ್ಲಿ ಅಪಾಯಕಾರಿ ರೋಗದಿಂದ ಉಂಟಾದ ಎಲ್ಲ ಮರಣಗಳನ್ನು ಅಥವಾ ಅಪಾಯಕಾರಿ ರೋಗವು ಸಂಭವಿಸಿರುವುದನ್ನು ಕಡ್ಡಾಯವಾಗಿ ತಿಳಿಸುವಂತೆ ನಿರ್ದೇಶಿಸಬಹುದು.

**ವಿವರಣೆ.–** (1)ನೇ ಮತ್ತು (2)ನೇ ಉಪ–ಪ್ರಕರಣದ ಉದ್ದೇಶಗಳಿಗಾಗಿ ಹಕೀಮ ಅಥವಾ ವೈದ್ಯರನ್ನು ವೈದ್ಯ ವೃತ್ತಿಗರು ಎಂದು ಭಾವಿಸತಕ್ಕದ್ದು.

**403. ಶಂಕಿತ ಸ್ಥಳಗಳ ಒಳಗೆ ಪ್ರವೇಶಿಸಲು ಅಧಿಕಾರ.–** ಆಯುಕ್ತರು ಅಥವಾ ಆರೋಗ್ಯಾಧಿಕಾರಿಯು, ನೋಟೀಸು ಕೊಡದೆಯೇ ಅಥವಾ ತಮಗೆ ಸೂಕ್ತವೆಂದು ಕಂಡುಬರಬಹುದಾದಂಥ ನೋಟೀಸನ್ನು ಕೊಟ್ಟ ತರುವಾಯ, ಹಗಲು ಅಥವಾ ರಾತ್ರಿಯ ಯಾವುದೇ ಸಮಯದಲ್ಲಿ ಯಾವುದೇ ಅಪಾಯಕಾರಿ ರೋಗವಿದೆಯೆಂದು, ವರದಿಯಾದ ಅಥವಾ ಇದೆಯೆಂದು ಶಂಕಿಸಲಾದ ಯಾವುದೇ ಸ್ಥಳವನ್ನು ಪರಿಶೀಲಿಸಬಹುದು ಮತ್ತು ಯಾವುದೇ ಅಪಾಯಕಾರಿ ರೋಗದಿಂದ ನರಳುತ್ತಿರುವ ಅಥವಾ ನರಳುತ್ತಿರುವುದಾಗಿ ಶಂಕಿಸಲಾದ ವ್ಯಕ್ತಿಯ ಸರಿಯಾದ ಆರೈಕೆಗಾಗಿ ಮತ್ತು ಚಿಕಿತ್ಸೆಗಾಗಿ ಸಾಕಷ್ಟು ವ್ಯವಸ್ಥೆಗಳನ್ನು ಮಾಡಲಾಗಿದೆಯೆಂದು ಅಥವಾ ಸಾಕಷ್ಟು ವ್ಯವಸ್ಥೆಗಳು ಇವೆಯೆಂದು ತಮಗೆ ಮನವರಿಕೆಯಾದ ಸಂದರ್ಭದಲ್ಲಿ ಹೊರತು, ಅಂಥ ರೋಗದಿಂದ ನರಳುತ್ತಿರುವ ರೋಗಿಗಳ ಚಿಕಿತ್ಸೆಗಾಗಿ ಉದ್ದೇಶಿಸಿದ ಯಾವುದೇ ಸರ್ಕಾರಿ ಅಥವಾ ನಗರಪಾಲಿಕೆಯ ವೈದ್ಯಕೀಯ ಸಂಸ್ಥೆಗೆ ಅಂಥ ವ್ಯಕ್ತಿಯನ್ನು ಸಾಗಿಸಬಹುದು ಅಥವಾ ಸಾಗಿಸುವಂತೆ ಮಾಡಬಹುದು ಮತ್ತು ಅಂಥ ರೋಗವು ಹರಡುವುದನ್ನು ತಡೆಗಟ್ಟಲು ತಾವು ಸೂಕ್ತವೆಂದು ಭಾವಿಸಬಹುದಾದಂಥ ಇತರ ಕ್ರಮಗಳನ್ನು ತೆಗೆದುಕೊಳ್ಳಬಹುದು.

**404. ರೋಗಿಗಳನ್ನು ಸಾಗಿಸುವುದಕ್ಕಾಗಿ ವಾಹನ ವ್ಯವಸ್ಥೆ.–** ಆಯುಕ್ತರು ಯಾವುದೇ ಅಪಾಯಕಾರಿ ರೋಗದಿಂದ ನರಳುತ್ತಿರುವ ವ್ಯಕ್ತಿಯನ್ನು ಸಾಗಿಸುವುದಕ್ಕಾಗಿ ಸೂಕ್ತ ವಾಹನವನ್ನು ಒದಗಿಸಬಹುದು ಮತ್ತು ನಿರ್ವಹಿಸಬಹುದು.

**405. ರೋಗಿಗಳನ್ನು ಆಸ್ಪತ್ರೆಗಳಿಗೆ ಸಾಗಿಸುವಂತೆ ಆದೇಶಿಸಲು ಅಧಿಕಾರಗಳು.–** (1) ಆಸ್ಪತ್ರೆಯಲ್ಲಿರುವ ಯಾರೇ ವ್ಯಕ್ತಿಯ ಸಂದರ್ಭದಲ್ಲಿ, ಅದರ ಪ್ರಭಾರದಲ್ಲಿರುವ ಅಧಿಕಾರಿಗೆ, ಅಂಥ ವ್ಯಕ್ತಿಯು ಅಪಾಯಕಾರಿ ರೋಗದಿಂದ ನರಳುತ್ತಿರುವನೆಂದು ಕಂಡುಬಂದರೆ ಅಥವಾ ಇತರ ಯಾರೇ ವ್ಯಕ್ತಿಯ ಸಂದರ್ಭದಲ್ಲಿ, ಅಂಥ ವ್ಯಕ್ತಿಯು ಅಪಾಯಕಾರಿ ರೋಗದಿಂದ ನರಳುತ್ತಿರುವನೆಂದು,–

(ಎ) ಅವನಿಗೆ ಸರಿಯಾದ ವಸತಿ ಅಥವಾ ಸ್ಥಳಾವಕಾಶ ಇಲ್ಲವೆಂದು; ಅಥವಾ

(ಬಿ) ಅವನನ್ನು ಒಂದಕ್ಕಿಂತ ಹೆಚ್ಚು ಕುಟುಂಬಗಳು ವಾಸಿಸುತ್ತಿರುವ ಸ್ಥಳದಲ್ಲಿ ಇಡಲಾಗಿದೆ ಎಂದು; ಅಥವಾ

(ಸಿ) ರೋಗ ಹರಡುವುದನ್ನು ತಡೆಗಟ್ಟಲು ನಿರ್ದಿಷ್ಟಪಡಿಸಿದ ವೈದ್ಯಕೀಯ ಮೇಲ್ವಿಚಾರಣೆ ಇಲ್ಲ ಎಂದು

– ಆರೋಗ್ಯಾಧಿಕಾರಿಗೆ ಅಥವಾ ಸಹಾಯಕ ಆರೋಗ್ಯಾಧಿಕಾರಿಗೆ ಕಂಡು ಬಂದರೆ ಮತ್ತು ಸಂದರ್ಭಾನುಸಾರ ಪ್ರಭಾರದಲ್ಲಿರುವ ಅಂಥ ಅಧಿಕಾರಿ, ಆರೋಗ್ಯಾಧಿಕಾರಿ ಅಥವಾ ಸಹಾಯಕ ಆರೋಗ್ಯಾಧಿಕಾರಿಯು ವೈದ್ಯಕೀಯ ಚಿಕಿತ್ಸೆಗಾಗಿ ಅಂಥ ರೋಗದಿಂದ ನರಳುತ್ತಿರುವ ರೋಗಿಗಳನ್ನು ಸೇರಿಸಿಕೊಳ್ಳುವ ಆಸ್ಪತ್ರೆಗೆ ಅಥವಾ ಇತರ ಸ್ಥಳಕ್ಕೆ ಅಂಥ ವ್ಯಕ್ತಿಯನ್ನು ಸಾಗಿಸಬೇಕೆಂದು ಪರಿಗಣಿಸಿದರೆ, ಅಂಥ ವ್ಯಕ್ತಿಯನ್ನು ಅವನು ಸದರಿ ಆಸ್ಪತ್ರೆಗೆ ಅಥವಾ ಸ್ಥಳಕ್ಕೆ ಸಾಗಿಸಬಹುದು ಅಥವಾ ಅವನನ್ನು ಸಾಗಿಸುವಂತೆ ಮಾಡಬಹುದು:

ಪರಂತು, ಅಂಥ ಯಾರೇ ವ್ಯಕ್ತಿಯು ಮಹಿಳೆಯಾಗಿದ್ದರೆ, ಆಸ್ಪತ್ರೆಯು ಅಥವಾ ಸ್ಥಳವು ಪುರುಷರಿಗಾಗಿ ಗೊತ್ತುಪಡಿಸಿರುವ ಭಾಗಗಳಿಂದ ಪ್ರತ್ಯೇಕವಾಗಿಟ್ಟ ಸೂಕ್ತ ಬಗೆಯ ಸ್ಥಳಾವಕಾಶವನ್ನು ಹೊಂದಿದ್ದ ಹೊರತು ಆಕೆಯನ್ನು ಅಂಥ ಯಾವುದೇ ಆಸ್ಪತ್ರೆಗೆ ಅಥವಾ ಸ್ಥಳಕ್ಕೆ ಸಾಗಿಸತಕ್ಕದ್ದಲ್ಲ.

(2) ಈ ಪ್ರಕರಣದ ಮೇರೆಗೆ ವ್ಯಕ್ತಿಯನ್ನು ಸಾಗಿಸಲು ಅಡ್ಡಿಪಡಿಸುವ ಯಾರೇ ಆಗಲಿ ಭಾರತ ದಂಡ ಸಂಹಿತೆ, 1860ರ 269ನೇ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಮಾಡಿರುವುದಾಗಿ ಭಾವಿಸತಕ್ಕದ್ದು.

**406. ಕಟ್ಟಡಗಳ ಮತ್ತು ವಸ್ತುಗಳ ಸೋಂಕು ನಿವಾರಣೆ.–** (1) ಆಯುಕ್ತರು ಅಥವಾ ಆರೋಗ್ಯಧಿಕಾರಿಯು, ಸೋಂಕು ಉಳಿದಿರುವ ಸಂಭವವಿರುವ ಕಟ್ಟಡವನ್ನು ಅಥವಾ ಅದರ ಯಾವುದೇ ಭಾಗವನ್ನು ಅಥವಾ ಅದರಲ್ಲಿನ ಯಾವುದೇ ವಸ್ತುವನ್ನು ಸ್ವಚ್ಛಗೊಳಿಸುವುದು ಅಥವಾ ಸೋಂಕು ನಿವಾರಿಸುವುದು ಯಾವುದೇ ಅಪಾಯಕಾರಿ ರೋಗ ಹರಡುವುದನ್ನು ತಡೆಗಟ್ಟಲು ಅಥವಾ ತಡೆಯಲು ಸಾಧ್ಯವಾಗುತ್ತದೆ ಎಂದು ಅಭಿಪ್ರಾಯಪಟ್ಟರೆ, ಅವರು ನೋಟೀಸಿನ ಮೂಲಕ ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಮತ್ತು ಕಾಲದೊಳಗೆ ಅದನ್ನು ಸ್ವಚ್ಛಗೊಳಿಸಲು ಅಥವಾ ಸೋಂಕು ನಿವಾರಿಸಲು ಅದರ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಅಗತ್ಯಪಡಿಸಬಹುದು.

(2) ಮೇಲೆ ಹೇಳಿದಂತೆ ನಿರ್ದಿಷ್ಟಪಡಿಸಿದ ಕಾಲದೊಳಗೆ ಮಾಲೀಕನು ಅಥವಾ ಅಧಿಭೋಗದಾರನು ಆ ನೋಟೀಸಿನ ನಿಬಂಧನೆಗಳನ್ನು ಪಾಲಿಸತಕ್ಕದ್ದು.

(3) ಕೂಡಲೇ ಕ್ರಮ ಕೈಗೊಳ್ಳುವುದು ಅವಶ್ಯವಿದೆಯೆಂದು ಅಥವಾ ಆ ಮಾಲೀಕನು ಅಥವಾ ಅಧಿಭೋಗದಾರನು ಬಡತನದ ಕಾರಣದಿಂದ ಅಥವಾ ಅನ್ಯಥಾ ತಮ್ಮ ಕಡ್ಡಾಯ ಸೂಚನೆಯನ್ನು ಪರಿಣಾಮಕಾರಿಯಾಗಿ ಪಾಲಿಸಲು ಅಸಮರ್ಥನಾಗಿದ್ದಾನೆಂದು ಆಯುಕ್ತರು ಅಥವಾ ಆರೋಗ್ಯಾಧಿಕಾರಿಯು ಪರಿಗಣಿಸಿದರೆ, ಆಯುಕ್ತರು ಅಥವಾ ಆರೋಗ್ಯಾಧಿಕಾರಿಯು ನೋಟೀಸನ್ನು ಕೊಡದೆ ತಾವಾಗಿಯೇ ಅಂಥ ಕಟ್ಟಡಗಳನ್ನು ಅಥವಾ ವಸ್ತುವನ್ನು ಸ್ವಚ್ಛಗೊಳಿಸುವಂತೆ ಅಥವಾ ಅದರ ಸೋಂಕನ್ನು ನಿವಾರಿಸುವಂತೆ ಮಾಡಬಹುದು ಮತ್ತು ಈ ಉದ್ದೇಶಕ್ಕಾಗಿ ಅಂಥ ವಸ್ತುವನ್ನು ಆ ಕಟ್ಟಡದಿಂದ ಅಥವಾ ಆವರಣದಿಂದ ತೆಗೆದುಹಾಕಿಸಬಹುದು ಮತ್ತು ಆಯುಕ್ತರು ಅಥವಾ ಆರೋಗ್ಯಾಧಿಕಾರಿಯು ವಹಿಸಿದ ವೆಚ್ಚಗಳು ಸದರಿ ಮಾಲೀಕನಿಂದ ಅಥವಾ ಅಧಿಭೋಗದಾರನಿಂದ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು.

**407. ಅವಶ್ಯವೆನಿಸಿದಾಗ ಗುಡಿಸಲುಗಳನ್ನು ಮತ್ತು ಷೆಡ್ಡುಗಳನ್ನು ನಾಶಪಡಿಸುವುದು.–** (1) ಅಪಾಯಕಾರಿ ರೋಗದ ಹರಡುವಿಕೆಯನ್ನು ತಡೆಗಟ್ಟಲು ಯಾವುದೇ ಗುಡಿಸಲನ್ನು ಅಥವಾ ಷೆಡ್ಡನ್ನು ನಾಶಪಡಿಸುವುದು ಅವಶ್ಯವೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಅವರು ಅಂಥ ಗುಡಿಸಲಿನ ಅಥವಾ ಷೆಡ್ಡಿನ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ, ತಮ್ಮ ಉದ್ದೇಶದ ಬಗ್ಗೆ ಪ್ರಕರಣದ ಸನ್ನಿವೇಶಗಳಲ್ಲಿ ಯುಕ್ತವೆಂದು ತಮಗೆ ಕಂಡುಬರಬಹುದಾದಂಥ ನೋಟಿಸನ್ನು ಮುಂಚಿತವಾಗಿಯೇ ನೀಡಿದ ನಂತರ ಅಂಥ ಗುಡಿಸಲನ್ನು ಅಥವಾ ಷೆಡ್ಡನ್ನು ಅಥವಾ ಅದರ ಎಲ್ಲ ಸಾಮಗ್ರಿಗಳನ್ನು ನಾಶಪಡಿಸಲು ಕ್ರಮಗಳನ್ನು ಕೈಗೊಳ್ಳಬಹುದು.

(2) ಯಾವುದೇ ಅಂಥ ಗುಡಿಸಲನ್ನು ಅಥವಾ ಷೆಡ್ಡನ್ನು ನಾಶಪಡಿಸಿದ್ದರಿಂದಾಗಿ ಗಣನೀಯವಾದ ನಷ್ಟ ಅನುಭವಿಸಿದ ಯಾರೇ ವ್ಯಕ್ತಿಗೆ ಆಯುಕ್ತರು ನಷ್ಟಪರಿಹಾರವನ್ನು ಸಂದಾಯಮಾಡತಕ್ಕದ್ದು. ಆದರೆ ಈ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುವುದರಿಂದ ಉಂಟಾದ ಯಾವುದೇ ನಷ್ಟಕ್ಕಾಗಿ ಅಥವಾ ಹಾನಿಗಾಗಿ ನಷ್ಟಪರಿಹಾರಕ್ಕೆ ಕ್ಲೇಮು ಮಾಡಲು ಆಯುಕ್ತರು ಅನುಮತಿಸಿದ ಹೊರತು ಅಂಥ ಯಾವುದೇ ಕ್ಲೇಮನ್ನು ಮಾಡಲು ಅವಕಾಶವಿರತಕ್ಕದ್ದಲ್ಲ.

**408. ಸೋಂಕು ನಿವಾರಣೆಗಾಗಿ ಸ್ಥಳಗಳ ವ್ಯವಸ್ಥೆ ಮತ್ತು ಸೋಂಕು ತಗುಲಿದ ವಸ್ತುಗಳನ್ನು ನಾಶಪಡಿಸಲು ಅಧಿಕಾರ.–** (1) ಆಯುಕ್ತರು,–

(ಎ) ಯಾವುದೇ ಅಪಾಯಕಾರಿ ರೋಗದಿಂದ ಸೋಂಕು ತಗಲುವ ಅವಕಾಶವಿರುವಂಥ ವಾಹನಗಳು, ಬಟ್ಟೆಬರೆ, ಹಾಸಿಗೆ ಮತ್ತು ಇತರ ವಸ್ತುಗಳ ಸೋಂಕು ನಿವಾರಣೆಗಾಗಿ ಅವಶ್ಯವಾದ ಎಲ್ಲ ಸಹಾಯಕರು ಮತ್ತು ಉಪಕರಣಗಳೊಂದಿಗೆ ಸರಿಯಾದ ಸ್ಥಳಗಳನ್ನು ಒದಗಿಸಬಹುದು; ಮತ್ತು

(ಬಿ) ಸೋಂಕು ನಿವಾರಣೆಗಾಗಿ ತರಲಾದ ವಾಹನಗಳು, ಬಟ್ಟೆಬರೆ, ಹಾಸಿಗೆ ಅಥವಾ ಇತರ ವಸ್ತುಗಳ ಸೋಂಕು ನಿವಾರಣೆಯನ್ನು ಶುಲ್ಕವಿಲ್ಲದೆ ಅಥವಾ ಸ್ಥಾಯೀ ಸಮಿತಿಯು ಅನುಮೋದಿಸಬಹುದಾದಂಥ ಶುಲ್ಕಗಳನ್ನು ವಿಧಿಸುವುದಕ್ಕೆ ಒಳಪಟ್ಟು ಮಾಡಿಸಬಹುದು.

(2) ಯಾವುದೇ ಅಪಾಯಕಾರಿ ರೋಗಗಳಿಂದ ಸೋಂಕು ತಗಲುವ ಅವಕಾಶವಿರುವಂಥ ವಾಹನ, ಬಟ್ಟೆಬರೆ, ಹಾಸಿಗೆ ಮತ್ತು ಇತರ ವಸ್ತುಗಳನ್ನು ಯಾವ ಸ್ಥಳಗಳಲ್ಲಿ ತೊಳೆಯತಕ್ಕದ್ದು ಮತ್ತು ಸೋಂಕು ನಿವಾರಿಸತಕ್ಕದ್ದು ಎಂಬ ಬಗ್ಗೆ ಆಯುಕ್ತರು ಅಧಿಸೂಚಿಸತಕ್ಕದ್ದು ಮತ್ತು ಹಾಗೆ ಅಧಿಸೂಚಿಸದೆ ಇರುವ ಯಾವುದೇ ಸ್ಥಳದಲ್ಲಿ ಯಾರೇ ವ್ಯಕ್ತಿಯು ಅಂಥ ಯಾವುದೇ ವಸ್ತುವನ್ನು ತೊಳೆಯತಕ್ಕದ್ದಲ್ಲ ಅಥವಾ ಅದರ ಸೋಂಕನ್ನು ನಿವಾರಿಸತಕ್ಕದ್ದಲ್ಲ.

(3) ಯಾವುದೇ ಅಪಾಯಕಾರಿ ರೋಗದಿಂದ ಸೋಂಕು ಉಳಿದಿರುವ ಸಂಭವವಿರುವ ಯಾವುದೇ ಬಟ್ಟೆಬರೆ, ಹಾಸಿಗೆ ಅಥವಾ ಇತರ ವಸ್ತುವಿನ ಸೋಂಕನ್ನು ನಿವಾರಿಸಲು ಅಥವಾ ಅದನ್ನು ನಾಶಪಡಿಸಲು ಆಯುಕ್ತರು ನಿರ್ದೇಶಿಸಬಹುದು.

**409. ಸೋಂಕು ತಗುಲಿದ ವಸ್ತುಗಳ ವರ್ಗಾವಣೆಗೆ ನಿಷೇಧ.–** ಯಾರೇ ವ್ಯಕ್ತಿಯು ಯಾವುದೇ ಅಪಾಯಕಾರಿ ರೋಗದಿಂದ ಸೋಂಕು ತಗಲುವ ಅವಕಾಶವಿದೆ ಎಂದು ಅವರು ತಿಳಿದಿರುವ ಅಥವಾ ತಿಳಿಯಲು ಕಾರಣವಿರುವಂಥ ಯಾವುದೇ ವಸ್ತುವನ್ನು, ಅದನ್ನು ಮುಂಚಿತವಾಗಿ ಸೋಂಕು ನಿವಾರಿಸದೆ ಕೊಡತಕ್ಕದ್ದಲ್ಲ, ಎರವಲು ಕೊಡತಕ್ಕದ್ದಲ್ಲ, ಗುತ್ತಿಗೆಗೆ ಕೊಡತಕ್ಕದ್ದಲ್ಲ, ಬಾಡಿಗೆಗೆ ಕೊಡತಕ್ಕದ್ದಲ್ಲ, ಮಾರತಕ್ಕದ್ದಲ್ಲ, ರವಾನಿಸತಕ್ಕದ್ದಲ್ಲ ಅಥವಾ ಅನ್ಯಥಾ ವಿಲೆ ಮಾಡತಕ್ಕದ್ದಲ್ಲ:

ಪರಂತು, ಈ ಪ್ರಕರಣದಲ್ಲಿ ಇರುವುದು ಯಾವುದೂ, ಯಾವುದೇ ವಸ್ತುವನ್ನು ಸೋಂಕು ನಿವಾರಿಸುವ ಉದ್ದೇಶಕ್ಕಾಗಿ ಸರಿಯಾದ ಮುನ್ನೆಚ್ಚರಿಕೆ ಕ್ರಮಗಳೊಂದಿಗೆ ರವಾನಿಸುವ ವ್ಯಕ್ತಿಗೆ ಅನ್ವಯವಾಗತಕ್ಕದ್ದಲ್ಲ.

**410. ಸೋಂಕು ತಗುಲಿದ ವ್ಯಕ್ತಿಯು ವೃತ್ತಿಯನ್ನು ನಡೆಸುವುದಕ್ಕೆ ನಿಷೇಧ.–** ಅಪಾಯಕಾರಿ ರೋಗದಿಂದ ತಾನು ನರಳುತ್ತಿದ್ದೇನೆಂದು ಯಾರೇ ವ್ಯಕ್ತಿಗೆ ತಿಳಿದರೆ, ಅಥವಾ ಸರ್ಕಾರದ ಅಥವಾ ನಗರಪಾಲಿಕೆಯ ಸೇವೆಯಲ್ಲಿರುವ ಆರೋಗ್ಯಾಧಿಕಾರಿ ಅಥವಾ ನೋಂದಾಯಿತ ವೈದ್ಯವೃತ್ತಿಗರು ಹಾಗೆಂದು ಪ್ರಮಾಣೀಕರಿಸಿದರೆ, ಅವನು ರೋಗವನ್ನು ಹರಡುವ ಅಪಾಯವಿಲ್ಲದ ಹಾಗೆ ಯಾವುದೇ ವೃತ್ತಿಯಲ್ಲಿ ತೊಡಗಬಹುದುದಾಗಿದ್ದ ಹೊರತು ಅಥವಾ ವ್ಯಾಪಾರವನ್ನು ಅಥವಾ ವ್ಯವಹಾರವನ್ನು ನಡೆಸಬಹುದಾಗಿದ್ದ ಹೊರತು, ಅವನು ಹಾಗೆ ವೃತ್ತಿಯಲ್ಲಿ ತೊಡಗತಕ್ಕದ್ದಲ್ಲ ಅಥವಾ ನಡೆಸತಕ್ಕದ್ದಲ್ಲ.

**411. ರೋಗಗ್ರಸ್ತ ವ್ಯಕ್ತಿಯು ಸಾರ್ವಜನಿಕ ವಾಹನವನ್ನು ಪ್ರವೇಶಿಸುವುದಕ್ಕೆ ನಿಷೇಧ.–** (1) ಯಾವುದೇ ಅಪಾಯಕಾರಿ ರೋಗದಿಂದ ನರಳುತ್ತಿರುವ ಯಾರೇ ವ್ಯಕ್ತಿಯು ತಾನು ಹಾಗೆ ರೋಗದಿಂದ ನರಳುತ್ತಿರುವುದಾಗಿ ಸಾರ್ವಜನಿಕ ವಾಹನದ ಮಾಲೀಕನಿಗೆ ಅಥವಾ ಚಾಲಕನಿಗೆ ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಗೆ ಮುಂಚಿತವಾಗಿ ತಿಳಿಸದೆಯೇ ಅಂಥ ವಾಹನವನ್ನು ಪ್ರವೇಶಿಸತಕ್ಕದ್ದಲ್ಲ.

(2) ಸಾರ್ವಜನಿಕ ವಾಹನದ ಯಾರೇ ಮಾಲೀಕ ಅಥವಾ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಯು ಮೇಲೆ ಹೇಳಿದಂತೆ ರೋಗದಿಂದ ನರಳುತ್ತಿರುವ ಯಾರೇ ವ್ಯಕ್ತಿಯನ್ನು ಸದರಿ ವ್ಯಕ್ತಿಯು, ಅಂಥ ವಾಹನದ ಸೋಂಕನ್ನು ನಿವಾರಿಸಲು ವಹಿಸಬಹುದಾದ ಯಾವುದೇ ನಷ್ಟವನ್ನು ಮತ್ತು ಖರ್ಚುಗಳನ್ನು ತುಂಬಿಕೊಡಲು ಸಾಕಾಗುವಷ್ಟು ಮೊತ್ತವನ್ನು ಸಂದಾಯ ಮಾಡಿದ ಅಥವಾ ಕೊಟ್ಟ ಹೊರತು ಮತ್ತು ಹಾಗೆ ಸಂದಾಯ ಮಾಡುವವರೆಗೆ ಅಥವಾ ಕೊಡುವವರೆಗೆ ಅವನನ್ನು ಕರೆದೊಯ್ಯಲು ಬದ್ಧನಾಗಿರತಕ್ಕದ್ದಲ್ಲ.

(3) ಉಪ–ಪ್ರಕರಣ (1)ನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯನ್ನು, ಅಪರಾಧಿಯೆಂದು ನಿರ್ಣಯಿಸುವ ನ್ಯಾಯಾಲಯವು, ಈ ಅಧಿನಿಯಮದಲ್ಲಿ ಉಪಬಂಧಿಸಿದ ಅಪರಾಧಕ್ಕೆ ವಿಧಿಸುವ ದಂಡನೆಯ ಜೊತೆಗೆ, ವಾಹನದ ಸೋಂಕನ್ನು ನಿವಾರಿಸುವ ಉದ್ದೇಶಕ್ಕಾಗಿ ಮಾಲೀಕನು ಅಥವಾ ಚಾಲಕನು ವಹಿಸುವಂಥ ನಷ್ಟವನ್ನು ಮತ್ತು ಖರ್ಚನ್ನು ತುಂಬಿಕೊಡಲು ನ್ಯಾಯಾಲಯವು ಸಾಕಷ್ಟೆಂದು ಭಾವಿಸುವಂಥ ಮೊಬಲಗನ್ನು ವಿಧಿಸಬಹುದು. ಹಾಗೆ ವಿಧಿಸಿದ ಮೊಬಲಗನ್ನು ನ್ಯಾಯಾಲಯವು ವಾಹನದ ಮಾಲೀಕನಿಗೆ ಅಥವಾ ಚಾಲಕನಿಗೆ ಕೊಡಿಸತಕ್ಕದ್ದು:

ಪರಂತು, ಅಪೀಲಿಗೆ ಒಳಪಡುವಂಥ ಪ್ರಕರಣದಲ್ಲಿ, ಅಪೀಲು ಸಲ್ಲಿಸುವುದಕ್ಕೆ ಅನುಮತಿಸಿದ ಅವಧಿಯು ಗತಿಸುವುದಕ್ಕೆ ಮುಂಚೆ ಅಥವಾ ಅಪೀಲನ್ನು ಸಲ್ಲಿಸಿದ್ದರೆ, ಅಪೀಲಿನ ತೀರ್ಮಾನಕ್ಕೆ ಮುಂಚೆ ಅಂಥ ಮೊಬಲಗನ್ನು ಮಾಲೀಕನಿಗೆ ಅಥವಾ ಚಾಲಕನಿಗೆ ಸಂದಾಯಮಾಡತಕ್ಕದ್ದಲ್ಲ.

(4) ಅದೇ ವಿಷಯಕ್ಕೆ ಸಂಬಂಧಪಟ್ಟಂತೆ ತರುವಾಯದ ಯಾವುದೇ ಸಿವಿಲ್ ದಾವೆಯಲ್ಲಿ ನಷ್ಟಪರಿಹಾರದ ಐತೀರ್ಪು ನೀಡುವ ಕಾಲದಲ್ಲಿ, ಈ ಪ್ರಕರಣದ ಮೇರೆಗೆ ವಾದಿಯು ಸ್ವೀಕರಿಸಿರುವ ಯಾವುದೇ ಮೊತ್ತವನ್ನು ನ್ಯಾಯಾಲಯವು ಗಣನೆಗೆ ತೆಗೆದುಕೊಳ್ಳತಕ್ಕದ್ದು.

**412. ರೋಗಿಗಳನ್ನು ಸಾಗಿಸಿದ ತರುವಾಯ ಸಾರ್ವಜನಿಕ ವಾಹನದ ಸೋಂಕು ನಿವಾರಣೆ.–** (1) ಅಪಾಯಕಾರಿ ರೋಗದಿಂದ ನರಳುತ್ತಿರುವ ಯಾರೇ ವ್ಯಕ್ತಿಯನ್ನು ಸಾಗಿಸಿದ ಯಾವುದೇ ವಾಹನದ ಮಾಲೀಕನು, ಚಾಲಕನು ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಯು, ಆ ವಾಹನದ ಸೋಂಕನ್ನು ತಕ್ಷಣವೇ ನಿವಾರಿಸತಕ್ಕದ್ದು ಅಥವಾ ಅದರ ಸೋಂಕನ್ನು ನಿವಾರಿಸುವಂತೆ ಮಾಡತಕ್ಕದ್ದು.

(2) ಅಂಥ ಯಾವುದೇ ವಾಹನವನ್ನು, ಆರೋಗ್ಯಾಧಿಕಾರಿಯು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು, ಸೋಂಕಿನ ಅಪಾಯವನ್ನು ಉಂಟುಮಾಡಲು ಸಾಧ್ಯ ಇಲ್ಲ ಎಂದು, ವಾಹನವನ್ನು ಬಳಸಬಹುದೆಂದು ತಿಳಿಸುವ ಪ್ರಮಾಣಪತ್ರವನ್ನು ಕೊಡುವವರೆಗೆ, ಅದನ್ನು ಬಳಸತಕ್ಕದ್ದಲ್ಲ.

**413. ಸೋಂಕು ತಗುಲಿದ ಕಟ್ಟಡವನ್ನು ಬಾಡಿಗೆಗೆ ಕೊಡುವುದು.–** (1) ಯಾರೇ ವ್ಯಕ್ತಿಯು, ಯಾವ ಕಟ್ಟಡದಲ್ಲಿ ಅಪಾಯಕಾರಿ ರೋಗದಿಂದ ವ್ಯಕ್ತಿಯು ನರಳುತ್ತಿದ್ದಾನೆಂದು ಅವನು ತಿಳಿದಿರುವನೋ ಅಥವಾ ತಿಳಿಯಲು ಕಾರಣವಿದೆಯೋ ಆ ಕಟ್ಟಡವನ್ನು ಅಥವಾ ಕಟ್ಟಡದ ಯಾವುದೇ ಭಾಗವನ್ನು, ಅಂಥ ಕಟ್ಟಡವನ್ನು ಪುನಃ ವಾಸಕ್ಕೆ ಬಳಸಬಹುದೆಂದು ಆರೋಗ್ಯಾಧಿಕಾರಿಯು ಪ್ರಮಾಣಪತ್ರವನ್ನು ಕೊಡುವವರೆಗೆ ಬಾಡಿಗೆಗೆ ಅಥವಾ ಒಳಬಾಡಿಗೆಗೆ ಕೊಡತಕ್ಕದಲ್ಲ ಅಥವಾ ಆ ಉದ್ದೇಶಕ್ಕಾಗಿ ಅದರೊಳಗೆ ಪ್ರವೇಶಿಸಲು ಯಾರೇ ವ್ಯಕ್ತಿಗೆ ಅವಕಾಶ ನೀಡತಕ್ಕದ್ದಲ್ಲ.

(2) ಉಪ–ಪ್ರಕರಣ (1)ರ ಉದ್ದೇಶಕ್ಕಾಗಿ ಹೋಟೆಲ್ ಅಥವಾ ವಸತಿಗೃಹವನ್ನು ಇಟ್ಟಿರುವವನು, ಅದರಲ್ಲಿ ಯಾವ ವ್ಯಕ್ತಿಗೆ ಸ್ಥಳಾವಕಾಶ ಕೊಟ್ಟಿರುವನೋ ಆ ಯಾರೇ ವ್ಯಕ್ತಿಗೆ ಅದನ್ನು ಅಥವಾ ಅದರ ಭಾಗವನ್ನು ಬಾಡಿಗೆಗೆ ಕೊಟ್ಟಿರುವುದಾಗಿ ಭಾವಿಸತಕ್ಕದ್ದು.

**414. ಸಾರ್ವಜನಿಕ ಮನೋರಂಜನಾ ಸ್ಥಳಗಳನ್ನು ಮುಚ್ಚುವಂತೆ ಆದೇಶ ನೀಡಲು ಅಧಿಕಾರ.–** ನಗರದೊಳಗೆ ಯಾವುದೇ ಅಪಾಯಕಾರಿ ರೋಗವು ಹರಡಿರುವ ಸಂದರ್ಭದಲ್ಲಿ, ಆಯುಕ್ತರು ಸ್ಥಾಯೀ ಸಮಿತಿಯ ಮಂಜೂರಾತಿ ಪಡೆದು ನೋಟೀಸಿನ ಮೂಲಕ, ಸಾರ್ವಜನಿಕ ಮನೋರಂಜನಾ ಉದ್ದೇಶಗಳಿಗಾಗಿ ಬಳಸುತ್ತಿರುವ ಯಾವುದೇ ಕಟ್ಟಡ, ಬೂತು ಅಥವಾ ಟೆಂಟಿನ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು, ಸ್ಥಾಯೀ ಸಮಿತಿಯು ನಿಗದಿಪಡಿಸಬಹುದಾದಂಥ ಅವಧಿಗೆ ಅದನ್ನು ಮುಚ್ಚುವಂತೆ ಅಗತ್ಯಪಡಿಸಬಹುದು.

**415. ಅಪಾಯಕಾರಿ ರೋಗದಿಂದ ನರಳುತ್ತಿರುವ ಅಪ್ರಾಪ್ತ ವಯಸ್ಕನು ಶಾಲೆಗೆ ಹಾಜರಾಗತಕ್ಕದ್ದಲ್ಲ.–** ಅಪಾಯಕಾರಿ ರೋಗದಿಂದ ನರಳುವ ಅಥವಾ ನರಳುತ್ತಿರುವ ಅಥವಾ ಅದರಿಂದ ಸೋಂಕಿಗೆ ಗುರಿಯಾಗಿರುವ ಅಪ್ರಾಪ್ತ ವಯಸ್ಕನ ತಂದೆತಾಯಿಯಾಗಿರುವ ಅಥವಾ ಅವರ ಪಾಲನೆಯ ಜವಾಬ್ದಾರಿಯನ್ನು ಹೊಂದಿರುವ ಯಾರೇ ವ್ಯಕ್ತಿಯು, ಅಪ್ರಾಪ್ತ ವಯಸ್ಕನನ್ನು ಶಾಲೆಗೆ ಅಥವಾ ಕಾಲೇಜಿಗೆ ಕಳುಹಿಸಕೂಡದೆಂದು ಆರೋಗ್ಯಾಧಿಕಾರಿಯಿಂದ ನೋಟೀಸು ಬಂದ ತರುವಾಯ, ಅಂಥ ಅಪ್ರಾಪ್ತ ವಯಸ್ಕನು ಅಂಥ ರೋಗವನ್ನು ಇತರರಿಗೆ ಹರಡುವ ಅನಿರೀಕ್ಷಿತ ಅಪಾಯವಿಲ್ಲವೆಂದು, ಅವನು ಶಾಲೆಗೆ ಅಥವಾ ಕಾಲೇಜಿಗೆ ಹಾಜರಾಗಬಹುದೆಂದು ಆರೋಗ್ಯಾಧಿಕಾರಿಯು ಅಭಿಪ್ರಾಯಪಟ್ಟು ನೀಡಿದ ಪ್ರಮಾಣಪತ್ರವನ್ನು ಅವನಿಂದ ಪಡೆದ ಹೊರತು (ಅದನ್ನು ಅರ್ಜಿಯನ್ನು ಹಾಕಿಕೊಂಡ ಮೇಲೆ ಉಚಿತವಾಗಿ ಕೊಡತಕ್ಕದ್ದು) ಅಂಥ ಅಪ್ರಾಪ್ತ ವಯಸ್ಕನಿಗೆ ಶಾಲೆ ಅಥವಾ ಕಾಲೇಜಿಗೆ ಹಾಜರಾಗಲು ಅನುಮತಿಸತಕ್ಕದ್ದಲ್ಲ.

**416. ಗ್ರಂಥಾಲಯ ಪುಸ್ತಕಗಳಿಗೆ ವ್ಯವಸ್ಥೆ.–** (1) ಸೋಂಕು ರೋಗದಿಂದ ನರಳುತ್ತಿರುವ ಯಾರೇ ವ್ಯಕ್ತಿಯು, ಯಾವುದೇ ಸಾರ್ವಜನಿಕ ಅಥವಾ ಪರಿಚಲನ ಗ್ರಂಥಾಲಯದಿಂದ ಅಥವಾ ಅದರಲ್ಲಿ ತನ್ನ ಉಪಯೋಗಕ್ಕಾಗಿ ಯಾವುದೇ ಪುಸ್ತಕವನ್ನು ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಉಪಯೋಗಿಸತಕ್ಕದ್ದಲ್ಲ ಅಥವಾ ತನ್ನ ಉಪಯೋಗಕ್ಕಾಗಿ ಯಾವುದೇ ಪುಸ್ತಕವನ್ನು ತರಿಸಿಕೊಳ್ಳತಕ್ಕದ್ದಲ್ಲ.

(2) ವ್ಯಕ್ತಿಯು, ಸಾರ್ವಜನಿಕ ಅಥವಾ ಪರಿಚಲನ ಗ್ರಂಥಾಲಯದಿಂದ ತೆಗೆದುಕೊಂಡಿರುವ ಮತ್ತು ಅವನ ಸುಪರ್ದಿನಲ್ಲಿರುವಂಥ ಯಾವುದೇ ಪುಸ್ತಕವನ್ನು, ಸೋಂಕು ರೋಗದಿಂದ ನರಳುತ್ತಿದ್ದಾನೆಂದು ತನಗೆ ತಿಳಿದಿರುವಂತಹ ಯಾರೇ ವ್ಯಕ್ತಿಯು ಉಪಯೋಗಿಸುವುದಕ್ಕೆ ಅನುಮತಿಸತಕ್ಕದ್ದಲ್ಲ.

(3) ವ್ಯಕ್ತಿಯು, ಯಾವುದೇ ಸೋಂಕು ರೋಗದಿಂದ, ಸೋಂಕಿಗೆ ಒಳಗಾಗಿದೆ ಎಂದು ಅವನು ತಿಳಿದಿರುವ ಯಾವುದೇ ಪುಸ್ತಕವನ್ನು ಯಾವುದೇ ಸಾರ್ವಜನಿಕ ಅಥವಾ ಪರಿಚಲನ ಗ್ರಂಥಾಲಯಕ್ಕೆ ವಾಪಸು ಮಾಡತಕ್ಕದ್ದಲ್ಲ ಅಥವಾ ತನ್ನ ಸುಪರ್ದಿನಲ್ಲಿರುವ ಅಂಥ ಪುಸ್ತಕವನ್ನು ಹಾಗೆ ವಾಪಸ್ಸು ಮಾಡಲು ಅನುಮತಿಸತಕ್ಕದ್ದಲ್ಲ, ಆದರೆ ಪುಸ್ತಕವು ಹಾಗೆ ಸೋಂಕಿಗೆ ಒಳಗಾಗಿದೆ ಎಂದು ಅವನು ಆಯುಕ್ತರಿಗೆ ತಿಳಿಸತಕ್ಕದ್ದು ಮತ್ತು ಆಯುಕ್ತರು ಪುಸ್ತಕದ ಸೋಂಕನ್ನು ನಿವಾರಿಸುವಂತೆ ಮತ್ತು ಪುಸ್ತಕವನ್ನು ಗ್ರಂಥಾಲಯಕ್ಕೆ ವಾಪಸು ಮಾಡುವಂತೆ ಅಥವಾ ನಾಶಪಡಿಸುವಂತೆ ಮಾಡತಕ್ಕದ್ದು.

(4) ಆಯುಕ್ತರು, ನಾಶಪಡಿಸಿದ ಯಾವುದೇ ಪುಸ್ತಕದ ಮೌಲ್ಯವನ್ನು ಸಂಬಂಧಿಸಿದ ಗ್ರಂಥಾಲಯದ ಮಾಲೀಕರಿಗೆ ಸಂದಾಯ ಮಾಡತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ ಆಯುಕ್ತರು ಯಾವ ರೋಗಗಳನ್ನು ಸೋಂಕು ರೋಗಗಳಾಗಿ ಭಾವಿಸಬೇಕು ಎಂಬುದನ್ನು ಕಾಲಕಾಲಕ್ಕೆ ಅಧಿಸೂಚಿಸತಕ್ಕದ್ದು.

**417. ಸೋಂಕು ಹರಡುವ ಸಂಭವವಿರುವ ನೀರಿನ ಬಳಕೆಯನ್ನು ನಿಷೇಧಿಸಲು ಅಧಿಕಾರ.–** ನಗರದ ಎಲ್ಲೆಗಳ ಒಳಗೆ ಇರುವ ಯಾವುದೇ ಬಾವಿಯ, ಕೆರೆಯ ಅಥವಾ ಇತರೆ ಸ್ಥಳದಲ್ಲಿನ ನೀರನ್ನು ಕುಡಿಯುವುದಕ್ಕಾಗಿ ಬಳಸಿದರೆ ಅಪಾಯವನ್ನುಂಟುಮಾಡುವ ಸಂಭವವಿದೆಯೆಂದು ಅಥವಾ ಯಾವುದೇ ಅಪಾಯಕಾರಿ ರೋಗವು ಹರಡುವುದಕ್ಕೆ ಕಾರಣವಾಗುವುದೆಂದು ಆರೋಗ್ಯಾಧಿಕಾರಿಯು ಪ್ರಮಾಣೀಕರಿಸಿದರೆ, ಆಯುಕ್ತರು ಸಾರ್ವಜನಿಕ ನೋಟೀಸಿನ ಮೂಲಕ, ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಕುಡಿಯುವುದಕ್ಕಾಗಿ ಮತ್ತು ಗೃಹಬಳಕೆಯ ಉದ್ದೇಶಗಳಿಗಾಗಿ ಅಂಥ ನೀರನ್ನು ತೆಗೆದುಕೊಂಡು ಹೋಗುವುದನ್ನು ಅಥವಾ ಬಳಸುವುದನ್ನು ನಿಷೇಧಿಸಬಹುದು.

**418. ಕಡ್ಡಾಯವಾಗಿ ದೇವಿ ಹಾಕುವುದು.–** ನಗರಪಾಲಿಕೆಯು, ನಿಯಮಿಸಬಹುದಾದಂಥ ರೀತಿಯಲ್ಲಿ ನಗರದಾದ್ಯಂತ ದೇವಿ ಹಾಕಿಸಿಕೊಳ್ಳುವುದನ್ನು ಒತ್ತಾಯಪಡಿಸತಕ್ಕದ್ದು ಮತ್ತು ನಿಯಮಿಸಬಹುದಾದಂಥ ವ್ಯಕ್ತಿಗೆ ಸಂಬಂಧಿಸಿದಂತೆ, ನಿಯಮಿಸಬಹುದಾದಷ್ಟರಮಟ್ಟಿಗೆ, ಮತ್ತು ಅಂಥ ರೀತಿಯಲ್ಲಿ ನಗರದಾದ್ಯಂತ ಅಥವಾ ಅದರ ಯಾವುದೇ ಭಾಗದಲ್ಲಿ ದೇವಿ ಹಾಕಿಸಿಕೊಳ್ಳುವುದನ್ನು ಒತ್ತಾಯಪಡಿಸಬಹುದು.

**419. ಸಿಡುಬು ರೋಗದ ಬಗ್ಗೆ ಮಾಹಿತಿಯನ್ನು ನೀಡುವ ಹೊಣೆಗಾರಿಕೆ.–** ನಗರದೊಳಗಿನ ಯಾವುದೇ ವಾಸಸ್ಥಳದ ನಿವಾಸಿಯು ಸಿಡುಬು ರೋಗದಿಂದ ನರಳುತ್ತಿರುವಲ್ಲಿ, ನಿವಾಸಿಯು ಯಾವ ಕುಟುಂಬಕ್ಕೆ ಸೇರಿದ್ದಾನೋ ಆ ಕುಟುಂಬದ ಯಜಮಾನರು ಮತ್ತು ಅವನು ತಪ್ಪಿದಲ್ಲಿ, ಅಂಥ ಸ್ಥಳದಲ್ಲಿ ವಾಸಿಸುತ್ತಿರುವ ಅಥವಾ ಅದರ ಪ್ರಭಾರದಲ್ಲಿರುವ ವ್ಯಕ್ತಿಯು, ಸಾಧ್ಯವಾದಷ್ಟುಮಟ್ಟಿಗೆ ತುಂಬಾ ವಿಳಂಬ ಮಾಡದೇ ಆಯುಕ್ತರಿಗೆ, ಆರೋಗ್ಯಾಧಿಕಾರಿಗೆ ಅಥವಾ ಆ ವಿಭಾಗದ ಸ್ಯಾನಿಟರಿ ಇನ್‌ಸ್ಪೆಕ್ಟರನಿಗೆ ತಿಳಿಸತಕ್ಕದ್ದು.

**420. ಸಿಡುಬು ರೋಗಕ್ಕೆ ರೋಗನಿರೋಧಕ ಚುಚ್ಚುಮದ್ದು ಹಾಕುವುದಕ್ಕೆ ನಿಷೇಧ.–** (1) ಸಿಡುಬು ರೋಗಕ್ಕೆ ರೋಗನಿರೋಧಕ ಚುಚ್ಚುಮದ್ದು ಹಾಕುವುದನ್ನು ನಿಷೇಧಿಸಲಾಗಿದೆ.

(2) ರೋಗನಿರೋಧಕ ಚುಚ್ಚಮದ್ದನ್ನು ಹಾಕಿಸಿಕೊಂಡಿರುವ ಯಾರೇ ವ್ಯಕ್ತಿಯು, ಅಂಥ ವ್ಯಕ್ತಿಯ ಸಂಪರ್ಕದಿಂದ ಅಥವಾ ನಿಕಟ ಸಮೀಪ್ಯದಿಂದ ಇನ್ನು ಮುಂದೆ ಸಿಡುಬು ರೋಗ ತಗಲುವ ಸಂಭವವಿಲ್ಲವೆಂದು ತಿಳಿಸುವ ಪ್ರಮಾಣಪತ್ರವನ್ನು ಆಯುಕ್ತರು ಅಧಿಕೃತಗೊಳಿಸಬಹುದಾದಂಥ ವರ್ಗದ ವೈದ್ಯವೃತ್ತಿಗನಿಂದ ಪಡೆಯದೆಯೇ ರೋಗನಿರೋಧಕ ಚುಚ್ಚುಮದ್ದು ಹಾಕಿಸಿಕೊಂಡ ದಿನಾಂಕದಿಂದ ನಲ್ವತ್ತು ದಿವಸಗಳು ಮುಗಿಯುವುದಕ್ಕೆ ಮುಂಚೆ ನಗರವನ್ನು ಪ್ರವೇಶಿಸತಕ್ಕದ್ದಲ್ಲ.

## ಅಧ್ಯಾಯ – XIX

## ನಿಯಮಗಳು, ವಿನಿಯಮಗಳು ಮತ್ತು ಉಪವಿಧಿಗಳು

### ನಿಯಮಗಳು

**421. ನಿಯಮಗಳನ್ನು ರಚಿಸಲು ಸರ್ಕಾರದ ಅಧಿಕಾರ.–** (1) ಸರ್ಕಾರವು, [1][ಪೂರ್ವ ಪ್ರಕಟಣೆಯ ತರುವಾಯ][1] ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸಲು ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು:

[2][ಪರಂತು, ಈ ಅಧಿನಿಯಮದ ಪ್ರಾರಂಭದ ತರುವಾಯ ಮೊದಲ ಬಾರಿಗೆ ರಚಿಸಿದ ಯಾವುದೇ ನಿಯಮಕ್ಕೆ ಪೂರ್ವಭಾವಿ ಪ್ರಕಟಣೆಯ ಅವಶ್ಯಕತೆಯಿರತಕ್ಕದ್ದಲ್ಲ.][2]

1. 1983ರ ಅಧಿನಿಯಮ ಸಂಖ್ಯೆ 13ರ ಮೂಲಕ 24.2.1983 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿತ್ತು ಮತ್ತು ಅದೇ ಅಧಿನಿಯಮದ ಮೂಲಕ 1.3.1983 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1981ರ ಅಧಿನಿಯಮ ಸಂಖ್ಯೆ40ರ ಮೂಲಕ 1.6.1977 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ವಿಶೇಷವಾಗಿ ಮತ್ತು ಮೇಲೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು,–

(ಎ) ಈ ಅಧಿನಿಯಮದ ಮೂಲಕ ನಿಯಮಿಸಬೇಕೆಂಬುದು ಸ್ಪಷ್ಟವಾಗಿ ಅಗತ್ಯಪಡಿಸಿದ ಅಥವಾ ಅನುಮತಿಸಿದ ಎಲ್ಲಾ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸಬಹುದು;

(ಬಿ) ಪೌರಾಡಳಿತಕ್ಕೆ ಸಂಬಂಧಿಸದೆ ಇರದ ಯಾವುದೇ ನಿರ್ಣಯ ಮಂಡಿಸುವುದನ್ನು ಅಥವಾ ಯಾವುದೇ ವಿಷಯದ ಬಗ್ಗೆ ಪ್ರಸ್ತಾಪ ಮಂಡಿಸುವುದನ್ನು ಅಥವಾ ಅದರ ಬಗ್ಗೆ ಚರ್ಚಿಸುವುದನ್ನು ವಿನಿಯಮಿಸಬಹುದು ಅಥವಾ ನಿಷೇಧಿಸಬಹುದು;

(ಸಿ) ನಗರಪಾಲಿಕೆಯು, ಇಡಬೇಕಾದ ಲೆಕ್ಕಪತ್ರಗಳನ್ನು, ಯಾವ ರೀತಿಯಲ್ಲಿ ಅಂಥ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧನೆ ಮಾಡತಕ್ಕದ್ದು ಎಂಬುದನ್ನು ಮತ್ತು ಪ್ರಕಟಿಸತಕ್ಕದ್ದು ಎಂಬುದನ್ನು ಮತ್ತು ಯಾವ ಷರತ್ತುಗಳ ಮೇರೆಗೆ ತೆರಿಗೆದಾರರು ಲೆಕ್ಕಪರಿಶೋಧಕರ ಮುಂದೆ ಹಾಜರಾಗಬಹುದು ಎಂಬುದನ್ನು ಪುಸ್ತಕಗಳನ್ನು ಮತ್ತು ವೋಚರುಗಳನ್ನು ಪರಿಶೀಲಿಸುವುದನ್ನು ಮತ್ತು ಅದರಲ್ಲಿ ನಮೂದಿಸಿರುವ ಅಥವಾ ಅದರಿಂದ ಬಿಟ್ಟಿರುವ ಬಾಬುಗಳ ಬಗ್ಗೆ ಆಕ್ಷೇಪ ಎತ್ತಬಹುದು ಎಂಬುದನ್ನು ನಿಯಮಿಸಬಹುದು;

(ಡಿ) ಎಲ್ಲಾ ರಿಜಿಸ್ಟರುಗಳ, ವರದಿಗಳ ಮತ್ತು ವಿವರ ಪಟ್ಟಿಕೆಗಳ ನಮೂನೆಗಳನ್ನು, ಅಂಥ ರಿಜಿಸ್ಟರುಗಳನ್ನು ಯಾವ ರೀತಿಯಲ್ಲಿ ಇಡತಕ್ಕದ್ದು ಎಂಬುದನ್ನು, ಅಂಥ ವರದಿಗಳನ್ನು, ವಿವರ ಪಟ್ಟಿಕೆಗಳ ನಮೂನೆಗಳನ್ನು ಯಾವ ದಿನಾಂಕದಂದು ಸಲ್ಲಿಸತಕ್ಕದ್ದೋ ಆ ದಿನಾಂಕಗಳನ್ನು ಮತ್ತು ಅವುಗಳನ್ನು ಯಾವ ಅಧಿಕಾರಿಗಳಿಗೆ ಕಳುಹಿಸತಕ್ಕದ್ದೋ ಆ ಅಧಿಕಾರಿಗಳನ್ನು ಹಾಗೆಯೇ ಮಾರಾಟದ ಅಧಿಕಾರ ಪತ್ರಗಳ ಮತ್ತು ನೋಟೀಸುಗಳ ನಮೂನೆಗಳನ್ನು ನಿಯಮಿಸಬಹುದು;

(ಇ) ಈ ಅಧಿನಿಯಮದ ಅಥವಾ ಇತರ ಯಾವುದೇ ಅಧಿನಿಯಮದ ಮೇರೆಗೆ ವಿಧಿಸಿದ ಅಥವಾ ಪಡೆದ [1][XXX][1] ತೆರಿಗೆಯ ಅಥವಾ ಆದಾಯದ ಉತ್ಪತ್ತಿಗಳನ್ನು ಸ್ಥಳೀಯ ಪ್ರಾಧಿಕಾರಗಳ ನಡುವೆ ಹಂಚಿಕೊಳ್ಳುವುದನ್ನು ವಿನಿಯಮಿಸಬಹುದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಎಫ್) ಲೆಕ್ಕಪರಿಶೋಧಕರು ವಿಚಾರಣೆಗಳನ್ನು ನಡೆಸಲು, ಸಾಕ್ಷಿದಾರರನ್ನು ಸಮನು ಮಾಡಲು ಮತ್ತು ಪರೀಕ್ಷಿಸಲು ಮತ್ತು ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಒತ್ತಾಯಿಸಲು ಪರಿಶೀಲನಾ ಮತ್ತು ಅಧೀಕ್ಷಣಾ ಅಧಿಕಾರಗಳನ್ನು ಮತ್ತು ಲೆಕ್ಕಪರಿಶೋಧನೆ, ಪರಿಶೀಲನೆ ಮತ್ತು ಅಧೀಕ್ಷಣೆಗೆ ಸಂಬಂಧಪಟ್ಟ ಎಲ್ಲ ಇತರ ವಿಷಯಗಳ ಬಗ್ಗೆ ನಿಯಮಿಸಬಹುದು.

(3) ಸರ್ಕಾರವು ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ XI ಮತ್ತು XIIನೇ ಅನುಸೂಚಿಗಳನ್ನು ಹೊರತುಪಡಿಸಿ ಈ ಅಧಿನಿಯಮದ ಯಾವುದೇ ಅನುಸೂಚಿಗಳನ್ನು ಬದಲಾಯಿಸುವ, ಅನುಸೂಚಿಗಳಿಗೆ ಸೇರಿಸುವ ಅಥವಾ ಅವುಗಳನ್ನು ರದ್ದುಪಡಿಸುವ ನಿಯಮಗಳನ್ನು ರಚಿಸಬಹುದು.

(4) ಮೇಲೆ ಹೇಳಿದ ಯಾವುದೇ ಅನುಸೂಚಿಗೆ ಈ ಅಧಿನಿಯಮದಲ್ಲಿ ಮಾಡಿದ ಎಲ್ಲಾ ಉಲ್ಲೇಖಗಳನ್ನು, (3)ನೇ ಉಪ-ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ತತ್ಕಾಲದಲ್ಲಿ ತಿದ್ದುಪಡಿಮಾಡಿರುವಂಥ ಅನುಸೂಚಿಗಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

[1][(4ಎ) ಈ ಅಧಿನಿಯಮದ ಮೇರೆಗೆ ನಿಯಮವನ್ನು ಪೂರ್ವಾನ್ವಯವಾಗಿ ಪರಿಣಾಮಕಾರಿ ಯಾಗುವಂತೆ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದಾಗ, ಆ ನಿಯಮವನ್ನು ರಚಿಸುವುದಕ್ಕೆ ಕಾರಣಗಳನ್ನು, ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸಿದ ವಿವರಣ ಪತ್ರದಲ್ಲಿ ನಿರ್ದಿಷ್ಟಪಡಿಸತಕ್ಕದ್ದು ಮತ್ತು (6)ನೇ ಉಪ-ಪ್ರಕರಣದ ಮೇರೆಗೆ ಮಾಡಿದ ಯಾವುದೇ ಮಾರ್ಪಾಟಿಗೆ ಒಳಪಟ್ಟು, ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವು ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಪರಿಣಾಮವನ್ನು ಹೊಂದಿರತಕ್ಕದ್ದು.][1]

1. 1982ರ ಅಧಿನಿಯಮ ಸಂಖ್ಯೆ 8ರ ಮೂಲಕ 9.11.1981 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(5) ಯಾವುದೇ ನಿಯಮವನ್ನು ರಚಿಸುವಾಗ ಸರ್ಕಾರವು, ಅದರ ಉಲ್ಲಂಘನೆಯು ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾದುದು ಆಗತಕ್ಕದ್ದೆಂದು ಉಪಬಂಧಿಸಬಹುದು.

(6) ಈ ಪ್ರಕರಣದ ಅಥವಾ ಈ ಅಧಿನಿಯಮದ ಯಾವುವೇ ಇತರ ಉಪಬಂಧಗಳ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು, ಮತ್ತು ಹಿಂದೆ ಹೇಳಿದ ಅಧಿವೇಶನ ಅಥವಾ ಒಂದಾದ ಮೇಲೊಂದರಂತೆ ಬರುವ ಅಧಿವೇಶನಗಳ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ ಆ ತರುವಾಯ ಆ ನಿಯಮವು, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಆ ಮಾರ್ಪಾಟನ್ನು, ಅಥವಾ ರದ್ದಿಯಾತಿಯನ್ನು ಅಧಿಸೂಚಿಸಿದ ದಿನಾಂಕದಿಂದ ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**422. ವಿನಿಯಮಗಳನ್ನು ರಚಿಸಲು ಅಧಿಕಾರ.–** ನಗರಪಾಲಿಕೆಯು ಸರ್ಕಾರದ ಪೂರ್ವ ಅನುಮೋದನೆ ಪಡೆದು ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಮೂಲಕ ರಚಿಸಿದ ವಿನಿಮಯಗಳಿಂದ ಉಪಬಂಧಿಸಬೇಕೆಂದು ಅಗತ್ಯಪಡಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅಸಂಗತವಾಗಿರದ ವಿನಿಯಮಗಳನ್ನು ರಚಿಸಬಹುದು.

**423. ಉಪವಿಧಿಗಳನ್ನು ರಚಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳಿಗೆ, ನಿಯಮಗಳಿಗೆ ಮತ್ತು ವಿನಿಯಮಗಳಿಗೆ ಒಳಪಟ್ಟು, ನಗರಪಾಲಿಕೆಯು,–

(1) ಉಪವಿಧಿಗಳ ಮೂಲಕ ಉಪಬಂಧಿಸಬೇಕೆಂದು, ಈ ಅಧಿನಿಯಮವು ಸ್ಪಷ್ಟವಾಗಿ ಅಗತ್ಯಪಡಿಸಿದ ಅಥವಾ ಅನುಮತಿಸಿದ ಎಲ್ಲಾ ವಿಷಯಗಳಿಗಾಗಿ;

(2) ನಗರಪಾಲಿಕೆಯ ಎಲ್ಲಾ ಅಧಿಕಾರಿಗಳು ಮತ್ತು ನೌಕರರು ತಮಗೆ ವಹಿಸಿದ ಕರ್ತವ್ಯಗಳ ಯುಕ್ತ ನೆರವೇರಿಕೆಗಾಗಿ;

(3) ಈ ಅಧಿನಿಯಮದ ಮೇರೆಗೆ ತೆರಿಗೆಗಳನ್ನು ಮತ್ತು ಸುಂಕಗಳನ್ನು ಸಂಗ್ರಹಿಸುವ ಕಾಲ ಮತ್ತು ವಿಧಾನವನ್ನು ವಿನಿಯಮಿಸುವುದಕ್ಕಾಗಿ;

(4) ಯಾವ ಷರತ್ತುಗಳ ಮೇರೆಗೆ ಭೂಮಿಗಳು ಕಟ್ಟಡಕ್ಕೆ ಲಗತ್ತಾದವುಗಳೆಂದು ಭಾವಿಸಬೇಕೋ ಆ ಷರತ್ತುಗಳನ್ನು ನಿರ್ಧರಿಸುವುದಕ್ಕಾಗಿ;

(5) (ಎ) ನೀರು ಸರಬರಾಜಿಗಾಗಿ ಸಾರ್ವಜನಿಕ ಕೆರೆಗಳು, ಬಾವಿಗಳು, ನಾಲೆಗಳು ಮತ್ತು ಇತರ ಸ್ಥಳಗಳ ಅಥವಾ ಕಾಮಗಾರಿಗಳ ಬಳಕೆಗಾಗಿ;

(ಬಿ) ಸಾರ್ವಜನಿಕ ಸ್ನಾನ, ಬಟ್ಟೆ ಒಗೆಯುವುದು ಮತ್ತು ಅಂತಹವುಗಳ ನಿಯಂತ್ರಣಕ್ಕಾಗಿ;

(6) ಕಕ್ಕಸುಗಳು, ಮಣ್ಣು-ಪಾಯಿಖಾನೆಗಳು. ಬೂದಿಗುಂಡಿಗಳು ಮತ್ತು ರೊಚ್ಚುಗುಂಡಿಗಳನ್ನು ಸ್ವಚ್ಛಗೊಳಿಸುವುದಕ್ಕಾಗಿ ಮತ್ತು ನೀರನ್ನು ರಭಸವಾಗಿ ಹರಿಸಿ ತೊಳೆಯುವುದಕ್ಕಾಗಿ ಕಕ್ಕಸುಗಳಿಗೆ ಸಾಕಷ್ಟು ನೀರು ಸರಬರಾಜು ಮಾಡುತ್ತಲೇ ಇರುವುದಕ್ಕಾಗಿ;

(7) (ಎ) ಬೀದಿಗಳನ್ನು ನಿರ್ಮಿಸುವುದಕ್ಕಾಗಿ, ಬೀದಿಯನ್ನು ನಿರ್ಮಿಸಲು ಅನುಮತಿಗಾಗಿ ಸಲ್ಲಿಸುವ ಅರ್ಜಿಗಳೊಂದಿಗೆ ಯಾವ ಮಾಹಿತಿಯನ್ನು ಮತ್ತು ನಕ್ಷೆಗಳನ್ನು ಒಪ್ಪಿಸಬೇಕು ಎಂಬುದನ್ನು ನಿರ್ಧರಿಸುವುದಕ್ಕಾಗಿ ಮತ್ತು ಸಾರ್ವಜನಿಕ ಬೀದಿಗಳ ಮಟ್ಟ ಮತ್ತು ಅಗಲವನ್ನು ಮತ್ತು ಅವುಗಳಿಗೆ ಲಗತ್ತಾಗಿರುವ ಕಟ್ಟಡಗಳ ಎತ್ತರವನ್ನು ವಿನಿಯಮಿಸುವುದಕ್ಕಾಗಿ;

(ಬಿ) ಸಾರ್ವಜನಿಕ ಬೀದಿಗಳ ಬಳಕೆಯನ್ನು ಮತ್ತು ಅವುಗಳನ್ನು ಅಥವಾ ಅವುಗಳ ಭಾಗವನ್ನು ಬಳಕೆಗೆ ಮುಚ್ಚುವುದನ್ನು ನಿಯಂತ್ರಿಸುವುದಕ್ಕಾಗಿ;

(ಸಿ) ಸಾಲುಮರದ ಬೀದಿಗಳ, ಮರಗಳ, ಹುಲ್ಲಿನ ಮತ್ತು ಸಾರ್ವಜನಿಕ ಬೀದಿಗಳಿಗೆ ಲಗತ್ತಾದ ಇತರೆಯವುಗಳ ಮತ್ತು ಇತರ ಸ್ಥಳಗಳ ಸಂರಕ್ಷಣೆಗಾಗಿ;

(8) ಉದ್ಯಾನವನಗಳು, ತೋಟಗಳು ಮತ್ತು ಇತರ ಸಾರ್ವಜನಿಕ ಅಥವಾ ನಗರಪಾಲಿಕೆಯ ಸ್ಥಳಗಳ ಬಳಕೆಯನ್ನು ವಿನಿಯಮಿಸುವುದಕ್ಕಾಗಿ;

(9) (ಎ) ಕಟ್ಟಡದ ಬಗ್ಗೆ ವಿನಿಯಮಿಸುವುದಕ್ಕಾಗಿ;

(ಬಿ) ಕಟ್ಟಡವನ್ನು ಕಟ್ಟುವುದಕ್ಕಾಗಿ ಸಲ್ಲಿಸುವ ಅರ್ಜಿಗಳೊಂದಿಗೆ ಯಾವ ಮಾಹಿತಿಯನ್ನು ಮತ್ತು ನಕ್ಷೆಗಳನ್ನು ಒದಗಿಸಬೇಕು ಎಂಬುದನ್ನು ನಿರ್ಧರಿಸುವುದಕ್ಕಾಗಿ;

(ಸಿ) ಕೊಳಾಯಿಗಾರರಿಗೆ, ಮೋಜಣಿದಾರರಿಗೆ, ವಾಸ್ತುಶಿಲ್ಪಿಗಳಿಗೆ, ಇಂಜಿನಿಯರುಗಳಿಗೆ ಮತ್ತು ರಚನಾ ವಿನ್ಯಾಸಕಾರರಿಗೆ ಲೈಸೆನ್ಸ್ ಕೊಡುವುದಕ್ಕಾಗಿ ಮತ್ತು ಲೈಸೆನ್ಸ್ ಪಡೆದ ವಾಸ್ತುಶಿಲ್ಪಿಗಳು, ಕೊಳಾಯಿಗಾರರು ಮತ್ತು ಮೋಜಣಿದಾರರನ್ನು ಕಡ್ಡಾಯವಾಗಿ ನೇಮಕ ಮಾಡಿಕೊಳ್ಳುವುದಕ್ಕಾಗಿ;

(10) ಹೋಟೆಲುಗಳ, ವಸತಿಗೃಹಗಳ, ಭೋಜನಗೃಹಗಳ, ಛತ್ರಗಳ, ವಿಶ್ರಾಂತಿಗೃಹಗಳ, ಉಪಾಹಾರಗೃಹಗಳ, ಖಾನಾವಳಿಗಳ, ಕೆಫೆಗಳ, ಉಪಾಹಾರ ಕೋಣೆಗಳ, ಕಾಫಿ ಗೃಹಗಳ ಮತ್ತು ವಿಶ್ರಾಂತಿಗಾಗಿ ಅಥವಾ ಯಾವುದೇ ಆಹಾರ ಅಥವಾ ಪಾನೀಯದ ಸೇವನೆಗಾಗಿ ಬರುವ ಸಾರ್ವಜನಿಕರಿಗೆ ಅವಕಾಶವಿರುವ ಯಾವುದೇ ಆವರಣದ ಅಥವಾ ಮಾರಾಟಕ್ಕಾಗಿ ಯಾವುದೇ ಆಹಾರ ಅಥವಾ ಪಾನೀಯವನ್ನು ಇಟ್ಟಿರುವ ಯಾವುದೇ ಸ್ಥಳದ ಬಗ್ಗೆ ವಿನಿಯಮಿಸುವುದಕ್ಕಾಗಿ ಮತ್ತು ಅವುಗಳಿಗೆ ಲೈಸೆನ್ಸು ಕೊಡುವುದಕ್ಕಾಗಿ;

(11) ಲಾಯಗಳು, ದನದ ಕೊಟ್ಟಿಗೆಗಳು ಮತ್ತು ಗೋಶಾಲೆಗಳನ್ನು ನಿರ್ಮಿಸುವ ವಿಧಾನವನ್ನು ಮತ್ತು ಅವುಗಳನ್ನು ನಗರಪಾಲಿಕೆಯ ಚರಂಡಿಗಳಿಗೆ ಸಂಪರ್ಕ ಕಲ್ಪಿಸುವುದನ್ನು ವಿನಿಯಮಿಸುವುದಕ್ಕಾಗಿ;

(12) ಸಾರ್ವಜನಿಕ ಮತ್ತು ಖಾಸಗಿ ಗಾಡಿ ನಿಲ್ದಾಣಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆಗಾಗಿ, ಅವುಗಳ ಬಳಕೆಯನ್ನು ನಿಯಂತ್ರಿಸುವುದಕ್ಕಾಗಿ ಮತ್ತು ಅಲ್ಲಿ ಫೀಜುಗಳನ್ನು ವಿಧಿಸುವುದಕ್ಕಾಗಿ;

(13) Xನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಉದ್ದೇಶಗಳಿಗಾಗಿ ಬಳಸಿದ ಕಾರ್ಖಾನೆಗಳ ಮತ್ತು ಸ್ಥಳಗಳ ಮತ್ತು ಅವುಗಳಲ್ಲಿ ನಡೆಯುತ್ತಿರುವ ಯಾವುದೇ ವೃತ್ತಿಯ ಅಥವಾ ತಯಾರಿಕೆಯ ನೈರ್ಮಲ್ಯ ನಿಯಂತ್ರಣಕ್ಕಾಗಿ ಮತ್ತು ಮೇಲ್ವಿಚಾರಣೆಗಾಗಿ;

(14) (ಎ) ಕಸಾಯಿಖಾನೆಗಳ ಮತ್ತು ಪ್ರಾಣಿಗಳ ಶವಗಳ ಚರ್ಮವನ್ನು ಸುಲಿಯಲು ಮತ್ತು ಅವುಗಳನ್ನು ಕತ್ತರಿಸಲು ಬಳಸುವ ಸ್ಥಳಗಳ ನಿಯಂತ್ರಣಕ್ಕಾಗಿ ಮತ್ತು ಮೇಲ್ವಿಚಾರಣೆಗಾಗಿ;

(ಬಿ) ಪ್ರಾಣಿಗಳನ್ನು ವಧೆ ಮಾಡುವ ವಿಧಾನಗಳ ನಿಯಂತ್ರಣಕ್ಕಾಗಿ ಮತ್ತು ಮೇಲ್ವಿಚಾರಣೆಗಾಗಿ;

(ಸಿ) ನಗರಪಾಲಿಕೆಯು ಒದಗಿಸಿದ ಅಥವಾ ಲೈಸೆನ್ಸು ನೀಡಿದ ನಗರದಲ್ಲಿನ ಅಥವಾ ನಗರದ ಹೊರಗಡೆಯಲ್ಲಿನ ಯಾವುದೇ ಕಸಾಯಿಖಾನೆಯಲ್ಲಿ ವ್ಯವಹಾರವನ್ನು ನಡೆಸುತ್ತಿರುವ ಕಟುಕರ ನಿಯಂತ್ರಣಕ್ಕಾಗಿ ಮತ್ತು ಮೇಲ್ವಿಚಾರಣೆಗಾಗಿ;

(15) ಹಾಲು ಕೊಡುವ ಜಾನುವಾರಗಳ ಪರಿಶೀಲನೆಗಾಗಿ ಮತ್ತು ಹೈನುಗಾರನ ಅಥವಾ ಹಾಲು ಮಾರಾಟಗಾರನ ವೃತ್ತಿಯನ್ನು ನಡೆಸುತ್ತಿರುವ ವ್ಯಕ್ತಿಗಳ ಸ್ವಾಧೀನದಲ್ಲಿರುವ ಕ್ಷೀರಕೇಂದ್ರಗಳು ಮತ್ತು ದನದ ಕೊಟ್ಟಿಗೆಗಳ ವಾತಾಯನ ವ್ಯವಸ್ಥೆ, ದೀಪದ ವ್ಯವಸ್ಥೆ, ಸ್ವಚ್ಛಗೊಳಿಸುವುದು, ಚರಂಡಿ ವ್ಯವಸ್ಥೆ ಮತ್ತು ನೀರು ಸರಬರಾಜಿನ ಬಗ್ಗೆ ವಿನಿಯಮಿಸುವುದಕ್ಕಾಗಿ;

(16) ಹಾಲಿನ ಸ್ಟೋರುಗಳನ್ನು ಮತ್ತು ಹಾಲು ಅಂಗಡಿಗಳನ್ನು ಮತ್ತು ಹಾಲನ್ನು ತುಂಬಿಸಿಡಲು ಅಥವಾ ಅಳತೆ ಮಾಡಲು ಅಥವಾ ಹಾಲಿನ ಯಾವುದೇ ಉತ್ಪನ್ನವನ್ನು ತಯಾರಿಸಲು ಅವುಗಳನ್ನು ನಡೆಸುತ್ತಿರುವವರು ಅಥವಾ ಹೊತ್ತು ಮಾರುವವರು ಬಳಸುವ ಪಾತ್ರೆಗಳನ್ನು ಮತ್ತು ಉಪಕರಣಗಳನ್ನು ಸ್ವಚ್ಛವಾಗಿಟ್ಟುಕೊಳ್ಳುವಂತೆ ಒತ್ತಾಯಿಸುವುದಕ್ಕಾಗಿ ಮತ್ತು ಹಾಲಿನ ವ್ಯಾಪಾರದಲ್ಲಿ ತೊಡಗಿರುವ ವ್ಯಕ್ತಿಗಳು ಸ್ವಚ್ಛವಾಗಿರುವಂತೆ ಒತ್ತಾಯಿಸುವುದಕ್ಕಾಗಿ;

(17) ಯಾವುದೇ ಹಾಲು ಕೊಡುವ ಪ್ರಾಣಿಗೆ ಯಾವುದೇ ಸೋಂಕು ರೋಗ ತಗುಲಿದಾಗಲೆಲ್ಲಾ ನೋಟೀಸು ಕೊಡುವುದನ್ನು ಅಗತ್ಯಪಡಿಸುವುದಕ್ಕಾಗಿ ಮತ್ತು ಹಾಲು ಕೊಡುವ ಜಾನುವಾರುಗಳಿಗೆ ಸೋಂಕು ತಗಲದಂತೆ ಮತ್ತು ಹಾಲು ಕಲುಷಿತವಾಗದಂತೆ ಸಂರಕ್ಷಿಸುವ ದೃಷ್ಟಿಯಿಂದ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳನ್ನು ನಿಯಮಿಸುವುದಕ್ಕಾಗಿ;

(18) (ಎ) ಸಾರ್ವಜನಿಕ ಮತ್ತು ಖಾಸಗಿ ಮಾರುಕಟ್ಟೆಗಳ ಮತ್ತು ಅಂಗಡಿಗಳ ಮತ್ತು ಅದರಲ್ಲಿನ ಇತರ ಸ್ಥಳಗಳ ಪರಿಶೀಲನೆಗಾಗಿ;

(ಬಿ) ಅವುಗಳ ಬಳಕೆಯನ್ನು ವಿನಿಯಮಿಸುವುದಕ್ಕಾಗಿ ಮತ್ತು ಅವುಗಳ ನೈರ್ಮಲ್ಯ ಸ್ಥಿತಿಯನ್ನು ನಿಯಂತ್ರಿಸುವುದಕ್ಕಾಗಿ; ಮತ್ತು

(ಸಿ) ಮಾರುಕಟ್ಟೆಗಳಲ್ಲಿ ತಮ್ಮ ವೃತ್ತಿಗಳನ್ನು ನಡೆಸುತ್ತಿರುವ ದಲ್ಲಾಳಿಗಳು ಮತ್ತು ಕಮೀಷನ್ ಏಜೆಂಟರುಗಳು ಮತ್ತು ತೂಕ ಮಾಡುವವರು ಹಾಗೂ ಅಳತೆ ಮಾಡುವವರಿಗೆ ಲೈಸೆನ್ಸ್ ನೀಡುವುದಕ್ಕಾಗಿ ಮತ್ತು ಅವರನ್ನು ನಿಯಂತ್ರಿಸುವುದಕ್ಕಾಗಿ;

(19) ಅನಾರೋಗ್ಯಕರ ಮಾಂಸ, ಮೀನು ಅಥವಾ ದಿನಸಿ ವಸ್ತುಗಳ ಮಾರಾಟವನ್ನು ಅಥವಾ ಮಾರಾಟಕ್ಕಾಗಿ ಅವುಗಳನ್ನು ಇಡುವುದನ್ನು ತಡೆಗಟ್ಟುವುದಕ್ಕಾಗಿ ಮತ್ತು ಮನುಷ್ಯನ ಆಹಾರಕ್ಕಾಗಿ ಉದ್ದೇಶಿಸಿದ ವಸ್ತುಗಳನ್ನು ಇಟ್ಟಿರುವ ಅಥವಾ ಮಾರಾಟ ಮಾಡುತ್ತಿರುವ ಅಂಗಡಿಗಳ ದಕ್ಷ ಪರಿಶೀಲನೆಯಾಗುವಂತೆ ಮಾಡುವುದಕ್ಕಾಗಿ ಮತ್ತು ನೈರ್ಮಲ್ಯವನ್ನು ವಿನಿಯಮಿಸುವುದಕ್ಕಾಗಿ;

(20) (ಎ) ಶವಗಳನ್ನು ಹೂಳಲು ಮತ್ತು ಸುಡಲು ಮತ್ತು ಅವುಗಳ ವಿಲೆಗಾಗಿ ಇರುವ ಇತರ ಸ್ಥಳಗಳನ್ನು ವಿನಿಯಮಿಸುವುದಕ್ಕಾಗಿ;

(ಬಿ) ನಗರಪಾಲಿಕೆಯು ನಿರ್ವಹಿಸುತ್ತಿರುವ ಸ್ಮಶಾನ ಮತ್ತು ಸುಡುಗಾಡು ಮತ್ತು ಚಿತಾಗಾರಗಳ ಬಳಕೆಗೆ ಫೀಜುಗಳನ್ನು ವಿಧಿಸುವುದಕ್ಕಾಗಿ;

(ಸಿ) ಮರಣಗಳ ಮತ್ತು ಮರಣದ ಕಾರಣದ ಪರಿಶೀಲನೆಗಾಗಿ;

(ಡಿ) ಯಾವ ಅವಧಿಯವರೆಗೆ ಶವಗಳನ್ನು ಪರಿಶೀಲನೆಗಾಗಿ ಇಡಬೇಕೋ ಆ ಅವಧಿಗಾಗಿ;

(ಇ) ಯಾವ ಅವಧಿಯೊಳಗೆ ಶವಗಳನ್ನು ಸ್ಮಶಾನಕ್ಕೆ ಅಥವಾ ಸುಡುಗಾಡಿಗೆ ಸಾಗಿಸಬೇಕೋ ಆ ಅವಧಿಗಾಗಿ ಮತ್ತು ಸಾರ್ವಜನಿಕ ಸ್ಥಳಗಳ ಮೂಲಕ ಶವಗಳನ್ನು ಸಾಗಿಸುವ ವಿಧಾನಕ್ಕಾಗಿ;

(21) ಮನುಷ್ಯರಿಗೆ ಅಥವಾ ಪ್ರಾಣಿಗಳಿಗೆ ತಗಲುವ ಅಪಾಯಕಾರಿ ರೋಗಗಳನ್ನು ತಡೆಗಟ್ಟುವುದಕ್ಕಾಗಿ;

(22) ಕಡ್ಡಾಯವಾಗಿ ದೇವಿ ಹಾಕಿಸಿಕೊಳ್ಳುವಂತೆ ಒತ್ತಾಯಿಸುವುದಕ್ಕಾಗಿ;

(23) ಬೆಂಕಿ ಆಕಸ್ಮಿಕಗಳನ್ನು ತಡೆಗಟ್ಟುವುದಕ್ಕಾಗಿ;

(24) ಜಾಹೀರಾತುಗಳನ್ನು ನಿಷೇಧಿಸುವುದಕ್ಕಾಗಿ ಮತ್ತು ವಿನಿಯಮಿಸುವುದಕ್ಕಾಗಿ;

(25) ದೀಪದ ವ್ಯವಸ್ಥೆಯ ನಿರ್ವಹಣೆಗಾಗಿ ಮತ್ತು ಸಂರಕ್ಷಣೆಗಾಗಿ;

[1][(26) ಮತ್ತು (27) [xxx][1]

1. 1979ರ ಅಧಿನಿಯಮ ಸಂಖ್ಯೆ 21ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(28) ಕಟ್ಟಡದ ಒಳಗಡೆಯೇ ಆಗಲಿ ಅಥವಾ ಹೊರಗಡೆಯೇ ಆಗಲಿ ಉಪದ್ರವ ಎನಿಸಬಹುದಾದ ಯಾವುದೇ ಮಿತಿಮೀರಿದ ಶಬ್ಧವನ್ನು ನಿಲ್ಲಿಸುವುದಕ್ಕಾಗಿ, ನಿವಾರಿಸುವುದಕ್ಕಾಗಿ ಅಥವಾ ನಿಯಂತ್ರಿಸುವುದಕ್ಕಾಗಿ;

(29) ಸಾಮಾನ್ಯವಾಗಿ, ಸ್ವಚ್ಛತೆ, ಸುರಕ್ಷತೆ ಮತ್ತು ಸುವ್ಯವಸ್ಥೆಯನ್ನು ಹಾಗೂ ಒಳ್ಳೆಯ ಆಡಳಿತವನ್ನು ಮತ್ತು ನಗರದ ಒಳಿತನ್ನು ಸುನಿಶ್ಚಿತಪಡಿಸಿಕೊಳ್ಳುವುದಕ್ಕಾಗಿ ಹಾಗೂ ಅಧಿನಿಯಮದ ಎಲ್ಲಾ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ;

– ಉಪವಿಧಿಗಳನ್ನು ರಚಿಸಬಹುದು.

**424. ಕೆಲವು ಉಪವಿಧಿಗಳನ್ನು ಪೂರ್ವಾನ್ವಯವಾಗಿ ಜಾರಿಗೆ ತರಲು ಅಧಿಕಾರ ಮತ್ತು ಉಪವಿಧಿಗಳ ಉಲ್ಲಂಘನೆಗಾಗಿ ದಂಡನೆಗಳು.–** (1) ಕಟ್ಟಡಗಳಿಗೆ ಚರಂಡಿ ವ್ಯವಸ್ಥೆ ಮತ್ತು ನೀರು ಸರಬರಾಜಿಗೆ ಮತ್ತು ಕಟ್ಟಡಗಳಿಗೆ ಸಂಬಂಧಿಸಿದಂತೆ ಶೌಚಗೃಹಗಳು, ಮಣ್ಣು ಪಾಯಿಖಾನೆಗಳು, ಕಕ್ಕಸುಗಳು, ಬೂದಿಗುಂಡಿಗಳು ಮತ್ತು ರೊಚ್ಚುಗುಂಡಿಗಳಿಗೆ ಮತ್ತು ಶೌಚಗೃಹಗಳನ್ನು ರಭಸವಾಗಿ ನೀರು ಹರಿಸಿ ತೊಳೆಯುವುದಕ್ಕಾಗಿ ಅವುಗಳಿಗೆ ಸಾಕಷ್ಟು ನೀರನ್ನು ಸರಬರಾಜು ಮಾಡುತ್ತಲೇ ಇರುವುದಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಉಪವಿಧಿಗಳನ್ನು ರಚಿಸುವುದಕ್ಕೆ ಮುಂಚೆ ನಿರ್ಮಿಸಿದ ಕಟ್ಟಡಗಳಿಗೂ ಅನ್ವಯವಾಗುವ ಹಾಗೆ ಉಪವಿಧಿಗಳನ್ನು ರಚಿಸಬಹುದು.

(2) 423ನೇ ಪ್ರಕರಣದ ಮತ್ತು ಈ ಪ್ರಕರಣದ ಮೇರೆಗೆ ಯಾವುದೇ ಉಪವಿಧಿಯನ್ನು ರಚಿಸುವಾಗ, ನಗರಪಾಲಿಕೆಯು, ಅದರ ಉಲ್ಲಂಘನೆಯು,–

(ಎ) ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಉಲ್ಲಂಘನೆಯು ಮುಂದುವರೆದ ಸಂದರ್ಭದಲ್ಲಿ, ಮೊದಲನೆಯ ಉಲ್ಲಂಘನೆಗಾಗಿ ಅಪರಾಧ ನಿರ್ಣಯವಾದ ತರುವಾಯ ಉಲ್ಲಂಘನೆಯು ಮುಂದುವರೆಯುವ ಅವಧಿಯಲ್ಲಿ ಪ್ರತಿ ದಿನಕ್ಕೆ ಹದಿನೈದು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ; ಅಥವಾ

(ಬಿ) ಅಂಥ ಉಲ್ಲಂಘನೆಯನ್ನು ಮುಂದುವರಿಸದಿರಲು ಆಯುಕ್ತರು ನೀಡಿದ ನೋಟೀಸನ್ನು ಸ್ವೀಕರಿಸಿದ ತರುವಾಯ ಉಲ್ಲಂಘನೆಯು ಮುಂದುವರಿಯುವ ಅವಧಿಯಲ್ಲಿ ಪ್ರತಿ ದಿನಕ್ಕೆ ಹತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾದುದಾಗತಕ್ಕದ್ದೆಂದು

– ಉಪಬಂಧಿಸಬಹುದು.

**425. ಸರ್ಕಾರದಿಂದ ಉಪವಿಧಿಗಳಿಗೆ ಮಂಜೂರಾತಿ.–** ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯು ರಚಿಸಿದ ಯಾವುದೇ ಉಪವಿಧಿಗೆ, ಅದಕ್ಕೆ ಸರ್ಕಾರವು ಮಂಜೂರಾತಿ ನೀಡಿದ ಹೊರತು ಮತ್ತು ಮಂಜೂರಾತಿ ನೀಡುವವರೆಗೆ ಯಾವುದೇ ಸಿಂಧುತ್ವ ಇರತಕ್ಕದ್ದಲ್ಲ:

ಪರಂತು, ಮೂರು ತಿಂಗಳೊಳಗಾಗಿ ಮಂಜೂರಾತಿ ನೀಡದಿದ್ದರೆ, ಆ ಉಪವಿಧಿಗಳಿಗೆ ಮಂಜೂರಾತಿ ನೀಡಲಾಗಿದೆಯೆಂದು ಭಾವಿಸತಕ್ಕದ್ದು.

**426. ಉಪವಿಧಿಗಳನ್ನು ರಚಿಸಲು ಪೂರ್ವಭಾವಿ ಷರತ್ತುಗಳು.–** ಈ ಅಧಿನಿಯಮದ ಮೇರೆಗೆ ಉಪವಿಧಿಗಳನ್ನು ರಚಿಸುವ ಅಧಿಕಾರವು,–

(ಎ) ಪ್ರಸ್ತಾವಿತ ಉಪವಿಧಿಯ ಕರಡನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಮತ್ತು ಸ್ಥಳೀಯ ವೃತ್ತ ಪತ್ರಿಕೆಗಳಲ್ಲಿ ಪ್ರಕಟಿಸಬೇಕು ಎಂಬ;

(ಬಿ) ಅದನ್ನು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದಂದಿನಿಂದ ಮೂವತ್ತು ದಿವಸಗಳ ಅವಧಿಯು ಅಥವಾ ನಗರಪಾಲಿಕೆಯು ಗೊತ್ತುಪಡಿಸಬಹುದಾದಂಥ ಹೆಚ್ಚಿನ ಅವಧಿ ಮುಕ್ತಾಯವಾದ ತರುವಾಯದವರೆಗೆ ಕರಡಿನ ಬಗ್ಗೆ ಮುಂದಿನ ಕ್ರಮ ಕೈಗೊಳ್ಳತಕ್ಕದ್ದಲ್ಲ ಎಂಬ;

(ಸಿ) ಅಂಥ ಅವಧಿಯಲ್ಲಿ ಕನಿಷ್ಠ ಮೂವತ್ತು ದಿನಗಳವರೆಗೆ ಕರಡಿನ ಮುದ್ರಿತ ಪ್ರತಿಯನ್ನು, ಸಾರ್ವಜನಿಕರ ಪರಿಶೀಲನೆಗಾಗಿ ನಗರಪಾಲಿಕೆಯ ಕಛೇರಿಯಲ್ಲಿ ಇಡತಕ್ಕದ್ದು ಮತ್ತು ಯಾವುದೇ ಯುಕ್ತ ಕಾಲದಲ್ಲಿ ಉಚಿತವಾಗಿ ಎಲ್ಲಾ ವ್ಯಕ್ತಿಗಳು ಅದನ್ನು ಪರಿಶೀಲಿಸಲು ಅನುಮತಿಸತಕ್ಕದ್ದು ಎಂಬ; ಮತ್ತು

(ಡಿ) ಕರಡಿನ ಮುದ್ರಿತ ಪ್ರತಿಗಳನ್ನು, ಆಯುಕ್ತರು ನಿಗದಿಪಡಿಸಬಹುದಾದ ಬೆಲೆಯನ್ನು ಸಂದಾಯ ಮಾಡಿದ ಮೇಲೆ ಅವುಗಳನ್ನು ಅಪೇಕ್ಷಿಸುವ ಯಾರೇ ವ್ಯಕ್ತಿಗೆ ಮಾರಾಟ ಮಾಡತಕ್ಕದ್ದು ಎಂಬ

– ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

**427. ಉಪವಿಧಿಗಳಿಗೆ ಬದಲಾಗಿ ನಿಯಮಗಳನ್ನು ರಚಿಸಲು ಸರ್ಕಾರದ ಅಧಿಕಾರ.–** (1) 423ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಯು, ಯಾವುದೇ ಉಪವಿಧಿಗಳನ್ನು ರಚಿಸಲು ವಿಫಲವಾದರೆ ಅಥವಾ ಅದು ರಚಿಸಿದ ಉಪವಿಧಿಗಳು ಸಾಕಷ್ಟಲ್ಲವೆಂದು ಸರ್ಕಾರ ಅಭಿಪ್ರಾಯಪಟ್ಟರೆ ತಾನು ಸೂಕ್ತವೆಂದು ಭಾವಿಸಬಹುದಾದಷ್ಟರಮಟ್ಟಿಗೆ, ಅಂಥ ವಿಷಯಗಳಿಗೆ ಉಪಬಂಧ ಕಲ್ಪಿಸುವ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳನ್ನು, ನಗರಪಾಲಿಕೆಯು ರಚಿಸಿದ ಯಾವುದೇ ಉಪವಿಧಿಗೆ ಸೇರಿಸಬಹುದು, ಆ ನಿಯಮಗಳು ನಗರಪಾಲಿಕೆಯು ರಚಿಸಿದ ಉಪವಿಧಿಗಳನ್ನು ಬದಲಾಯಿಸಬಹುದು ಅಥವಾ ರದ್ದುಗೊಳಿಸಬಹುದು.

(3) ನಗರಪಾಲಿಕೆಯು ರಚಿಸಿದ ಉಪವಿಧಿಯ ಯಾವುದೇ ಉಪಬಂಧವು, ಈ ಪ್ರಕರಣದ ಮೇರೆಗೆ ರಚಿಸಿದ ನಿಯಮದ ಯಾವುದೇ ಉಪಬಂಧಕ್ಕೆ ವಿರುದ್ಧವಾಗಿದ್ದರೆ, ನಿಯಮವು ಚಾಲ್ತಿಯಲ್ಲಿರತಕ್ಕದ್ದು ಮತ್ತು ಉಪವಿಧಿಯು ಅದು ವಿರುದ್ಧವಾಗಿರುವಷ್ಟರಮಟ್ಟಿಗೆ ಅನೂರ್ಜಿತವಾಗತಕ್ಕದ್ದು.

(4) 424ನೇ, 426ನೇ ಪ್ರಕರಣಗಳ ಅಥವಾ 428ನೇ ಪ್ರಕರಣದ (1)ನೇ ಉಪ-ಪ್ರಕರಣದ ಎರಡನೇ ವಾಕ್ಯದ ಮತ್ತು 430ನೇ ಪ್ರಕರಣದ ಉಪಬಂಧಗಳು, 423ನೇ ಪ್ರಕರಣದ ಮೇರೆಗೆ ರಚಿಸಿದ ಉಪವಿಧಿಗಳಿಗೆ ಅವು ಅನ್ವಯವಾಗುವಂತೆಯೇ ಈ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳಿಗೂ ಅನ್ವಯವಾಗತಕ್ಕದ್ದು.

(5) ಈ ಪ್ರಕರಣದ ಮೇರೆಗೆ ಯಾವುದೇ ನಿಯಮವನ್ನು ರಚಿಸುವುದಕ್ಕೆ ಮುಂಚೆ ಸರ್ಕಾರವು ಅದನ್ನು ರಚಿಸಬಾರದೆನ್ನುವುದಕ್ಕೆ ಕಾರಣವನ್ನು ತೋರಿಸಲು ನಗರಪಾಲಿಕೆಗೆ ಅವಕಾಶವನ್ನು ಕೊಡತಕ್ಕದ್ದು.

**428. ನಿಯಮಗಳ ಮತ್ತು ಉಪವಿಧಿಗಳ ಪ್ರಕಟಣೆ.–** (1) ಈ ಅಧಿನಿಯಮದ ಮೇರೆಗೆ ಯಾವುದೇ ನಿಯಮವನ್ನು ಅಥವಾ ಉಪವಿಧಿಯನ್ನು ರಚಿಸಿದಾಗ, ಅಂಥ ನಿಯಮವನ್ನು ಅಥವಾ ಉಪವಿಧಿಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಇಂಗ್ಲೀಷ್ ಮತ್ತು ಕನ್ನಡದಲ್ಲಿ ಪ್ರಕಟಿಸತಕ್ಕದ್ದು. ಉಪವಿಧಿಯು, ಮೇಲೆ ಹೇಳಿದಂತೆ ಅದು ಪ್ರಕಟವಾದ ತರುವಾಯ ಮೂರು ತಿಂಗಳುಗಳಲ್ಲಿ ಜಾರಿಗೆ ಬರತಕ್ಕದ್ದು.

(2) ಆಯುಕ್ತರು, ಜಾರಿಯಲ್ಲಿರುವ ಎಲ್ಲಾ ನಿಯಮಗಳನ್ನು ಮತ್ತು ಉಪವಿಧಿಗಳನ್ನು ಸದರಿ ಭಾಷೆಗಳಲ್ಲಿ ಮುದ್ರಿಸುವಂತೆ ಮಾಡತಕ್ಕದ್ದು ಮತ್ತು ಅದರ ಮುದ್ರಿತ ಪ್ರತಿಗಳನ್ನು, ನಿಗದಿತ ಬೆಲೆಯನ್ನು ಸಂದಾಯ ಮಾಡಿದ ಮೇಲೆ ಯಾರೇ ಅರ್ಜಿದಾರನಿಗೆ ಮಾರಾಟ ಮಾಡುವಂತೆ ಮಾಡತಕ್ಕದ್ದು.

(3) ಆಯುಕ್ತರು, ಈ ಅಧಿನಿಯಮದ ಮತ್ತು ಇದರ ಮೇರೆಗೆ ರಚಿಸಿದ ನಿಯಮಗಳ ಮತ್ತು ಉಪವಿಧಿಗಳ ಮೇರೆಗೆ ಅಪರಾಧಗಳ ಮತ್ತು ಜುಲ್ಮಾನೆಗಳ ಪಟ್ಟಿಯನ್ನು ಪ್ರಕಟಿಸತಕ್ಕದ್ದು ಮತ್ತು ಅವುಗಳ ಮುದ್ರಿತ ಪ್ರತಿಗಳನ್ನು ನಿಗದಿತ ಬೆಲೆಯನ್ನು ಸಂದಾಯ ಮಾಡಿದ ಮೇಲೆ ಯಾರೇ ಅರ್ಜಿದಾರನಿಗೆ ಮಾರಾಟ ಮಾಡುವಂತೆ ಮಾಡತಕ್ಕದ್ದು.

(4) ಆಯುಕ್ತರು, ನಿಯಮಗಳ ಮತ್ತು ಉಪವಿಧಿಗಳ ಪ್ರತಿಗಳು ಮಾರಾಟಕ್ಕಿವೆ ಎಂದು ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಜಾಹೀರಾತು ಕೊಡತಕ್ಕದ್ದು ಮತ್ತು ಅವುಗಳನ್ನು ಯಾವ ಜಾಗದಲ್ಲಿ ಮತ್ತು ಯಾವ ವ್ಯಕ್ತಿಯಿಂದ ಹಾಗೂ ಯಾವ ಬೆಲೆಗೆ ಪಡೆಯಬಹುದು ಎಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು.

**429. ವಿನಿಯಮಗಳ ಪ್ರಕಟಣೆ.–** ಈ ಅಧಿನಿಯಮದ ಮೇರೆಗೆ ರಚಿಸಿದ ವಿನಿಯಮಗಳನ್ನು ನಗರಪಾಲಿಕೆಯು ನಿರ್ಧರಿಸಬಹುದಾದಂಥ ರೀತಿಯಲ್ಲಿ ಪ್ರಕಟಿಸತಕ್ಕದ್ದು.

**430. ನಿಯಮಗಳ, ಉಪವಿಧಿಗಳ ಮತ್ತು ವಿನಿಯಮಗಳ ಪ್ರದರ್ಶನ.–** (1) 423ನೇ ಪ್ರಕರಣದ (7)ನೇ ಖಂಡದ (ಎ), (ಬಿ) ಮತ್ತು (ಸಿ) ಉಪಖಂಡಗಳ ಮತ್ತು (8)ನೇ ಖಂಡದ ಮೇರೆಗಿನ ಉಪವಿಧಿಗಳ ಮುದ್ರಿತ ಪ್ರತಿಗಳನ್ನು, ಅವುಗಳು ಅನ್ವಯವಾಗುವ ಬೀದಿ, ಉದ್ಯಾನ ಅಥವಾ ಇತರ ಸ್ಥಳದ ಪ್ರವೇಶ ಸ್ಥಳದಲ್ಲಿ ಅಥವಾ ಬೇರೆ ಕಡೆಯಲ್ಲಿ ಅಂಥ ಸ್ಥಳವನ್ನು ಬಳಸುವ ವ್ಯಕ್ತಿಗೆ ಮಾಹಿತಿಗಾಗಿ ಆಯುಕ್ತರು ಅತ್ಯುತ್ತಮವೆಂದು ಭಾವಿಸಬಹುದಾದಂಥ ಎದ್ದು ಕಾಣುವ ರೀತಿಯಲ್ಲಿ ಅಂಟಿಸತಕ್ಕದ್ದು.

(2) ಇತರ ಉಪವಿಧಿಗಳ ಮತ್ತು ನಿಯಮಗಳ ಹಾಗೂ ವಿನಿಯಮಗಳ ಮುದ್ರಿತ ಪ್ರತಿಗಳನ್ನು, ನಗರಪಾಲಿಕೆಯ ಕಚೇರಿಯ ಯಾವುದೇ ಎದ್ದು ಕಾಣುವ ಭಾಗದಲ್ಲಿ ತೂಗುಹಾಕತಕ್ಕದ್ದು. ಆಯುಕ್ತರು ಅವು ಅನ್ವಯವಾಗುವ, ಸಾರ್ವಜನಿಕರು ಸೇರುವ ಸ್ಥಳಗಳು, ಮಾರುಕಟ್ಟೆಗಳು, ಕಸಾಯಿಖಾನೆಗಳು ಮತ್ತು ಇತರ ಸ್ಥಳಗಳಲ್ಲಿ ಕೂಡ ಈ ಸ್ಥಳಗಳಿಗೆ ಸಂಬಂಧಪಡಬಹುದಾದಂಥ ನಿಯಮಗಳ, ಉಪವಿಧಿಗಳ ಮತ್ತು ವಿನಿಯಮಗಳ ಅಂಥ ಭಾಗಗಳ ಪ್ರತಿಗಳನ್ನು ಅಂತಹುದೇ ರೀತಿಯಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

(3) ಹಾಗೆ ಪ್ರದರ್ಶಿಸಲಾದ ಪ್ರತಿಗಳನ್ನು ಯಾರೇ ವ್ಯಕ್ತಿಯು ಯಾವುದೇ ಯುಕ್ತ ಕಾಲದಲ್ಲಿ ಪರಿಶೀಲಿಸುವುದನ್ನು ನಗರಪಾಲಿಕೆಯ ಯಾರೇ ಅಧಿಕಾರಿ ಅಥವಾ ನೌಕರನು ತಡೆಯತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು, ಮೇಲ್ಕಂಡಂತೆ ಪ್ರದರ್ಶಿಸಿದ ಯಾವುದೇ ಪ್ರತಿಗಳನ್ನು ಅಥವಾ ಪ್ರತಿಗಳನ್ನು ಅಂಟಿಸಿರುವ ಯಾವುದೇ ಫಲಕವನ್ನು ಕಾನೂನು ಸಮ್ಮತ ಅಧಿಕಾರವಿಲ್ಲದೆ ನಾಶಪಡಿಸತಕ್ಕದ್ದಲ್ಲ, ಕಿತ್ತುಹಾಕತಕ್ಕದ್ದಲ್ಲ ಅಥವಾ ಅವುಗಳಿಗೆ ಹಾನಿಯುಂಟುಮಾಡತಕ್ಕದ್ದಲ್ಲ ಅಥವಾ ಅವುಗಳನ್ನು ವಿರೂಪಗೊಳಿಸತಕ್ಕದ್ದಲ್ಲ.

## ಅಧ್ಯಾಯ – XX

## ದಂಡನೆಗಳು

**431. ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಿಗೆ ಸಂಬಂಧಿಸಿದ ಸಾಮಾನ್ಯ ಉಪಬಂಧ.–** (1) ಯಾರೇ ಆದರೂ,–

(ಎ) XIನೇ ಅನುಸೂಚಿಯ ಮೊದಲನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಈ ಅಧಿನಿಯಮದ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿದರೆ;

(ಬಿ) ಯಾವುದೇ ನಿಯಮವನ್ನು ಸದರಿ ಪ್ರಕರಣಗಳ ಯಾವುದೇ ಪ್ರಕರಣದ ಅಥವಾ ನಿಯಮಗಳ ಮೇರೆಗೆ ಮಾಡಿದ ಆದೇಶವನ್ನು ಉಲ್ಲಂಘಿಸಿದರೆ; ಅಥವಾ

(ಸಿ) ಸದರಿ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಅಥವಾ ನಿಯಮಗಳ ಉಪಬಂಧಗಳ ಮೇರೆಗೆ ಅಥವಾ ಅವುಗಳ ಅನುಸಾರವಾಗಿ ತನಗೆ ಕಾನೂನುಬದ್ಧವಾಗಿ ನೀಡಿದ ಯಾವುದೇ ನಿರ್ದೇಶನವನ್ನು ಅಥವಾ ತನಗೆ ಕಾನೂನುಬದ್ಧವಾಗಿ ನೀಡಿದ ಯಾವುದೇ ಕಡ್ಡಾಯ ಸೂಚನೆಯನ್ನು ಪಾಲಿಸಲು ತಪ್ಪಿದರೆ

– ಅಪರಾಧ ನಿರ್ಣಯವಾದ ಮೇಲೆ, ಸದರಿ ಅನುಸೂಚಿಯ ಮೂರನೇ ಅಂಕಣದಲ್ಲಿ ಆ ಬಗ್ಗೆ ನಮೂದಿಸಿದ ಮೊಬಲಗಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಯಾರೇ ಆಗಲಿ,–

(ಎ) XIIನೇ ಅನುಸೂಚಿಯ ಮೊದಲನೆಯ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಈ ಅಧಿನಿಯಮದ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸಿದ ಬಗ್ಗೆ; ಅಥವಾ

(ಬಿ) ಯಾವುದೇ ನಿಯಮದ ಅಥವಾ ಸದರಿ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಅಥವಾ ನಿಯಮಗಳ ಮೇರೆಗೆ ಮಾಡಿದ ಆದೇಶವನ್ನು ಉಲ್ಲಂಘಿಸಿದ ಬಗ್ಗೆ; ಅಥವಾ

(ಸಿ) ಸದರಿ ಪ್ರಕರಣಗಳಲ್ಲಿ ಯಾವುದೇ ಪ್ರಕರಣದ ಅಥವಾ ನಿಯಮಗಳ ಮೇರೆಗೆ ಅಥವಾ ಅವುಗಳ ಅನುಸಾರವಾಗಿ ಕಾನೂನುಬದ್ಧವಾಗಿ ತನಗೆ ನೀಡಿದ ಯಾವುದೇ ನಿರ್ದೇಶನವನ್ನು ಅಥವಾ ತನಗೆ ಕಾನೂನುಬದ್ಧವಾಗಿ ನೀಡಿದ ಯಾವುದೇ ಕಡ್ಡಾಯ ಸೂಚನೆಯನ್ನು ಪಾಲಿಸಲು ತಪ್ಪಿದ ಬಗ್ಗೆ

– ಅಪರಾಧ ನಿರ್ಣೀತನಾದ ಮೇಲೆ ಸಂದರ್ಭಾನುಸಾರ, ಸದರಿ ಉಪಬಂಧದ ಉಲ್ಲಂಘನೆಯನ್ನು ಅಥವಾ ಸದರಿ ನಿರ್ದೇಶನವನ್ನು ಅಥವಾ ಕಡ್ಡಾಯ ಸೂಚನೆಯನ್ನು ಪಾಲಿಸಲು ಉಪೇಕ್ಷಿಸುವುದನ್ನು ಮುಂದುವರಿಸಿದರೆ, ಅಪರಾಧ ನಿರ್ಣಯವಾದ ಮೇಲೆ, ಹಿಂದಿನ ಅಪರಾಧ ನಿರ್ಣಯದ ದಿನಾಂಕದ ತರುವಾಯದ ಯಾವ ಅವಧಿಯಲ್ಲಿ ಅವನು ಹಾಗೆ ಅಪರಾಧ ಮಾಡುವುದನ್ನು ಮುಂದುವರಿಸುವನೋ ಆ ಅವಧಿಯ ಪ್ರತಿಯೊಂದು ದಿನಕ್ಕೆ ಸದರಿ ಅನುಸೂಚಿಯ ಮೂರನೇ ಅಂಕಣದಲ್ಲಿ ಆ ಬಗ್ಗೆ ನಮೂದಿಸಿದ ಮೊಬಲಗಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅವನು ದಂಡಿತನಾಗತಕ್ಕದ್ದು.

**ವಿವರಣೆ.–** XIIನೇ ಅನುಸೂಚಿಯ ಎರಡನೇ ಅಂಕಣದಲ್ಲಿನ 'ವಿಷಯ' ಎಂಬ ಶೀರ್ಷಿಕೆಯ ನಮೂದುಗಳ ಉದ್ದೇಶ ಮೊದಲನೇ ಅಂಕಣದಲ್ಲಿ ನಮೂದಿಸಿದ ಪ್ರಕರಣಗಳಲ್ಲಿ, ಉಪ–ಪ್ರಕರಣಗಳಲ್ಲಿ, ಖಂಡಗಳಲ್ಲಿ ಅಥವಾ ನಿಯಮಗಳಲ್ಲಿ ವಿವರಿಸಿದ ಅಪರಾಧಗಳ ಪರಿಭಾಷೆಗಳೆಂದು ಅಥವಾ ಆ ಪ್ರಕರಣಗಳ, ಉಪ–ಪ್ರಕರಣಗಳ, ಖಂಡಗಳ ಅಥವಾ ನಿಯಮಗಳ ಸಾರಾಂಶಗಳೆಂದು ತಿಳಿಸುವುದು ಅಲ್ಲ. ಆದರೆ, ಸಂದರ್ಭಾನುಸಾರ, ಪ್ರಕರಣಗಳ, ಉಪ–ಪ್ರಕರಣಗಳ, ಖಂಡಗಳ ಅಥವಾ ನಿಯಮಗಳ ವಿಷಯಕ್ಕೆ ಮಾಡಿದ ಉಲ್ಲೇಖವೆಂದು ಮಾತ್ರವೇ ಸೇರಿಸಲಾಗಿದೆ.

**432. ಹಕ್ಕುಳ್ಳವನಾಗಿಲ್ಲದಿರುವಾಗ ಕೌನ್ಸಿಲರನಾಗಿ ಮತ ನೀಡುವುದಕ್ಕೆ, ಮೇಯರ್, ಉಪಮೇಯರ್ ಆಗಿ ಕಾರ್ಯನಿರ್ವಹಿಸುವುದಕ್ಕೆ ಮತ್ತು ದಸ್ತಾವೇಜುಗಳನ್ನು ಒಪ್ಪಿಸಲು ತಪ್ಪುವುದಕ್ಕೆ ದಂಡನೆಗಳು.–** (1) 80ನೇ ಪ್ರಕರಣವನ್ನು ಉಲ್ಲಂಘಿಸಿ ಕೌನ್ಸಿಲರ್‌ನು, ಮತ ನೀಡಿದರೆ ಅಥವಾ ಯಾರೇ ವ್ಯಕ್ತಿಯು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ಅಂಥ ಪದವನ್ನು ಧಾರಣ ಮಾಡಲು ತನಗೆ ಹಕ್ಕಿಲ್ಲವೆಂದು ಅಥವಾ ಅದನ್ನು ಧಾರಣ ಮಾಡಲು ಹಕ್ಕುಳ್ಳವನಾಗಿರುವುದು ನಿಂತುಹೋಗಿದೆ ಎಂದು ತಿಳಿದೂ ಕೌನ್ಸಿಲರನಾಗಿ ಕಾರ್ಯನಿರ್ವಹಿಸಿದರೆ ಅವನು ಅಪರಾಧ ನಿರ್ಣಯವಾದ ಮೇಲೆ ಅಂಥ ಪ್ರತಿಯೊಂದು ಅಪರಾಧಕ್ಕೆ ಎರಡು ನೂರು ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಯಾರೇ ವ್ಯಕ್ತಿಯು, ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ಮೇಯರ್ ಅಥವಾ ಉಪಮೇಯರ್ ಪದವನ್ನು ಧಾರಣ ಮಾಡಲು ತಾನು ಹಕ್ಕುಳ್ಳವನಾಗಿಲ್ಲವೆಂದು ಅಥವಾ ಅದನ್ನು ಧಾರಣ ಮಾಡಲು ಅಥವಾ ಅಂಥ ಪ್ರಕಾರ್ಯಗಳನ್ನು ನಿರ್ವಹಿಸಲು ಹಕ್ಕುಳ್ಳವನಾಗಿರುವುದು ನಿಂತುಹೋಗಿದೆ ಎಂದು ತಿಳಿದೂ ಮೇಯರ್ ಅಥವಾ ಉಪಮೇಯರ್ ಆಗಿ ಕಾರ್ಯ ನಿರ್ವಹಿಸಿದರೆ ಅಥವಾ ಆ ಪದದ ಪ್ರಕಾರ್ಯಗಳನ್ನು ನಿರ್ವಹಿಸಿದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಅಂಥ ಪ್ರತಿಯೊಂದು ಅಪರಾಧಕ್ಕೆ ಒಂದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) ಮೇಯರ್ ಅಥವಾ ಉಪಮೇಯರ್ ನಗರಪಾಲಿಕೆಯಲ್ಲಿ ನಿಹಿತವಾದ ಅಥವಾ ಅದಕ್ಕೆ ಸೇರಿದ ಹಾಗೂ ತನ್ನ ಸ್ವಾಧೀನ ಅಥವಾ ನಿಯಂತ್ರಣದಲ್ಲಿರುವ ಅಥವಾ ತನ್ನ ಸ್ವಾಧೀನಕ್ಕೆ ಅಥವಾ ನಿಯಂತ್ರಣಕ್ಕೆ ಬಂದಿರುವ ಯಾವುದೇ ದಸ್ತಾವೇಜುಗಳನ್ನು ಅಥವಾ ಯಾವುದೇ ಹಣವನ್ನು ಅಥವಾ ಇತರ ಸ್ವತ್ತುಗಳನ್ನು ಮೇಯರ್ ಅಥವಾ ಉಪಮೇಯರ್ ಆಗಿ ಅವರ ಪದಾವಧಿಯು ಮುಕ್ತಾಯವಾದ ಕೂಡಲೇ ಪ್ರತಿಯೊಂದು ಸಂದರ್ಭದಲ್ಲಿ ಆ ಪದಕ್ಕೆ ಬಂದ ತನ್ನ ಉತ್ತರಾಧಿಕಾರಿಗೆ ಅಥವಾ ನಿಯಮಿತ ಪ್ರಾಧಿಕಾರಿಗೆ ಮತ್ತು ಉಪಮೇಯರ್ ಸಂದರ್ಭದಲ್ಲಿ ಮೇಯರ್‌ರವರು ತಗಾದೆ ಮಾಡಿದಾಗ ಸಹ ಒಪ್ಪಿಸಲು ತಪ್ಪಿದರೆ ಅಂಥ ಮೇಯರ್ ಅಥವಾ ಉಪಮೇಯರ್ ಅಪರಾಧ ನಿರ್ಣಯವಾದ ಮೇಲೆ ಅಂಥ ಪ್ರತಿಯೊಂದು ಅಪರಾಧಕ್ಕೆ ಒಂದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡಿತರಾಗತಕ್ಕದ್ದು.

**433. ಯಾರೇ ಕೌನ್ಸಿಲರ್, ಆಯುಕ್ತರು ಅಥವಾ ನಗರಪಾಲಿಕೆಯ ಯಾರೇ ಅಧಿಕಾರಿಯು ಕರಾರಿನಲ್ಲಿ ಅಥವಾ ಕಾಮಗಾರಿಯಲ್ಲಿ ಹಿತಾಸಕ್ತಿಯನ್ನು ಆರ್ಜಿಸಿದ್ದಕ್ಕೆ ದಂಡನೆ.–** ಯಾರೇ ಕೌನ್ಸಿಲರ್, ಆಯುಕ್ತರು ಅಥವಾ ನಗರಪಾಲಿಕೆಯ ಯಾರೇ ಅಧಿಕಾರಿಯು ಅಥವಾ ನೌಕರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸ್ವತಃ ತಾನೇ ಅಥವಾ ತನ್ನ ಕುಟುಂಬದ ಯಾರೇ ಸದಸ್ಯನ ಹೆಸರಿನಲ್ಲಿ ಅಥವಾ ಪಾಲುದಾರನ ಅಥವಾ ನಿಯೋಜಕನ ಅಥವಾ ನೌಕರನ ಮೂಲಕ, ನಗರಪಾಲಿಕೆಯೊಂದಿಗೆ, ನಗರಪಾಲಿಕೆಯು ಅಥವಾ ನಗರಪಾಲಿಕೆಯ ಪರವಾಗಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ನಿಯೋಜನೆಯಲ್ಲಿ ಯಾವುದೇ ವೈಯಕ್ತಿಕ ಪಾಲನ್ನು ಅಥವಾ ಹಿತಾಸಕ್ತಿಯನ್ನು ಗೊತ್ತಿದ್ದೂ ಆರ್ಜಿಸಿದರೆ ಅವನು ಭಾರತ ದಂಡ ಸಂಹಿತೆ 1860ರ 168ನೇ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಮಾಡಿರುವುದಾಗಿ ಭಾವಿಸತಕ್ಕದ್ದು:

ಪರಂತು, ಯಾರೇ ವ್ಯಕ್ತಿಯು, ಕಂಪನಿಯಲ್ಲಿ ಷೇರುದಾರನಾಗಿರುವ ಅಥವಾ ಅದರ ಸದಸ್ಯನಾಗಿರುವ ಕಾರಣದಿಂದ ಅವನು ಅಂಥ ಕಂಪನಿಯ ನಿರ್ದೇಶಕನಾಗಿದ್ದ ಹೊರತು ಅಂಥ ಕಂಪನಿಯ ಮತ್ತು ನಗರಪಾಲಿಕೆಯ ನಡುವೆ ಆದ ಯಾವುದೇ ಕರಾರಿನಲ್ಲಿ ಹಿತಾಸಕ್ತಿ ಉಳ್ಳವನೆಂದು ನಿರ್ಣಯಿಸತಕ್ಕದ್ದಲ್ಲ.

[1][434. **xxx**][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**435. ಬುದ್ಧಿಪೂರ್ವಕವಾಗಿ ಜಪ್ತಿಯನ್ನು ತಡೆಗಟ್ಟುವುದಕ್ಕೆ ದಂಡನೆ.–** ಯಾರೇ ವ್ಯಕ್ತಿಯು, ಅವನಿಂದ ಬಾಕಿ ಇರುವ ಯಾವುದೇ ತೆರಿಗೆಗಾಗಿ ಜಪ್ತಿಗೆ ಗುರಿಯಾಗಿರುವ ಸ್ವತ್ತಿನ ಜಪ್ತಿಯನ್ನು ಅಥವಾ ಸಾಕಾಗುವಷ್ಟು ಪ್ರಮಾಣದ ಸ್ವತ್ತಿನ ಜಪ್ತಿಯನ್ನು ಬುದ್ಧಿಪೂರ್ವಕವಾಗಿ ತಡೆಗಟ್ಟಿದರೆ, ಅವನು, ಮ್ಯಾಜಿಸ್ಟ್ರೇಟರನಿಂದ ಅಪರಾಧ ನಿರ್ಣಯವಾದ ಮೇಲೆ, ಬಾಕಿಯಿರುವುದಾಗಿ ಕಂಡುಬಂದ ತೆರಿಗೆಯ ಮೊಬಲಗಿನ ಎರಡರಷ್ಟನ್ನು ಮೀರದ ಜುಲ್ಮಾನೆಗೆ ಗುರಿಯಾಗತಕ್ಕದ್ದು.

**436. ಕಾನೂನುಬಾಹಿರ ಕಟ್ಟಡಕ್ಕೆ ದಂಡನೆ.–** (ಎ) ಯಾವುದೇ ಕಟ್ಟಡದ ಅಥವಾ ಬಾವಿಯ ನಿರ್ಮಾಣವನ್ನು ಅಥವಾ ಪುನರ್‌ನಿರ್ಮಾಣವನ್ನು,–

(i) ಆಯುಕ್ತರ ಅನುಮತಿಯಿಲ್ಲದೆ ಪ್ರಾರಂಭಿಸಿದ್ದರೆ; ಅಥವಾ

(ii) ಅಂಥ ಅನುಮತಿಯು ಯಾವ ವಿವರಗಳನ್ನು ಆಧರಿಸಿತ್ತೋ ಆ ವಿವರಗಳಿಗೆ ಅನುಸಾರವಾಗಿದೆಯಲ್ಲದೆ ಅನ್ಯಥಾ ಮಾಡಲಾಗಿದ್ದರೆ ಅಥವಾ ಪೂರ್ಣಗೊಳಿಸಿದ್ದರೆ; ಅಥವಾ

(iii) ಯಾವುದೇ ಕಾನೂನುಬದ್ಧ ಆದೇಶವನ್ನು ಉಲ್ಲಂಘಿಸಿ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮವನ್ನು ಅಥವಾ ಉಪವಿಧಿಯನ್ನು ಅಥವಾ ಕಾನೂನುಬದ್ಧವಾಗಿ ನೀಡಿದ ಯಾವುದೇ ನಿರ್ದೇಶನವನ್ನು ಅಥವಾ ಕಡ್ಡಾಯ ಸೂಚನೆಯನ್ನು ಉಲ್ಲಂಘಿಸಿ ಮಾಡಲಾಗಿದ್ದರೆ ಅಥವಾ ಪೂರ್ಣಗೊಳಿಸಿದ್ದರೆ; ಅಥವಾ

(ಬಿ) 308ನೇ ಪ್ರಕರಣದ ಅಥವಾ 320ನೇ ಪ್ರಕರಣದ ಮೇರೆಗೆ ಕೊಟ್ಟ ಯಾವುದೇ ನೋಟೀಸಿನ ಮೂಲಕ ಅಗತ್ಯಪಡಿಸಿದ ಯಾವುವೇ ಬದಲಾವಣೆಗಳನ್ನು ಅಥವಾ ಸೇರ್ಪಡೆಗಳನ್ನು ಕ್ರಮಬದ್ಧವಾಗಿ ಮಾಡಿಲ್ಲದಿದ್ದರೆ; ಅಥವಾ

(ಸಿ) 321ನೇ ಪ್ರಕರಣದ ಮೇರೆಗೆ ಕಟ್ಟಡವನ್ನು ಅಥವಾ ಬಾವಿಯನ್ನು ಬದಲಾಯಿಸಲು ಅಥವಾ ಕೆಡವಿಹಾಕಲು ಆಯುಕ್ತರು ಯಾರಿಗೆ ನಿರ್ದೇಶನವನ್ನು ಕೊಟ್ಟಿರುವರೋ ಆ ಯಾರೇ ವ್ಯಕ್ತಿಯು ಅಂಥ ನಿರ್ದೇಶನವನ್ನು ಪಾಲಿಸಲು ತಪ್ಪಿದರೆ

– ಸಂದರ್ಭಾನುಸಾರ ಆ ಕಟ್ಟಡದ ಅಥವಾ ಬಾವಿಯ ಮಾಲೀಕನು ಅಥವಾ ಸದರಿ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಬಾವಿಯ ಅಥವಾ ಗುಡಿಸಲಿನ ಸಂದರ್ಭದಲ್ಲಿ ಐವತ್ತು ರೂಪಾಯಿಗಳವರೆಗೆ ಮತ್ತು ಯಾವುದೇ ಇತರ ಕಟ್ಟಡದ ಸಂದರ್ಭದಲ್ಲಿ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗೆ, ಮತ್ತು ಮೊದಲನೇ ದಿವಸದ ತರುವಾಯ ಅಪರಾಧವು ಮುಂದುವರಿದಿರುವುದಾಗಿ ರುಜುವಾತಾದ ಅವಧಿಯಲ್ಲಿ ಪ್ರತಿಯೊಂದು ದಿವಸಕ್ಕೆ ಬಾವಿಯ ಅಥವಾ ಗುಡಿಸಲಿನ ಸಂದರ್ಭದಲ್ಲಿ ಹತ್ತು ರೂಪಾಯಿಗಳವರೆಗೆ ಮತ್ತು ಯಾವುದೇ ಇತರ ಕಟ್ಟಡದ ಸಂದರ್ಭದಲ್ಲಿ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಗೆ ಗುರಿಯಾಗತಕ್ಕದ್ದು.

[1][**436ಎ. ಭೂಮಿಯ ಅನಧಿಕೃತ ಅಧಿಭೋಗಕ್ಕೆ ನಿಷೇಧ.–** (1) ನಗರಪಾಲಿಕೆಗೆ ಸೇರಿದ ಯಾವ ಭೂಮಿಯನ್ನು ಬಳಸಲು ಅಥವಾ ಅಧಿಭೋಗಿಸಲು ತನಗೆ ಹಕ್ಕಿಲ್ಲವೋ ಅಥವಾ ಹಕ್ಕುಳ್ಳವನಾಗಿರುವುದು ನಿಂತುಹೋಗಿದೆಯೋ ಆ ಭೂಮಿಯನ್ನು ಅನಧಿಕೃತವಾಗಿ ಪ್ರವೇಶಿಸುವ ಮತ್ತು ಅದನ್ನು ಬಳಸುವ ಅಥವಾ ಅಧಿಭೋಗಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ, ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಕರ್ನಾಟಕ ನಗರಪಾಲಿಕೆಗಳ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 1984ರ ಪ್ರಾರಂಭವಾಗುವುದಕ್ಕೆ ಮುಂಚೆಯಾಗಲಿ ಅಥವಾ ತರುವಾಯವೇ ಆಗಲಿ, ಯಾರೇ ವ್ಯಕ್ತಿಯು ನಗರಪಾಲಿಕೆಗೆ ಸೇರಿದ ಯಾವ ಭೂಮಿಯನ್ನು ಬಳಸಲು ಅಥವಾ ಅಧಿಭೋಗಿಸಲು ತಾನು ಹಕ್ಕುಳ್ಳವನಾಗಿಲ್ಲವೋ ಅಥವಾ ಹಕ್ಕುಳ್ಳವನಾಗಿರುವುದು ನಿಂತು ಹೋಗಿದೆಯೋ ಆ ಯಾವುದೇ ಭೂಮಿಯನ್ನು ಅನಧಿಕೃತವಾಗಿ ಅಧಿಭೋಗಿಸುತ್ತಿದ್ದು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರ ಹೊರಹಾಕುವ) ಅಧಿನಿಯಮ, 1974ರ (1974ರ ಕರ್ನಾಟಕ ಅಧಿನಿಯಮ 32) 5ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೇರೆಗೆ ಮಾಡಿದ ಆದೇಶದ ಅನುಸಾರವಾಗಿ ಅಂಥ ಭೂಮಿಯನ್ನು ಖಾಲಿ ಮಾಡಲು ತಪ್ಪಿದರೆ, ಅಪರಾಧ ನಿರ್ಣಯವಾದ ಮೇಲೆ ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ಅಂಥ ಅಪರಾಧಕ್ಕಾಗಿ ಮೊದಲನೇ ಅಪರಾಧ ನಿರ್ಣಯದ ದಿನಾಂಕದ ತರುವಾಯ ಅಧಿಭೋಗವು ಮುಂದುವರಿಯುವ ಪ್ರತಿಯೊಂದು ದಿವಸಕ್ಕೆ ಭೂಮಿಯ ಪ್ರತಿ ಎಕರೆಗೆ ಅಥವಾ ಅದರ ಭಾಗಕ್ಕೆ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(3) ಉಪ–ಪ್ರಕರಣ (1)ರ ಅಥವಾ ಉಪ–ಪ್ರಕರಣ (2)ರ ಮೇರೆಗೆ ದಂಡನೀಯವಾದ ಅಪರಾಧ ಮಾಡಲು ಇತರ ಯಾರೇ ವ್ಯಕ್ತಿಗೆ ಉದ್ದೇಶಪೂರ್ವಕವಾಗಿ ನೆರವು ನೀಡುವ ಅಥವಾ ದುಷ್ಪ್ರೇರಣೆ ಮಾಡುವ ಯಾರೇ ಆಗಲಿ ಅಪರಾಧ ನಿರ್ಣಯವಾದ ಮೇಲೆ ಅಂಥ ಅಪರಾಧಕ್ಕಾಗಿ ಸದರಿ ಉಪ–ಪ್ರಕರಣಗಳ ಮೇರೆಗೆ ಉಪಬಂಧಿಸಿರುವಂಥದ್ದೇ ದಂಡನೆಯಿಂದ ದಂಡಿತನಾಗತಕ್ಕದ್ದು.][1]

1. 1984ರ ಅಧಿನಿಯಮ ಸಂಖ್ಯೆ 34ರ ಮೂಲಕ 26.6.1984 ರಿಂದ ಜಾರಿಗೆ ಬರುವಂತೆ 436ಎ ಪ್ರಕರಣವನ್ನು ಸೇರಿಸಲಾಗಿದೆ.

**437. ಸೇವೆಯಿಂದ ಬಿಡುಗಡೆ ಮಾಡುವುದಕ್ಕೆ ಮುಂಚೆ ನಗರಪಾಲಿಕೆಯ ಕೆಲವು ವರ್ಗದ ಅಧಿಕಾರಿಗಳಿಗೆ ಮತ್ತು ನೌಕರರಿಗೆ ನೋಟೀಸು ನೀಡುವುದು.–** (1) ತದ್ವಿರುದ್ಧವಾಗಿ ಲಿಖಿತ ಕರಾರು ಇಲ್ಲದಿರುವಾಗ, ಯಾರ ಪ್ರಕಾರ್ಯಗಳು ಸಾರ್ವಜನಿಕ ಆರೋಗ್ಯ ಮತ್ತು ಸುರಕ್ಷೆಗೆ ಸಂಬಂಧಿಸಿವೆಯೋ ನಗರಪಾಲಿಕೆಯ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು ದುರ್ವರ್ತನೆಗಾಗಿ ಅವನನ್ನು ಸೇವೆಯಿಂದ ಬಿಡುಗಡೆ ಮಾಡಿದ್ದ ಅಥವಾ ನಿರ್ದಿಷ್ಟ ಅವಧಿಗಾಗಿ ಅವನನ್ನು ಸೇವೆಯಲ್ಲಿ ತೊಡಗಿಸಿದ್ದ ಮತ್ತು ಆ ಅವಧಿಯ ಕೊನೆಯಲ್ಲಿ ಸೇವೆಯಿಂದ ಬಿಡುಗಡೆ ಮಾಡಿದ್ದ ಹೊರತು, ಸೇವೆಯಿಂದ ಬಿಡುಗಡೆ ಮಾಡುವ ಮುಂಚೆ ಒಂದು ತಿಂಗಳ ನೋಟೀಸಿಗೆ ಅಥವಾ ಅದರ ಬದಲಾಗಿ ಒಂದು ತಿಂಗಳ ಮಜೂರಿಗೆ ಹಕ್ಕುಳ್ಳವನಾಗಿರತಕ್ಕದ್ದು.

(2) ನಗರಪಾಲಿಕೆಯು ನಿಯೋಜಿಸಿಕೊಂಡಿರುವ ಅಂಥ ಯಾರೇ ಅಧಿಕಾರಿಯು ಅಥವಾ ನೌಕರನು, ನಗರಪಾಲಿಕೆಗೆ ಒಂದು ತಿಂಗಳ ನೋಟೀಸು ಕೊಡದೆಯೇ ತನ್ನ ಉದ್ಯೋಗಕ್ಕೆ ರಾಜೀನಾಮೆ ಕೊಡಲು ಅಥವಾ ತನ್ನ ಕರ್ತವ್ಯಗಳಿಗೆ ಸ್ವತಃ ಗೈರುಹಾಜರಾಗಲು ಅಥವಾ ಅವನನ್ನು ಅಧಿಕೃಗೊಳಿಸುವ ಲಿಖಿತ ಕರಾರು ಇಲ್ಲದಿರುವಾಗ ಮತ್ತು ಯುಕ್ತಕಾರಣವಿಲ್ಲದೆ ಅವನು ಹಾಗೆ ಮಾಡಿದರೆ ಅಥವಾ ತನ್ನ ಕರ್ತವ್ಯಗಳನ್ನು ಅಥವಾ ಅವುಗಳಲ್ಲಿ ಯಾವುದನ್ನೇ ಆದರೂ ನೆರವೇರಿಸಲು ಉಪೇಕ್ಷಿಸಿದರೆ ಅಥವಾ ನಿರಾಕರಿಸಿದರೆ ಅವನು ಅಪರಾಧ ನಿರ್ಣಯವಾದ ಮೇಲೆ ಐವತ್ತು ರೂಪಾಯಿಗಳಿಗೆ ಮೀರದ ಜುಲ್ಮಾನೆಗೆ ಅಥವಾ ಎರಡು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಎರಡರಲ್ಲೊಂದು ಬಗೆಯ ಕಾರಾವಾಸಕ್ಕೆ ಗುರಿಯಾಗತಕ್ಕದ್ದು.

**438. ಆಯುಕ್ತರನ್ನು ಮತ್ತು ಅವರ ಪ್ರತಿನಿಧಿಗಳನ್ನು ಅಕ್ರಮವಾಗಿ ತಡೆಯುವುದು.–** ಆಯುಕ್ತರನ್ನು ಅಥವಾ ಅವರ ಅಧಿಕಾರಗಳನ್ನು ಕಾನೂನುಬದ್ಧವಾಗಿ ಯಾವ ವ್ಯಕ್ತಿಗೆ ಆಯುಕ್ತರು ವಹಿಸಿರುವರೋ, ಆ ಯಾರೇ ವ್ಯಕ್ತಿಯನ್ನು ಯಾವುದೇ ಭೂಮಿಯ ಮೇಲೆ ಅಥವಾ ಯಾವುದೇ ಕಟ್ಟಡದೊಳಕ್ಕೆ ಪ್ರವೇಶಿಸುವ ಅವರ ಅಧಿಕಾರವನ್ನು ಚಲಾಯಿಸದಂತೆ ತಡೆಯುವ ಪ್ರತಿಯೊಬ್ಬ ವ್ಯಕ್ತಿಯು, ಭಾರತ ದಂಡ ಸಂಹಿತೆಯ 341ನೇ ಪ್ರಕರಣದ ಮೇರೆಗೆ ಅಪರಾಧ ಮಾಡಿರುವುದಾಗಿ ಭಾವಿಸತಕ್ಕದ್ದು.

**439. ಮಾಹಿತಿ ಕೊಡದಿರುವುದಕ್ಕೆ ಅಥವಾ ಸುಳ್ಳು ಮಾಹಿತಿಯನ್ನು ಕೊಟ್ಟಿದ್ದಕ್ಕೆ ದಂಡನೆ.–** ಯಾವುದೇ ಮಾಹಿತಿಯನ್ನು ಒದಗಿಸಲು, ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಈ ಅಧಿನಿಯಮದ ಮೇರೆಗೆ ಹೊರಡಿಸಲಾದ ಯಾವುದೇ ನೋಟೀಸಿನ ಅಥವಾ ಇತರ ವ್ಯವಹರಣೆಗಳ ಮೂಲಕ ಯಾವ ವ್ಯಕ್ತಿಯನ್ನು ಅಗತ್ಯಪಡಿಸಲಾಗಿದೆಯೋ ಆ ಯಾರೇ ವ್ಯಕ್ತಿಯು,–

(ಎ) ಅದನ್ನು ಒದಗಿಸಲು ತಪ್ಪಿದರೆ; ಅಥವಾ

(ಬಿ) ತಿಳಿದೂ ತಿಳಿದೂ ಅಥವಾ ನಿರ್ಲಕ್ಷ್ಯತೆಯಿಂದ ಸುಳ್ಳು ಮಾಹಿತಿಯನ್ನು ಒದಗಿಸಿದರೆ

– ಅಂಥ ವ್ಯಕ್ತಿಯೂ, ಅಪರಾಧ ನಿರ್ಣಯವಾದ ಮೇಲೆ ಒಂದು ನೂರು ರೂಪಾಯಿಗಳಿಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**440. 150ನೇ ಪ್ರಕರಣದ ಮತ್ತು IXನೇ ಅನುಸೂಚಿಯ ಮೇರೆಗಿನ ಕಡ್ಡಾಯ ಸೂಚನೆಯ ಉಲ್ಲಂಘನೆಗೆ ದಂಡನೆ.–** 150ನೇ ಪ್ರಕರಣದ ಮತ್ತು IXನೇ ಅನುಸೂಚಿಯ ಮೇರೆಗೆ ಕಾನೂನುಬದ್ಧವಾಗಿ ತನಗೆ ನೀಡಿದ ಯಾವುದೇ ಕಡ್ಡಾಯ ಸೂಚನೆಯನ್ನು ಪಾಲಿಸಲು ಬುದ್ಧಿಪೂರ್ವಕವಾಗಿ ನಿರ್ಲಕ್ಷಿಸುವ ಅಥವಾ ನಿರಾಕರಿಸುವ ಯಾರೇ ವ್ಯಕ್ತಿಯು, ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು:

ಪರಂತು, ಆಯುಕ್ತರ ಲಿಖಿತ ಮಂಜೂರಾತಿ ಪಡೆದ ಹೊರತು, ಈ ಪ್ರಕರಣದ ಮೇರೆಗೆ ಯಾವುವೇ ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ಮಂಜೂರಾತಿಯನ್ನು ಕೊಡುವುದಕ್ಕೆ ಮುಂಚೆ ಆಯುಕ್ತರು, ಯಾರ ವಿರುದ್ಧ ವ್ಯವಹರಣೆಗಳನ್ನು ಹೂಡಬೇಕಾಗಿದೆಯೋ ಅಂಥ ವ್ಯಕ್ತಿಯನ್ನು ಮಂಜೂರಾತಿಯನ್ನು ಏಕೆ ಕೊಡಬಾರದು ಎಂಬ ಬಗ್ಗೆ ಕಾರಣ ತೋರಿಸುವಂತೆ ಅಗತ್ಯಪಡಿಸತಕ್ಕದ್ದು.

**441. ನಗರಪಾಲಿಕೆಯ ಸ್ವತ್ತಿನ ಅನಧಿಕೃತ ಬಳಕೆಗೆ ದಂಡನೆ.–** ಯಾರೇ ಆಗಲಿ, ನಗರಪಾಲಿಕೆಯ ಯಾವುದೇ ಸ್ವತ್ತನ್ನು ಅಪ್ರಾಮಾಣಿಕವಾಗಿ ದುರುಪಯೋಗಪಡಿಸಿಕೊಂಡರೆ ಅಥವಾ ತನ್ನ ಸ್ವಂತ ಬಳಕೆಗೆ ಪರಿವರ್ತಿಸಿಕೊಂಡರೆ ಅಥವಾ ಅಂಥ ಸ್ವತ್ತನ್ನು ಅನುಚಿತ ಅಥವಾ ಅನಧಿಕೃತ ಬಳಕೆಗೆ ತೊಡಗಿಸಿದರೆ, ಅವನು, ಅಪರಾಧ ನಿರ್ಣಯವಾದ ಮೇಲೆ ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**442. ಸಾರ್ವಜನಿಕ ಬೀದಿಯಲ್ಲಿ ಅಪಾಯಕರವಾದ ಸ್ಥಿತಿಯಲ್ಲಿ ವಾಹನವನ್ನು ಮತ್ತು ಪ್ರಾಣಿಯನ್ನು ಬಿಟ್ಟಿರುವುದಕ್ಕಾಗಿ ದಂಡನೆ.–** (1) ವಾಹನದ ಅಥವಾ ಪ್ರಾಣಿಯ ಜವಬ್ದಾರಿಯನ್ನು ಹೊಂದಿರುವ ಯಾರೇ ವ್ಯಕ್ತಿಯು, ಯಾವುದೇ ಸಾರ್ವಜನಿಕ ಬೀದಿಯಲ್ಲಿ ಅಥವಾ ಸಾರ್ವಜನಿಕ ಸ್ಥಳದಲ್ಲಿ ಸಾರ್ವಜನಿಕ ಬೀದಿಯ ಇತರೆ ಬಳಕೆದಾರರಿಗೆ ಅಪಾಯ, ಅಡ್ಡಿ ಅಥವಾ ಅನುಚಿತ ಅನಾನುಕೂಲ ಅಥವಾ ಉಪದ್ರವವನ್ನು ಉಂಟುಮಾಡುವ ಅಥವಾ ಉಂಟುಮಾಡುವ ಸಂಭವವಿರುವಂಥ ಸ್ಥಿತಿಯಲ್ಲಿ ಅಥವಾ ಅಂಥ ಪರಿಸ್ಥಿತಿಯಲ್ಲಿ ಅಥವಾ ಸಂದರ್ಭಗಳಲ್ಲಿ ವಾಹನವು ಅಥವಾ ಪ್ರಾಣಿಯು ನಿಲ್ಲಲು ಕಾರಣನಾಗತಕ್ಕದ್ದಲ್ಲ ಅಥವಾ ಅದಕ್ಕೆ ಅವಕಾಶ ಕೊಡತಕ್ಕದ್ದಲ್ಲ ಮತ್ತು ವಾಹನದ ಅಥವಾ ಪ್ರಾಣಿಯ ಜವಬ್ದಾರಿಯನ್ನು ಹೊಂದಿರುವ ಯಾರೇ ವ್ಯಕ್ತಿಯು ಯಾವುದೇ ವಾಹನವು ಅಥವಾ ಪ್ರಾಣಿಯು ಸರಿಯಾದ ನಿಯಂತ್ರಣದಲ್ಲಿದ್ದ ಹೊರತು ಅದನ್ನು ಸಾರ್ವಜನಿಕ ಬೀದಿಯಲ್ಲಿ ಅಥವಾ ಸಾರ್ವಜನಿಕ ಸ್ಥಳದಲ್ಲಿ ನಿಲ್ಲಲು ಅವಕಾಶ ಕೊಡತಕ್ಕದ್ದಲ್ಲ.

(2) ಉಪ–ಪ್ರಕರಣ (1)ನ್ನು ಉಲ್ಲಂಘಿಸುವ ಯಾರೇ ಆಗಲಿ, ಅಪರಾಧ ನಿರ್ಣಯವಾದ ಮೇಲೆ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

## ಅಧ್ಯಾಯ – XXI

## ಕಾರ್ಯವಿಧಾನ ಮತ್ತು ಸಂಕೀರ್ಣ

**443. ಲೈಸೆನ್ಸುಗಳು, ನೋಂದಣೆಗಳು ಮತ್ತು ಅನುಮತಿಗಳಿಗೆ ಸಂಬಂಧಿಸಿದ ಸಾಮಾನ್ಯ ಉಪಬಂಧಗಳು.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ ಮೇರೆಗೆ ನೀಡಿದ ಪ್ರತಿಯೊಂದು ಲೈಸೆನ್ಸಿನಲ್ಲಿ ಅಥವಾ ಅನುಮತಿಯಲ್ಲಿ ಯಾವುದಾದರೂ ಅವಧಿಗೆ ಅದನ್ನು ಕೊಟ್ಟಿದ್ದರೆ ಆ ಅವಧಿಯನ್ನು ಮತ್ತು ಯಾವ ನಿರ್ಬಂಧಗಳು, ಪರಿಮಿತಿಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಅದನ್ನು ಕೊಡಲಾಗಿದೆಯೋ ಆ ನಿರ್ಬಂಧಗಳನ್ನು, ಪರಿಮಿತಿಗಳನ್ನು ಮತ್ತು ಷರತ್ತುಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಆಯುಕ್ತರು ಅದಕ್ಕೆ ರುಜು ಹಾಕತಕ್ಕದ್ದು.

(2) (ಎ) ಈ ಅಧಿನಿಯಮದ ಮೇರೆಗೆ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿದಂತೆ ಅಥವಾ ನಿಯಮಿಸಬಹುದಾದಂತೆ ಹೊರತು ಅಂಥ ಪ್ರತಿಯೊಂದು ಲೈಸೆನ್ಸ್‌ಗಾಗಿ ಅಥವಾ ಅನುಮತಿಗಾಗಿ ನಗರಪಾಲಿಕೆಯು ನಿಗದಿಪಡಿಸಬಹುದಾದಂಥ ಯೂನಿಟ್ಟುಗಳ ಮೇಲೆ ಮತ್ತು ಅಂಥ ದರಗಳಲ್ಲಿ ಫೀಜನ್ನು ಮುಂಚಿತವಾಗಿ ಸಂದಾಯ ಮಾಡತಕ್ಕದ್ದು:

ಪರಂತು, Xನೇ ಅನುಸೂಚಿಯ ಒಂದಕ್ಕಿಂತ ಹೆಚ್ಚು ಶೀರ್ಷಿಕೆಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಉದ್ದೇಶದ ಸಂಬಂಧದಲ್ಲಿ ಅಂಥ ಪ್ರತಿಯೊಂದು ಶೀರ್ಷಿಕೆಗಳು, ತಯಾರಿಕೆಯ ನಿರಂತರ ಕಾರ್ಯವಿಧಾನದ ಭಾಗವಾಗಿದ್ದರೆ, ಒಂದಕ್ಕಿಂತ ಹೆಚ್ಚು ಫೀಜನ್ನು ವಿಧಿಸತಕ್ಕದ್ದಲ್ಲ ಮತ್ತು ಹಾಗೆ ವಿಧಿಸಿದ ಫೀಜು ಸದರಿ ಉದ್ದೇಶಗಳಲ್ಲಿ ಯಾವುದಾದರೂ ಒಂದು ಉದ್ದೇಶಕ್ಕೆ ಸಂಬಂಧಿಸಿದಂತೆ ವಿಧಿಸಬಹುದಾದ ಅತಿ ಹೆಚ್ಚಿನ ಫೀಜನ್ನು ಮೀರತಕ್ಕದ್ದಲ್ಲ:

[1][ಮತ್ತೂ ಪರಂತು, ಈ ಅದಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಲೈಸೆನ್ಸು, ನೋಂದಣಿ ಅಥವಾ ಅನುಮತಿಗಾಗಿ ಅರ್ಜಿದಾರನು ಐದು ವರ್ಷಗಳ ಅವಧಿಗೆ ಅಥವಾ ಆತ ಇಷ್ಟಪಟ್ಟರೆ ಅಂಥ ಅವಧಿಯ ಮೊದಲ ವರ್ಷದ ಪ್ರಾರಂಭದಿಂದ ಪ್ರತಿಯೊಂದು ವರ್ಷಕ್ಕೆ ಫೀಜನ್ನು ಇಡಿ ಗಂಟಿನಲ್ಲಿ ಮುಂಚಿತವಾಗಿ ಸಂದಾಯ ಮಾಡಬಹುದು][1].

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ನಗರಪಾಲಿಕೆಯು ಯಾವುದೇ ಗಿರಣಿಯ ಅಥವಾ ಕಾರ್ಖಾನೆಯ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜಿನ ಬದಲಾಗಿ ಸಂದಾಯ ಮಾಡಬೇಕಾಗಿರುವ ನಿಶ್ಚಿತ ಮೊತ್ತಕ್ಕಾಗಿ ಅಂಥ ಗಿರಣಿಯ ಅಥವಾ ಕಾರ್ಖಾನೆಯ ಮಾಲೀಕನೊಂದಿಗೆ ಒಂದು ಬಾರಿಗೆ [1][ಐದು ವರ್ಷಗಳಿಗೆ][1] ಮೀರದ ಯಾವುದೇ ಅವಧಿಗೆ ರಾಜಿ ಒಪ್ಪಂದ ಮಾಡಿಕೊಳ್ಳಬಹುದು.

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 16.6.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಸಿ) ಲೈಸೆನ್ಸನ್ನು ಅಥವಾ ಅನುಮತಿಯನ್ನು ಕೊಡುವ ಅಥವಾ ನಿರಾಕರಿಸುವ ಆಯುಕ್ತರ ಅಥವಾ ಇತರ ಪೌರ ಪ್ರಾಧಿಕಾರದ ಪ್ರತಿಯೊಂದು ಆದೇಶವನ್ನು ನಗರಪಾಲಿಕೆಯ ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು.

(3) ಲೈಸೆನ್ಸನ್ನು ಅಥವಾ ಅನುಮತಿಯನ್ನು ನಿರಾಕರಿಸುವ ಅಮಾನತುಗೊಳಿಸುವ, ರದ್ದುಪಡಿಸುವ ಅಥವಾ ಮಾರ್ಪಾಟು ಮಾಡುವ ಆಯುಕ್ತರ ಅಥವಾ ಇತರ ಪೌರ ಪ್ರಾಧಿಕಾರದ ಪ್ರತಿಯೊಂದು ಆದೇಶವು ಲಿಖಿತದಲ್ಲಿರತಕ್ಕದ್ದು ಮತ್ತು ಯಾವ ಕಾರಣಗಳ ಮೇಲೆ ಅದನ್ನು ಮಾಡಲಾಗಿದೆ ಎಂಬುದನ್ನು ಅದರಲ್ಲಿ ತಿಳಿಸತಕ್ಕದ್ದು.

(4) [1][ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ][1], ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ ಮೇರೆಗೆ ನೀಡಿದ ಯಾವುದೇ ಲೈಸೆನ್ಸನ್ನು ಅಥವಾ ಅನುಮತಿಯನ್ನು, ಆಯುಕ್ತರು, ಲೈಸೆನ್ಸನ್ನು ಅಥವಾ ಅನುಮತಿಯನ್ನು ಪಡೆದಿರುವವನು ಅದರ ನಿರ್ಬಂಧಗಳಲ್ಲಿ ಅಥವಾ ಷರತ್ತುಗಳಲ್ಲಿ ಯಾವುದನ್ನಾದರೂ ಭಂಗಮಾಡಿದ್ದರೆ ಅಥವಾ ಉಲ್ಲಂಘಿಸಿದ್ದರೆ ಅಥವಾ ಅಂಥ ಲೈಸೆನ್ಸ್

ಅಥವಾ ಅನುಮತಿಯು ಯಾವ ವಿಷಯಕ್ಕೆ ಸಂಬಂಧಿಸಿದೆಯೋ ಆ ಯಾವುದೇ ವಿಷಯದಲ್ಲಿ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಗಾಗಿ ಮಂಜೂರಾತಿ ಪಡೆದವನು ಅಪರಾಧಿಯೆಂದು ನಿರ್ಣೀತನಾದರೆ ಅಥವಾ ಅವನು ಅದನ್ನು ತಪ್ಪು ನಿರೂಪಣೆಯಿಂದ ಅಥವಾ ಮೋಸದಿಂದ ಪಡೆದಿದ್ದರೆ, ಯಾವುದೇ ಕಾಲದಲ್ಲಿ ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(5) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಯಾವ ಸ್ಥಳಗಳಿಗೆ ಸಂಬಂಧಿಸಿದಂತೆ ಲೈಸೆನ್ಸ್ ಅಥವಾ ಅನುಮತಿಯನ್ನು ಅಗತ್ಯಪಡಿಸಲಾಗಿದೆಯೋ ಆ ಯಾವುದೇ ಸ್ಥಳಗಳನ್ನು ಪರಿಶೀಲಿಸುವುದು ಆಯುಕ್ತರ ಕರ್ತವ್ಯವಾಗಿರತಕ್ಕದ್ದು ಮತ್ತು ಅವರು, ಅಂಥ ಸ್ಥಳವನ್ನು ಸೂರ್ಯೋದಯ ಮತ್ತು ಸೂರ್ಯಾಸ್ತಮಾನದ ನಡುವೆ ಪ್ರವೇಶಿಸಬಹುದು ಮತ್ತು ಆ ಕಾಲದಲ್ಲಿ ಅದು ಸಾರ್ವಜನಿಕರಿಗೆ ತೆರೆದಿದ್ದರೆ ಅಥವಾ ಯಾವುದೇ ಕೈಗಾರಿಕೆಯನ್ನು ನಡೆಸಲಾಗುತ್ತಿದ್ದರೆ ಸೂರ್ಯಾಸ್ತಮಾನ ಮತ್ತು ಸೂರ್ಯೋದಯದ ನಡುವೆಯೂ ಸಹ ಪ್ರವೇಶಿಸಬಹುದು ಮತ್ತು ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ, ಲೈಸೆನ್ಸು ಅಥವಾ ಅನುಮತಿಯನ್ನು ಪಡೆಯಲು ಅಗತ್ಯಪಡಿಸಿರುವಲ್ಲಿ, ಲೈಸೆನ್ಸ್ ಅಥವಾ ಅನುಮತಿ ಇಲ್ಲದೆಯೇ ಅಥವಾ ಅದಕ್ಕನುಗುಣವಾಗಿ ಅಲ್ಲದೆ ಅನ್ಯಥಾ ಯಾವುದೇ ಸ್ಥಳದಲ್ಲಿ ಯಾವುದೇ ಕಾರ್ಯವನ್ನು ನಿರ್ವಹಿಸಲಾಗುತ್ತಿದೆ ಎಂದು ಅವರಿಗೆ ನಂಬಲು ಕಾರಣವಿದ್ದರೆ, ಅವರು ಕಾನೂನಿನ ಯಾವುದೇ ಉಪಬಂಧವನ್ನು, ನಿಯಮಗಳನ್ನು, ಉಪವಿಧಿಗಳನ್ನು, ವಿನಿಯಮಗಳನ್ನು, ಲೈಸೆನ್ಸಿನ ಅಥವಾ ಅನುಮತಿಯ ಯಾವುದೇ ಷರತ್ತನ್ನು ಅಥವಾ ಯಾವುದೇ ಕಾನೂನುಬದ್ಧ ನಿರ್ದೇಶನವನ್ನು ಅಥವಾ ನಿಷೇಧವನ್ನು ಉಲ್ಲಂಘಿಸಲಾಗುತ್ತಿದೆಯೇ ಹೇಗೆ ಎಂಬುದನ್ನು ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಅಂಥ ಸ್ಥಳವನ್ನು ನೋಟೀಸು ಕೊಡದೆಯೇ ಹಗಲು ಅಥವಾ ರಾತ್ರಿಯ ಯಾವುದೇ ಕಾಲದಲ್ಲಿ ಪ್ರವೇಶಿಸಬಹುದು ಮತ್ತು ಆಯುಕ್ತರು ಅಥವಾ ಅವರು ಯಾವ ವ್ಯಕ್ತಿಗೆ ಕಾನೂನುಬದ್ಧವಾಗಿ ತಮ್ಮ ಅಧಿಕಾರಗಳನ್ನು ವಹಿಸಿರುವವರೋ ಆ ಯಾರೇ ವ್ಯಕ್ತಿಯು, ಈ ಉಪ-ಪ್ರಕರಣದ ಮೇರೆಗೆ ಅಧಿಕಾರಗಳನ್ನು ಚಲಾಯಿಸಿದ್ದರಿಂದಾಗಿ ಅಥವಾ ಈ ಉಪಪ್ರಕರಣದ ಮೇರೆಗೆ ಪ್ರವೇಶ ಮಾಡುವುದಕ್ಕಾಗಿ ಅವಶ್ಯವಾದ ಯಾವುದೇ ಬಲಪ್ರಯೋಗ ಮಾಡಿದ್ದರಿಂದಾಗಿ ಉಂಟಾದ ಯಾವುದೇ ಹಾನಿಗಾಗಿ ಅಥವಾ ಅನಾನುಕೂಲತೆಗಾಗಿ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ಕ್ಲೇಮನ್ನು ಮಾಡತಕ್ಕದ್ದಲ್ಲ.

(6) ಯಾವುದೇ ಲೈಸೆನ್ಸನ್ನು ಅಥವಾ ಅನುಮತಿಯನ್ನು ಅಮಾನತುಗೊಳಿಸಿದಾಗ ಅಥವಾ ರದ್ದುಮಾಡಿದಾಗ ಅಥವಾ ಯಾವ ಅವಧಿಗೆ ಅದನ್ನು ಮಂಜೂರು ಮಾಡಲಾಗಿತ್ತೋ ಆ ಅವಧಿಯು ಅಥವಾ ನವೀಕರಣಕ್ಕಾಗಿ ಯಾವ ಅವಧಿಯೊಳಗಾಗಿ ಅರ್ಜಿಯನ್ನು ಸಲ್ಲಿಸಬೇಕಾಗಿತ್ತೋ ಆ ಅವಧಿಯು ಮುಕ್ತಾಯವಾದಾಗ ಅದನ್ನು ಪಡೆದವನನ್ನು, ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ ಎಲ್ಲ ಉದ್ದೇಶಗಳಿಗಾಗಿ, ಸಂದರ್ಭಾನುಸಾರ, ಲೈಸೆನ್ಸನ್ನು ಅಥವಾ ಅನುಮತಿಯನ್ನು ಅಮಾನತುಗೊಳಿಸುವ ಅಥವಾ ರದ್ದುಗೊಳಿಸುವ ಆದೇಶವು ರದ್ದಾಗುವವರೆಗೆ ಅಥವಾ (10)ನೇ ಉಪ-ಪ್ರಕರಣಕ್ಕೆ ಒಳಪಟ್ಟು ಲೈಸೆನ್ಸನ್ನು ಅಥವಾ ಅನುಮತಿಯನ್ನು ನವೀಕರಿಸುವವರೆಗೆ ಲೈಸೆನ್ಸು ಅಥವಾ ಅನುಮತಿ ಇಲ್ಲದವನೆಂದು ಭಾವಿಸತಕ್ಕದ್ದು.

(7) ಯಾವುದೇ ಲೈಸೆನ್ಸನ್ನು ಅಥವಾ ಅನುಮತಿಯನ್ನು ಪಡೆದ ಪ್ರತಿಯೊಬ್ಬನೂ ಅಂಥ ಲೈಸೆನ್ಸ್ ಅಥವಾ ಅನುಮತಿಯು ಜಾರಿಯಲ್ಲಿರುವಾಗ ಎಲ್ಲಾ ಯುಕ್ತ ಕಾಲದಲ್ಲಿ ಆಯುಕ್ತರು ಕೇಳಿದಾಗ ಅದನ್ನು ಹಾಜರುಪಡಿಸತಕ್ಕದ್ದು.

(8) ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ ಮೂಲಕ ಅಗತ್ಯಪಡಿಸಿದ ಲೈಸೆನ್ಸನ್ನು ಅಥವಾ ಅನುಮತಿಯನ್ನು ಪಡೆಯಲು ಅಥವಾ ನೋಂದಣಿಯನ್ನು ಮಾಡಲು ತಪ್ಪಿದ್ದಕ್ಕೆ ಸಂಬಂಧಿಸಿದ, ಅಪರಾಧದ ಬಗ್ಗೆ ಯಾರೇ ವ್ಯಕ್ತಿಯು ಅಪರಾಧಿಯೆಂದು ನಿರ್ಣೀತನಾದಾಗಲೆಲ್ಲಾ ಮ್ಯಾಜಿಸ್ಟ್ರೇಟರು, ವಿಧಿಸಬಹುದಾದ ಯಾವುದೇ ಜುಲ್ಮಾನೆಯ ಜೊತೆಗೆ, ಲೈಸೆನ್ಸಿಗಾಗಿ ಅಥವಾ ಅನುಮತಿಗಾಗಿ ಅಥವಾ ನೋಂದಣಿಗಾಗಿ ವಿಧಿಸಬಹುದಾದ ಫೀಜಿನ ಮೊಬಲಗನ್ನು ಕ್ಷಿಪ್ರವಾಗಿ ವಸೂಲಿ ಮಾಡತಕ್ಕದ್ದು ಮತ್ತು ಅದನ್ನು ನಗರಪಾಲಿಕೆಗೆ ಸಂದಾಯ ಮಾಡತಕ್ಕದ್ದು ಮತ್ತು ಪ್ರಾಸಿಕ್ಯೂಷನ್ನಿನ ವೆಚ್ಚವಾಗಿ ಅವರು ನಿಗದಿಪಡಿಸಬಹುದಾದಂಥ ಮೊಬಲಗು ಯಾವುದಾದರೂ ಇದ್ದರೆ ಅದನ್ನು ತಮ್ಮ ವಿವೇಚನೆಯಂತೆ ಕ್ಷಿಪ್ರವಾಗಿ ವಸೂಲಿ ಮಾಡಬಹುದು ಮತ್ತು ಅದನ್ನು ನಗರಪಾಲಿಕೆಗೆ ಸಂದಾಯ ಮಾಡಬಹುದು.

(9) ಉಪ-ಪ್ರಕರಣ (8)ರ ಮೇರೆಗೆ ಫೀಜಿನ ಅಂಥ ವಸೂಲಾತಿಯು, ಅಪರಾಧಿಯೆಂದು ನಿರ್ಣೀತನಾದ ವ್ಯಕ್ತಿಯನ್ನು, ಮೇಲೆ ಹೇಳಿದಂತೆ ಲೈಸೆನ್ಸಿಗೆ ಅಥವಾ ಅನುಮತಿಗೆ ಅಥವಾ ನೋಂದಣಿಗೆ ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ.

(10) ನಗರಪಾಲಿಕೆಯು, ಲೈಸೆನ್ಸಿಗಾಗಿ ಅಥವಾ ಅನುಮತಿಗಾಗಿ ಅಥವಾ ನೋಂದಣಿಗಾಗಿ ಫೀಜನ್ನು ಮುಂಚಿತವಾಗಿಯೇ ಸಂದಾಯ ಮಾಡುವುದನ್ನು ಅಂಗೀಕರಿಸುವುದು, ಹಾಗೆ ಮುಂಚಿತವಾಗಿಯೇ ಸಂದಾಯ ಮಾಡುವ ವ್ಯಕ್ತಿಯನ್ನು ಸಂದರ್ಭಾನುಸಾರ ಲೈಸೆನ್ಸಿಗೆ ಅಥವಾ ಅನುಮತಿಗೆ ಅಥವಾ ನೋಂದಣಿಗೆ ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ. ಆದರೆ, ಲೈಸೆನ್ಸನ್ನು ಅಥವಾ ಅನುಮತಿಯನ್ನು ಅಥವಾ ನೋಂದಣಿಯನ್ನು ನಿರಾಕರಿಸಿದ ಸಂದರ್ಭದಲ್ಲಿ ಫೀಜಿನ ಮರುಪಾವತಿಗೆ ಮಾತ್ರ ಹಕ್ಕುಳ್ಳವನನ್ನಾಗಿಸತಕ್ಕದ್ದು; ಆದರೆ ಲೈಸೆನ್ಸಿನ ಅಥವಾ ಅನುಮತಿಯ ಅಥವಾ ನೋಂದಣಿಯ ನವೀಕರಣಕ್ಕಾಗಿ ಕೋರಿರುವ ಅರ್ಜಿದಾರನು, ಅವನ ಅರ್ಜಿಯ ಮೇಲಿನ ಆದೇಶವನ್ನು ಅವನಿಗೆ ತಿಳಿಸುವವರೆಗೆ, ಲೈಸೆನ್ಸ್‌ನ್ನು ಅಥವಾ ಅನುಮತಿಯನ್ನು ಅಥವಾ ನೋಂದಣಿಯನ್ನು ನವೀಕರಿಸಲಾಗಿದ್ದರೆ ಹೇಗೋ ಹಾಗೆ ಕಾರ್ಯನಿರ್ವಹಿಸಲು ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಈ ಅಧಿನಿಯಮದಲ್ಲಿ ಅನ್ಯಥಾ ವಿಶೇಷವಾಗಿ ಉಪಬಂಧಿಸಿದ್ದ ಹೊರತು, ಲೈಸೆನ್ಸ್‌ಗಾಗಿ, ಅನುಮತಿಗಾಗಿ ಅಥವಾ ನೋಂದಣಿಗಾಗಿ ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ತರುವಾಯ ನಲವತ್ತೈದು ದಿನಗಳ ಒಳಗಾಗಿ ಆ ಅರ್ಜಿಯ ಮೇಲೆ ಅರ್ಜಿದಾರನಿಗೆ ಆದೇಶಗಳನ್ನು ತಿಳಿಸದಿದ್ದರೆ ಆ ವರ್ಷಕ್ಕಾಗಿ ಅಥವಾ ಅರ್ಜಿಯಲ್ಲಿ ನಮೂದಿಸಿದಂಥ ಇನ್ನೂ ಕಡಿಮೆ ಅವಧಿಗಾಗಿ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ, ನಿಯಮಗಳಿಗೆ, ಉಪ-ವಿಧಿಗಳಿಗೆ, ವಿನಿಯಮಗಳಿಗೆ ಮತ್ತು ಸಾಧಾರಣವಾಗಿ ವಿಧಿಸಿದ ಎಲ್ಲಾ ಷರತ್ತುಗಳಿಗೆ ಒಳಪಟ್ಟು ಅರ್ಜಿಯನ್ನು ಅಂಗೀಕರಿಸಿರುವುದಾಗಿ ಭಾವಿಸತಕ್ಕದ್ದು.

[1][**443ಎ. ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಅಥವಾ ಜಿಲ್ಲಾ ನ್ಯಾಯಾಲಯಕ್ಕೆ ಅಪೀಲು.**– (1) 308ನೇ, 309ನೇ, 321(3)ನೇ ಪ್ರಕರಣಗಳ ಮೇರೆಗೆ ಆಯುಕ್ತರು ನೀಡಿದ ಯಾವುದೇ ನೋಟೀಸಿನಿಂದ ಕೈಗೊಂಡ ಕ್ರಮದಿಂದ ಅಥವಾ ಕೈಗೊಳ್ಳಲು ಉದ್ದೇಶಿಸಿದ ಕ್ರಮದಿಂದ ಬಾಧಿತನಾದ ಯಾರೇ ವ್ಯಕ್ತಿಯು,–

(i) [2][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ][2] ಸಂದರ್ಭದಲ್ಲಿ ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ;

(ii) ಇತರ ನಗರಪಾಲಿಕೆಗಳ ಸಂದರ್ಭದಲ್ಲಿ, ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ–

– ಅಪೀಲು ಸಲ್ಲಿಸಬಹುದು.

(2) ಕರ್ನಾಟಕ ಅಪೀಲು ನ್ಯಾಯಾಧಿಕರಣದ ಅಥವಾ ಸಂದರ್ಭಾನುಸಾರ ಜಿಲ್ಲಾ ನ್ಯಾಯಾಲಯದ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(3) 308ನೇ, 309ನೇ ಮತ್ತು 321(3)ನೇ ಪ್ರಕರಣಗಳ ಮೇರೆಗೆ ಆಯುಕ್ತರು ನೀಡಿದ ಯಾವುದೇ ನೋಟೀಸಿನ ವಿರುದ್ಧ ಅಥವಾ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಇತರೆ ಕ್ರಮದ ವಿರುದ್ಧ ಸಲ್ಲಿಸಿದ ಮತ್ತು ಈ ಪ್ರಕರಣವು ಪ್ರಾರಂಭವಾದ ದಿನಾಂಕದಂದು ಸ್ಥಾಯಿ ಸಮಿತಿಯ ಮುಂದೆ ಇತ್ಯರ್ಥದಲ್ಲಿರುವ ಎಲ್ಲ ಅಪೀಲುಗಳನ್ನು ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಅಥವಾ ಸಂದರ್ಭಾನುಸಾರ ಜಿಲ್ಲಾ ನ್ಯಾಯಾಲಯಕ್ಕೆ ವರ್ಗಾಯಿಸತಕ್ಕದ್ದು ಮತ್ತು ಅವು, ಅಂಥ ಅಪೀಲುಗಳನ್ನು, ತಮ್ಮ ಮುಂದೆ ಅವುಗಳನ್ನು ದಾಖಲು ಮಾಡಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು.][1]

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ 443ಎ ಪ್ರಕರಣವನ್ನು ಸೇರಿಸಲಾಗಿದೆ.

2. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

**444. ಆಯುಕ್ತರಿಂದ ಸ್ಥಾಯೀ ಸಮಿತಿಗೆ ಅಪೀಲು.–** (1) ಸ್ಥಾಯೀ ಸಮಿತಿಗೆ,–

(ಎ) ಆಯುಕ್ತರು,–

(i) 138ನೇ, 247ನೇ, 248ನೇ, 249ನೇ, 252ನೇ, [1][xxx][1] 322 (1)ನೇ, 323 (1)ನೇ, 328 (1)ನೇ, 329ನೇ, 330ನೇ, 337ನೇ, 345ನೇ, 347ನೇ, 354ನೇ, 355ನೇ ಮತ್ತು 358ನೇ ಪ್ರಕರಣದ ಮೇರೆಗೆ;

1. 2003ರ ಅಧಿನಿಯಮ ಸಂಖ್ಯೆ 32ರ ಮೂಲಕ 20.8.2003 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ii) ಮನೆ ಚರಂಡಿ ವ್ಯವಸ್ಥೆಗೆ ಅಥವಾ ನಗರಪಾಲಿಕೆಯ ಚರಂಡಿಗಳೊಂದಿಗೆ ಮನೆಯ ಚರಂಡಿಗಳನ್ನು ಕೂಡಿಸುವುದಕ್ಕೆ ಅಥವಾ ನಗರಪಾಲಿಕೆಯ ನೀರು ಸರಬರಾಜು ಮುಖ್ಯ ಮಾರ್ಗಗಳೊಂದಿಗೆ ಮತ್ತು ದೀಪ ವ್ಯವಸ್ಥೆಯ ಮುಖ್ಯ ತಂತಿಮಾರ್ಗಗಳೊಂದಿಗೆ ಮನೆಗೆ ಸಂಪರ್ಕ ಕಲ್ಪಿಸುವುದಕ್ಕೆ ಸಂಬಂಧಿಸಿದ ಯಾವುದೇ ಉಪವಿಧಿಯ ಮೇರೆಗೆ

– ಕೊಟ್ಟ ಯಾವುದೇ ನೋಟೀಸಿನ ವಿರುದ್ಧ ಅಥವಾ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಲಾದ ಇತರ ಕ್ರಮದ ವಿರುದ್ಧ;

(ಬಿ) 301ನೇ ಅಥವಾ 315ನೇ ಪ್ರಕರಣದ ಮೇರೆಗೆ ಕಟ್ಟಡವನ್ನು ನಿರ್ಮಿಸಲು ಅಥವಾ ಪುನರ್‌ನಿರ್ಮಿಸಲು ಅನುಮತಿ ಕೊಡಲು ಆಯುಕ್ತರು ನಿರಾಕರಿಸಿರುವುದರ ವಿರುದ್ಧ;

(ಸಿ) 135ನೇ, 234ನೇ, 326ನೇ ಅಥವಾ 354ನೇ ಪ್ರಕರಣದ ಮೇರೆಗೆ ಅನುಮತಿಯನ್ನು ಕೊಡಲು ಆಯುಕ್ತರು ನಿರಾಕರಿಸಿದ್ದರ ವಿರುದ್ಧ;

(ಡಿ) 346ನೇ, 353ನೇ, 365ನೇ ಪ್ರಕರಣದ ಅಥವಾ 372ನೇ ಪ್ರಕರಣದ (2)ನೇ ಉಪ–ಪ್ರಕರಣದ ಮೇರೆಗೆ ಲೈಸೆನ್ಸು ಕೊಡಲು ಆಯುಕ್ತರು ನಿರಾಕರಿಸಿದ್ದರ ವಿರುದ್ಧ;

(ಇ) 443ನೇ ಪ್ರಕರಣದ (4)ನೇ ಉಪ–ಪ್ರಕರಣದ ಮೇರೆಗೆ ಲೈಸೆನ್ಸನ್ನು ಅಮಾನತುಗೊಳಿಸುವ ಅಥವಾ ರದ್ದುಗೊಳಿಸುವ ಆಯುಕ್ತರ ಯಾವುದೇ ಆದೇಶದ ವಿರುದ್ಧ;

(ಎಫ್) 421ನೇ ಪ್ರಕರಣದ ಮೇರೆಗೆ ರಚಿಸಿದ ನಿಯಮಗಳ ಅನ್ವಯ ಅಪೀಲು ಮಾಡಬಹುದಾದ ಆಯುಕ್ತರ ಯಾವುದೇ ಇತರ ಆದೇಶದ ವಿರುದ್ಧ

– ಅಪೀಲು ಮಾಡಲು ಅವಕಾಶ ಇರತಕ್ಕದ್ದು.

(2) ಯಾವುದೇ ಅಂಥ ಅಪೀಲಿನ ಮೇಲೆ, ಸ್ಥಾಯೀ ಸಮಿತಿಯು, ಆಯುಕ್ತರು ಕೈಗೊಂಡ ಯಾವುದೇ ಕ್ರಮವನ್ನು ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮವನ್ನು ಅಥವಾ ಅವರು ಮಾಡಿದ ಯಾವುದೇ ಆದೇಶವನ್ನು ವ್ಯತಿರಿಕ್ತಗೊಳಿಸಿದರೆ, ಅಥವಾ ಗಣನೀಯವಾಗಿ ಮಾರ್ಪಾಟು ಮಾಡಿದರೆ, ಅವರು ಅಂಥ ತೀರ್ಮಾನದ ದಿನಾಂಕದಿಂದ ಅರವತ್ತು ದಿನಗಳ ಒಳಗಾಗಿ, ಆ ವಿಷಯವನ್ನು ನಗರಪಾಲಿಕೆಗೆ ಒಪ್ಪಿಸಬಹುದು ಮತ್ತು ಹಾಗೆ ಒಪ್ಪಿಸಿದ ವಿಷಯದ ಬಗ್ಗೆ ನಗರಪಾಲಿಕೆಯ ತೀರ್ಮಾನವು ಇತ್ಯರ್ಥವಾಗುವವರೆಗೆ ಆಯುಕ್ತರು ಸ್ಥಾಯೀ ಸಮಿತಿಯ ತೀರ್ಮಾನವನ್ನು ಜಾರಿಗೊಳಿಸಲು ಬದ್ಧರಾಗಿರತಕ್ಕದ್ದಲ್ಲ.

(3) ಸ್ಥಾಯೀ ಸಮಿತಿಯ ತೀರ್ಮಾನವು ಅಥವಾ ಮೇಲೆ ಹೇಳಿದಂತೆ ವಿಷಯವನ್ನು ನಗರಪಾಲಿಕೆಗೆ ಒಪ್ಪಿಸಿದ್ದರೆ, ನಗರಪಾಲಿಕೆಯ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

**445. ಅಪೀಲುಗಳಿಗೆ ಕಾಲ ಪರಿಮಿತಿಯ ಅವಧಿ.–** ಈ ಅಧಿನಿಯಮದ ಹಿಂದೆ ಹೇಳಿದ ಉಪಬಂಧಗಳಲ್ಲಿ, ಈ ಅಧಿನಿಯಮದ ಮೇರೆಗೆ ಅನುಮತಿಸಿದ ಅಪೀಲನ್ನು ಸಲ್ಲಿಸುವುದಕ್ಕೆ ಯಾವುದೇ ಕಾಲವನ್ನು ಗೊತ್ತುಪಡಿಸದಿರುವ ಸಂದರ್ಭದಲ್ಲಿ ಅಂಥ ಅಪೀಲನ್ನು,–

(ಎ) ಆ ಅಪೀಲು ಲೈಸೆನ್ಸ್‌ನ್ನು ಅಥವಾ ಅನುಮತಿಯನ್ನು ಕೊಡುವ ಆದೇಶದ ವಿರುದ್ಧದ ಅಪೀಲು ಆಗಿರುವಲ್ಲಿ, ನಗರಪಾಲಿಕೆಯ ಸೂಚನಾ ಫಲಕದಲ್ಲಿ ಆದೇಶವನ್ನು ಪ್ರಕಟಿಸಿದ ದಿನಾಂಕದ ತರುವಾಯ [1][ಅರವತ್ತು ದಿನಗಳ][1] ಒಳಗಾಗಿ; ಮತ್ತು

(ಬಿ) ಇತರ ಪ್ರಕರಣಗಳಲ್ಲಿ, ಅಪೀಲನ್ನು ಯಾವ ಆದೇಶದ ಅಥವಾ ವ್ಯವಹರಣೆಯ ವಿರುದ್ಧ ಸಲ್ಲಿಸಲಾಗಿದೆಯೋ ಆ ಆದೇಶವನ್ನು ಅಥವಾ ವ್ಯವಹರಣೆಯನ್ನು ಸ್ವೀಕರಿಸಿದ ದಿನಾಂಕದ ತರುವಾಯ [1][ಅರವತ್ತು ದಿನಗಳ][1] ಒಳಗಾಗಿ

– ಸಲ್ಲಿಸತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**446. ಚುನಾವಣೆಯನ್ನು ಮತ್ತು ಇತರ ವಿಚಾರಣೆಗಳನ್ನು ನಡೆಸುವ ವ್ಯಕ್ತಿಯ ಅಧಿಕಾರ.–** ಚುನಾವಣೆಗಳಿಗೆ ಸಂಬಂಧಪಟ್ಟ ವಿಚಾರಣೆಗಳನ್ನು ನಡೆಸಲು ನಿಯಮದ ಮೂಲಕ ಅಧಿಕೃತರಾದ ಎಲ್ಲಾ ವ್ಯಕ್ತಿಗಳು ಮತ್ತು ತಮ್ಮ ಕರ್ತವ್ಯಗಳ ವ್ಯಾಪ್ತಿಯೊಳಗೆ ಬರುವ ವಿಷಯಗಳ ಬಗ್ಗೆ ಯಾವುದೇ ವಿಚಾರಣೆಯನ್ನು ನಡೆಸುವ ಎಲ್ಲಾ ಪರಿಶೀಲನಾಧಿಕಾರಿಗಳು ಅಥವಾ ಅಧೀಕ್ಷಣಾಧಿಕಾರಿಗಳು ಅಂಥ ವಿಚಾರಣೆಗಳ ಉದ್ದೇಶಗಳಿಗಾಗಿ, ಸಾಕ್ಷಿದಾರರ

ಹಾಜರಾತಿಗಾಗಿ ಮತ್ತು ದಸ್ತಾವೇಜುಗಳನ್ನು ಹಾಜರುಪಡಿಸುವುದಕ್ಕಾಗಿ ಸಮನುಗಳನ್ನು ಹೊರಡಿಸುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಭೂಕಂದಾಯ ಅಧಿನಿಯಮ, 1964ರ ಮೂಲಕ ಕಂದಾಯ ಅಧಿಕಾರಿಗಳಿಗೆ ಪ್ರದತ್ತವಾದಂಥ ಅಧಿಕಾರಗಳನ್ನೇ ಹೊಂದಿರತಕ್ಕದ್ದು ಮತ್ತು ಆ ಅಧಿನಿಯಮದ ಉಪಬಂಧಗಳು, ಈ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳ ಬಲದಿಂದಾಗಿ ಹೊರಡಿಸಿದ ಸಮನುಗಳಿಗೆ ಮತ್ತು ಯಾವ ವ್ಯಕ್ತಿಗಳನ್ನು ಸಮನು ಮಾಡಲಾಗಿದೆಯೋ ಆ ವ್ಯಕ್ತಿಗಳಿಗೆ ಅನ್ವಯಿಸತಕ್ಕದ್ದು; ಮತ್ತು ಸದರಿ ಅಧಿಕಾರ ಬಲದಿಂದಾಗಿ ಯಾವ ವ್ಯಕ್ತಿಗಳನ್ನು ಸಮನು ಮಾಡಲಾಗಿದೆಯೋ ಆ ಎಲ್ಲ ವ್ಯಕ್ತಿಗಳು ಅಂಥ ಸಮನುಗಳನ್ನು ಪಾಲಿಸಲು ಬದ್ಧರಾಗಿರತಕ್ಕದ್ದು.

**447. ಹಾಜರಾಗಲು ಮತ್ತು ಸಾಕ್ಷ್ಯ ನೀಡಲು ಅಥವಾ ದಸ್ತಾವೇಜುಗಳನ್ನು ಹಾಜರುಪಡಿಸಲು ಸಮನುಗಳು.–** ಆಯುಕ್ತರು ಈ ಅಧಿನಿಯಮದ ಉಪಬಂಧಗಳ ಮೇರೆಗೆ, ತೆರಿಗೆ ವಿಧಿಸುವುದಕ್ಕೆ ಅಥವಾ ಪರಿಶೀಲನೆಗೆ ಅಥವಾ ನೋಂದಣಿಗೆ ಅಥವಾ ಯಾವುದೇ ಲೈಸೆನ್ಸನ್ನು ಅಥವಾ ಅನುಮತಿಯನ್ನು ಕೊಡುವುದಕ್ಕೆ ಸಂಬಂಧಪಟ್ಟ ಯಾವುದೇ ಪ್ರಶ್ನೆಯ ಬಗ್ಗೆ ಸಂದರ್ಭಾನುಸಾರ ತನ್ನ ಮುಂದೆ ಹಾಜರಾಗಲು ಮತ್ತು ಸಾಕ್ಷ್ಯ ನೀಡಲು ಅಥವಾ ದಸ್ತಾವೇಜುಗಳನ್ನು ಹಾಜರುಪಡಿಸಲು ಯಾರೇ ವ್ಯಕ್ತಿಯನ್ನು ಸಮನು ಮಾಡಬಹುದು.

**448. ನೋಟೀಸುಗಳ ಮತ್ತು ಅನುಮತಿಗಳ ನಮೂನೆ.–** ಈ ಅಧಿನಿಯಮದ ಉಪಬಂಧಗಳ ಮೇರೆಗೆ ಸಂದರ್ಭಾನುಸಾರ ಕೊಟ್ಟ, ಹೊರಡಿಸಿದ ಅಥವಾ ಮಂಜೂರು ಮಾಡಿದ ಎಲ್ಲಾ ನೋಟೀಸುಗಳು ಮತ್ತು ಅನುಮತಿಗಳು ಲಿಖಿತದಲ್ಲಿರತಕ್ಕದ್ದು.

**449. ಪೌರ ಪ್ರಾಧಿಕಾರಗಳ ಅಥವಾ ನಗರಪಾಲಿಕೆಯ ಅಧಿಕಾರಿಗಳ ಸಮ್ಮತಿಯ ರುಜುವಾತು.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಯಾವುದೇ ಕಾರ್ಯವನ್ನು ಮಾಡುವುದು ಅಥವಾ ಮಾಡುವುದನ್ನು ಬಿಟ್ಟುಬಿಡುವುದು ಅಥವಾ ಯಾವುದೇ ಕಾರ್ಯದ ಸಿಂಧುತ್ವವು,–

(ಎ) ನಗರಪಾಲಿಕೆಯ ಸ್ಥಾಯೀ ಸಮಿತಿಯ ಅಥವಾ ಆಯುಕ್ತರ; ಅಥವಾ

(ಬಿ) ನಗರಪಾಲಿಕೆಯ ಯಾರೇ ಅಧಿಕಾರಿಯ

– ಅನುಮೋದನೆ, ಮಂಜೂರಾತಿ, ಸಮ್ಮತಿ, ಸಹಮತಿ, ಘೋಷಣೆ, ಅಭಿಪ್ರಾಯವನ್ನು ಅಥವಾ ಅವರಿಗೆ ಮನವರಿಕೆಯಾಗುವುದನ್ನು ಅವಲಂಬಿಸಿರುವಾಗ ಅಂಥ ಅನುಮೋದನೆ, ಮಂಜೂರಾತಿ, ಸಮ್ಮತಿ, ಸಹಮತಿ, ಘೋಷಣೆ, ಅಭಿಪ್ರಾಯವನ್ನು ಅಥವಾ ಅವರಿಗೆ ಮನವರಿಕೆಯಾಗಿರುವುದನ್ನು ತಿಳಿಸುವುದೆಂದು ಅಥವಾ ನಿರೂಪಿಸುವುದೆಂದು, ತಾತ್ಪರ್ಯವಾಗುವ (ಎ)ನ ಸಂದರ್ಭದಲ್ಲಿ ಆಯುಕ್ತರು ರುಜುಮಾಡಿದ ಮತ್ತು (ಬಿ)ನ ಸಂದರ್ಭದಲ್ಲಿ ಸದರಿ ನಗರಪಾಲಿಕೆಯ ಅಧಿಕಾರಿಯು ರುಜುಮಾಡಿದ ಲಿಖಿತದ ದಸ್ತಾವೇಜು, ಅದರ ಸಾಕಷ್ಟು ಪುರಾವೆ ಆಗಿರತಕ್ಕದ್ದು.

**450. ದಸ್ತಾವೇಜುಗಳ ಮೇಲೆ ರುಜು.–** (1) ಯಾವ ಲೈಸೆನ್ಸು, ಅನುಮತಿ, ನೋಟೀಸು, ಬಿಲ್ಲು, ಅನುಸೂಚಿ, ಸಮನುಗಳು, ವಾರಂಟು ಅಥವಾ ಇತರ ದಸ್ತಾವೇಜು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೂಲಕ ಆಯುಕ್ತರ ಅಥವಾ ನಗರಪಾಲಿಕೆಯ ಯಾರೇ ಅಧಿಕಾರಿಯ ರುಜುವನ್ನು ಹೊಂದಿರಬೇಕೆಂದು ಅಗತ್ಯಪಡಿಸಲಾಗಿದೆಯೋ ಆ ಯಾವುದೇ ಲೈಸೆನ್ಸು, ಅನುಮತಿ, ನೋಟೀಸು, ಬಿಲ್ಲು, ಅನುಸೂಚಿ, ಸಮನುಗಳು, ವಾರಂಟು ಅಥವಾ ಇತರ ದಸ್ತಾವೇಜಿನ ಮೇಲೆ ಸಂದರ್ಭಾನುಸಾರ ಆಯುಕ್ತರ ಅಥವಾ ಅಂಥ ನಗರಪಾಲಿಕೆಯ ಅಧಿಕಾರಿಯ ಹಸ್ತಾಕ್ಷರ ಮುದ್ರೆಯನ್ನು ಒತ್ತಿದ್ದರೆ ಅದಕ್ಕೆ ಸರಿಯಾಗಿ ರುಜುಮಾಡಲಾಗಿದೆಯೆಂದು ಭಾವಿಸತಕ್ಕದ್ದು.

(2) ಉಪಪ್ರಕರಣ (1)ರಲ್ಲಿ ಇರುವುದು ಯಾವುದೂ ನಗರಪಾಲಿಕೆಯ ನಿಧಿಯ ಬಗ್ಗೆ ಬರೆದ ಚೆಕ್ಕಿಗೆ ಅಥವಾ ಯಾವುದೇ ಕರಾರು ಪತ್ರಕ್ಕೆ ಅನ್ವಯವಾಗುವುದೆಂದು ಭಾವಿಸತಕ್ಕದ್ದಲ್ಲ.

**451. ಅಧಿಸೂಚನೆಯ ಪ್ರಕಟಣೆ.–** ಅನ್ಯಥಾ ಉಪಬಂಧಿಸಿದ ಹೊರತು, ಈ ಅಧಿನಿಯಮದ ಮೇರೆಗಿನ ಪ್ರತಿಯೊಂದು ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ, ಇಂಗ್ಲೀಷಿನಲ್ಲಿ ಮತ್ತು ಕನ್ನಡದಲ್ಲಿ ಪ್ರಕಟಿಸತಕ್ಕದ್ದು.

**452. ಆದೇಶದ, ನೋಟೀಸಿನ ಅಥವಾ ಇತರ ದಸ್ತಾವೇಜುಗಳ ಪ್ರಕಟಣೆ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಪ್ರಕಟಿಸಬೇಕೆಂದು ನಿರ್ದೇಶಿಸಿರುವ ಪ್ರತಿಯೊಂದು ಆದೇಶವನ್ನು, ನೋಟೀಸನ್ನು ಅಥವಾ ಇತರ ದಸ್ತಾವೇಜುಗಳನ್ನು ಸಂದರ್ಭಾನುಸಾರ ಈ ಅಧಿನಿಯಮದ ಮೂಲಕ ಅಥವಾ ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ಬೇರೆ ವಿಧಾನವನ್ನು ನಿಯಮಿಸಿದ ಹೊರತು, ಕನ್ನಡಕ್ಕೆ ಭಾಷಾಂತರಿಸತಕ್ಕದ್ದು ಮತ್ತು ನಗರಪಾಲಿಕೆಯ ಕಛೇರಿಯಲ್ಲಿ ಇಡತಕ್ಕದ್ದು ಮತ್ತು ಅದರ ಪ್ರತಿಗಳನ್ನು ಇಂಗ್ಲಿಷ್‌ನಲ್ಲಿ ಮತ್ತು ಕನ್ನಡದಲ್ಲಿ ಅಂಥ ಕಛೇರಿಯಲ್ಲಿ ಮತ್ತು ಸಂದರ್ಭಾನುಸಾರ ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ನಿರ್ದೇಶಿಸಬಹುದಾದಂಥ ಇತರ ಸ್ಥಳಗಳಲ್ಲಿ ಎದ್ದು ಕಾಣುವ ಹಾಗೆ ಅಂಟಿಸತಕ್ಕದ್ದು; ಮತ್ತು ಅಂಥ ಪ್ರತಿಗಳನ್ನು ಹಾಗೆ ಅಂಟಿಸಲಾಗಿದೆ ಮತ್ತು ಮೂಲ ಪ್ರತಿಗಳು ನಗರಪಾಲಿಕೆಯ ಕಛೇರಿಯಲ್ಲಿ ಪರಿಶೀಲನೆಗಾಗಿ ಇವೆ ಎಂದು ಸಂಬಂಧಿಸಿದ ಪ್ರದೇಶದಲ್ಲಿ ಡಂಗುರವನ್ನು ಹೊಡೆಸುವ ಮೂಲಕ ಅಥವಾ ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಜಾಹೀರಾತಿನ ಮೂಲಕ ಸಾರ್ವಜನಿಕ ಉದ್ಘೋಷಣೆಯನ್ನು ಮಾಡತಕ್ಕದ್ದು.

**453. ವೃತ್ತಪತ್ರಿಕೆಗಳಲ್ಲಿ ಪ್ರಕಟಣೆ.–** ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೂಲಕ ನೋಟೀಸನ್ನು ಸ್ಥಳೀಯ ವೃತ್ತಪತ್ರಿಕೆಗಳಲ್ಲಿ ಜಾಹೀರಾತಿನ ಮೂಲಕ ಕೊಡತಕ್ಕದ್ದು ಅಥವಾ ಅಧಿಸೂಚನೆಯನ್ನು ಅಥವಾ ಯಾವುದೇ ಮಾಹಿತಿಯನ್ನು ವೃತ್ತ ಪತ್ರಿಕೆಗಳಲ್ಲಿ ಪ್ರಕಟಿಸತಕ್ಕದ್ದು ಎಂದು ಉಪಬಂಧಿಸಿದಾಗಲೆಲ್ಲಾ ಅಂಥ ನೋಟೀಸನ್ನು, ಅಧಿಸೂಚನೆಯನ್ನು ಅಥವಾ ಮಾಹಿತಿಯನ್ನು ನಗರದಲ್ಲಿ ಪ್ರಕಟವಾಗುವ ಕನಿಷ್ಠ ಪಕ್ಷ ಒಂದು ಇಂಗ್ಲೀಷ್ ಮತ್ತು ಒಂದು ಕನ್ನಡ ವೃತ್ತಪತ್ರಿಕೆಯಲ್ಲಿ ಪ್ರಕಟಿಸತಕ್ಕದ್ದು.

**454. ನಿಷೇಧದ ಅಥವಾ ಸ್ಥಳಗಳನ್ನು ಪ್ರತ್ಯೇಕವಾಗಿ ಇಡುವ ಬಗ್ಗೆ ನೋಟೀಸು.–** ಈ ಅಧಿನಿಯಮದ ಮೂಲಕ ಅಧಿಕೃತವಾದ ಯಾವುದೇ ಉದ್ದೇಶಕ್ಕಾಗಿ ನಗರಪಾಲಿಕೆಯು, ಸ್ಥಾಯೀ ಸಮಿತಿಯು ಅಥವಾ ಆಯುಕ್ತರು ಯಾವುದೇ ಸ್ಥಳವನ್ನು ಪ್ರತ್ಯೇಕವಾಗಿ ಇರಿಸಿದಾಗಲೆಲ್ಲಾ ಅಥವಾ ಯಾವುದೇ ಸ್ಥಳದಲ್ಲಿ ಯಾವುದೇ ಕಾರ್ಯ ಮಾಡುವುದನ್ನು ನಿಷೇಧಿಸಿದಾಗಲೆಲ್ಲಾ ಆಯುಕ್ತರು ತತ್‌ಕ್ಷಣವೇ ನೋಟೀಸನ್ನು ಇಂಗ್ಲಿಷ್‌ನಲ್ಲಿ ಮತ್ತು ಕನ್ನಡದಲ್ಲಿ ಅಂಥ ಸ್ಥಳದಲ್ಲಿ ಅಥವಾ ಅದರ ಸಮೀಪದಲ್ಲಿ ಹಾಕಿಸತಕ್ಕದ್ದು. ಅಂಥ ಸ್ಥಳವನ್ನು ಯಾವ ಉದ್ದೇಶಕ್ಕಾಗಿ ಪ್ರತ್ಯೇಕವಾಗಿ ಇರಿಸಲಾಗಿದೆಯೋ ಆ ಉದ್ದೇಶವನ್ನು ಅಥವಾ ಯಾವ ಕಾರ್ಯವನ್ನು ಅಂಥ ಸ್ಥಳದಲ್ಲಿ ನಿಷೇಧಿಸಲಾಗಿದೆಯೋ ಆ ಕಾರ್ಯವನ್ನು ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

**455. ದಸ್ತಾವೇಜುಗಳ ಜಾರಿಯ ವಿಧಾನ.–** (1) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಮೂಲಕ ಯಾವುದೇ ನೋಟೀಸನ್ನು ಅಥವಾ ಇತರ ದಸ್ತಾವೇಜನ್ನು ಯಾರೇ ವ್ಯಕ್ತಿಗೆ ಜಾರಿಮಾಡಲು ಅಥವಾ ಕಳುಹಿಸಲು ಅಗತ್ಯಪಡಿಸಿದಾಗ,–

(ಎ) ಅಂಥ ವ್ಯಕ್ತಿಗೆ ಸದರಿ ದಸ್ತಾವೇಜನ್ನು ಕೊಡುವ ಅಥವಾ ನೀಡುವ ಮೂಲಕ; ಅಥವಾ

(ಬಿ) ಅಂಥ ವ್ಯಕ್ತಿಯು ಸಿಗದಿದ್ದರೆ, ಅಂಥ ದಸ್ತಾವೇಜನ್ನು ಕೊನೆಯದಾಗಿ ತಿಳಿದುಬಂದ ಅವನ ವಾಸಸ್ಥಳದಲ್ಲಿ ಅಥವಾ ಅವನು ವ್ಯವಹಾರ ನಡೆಸುತ್ತಿದ್ದ ಸ್ಥಳದಲ್ಲಿ ಇಟ್ಟುಬಿಡುವ ಮೂಲಕ ಅಥವಾ ಅದನ್ನು ಅವನ ಏಜೆಂಟ್, ಗುಮಾಸ್ತ, ಅಥವಾ ಸೇವಕ ಅಥವಾ ಅವನ ಕುಟುಂಬದ ಯಾರೇ ವಯಸ್ಕ ಸದಸ್ಯನಿಗೆ ಕೊಡುವ ಅಥವಾ ನೀಡುವ ಮೂಲಕ; ಅಥವಾ

(ಸಿ) ಅಂಥ ವ್ಯಕ್ತಿಯು ಆ ನಗರದಲ್ಲಿ ವಾಸವಾಗಿಲ್ಲದಿದ್ದರೆ ಮತ್ತು ಬೇರೆ ಕಡೆಯಲ್ಲಿನ ಅವನ ವಿಳಾಸವು ಆಯುಕ್ತರಿಗೆ ತಿಳಿದಿದ್ದರೆ ಅದನ್ನು ಅವನಿಗೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸುವ ಮೂಲಕ; ಅಥವಾ

(ಡಿ) ಮೇಲೆ ಹೇಳಿದ ಯಾವುದೇ ವಿಧಾನಗಳಿಂದ ಜಾರಿ ಮಾಡಲಾಗದಿದ್ದಾಗ ಅದನ್ನು ಅಂಥ ವಾಸದ ಅಥವಾ ವ್ಯವಹಾರದ ಸ್ಥಳದ ಯಾವುದೇ ಎದ್ದುಕಾಣುವ ಭಾಗದಲ್ಲಿ ಅಂಟಿಸುವ ಮೂಲಕ

– ಅದನ್ನು ಜಾರಿ ಮಾಡಬಹುದು ಅಥವಾ ಕಳುಹಿಸಿಕೊಡಬಹುದು.

(2) ಆ ವ್ಯಕ್ತಿಯು, ಯಾವುದೇ ಕಟ್ಟಡದ ಅಥವಾ ಭೂಮಿಯ ಮಾಲೀಕನಾಗಿರುವಾಗ ಅಥವಾ ಅಧಿಭೋಗದಾರನಾಗಿರುವಾಗ, ದಸ್ತಾವೇಜಿನಲ್ಲಿ ಮಾಲೀಕನನ್ನು ಅಥವಾ ಅಧಿಭೋಗದಾರನನ್ನು ಹೆಸರಿಸುವುದು ಅವಶ್ಯವಾಗಿರತಕ್ಕದ್ದಲ್ಲ ಮತ್ತು ಜಂಟಿ ಮಾಲೀಕರ ಮತ್ತು ಅಧಿಭೋಗದಾರರ ಸಂದರ್ಭದಲ್ಲಿ, ಅಂಥ ಮಾಲೀಕರ ಅಥವಾ ಅಧಿಭೋಗದಾರರ ಪೈಕಿ ಒಬ್ಬನಿಗೆ ಅದನ್ನು ಜಾರಿ ಮಾಡಿದರೆ ಅಥವಾ ಕಳುಹಿಸಿದರೆ ಸಾಕು.

(3) ಈ ಅಧಿನಿಯಮದ ಮೇರೆಗೆ ಜಾರಿ ಮಾಡಿದ ಅಥವಾ ಕಳುಹಿಸಿದ ಯಾವುದೇ ಬಿಲ್ಲು, ನೋಟೀಸು, ನಮೂನೆ ಅಥವಾ ಇತರ ದಸ್ತಾವೇಜಿನಲ್ಲಿ ಯಾವುದೇ ತೆರಿಗೆಯನ್ನು ಅಥವಾ ಇತರ ಮೊಬಲಗನ್ನು ಸಂದಾಯ ಮಾಡಲು ಅಥವಾ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಅಥವಾ ಯಾವುದನ್ನಾದರೂ ಒದಗಿಸಲು ಅವಧಿಯನ್ನು ನಿಗದಿಪಡಿಸಿದಾಗಲೆಲ್ಲಾ, ಅಂಥ ಅವಧಿಯನ್ನು ಈ ಅಧಿನಿಯಮದಲ್ಲಿ ಅದಕ್ಕೆ ತದ್ವಿರುದ್ಧವಾದ ಸ್ಪಷ್ಟ ಉಪಬಂಧ ಇಲ್ಲದಿರುವಲ್ಲಿ ಅಂಥ ಜಾರಿಯ ಅಥವಾ ನೋಂದಾಯಿತ ಅಂಚೆಯ ಮೂಲಕ ಕಳುಹಿಸಿದ ದಿನಾಂಕದಿಂದ ಲೆಕ್ಕ ಹಾಕತಕ್ಕದ್ದು.

**456. ವಿಧಿಸಬಹುದಾದ ಮೊತ್ತವನ್ನು ಅಧಿಭೋಗದಾರನು ಮಾಲೀಕರಿಂದ ವಸೂಲು ಮಾಡುವುದು.–** ಯಾವುದೇ ಕಟ್ಟಡದ ಅಥವಾ ಭೂಮಿಯ ಅಧಿಭೋಗದಾರನು, ಈ ಅಧಿನಿಯಮದ ಮೇರೆಗೆ ಯಾವ ಹಣ ಸಂದಾಯ ಮಾಡಲು ಆ ಕಟ್ಟಡದ ಅಥವಾ ಭೂಮಿಯ ಮಾಲೀಕನು ಹೊಣೆಗಾರನಾಗಿರುವನೋ ಆದರೆ ಅಧಿಭೋಗದಾರನು ಹೊಣೆಗಾರನಾಗಿಲ್ಲವೋ ಆ ಯಾವುದೇ ಹಣ ಸಂದಾಯವನ್ನು ಅಧಿಭೋಗದಾರನು ಆ ಮಾಲೀಕನ ಪರವಾಗಿ ಮಾಡಿದರೆ, ಅಂಥ ಅಧಿಭೋಗದಾರನು ಅದನ್ನು ಮಾಲೀಕನಿಂದ ವಸೂಲ್ಮಾಡಲು ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಆಗ ಅಥವಾ ಆ ತರುವಾಯ ಅಧಿಭೋಗದಾರನು ಮಾಲೀಕನಿಗೆ ಕೊಡಬೇಕಾದ ಬಾಡಿಗೆಯಿಂದ ಅದನ್ನು ಮುರಿದುಕೊಳ್ಳಬಹುದು.

**457. ಅಧಿಭೋಗದಾರನಿಂದ ಮಾಲೀಕನಿಗೆ ಅಡ್ಡಿ.–** (1) ಯಾವುದೇ ಕಟ್ಟಡದ ಅಥವಾ ಭೂಮಿಯ ಅಧಿಭೋಗದಾರನು, ಆ ಕಟ್ಟಡಕ್ಕೆ ಅಥವಾ ಭೂಮಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಕಾರ್ಯಗತಗೊಳಿಸಲು ಮಾಲೀಕನನ್ನು ಅಡ್ಡಿಪಡಿಸಿದರೆ, ಆಯುಕ್ತರು ಆದೇಶದ ಮೂಲಕ ಸದರಿ ಅಧಿಭೋಗದಾರನನ್ನು ಅಂಥ ಆದೇಶವನ್ನು ಜಾರಿಗೊಳಿಸಿದ ದಿನಾಂಕದಿಂದ ಎಂಟು ದಿನಗಳ ಒಳಗಾಗಿ ಅವಶ್ಯವಾಗಬಹುದಾದಂಥ ಎಲ್ಲಾ ಕೆಲಸಗಳನ್ನು ನಿರ್ವಹಿಸಲು ಮಾಲೀಕನಿಗೆ ಅವಕಾಶ ಮಾಡಿಕೊಡುವಂತೆ ಅಗತ್ಯಪಡಿಸಬಹುದು.

(2) ಅಂಥ ಮಾಲೀಕನನ್ನು, ಮೇಲೆ ಹೇಳಿದಂತೆ, ಯಾವ ಅವಧಿಗೆ ಅವನನ್ನು ಅಡ್ಡಿಪಡಿಸಲಾಯಿತೋ ಆ ಅವಧಿಗೆ ಅಂಥ ಕೆಲಸಗಳನ್ನು ನಿರ್ವಹಿಸಲು ತಪ್ಪಿದ ಕಾರಣದಿಂದಾಗಿ ಅವನು ಅನ್ಯಥಾ ಗುರಿಯಾಗಬಹುದಾಗಿದ್ದಂಥ ಯಾವುದೇ ಜುಲ್ಮಾನೆಯಿಂದ ಅಥವಾ ದಂಡನೆಯಿಂದ ವಿನಾಯಿತಿ ಗೊಳಿಸತಕ್ಕದ್ದು.

**458. ಮಾಲೀಕನು ತಪ್ಪಿದಲ್ಲಿ ಅಧಿಭೋಗದಾರನಿಂದ ಕೆಲಸದ ನಿರ್ವಹಣೆ.–** ಯಾವುದೇ ಕಟ್ಟಡದ ಅಥವಾ ಭೂಮಿಯ ಮಾಲೀಕನು, ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಉಪಬಂಧಗಳ ಮೇರೆಗೆ ಯಾವ ಕೆಲಸವನ್ನು ನಿರ್ವಹಿಸಲು ಅವನನ್ನು ಅಗತ್ಯಪಡಿಸಲಾಗಿದೆಯೋ ಆ ಯಾವುದೇ ಕೆಲಸವನ್ನು ನಿರ್ವಹಿಸಲು ತಪ್ಪಿದರೆ, ಅಂಥ ಕಟ್ಟಡದ ಅಥವಾ ಭೂಮಿಯ ಅಧಿಭೋಗದಾರನು, ಆಯುಕ್ತರ ಅನುಮೋದನೆಯೊಂದಿಗೆ ಸದರಿ ಕೆಲಸವನ್ನು ನಿರ್ವಹಿಸಬಹುದು ಮತ್ತು ಅದನ್ನು ನಿರ್ವಹಿಸುವಾಗ ವಹಿಸಿದ ಯುಕ್ತ ವೆಚ್ಚಗಳನ್ನು ಮಾಲೀಕನಿಂದ ವಸೂಲು ಮಾಡಲು ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಅದರ ಮೊಬಲಗನ್ನು ಅದರ ಮಾಲೀಕನಿಗೆ ತಾನು ಆಗ ಅಥವಾ ಆ ತರುವಾಯ ಕೊಡಬೇಕಾಗಿರುವ ಬಾಡಿಗೆಯಿಂದ ಮುರಿದುಕೊಳ್ಳಬಹುದು.

**459. ಪರಿಶೀಲನೆ ಮಾಡಲು, ಮೋಜಣಿ ಮಾಡಲು ಅಥವಾ ಕೆಲಸವನ್ನು ನಿರ್ವಹಿಸಲು ಆಯುಕ್ತರು ಪ್ರವೇಶಿಸುವ ಅಧಿಕಾರ.–** ಆಯುಕ್ತರು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು, ಯಾವುದೇ ವಿಚಾರಣೆ, ಪರಿಶೀಲನೆ, ಪ್ರಯೋಗ, ಪರೀಕ್ಷೆ, ಮೋಜಣಿ, ಅಳತೆ ಅಥವಾ ಮೌಲ್ಯ ನಿರ್ಧಾರ ಮಾಡುವುದಕ್ಕಾಗಿ ಅಥವಾ ಮೀಟರುಗಳನ್ನು, ಉಪಕರಣಗಳನ್ನು, ಕೊಳವೆಗಳನ್ನು, ಅಥವಾ ಸಲಕರಣೆಗಳನ್ನು ಕಾನೂನುಸಮ್ಮತವಾಗಿ ಜೋಡಿಸುವ ಅಥವಾ ತೆಗೆದುಹಾಕುವ ಉದ್ದೇಶಕ್ಕಾಗಿ ಅಥವಾ ಯಾವ ಇತರ ಕೆಲಸವನ್ನು ಮಾಡಲು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಉಪಬಂಧಗಳ ಮೂಲಕ ಅವನನ್ನು ಅಧಿಕೃತಗೊಳಿಸಲಾಗಿದೆಯೋ ಆ ಇತರ ಯಾವುದೇ ಕೆಲಸವನ್ನು ನಿರ್ವಹಿಸಲು ಅಥವಾ ಈ ಅಧಿನಿಯಮದ ಯಾವುವೇ ಉದ್ದೇಶಗಳಿಗಾಗಿ ಅಥವಾ ಸದರಿ ಯಾವುದೇ ಉಪಬಂಧವನ್ನು ಅನುಸರಿಸಿ ಮಾಡಲು ಅಥವಾ ನಿರ್ವಹಿಸಲು ಸಹಾಯಕರೊಂದಿಗೆ ಅಥವಾ ಕೆಲಸಗಾರರೊಂದಿಗೆ ಅಥವಾ ಅವರಿಲ್ಲದೆ ಯಾವುದೇ ಕಟ್ಟಡದ ಒಳಕ್ಕೆ ಅಥವಾ ಭೂಮಿಯ ಮೇಲೆ ಪ್ರವೇಶಿಸಬಹುದು:

ಪರಂತು,–

(ಎ) ಈ ಅಧಿನಿಯಮದಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿರುವಾಗ ಹೊರತು, ಸೂರ್ಯಾಸ್ತಮಾನ ಮತ್ತು ಸೂರ್ಯೋದಯದ ನಡುವೆ ಅಂಥ ಯಾವುದೇ ಪ್ರವೇಶವನ್ನು ಮಾಡತಕ್ಕದ್ದಲ್ಲ.

(ಬಿ) ಈ ಅಧಿನಿಯಮದಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿರುವಾಗ ಹೊರತು, ಯಾವುದೇ ವಾಸದ ಮನೆಯನ್ನು ಮತ್ತು ವಾಸಸ್ಥಳವಾಗಿ ಉಪಯೋಗಿಸುತ್ತಿರುವ ಸಾರ್ವಜನಿಕ ಕಟ್ಟಡದ ಅಥವಾ ಗುಡಿಸಲಿನ ಯಾವುದೇ ಭಾಗವನ್ನು ಅದರ ಅಧಿಭೋಗದಾರನ

ಅನುಮತಿ ಇಲ್ಲದೆ, ಪ್ರವೇಶಮಾಡಲು ಉದ್ದೇಶಿಸಿರುವ ಬಗ್ಗೆ ಕನಿಷ್ಠ ಪಕ್ಷ ಇಪ್ಪತ್ತನಾಲ್ಕು ಗಂಟೆ ಮುಂಚಿತವಾಗಿ ನೋಟೀಸನ್ನು ಸದರಿ ಅಧಿಭೋಗದಾರ ಸ್ವೀಕರಿಸಿದ್ದ ಹೊರತು, ಹಾಗೆ ಪ್ರವೇಶಿಸತಕ್ಕದ್ದಲ್ಲ.

(ಸಿ) ನೋಟೀಸು ಇಲ್ಲದೇ ಯಾವುವೇ ಆವರಣಗಳನ್ನು, ಅನ್ಯಥಾ ಪ್ರವೇಶಿಸಬಹುದಾಗಿದ್ದರೂ, ಸ್ತ್ರೀಯರಿಗೆ ಪ್ರತ್ಯೇಕವಾಗಿರಿಸಿದ್ದ ಯಾವುದೇ ಕೊಠಡಿಯಲ್ಲಿನ ನಿವಾಸಿಗಳು ಸ್ತ್ರೀಯರ ಏಕಾಂತತೆಯನ್ನು ಕಾಪಾಡಬಹುದಾದ ಆವರಣಗಳ ಯಾವುದಾದರೂ ಭಾಗಕ್ಕೆ ಅಲ್ಲಿಂದ ಹೋಗಲು ಅನುಕೂಲವಾಗುವಂತೆ ಪ್ರತಿಯೊಂದು ಸಂದರ್ಭದಲ್ಲಿ ಸಾಕಷ್ಟು ಸೂಚನೆಯನ್ನು ಕೊಡತಕ್ಕದ್ದು.

(ಡಿ) ಪ್ರವೇಶದ ಉದ್ದೇಶದ ಅವಶ್ಯಕತೆಗಳಿಗೆ ಸರಿಹೊಂದಬಹುದಾದಷ್ಟರಮಟ್ಟಿಗೆ ಆವರಣಗಳ ಅಧಿಭೋಗದಾರರ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗಳಿಗೆ ಸೂಕ್ತ ಗಮನವನ್ನು ನೀಡತಕ್ಕದ್ದು.

**460. ಕಾಮಗಾರಿಗಳಿಗೆ ಹೊಂದಿಕೊಂಡಿರುವ ಭೂಮಿಗಳ ಮೇಲೆ ಪ್ರವೇಶಿಸುವ ಅಧಿಕಾರ.–**(1) ಆಯುಕ್ತರು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ವ್ಯಕ್ತಿಯು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಮೂಲಕ ಅಧಿಕೃತಗೊಳಿಸಿದ ಯಾವುದೇ ಕಾಮಗಾರಿಗೆ ಹೊಂದಿಕೊಂಡಿರುವ ಅಥವಾ ಕಾಮಗಾರಿಯಿಂದ ನಲ್ವತ್ತೈದು ಮಿಾಟರುಗಳೊಳಗೆ ಇರುವ ಯಾವುದೇ ಭೂಮಿಯ ಮೇಲೆ, ಅಂಥ ಭೂಮಿಯ ಮೇಲೆ ಯಾವುದೇ ಮಣ್ಣು, ಜಲ್ಲಿಕಲ್ಲು, ಕಲ್ಲು ಅಥವಾ ಇತರ ಸಾಮಗ್ರಿಗಳನ್ನು ಹಾಕುವ ಅಥವಾ ಅಂಥ ಕಾಮಗಾರಿಯ ಸ್ಥಳಕ್ಕೆ ಹೋಗುವ ಉದ್ದೇಶಕ್ಕಾಗಿ ಅಥವಾ ಆ ಕಾಮಗಾರಿಯ ನಿರ್ವಹಣೆಗೆ ಸಂಬಂಧಿಸಿದ ಯಾವುದೇ ಇತರ ಉದ್ದೇಶಕ್ಕಾಗಿ ಸಹಾಯಕರು ಅಥವಾ ಕೆಲಸಗಾರರೊಂದಿಗೆ ಅಥವಾ ಅವರಿಲ್ಲದೆಯೇ ಪ್ರವೇಶಿಸಬಹುದು.

(2) ಆಯುಕ್ತರು ಅಥವಾ ಅಂಥ ಅಧಿಕೃತ ವ್ಯಕ್ತಿಯು, (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಭೂಮಿಯ ಮೇಲೆ ಪ್ರವೇಶಿಸುವುದಕ್ಕೆ ಮುಂಚೆ ಅಂಥ ಪ್ರವೇಶ ಮಾಡುವ ಉದ್ದೇಶದ ಬಗ್ಗೆ ಮೂರು ದಿನ ಮುಂಚಿತವಾಗಿ ಸೂಚನೆಯನ್ನು ಆ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನೀಡತಕ್ಕದ್ದು ಮತ್ತು ಅದರ ಉದ್ದೇಶವನ್ನು ವಿವರಿಸತಕ್ಕದ್ದು ಮತ್ತು ಅಂಥ ಉದ್ದೇಶಕ್ಕಾಗಿ, ಅವಶ್ಯಕವಾಗಿರಬಹುದಾದಷ್ಟು ಭೂಮಿಗೆ ಬೇಲಿ ಹಾಕಿಸುವಂತೆ ಆ ಮಾಲೀಕನು ಅಥವಾ ಅಧಿಭೋಗದಾರನು ಅಗತ್ಯಪಡಿಸಿದರೆ ಹಾಗೆ ಬೇಲಿ ಹಾಕಿಸತಕ್ಕದ್ದು.

(3) ಆಯುಕ್ತರು, ಅಥವಾ ಅಂಥ ಅಧಿಕೃತ ವ್ಯಕ್ತಿಯು, (1)ನೇ ಉಪ–ಪ್ರಕರಣದ ಮೇರೆಗೆ ಅಂಥ ಯಾವುದೇ ಭೂಮಿಯ ಮೇಲೆ ಪ್ರವೇಶಿಸುವುದಕ್ಕೆ ಮುಂಚೆ, ಯಾವುದೇ ಹಣವನ್ನು ಸಂದಾಯ ಮಾಡಲು, ನೀಡಲು ಅಥವಾ ಠೇವಣಿ ಇಡಲು ಬದ್ಧರಾಗಿರತಕ್ಕದ್ದಲ್ಲ; ಆದರೆ ಸಾಧ್ಯವಾದಷ್ಟುಮಟ್ಟಿಗೆ ಹಾನಿಯುಂಟು ಮಾಡತಕ್ಕದ್ದಲ್ಲ. ಆಯುಕ್ತರು ಹಾಗೆ ಪ್ರವೇಶ ಮಾಡಿದ್ದಕ್ಕೆ ಮತ್ತು ಹಾಗೆ ಪ್ರವೇಶ ಮಾಡಿದ್ದರಿಂದ ಉಂಟಾಗಬಹುದಾದ ಯಾವುದೇ ತಾತ್ಕಾಲಿಕ ಅಥವಾ ಖಾಯಂ ಹಾನಿಗಾಗಿ ಭೂಮಿಯ ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದು.

(4) ಅಂಥ ಮಾಲೀಕನು ಅಥವಾ ಅಧಿಭೋಗದಾರನು ಆಯುಕ್ತರು ತಮಗೆ ಸಂದಾಯ ಮಾಡಿದ ನಷ್ಟ ಪರಿಹಾರದ ಮೊಬಲಗಿನಿಂದ ತೃಪ್ತರಾಗದಿದ್ದರೆ, ಅವರು ಸ್ಥಾಯೀ ಸಮಿತಿಗೆ ಅಪೀಲು ಮಾಡಬಹುದು, ಅದರ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು.

**461. ಲೈಸೆನ್ಸು, ಇತ್ಯಾದಿಗಳನ್ನು ಪಡೆಯಲು ತಪ್ಪುವುದರ ಅಥವಾ ಅವುಗಳ ಉಲ್ಲಂಘನೆಯ ಪರಿಣಾಮಗಳು.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಯಾವುದೇ ಕಾರ್ಯವನ್ನು ಮಾಡಲು ನಗರಪಾಲಿಕೆಯ, ಸ್ಥಾಯೀ ಸಮಿತಿಯ ಅಥವಾ ಆಯುಕ್ತರ ಲೈಸೆನ್ಸು ಅಥವಾ ಅನುಮತಿಯು ಅಥವಾ ನಗರಪಾಲಿಕೆಯ ಕಚೇರಿಯಲ್ಲಿ ನೋಂದಾಯಿಸುವುದು ಅವಶ್ಯವಿದ್ದರೆ ಮತ್ತು ಅಂಥ ಕಾರ್ಯವನ್ನು ಅಂಥ ಲೈಸೆನ್ಸು ಅಥವಾ ಅನುಮತಿ ಅಥವಾ ನೋಂದಣಿ ಇಲ್ಲದೆಯೇ ಮಾಡಿದ್ದರೆ, ಆಗ,–

(ಎ) ಆಯುಕ್ತರು ನೋಟೀಸು ಮೂಲಕ ಅಂಥ ಕಾರ್ಯವನ್ನು ಮಾಡಿದ ವ್ಯಕ್ತಿಯನ್ನು ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದ ಕಾಲದೊಳಗೆ ಆ ಕಾರ್ಯದಿಂದ ಪರಿಣಾಮಕ್ಕೊಳಗಾದ ಯಾವುದೇ ಚರ ಅಥವಾ ಸ್ಥಿರ, ಸಾರ್ವಜನಿಕ ಇಲ್ಲವೇ ಖಾಸಗಿ ಸ್ವತ್ತನ್ನು ಸಂಪೂರ್ಣವಾಗಿ ಅಥವಾ ಅದರ ಯಾವುದೇ ಭಾಗವನ್ನು ಬದಲಾಯಿಸುವಂತೆ, ತೆಗೆದುಹಾಕುವಂತೆ ಅಥವಾ ಕಾರ್ಯಸಾಧ್ಯವಾಗುವಷ್ಟರಮಟ್ಟಿಗೆ ಅದನ್ನು ಅದರ ಮೂಲ ಸ್ಥಿತಿಗೆ ತರುವಂತೆ ಅಗತ್ಯಪಡಿಸಬಹುದು.

(ಬಿ) ಆಯುಕ್ತರು ಅಥವಾ ಅವನಿಂದ ಕ್ರಮಬದ್ಧವಾಗಿ ಅಧಿಕೃತನಾದ ಯಾರೇ ಅಧಿಕಾರಿಯು, ಯಾವ ಕಟ್ಟಡದಲ್ಲಿ ಅಥವಾ ಭೂಮಿಯಲ್ಲಿ ಅಂಥ ಕಾರ್ಯವನ್ನು ಮಾಡಲಾಗಿದೆಯೋ ಆ ಯಾವುದೇ ಕಟ್ಟಡದೊಳಗೆ ಅಥವಾ ಭೂಮಿಯೊಳಗೆ ಅಥವಾ ಅದರ ಮೇಲೆ ಸಹ ಪ್ರವೇಶಿಸಬಹುದು ಮತ್ತು ಅಂಥ ಕಾರ್ಯ ಮುಂದುವರಿಯುವುದನ್ನು ತಡೆಗಟ್ಟಲು ಅವಶ್ಯವಾಗಬಹುದಾದ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬಹುದು.

(ಸಿ) ಅಂಥ ಕಾರ್ಯವನ್ನು ಹಾಗೆ ಮಾಡಿದ್ದಕ್ಕೆ ಈ ಅಧಿನಿಯಮದಲ್ಲಿ ವಿಶೇಷವಾಗಿ ಯಾವುದೇ ದಂಡವನ್ನು ಉಪಬಂಧಿಸಿರದಿದ್ದರೆ ಹಾಗೆ ಆ ಕಾರ್ಯವನ್ನು ಮಾಡುವ ವ್ಯಕ್ತಿಯು ಮ್ಯಾಜಿಸ್ಟ್ರೇಟರನಿಂದ ಅಪರಾಧ ನಿರ್ಣಯವಾದ ಮೇಲೆ, ಅಂಥ ಪ್ರತಿಯೊಂದು ಅಪರಾಧಕ್ಕಾಗಿ ಐವತ್ತು ರೂಪಾಯಿಗಳಿಗೆ ಮೀರದ ಜುಲ್ಮಾನೆಗೆ ಗುರಿಯಾಗತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಕೊಟ್ಟಿರುವ ಅಧಿಕಾರವನ್ನು ಚಲಾಯಿಸುವುದರಿಂದಾಗಿ ಅಥವಾ ಈ ಪ್ರಕರಣದ ಉಪಬಂಧಗಳನ್ನು ಈಡೇರಿಸುವ ಉದ್ದೇಶಕ್ಕಾಗಿ ಅವಶ್ಯವಿರುವ ಬಲಪ್ರಯೋಗ ಮಾಡಿದ್ದರಿಂದಾಗಿ ಉಂಟಾದ ಯಾವುದೇ ಹಾನಿಗೆ ಅಥವಾ ಅನಾನುಕೂಲತೆಗೆ ಆಯುಕ್ತರ ಅಥವಾ ಇತರ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ಕ್ಲೇಮು ಮಾಡಲು ಅವಕಾಶವಿರತಕ್ಕದ್ದಲ್ಲ.

**462. ಆದೇಶವನ್ನು ಪಾಲಿಸಲು ಕಾಲಾವಕಾಶ ಮತ್ತು ತಪ್ಪಿದರೆ ಅದನ್ನು ಜಾರಿಗೊಳಿಸಲು ಅಧಿಕಾರ.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ನೋಟೀಸಿನ, ನೀಡಿದ ಕಡ್ಡಾಯ ಸೂಚನೆಯ ಅಥವಾ ಆದೇಶದ ಮೂಲಕ ಯಾರೇ ವ್ಯಕ್ತಿಯನ್ನು ಯಾವುದೇ ಕೆಲಸವನ್ನು ನಿರ್ವಹಿಸುವಂತೆ ಅಥವಾ ಯಾವುದೇ ಕ್ರಮಗಳನ್ನು ಕೈಗೊಳ್ಳುವಂತೆ ಅಥವಾ ಯಾವುದೇ ಕಾರ್ಯವನ್ನು ಮಾಡುವಂತೆ ಅಗತ್ಯಪಡಿಸಿದಾಗಲೆಲ್ಲಾ, ಯಾವ ಕಾಲದೊಳಗಾಗಿ ಆ ಕೆಲಸವನ್ನು ನಿರ್ವಹಿಸಬೇಕೋ, ಆ ಕ್ರಮಗಳನ್ನು ಕೈಗೊಳ್ಳಬೇಕೋ ಅಥವಾ ಆ ಕಾರ್ಯವನ್ನು ಮಾಡಬೇಕೋ, ಆ ಯುಕ್ತ ಕಾಲಾವಧಿಯನ್ನು ಅಂಥ ನೋಟೀಸಿನಲ್ಲಿ ಕಡ್ಡಾಯ ಸೂಚನೆಯಲ್ಲಿ ಅಥವಾ ಆದೇಶದಲ್ಲಿ ತಿಳಿಸತಕ್ಕದ್ದು.

(2) ಅಂಥ ನೋಟೀಸನ್ನು, ಕಡ್ಡಾಯ ಸೂಚನೆಯನ್ನು ಅಥವಾ ಆದೇಶವನ್ನು ಹಾಗೆ ತಿಳಿಸಿರುವಂಥ ಕಾಲದೊಳಗೆ ಪಾಲಿಸದಿದ್ದರೆ ಆಗ ಹಾಗೆ ತಪ್ಪಿದ್ದಕ್ಕಾಗಿ ಜುಲ್ಮಾನೆ ವಿಧಿಸುವುದಕ್ಕೆ ಅವಕಾಶ ಕಲ್ಪಿಸಿರಲಿ ಅಥವಾ ಅವಕಾಶ ಕಲ್ಪಿಸದಿರಲಿ ಮತ್ತು ಹಾಗೆ ತಪ್ಪದ್ದಕ್ಕಾಗಿ ಹಾಗೆ ತಪ್ಪಿದ ವ್ಯಕ್ತಿಯು ಶಿಕ್ಷೆಗೆ ಗುರಿಯಾಗಲಿ ಅಥವಾ ಗುರಿಯಾಗದಿರಲಿ ಅಥವಾ ಹಾಗೆ ತಪ್ಪಿದ್ದಕ್ಕಾಗಿ ಅವನನ್ನು ಪ್ರಾಸಿಕ್ಯೂಟ್ ಮಾಡಿರಲಿ ಅಥವಾ ಅವನಿಗೆ ಯಾವುದೇ ಶಿಕ್ಷೆಯನ್ನು ವಿಧಿಸಿರಲಿ, ಆಯುಕ್ತರು, ಅಂಥ ಕೆಲಸವನ್ನು ಅವನಿಂದ ಮಾಡಿಸತಕ್ಕದ್ದು ಅಥವಾ ಮೇಲೆ ಹೇಳಿದಂತೆ ಆ ನೋಟೀಸನ್ನು, ಕಡ್ಡಾಯ ಸೂಚನೆಯನ್ನು ಅಥವಾ ಆದೇಶವನ್ನು ವಿದ್ಯುಕ್ತವಾಗಿ ಜಾರಿಗೊಳಿಸುವುದಕ್ಕಾಗಿ ಅವಶ್ಯವೆಂದು ತಾವು ಅಭಿಪ್ರಾಯಪಡುವಂಥ ಯಾವುದೇ ಕ್ರಮವನ್ನು ಕೈಗೊಳ್ಳಬಹುದು ಅಥವಾ ಯಾವುದೇ ಕಾರ್ಯವನ್ನು ಮಾಡಬಹುದು.

(3) ಅಂಥ ನೋಟೀಸನ್ನು ಪಾಲಿಸಲು ತಪ್ಪಿದುದಕ್ಕಾಗಿ, ಈ ಅಧಿನಿಯಮದಲ್ಲಿ ವಿಶೇಷವಾಗಿ ಯಾವುದೇ ದಂಡನೆಯನ್ನು ಉಪಬಂಧಿಸಿರದಿದ್ದರೆ ಸದರಿ ವ್ಯಕ್ತಿಯು ಅಪರಾಧ ನಿರ್ಣಯವಾದ ಮೇಲೆ ಅಂಥ ಅಪರಾಧಕ್ಕಾಗಿ ಐವತ್ತು ರೂಪಾಯಿಗಳವರೆಗೆ ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**463. ಹೊಣೆಗಾರರಾದ ವ್ಯಕ್ತಿಗಳಿಂದ ವೆಚ್ಚಗಳ ವಸೂಲಿ ಮತ್ತು ಅಧಿಭೋಗದಾರನ ಹೊಣೆಗಾರಿಕೆಯ ಪರಿಮಿತಿ.–** (1) ಆಯುಕ್ತರು, 462ನೇ ಪ್ರಕರಣದ ಮೇರೆಗೆ ವಹಿಸಿದ ಯಾವುವೇ ಯುಕ್ತ ವೆಚ್ಚಗಳನ್ನು ಯಾವ ವ್ಯಕ್ತಿಯ ಹೆಸರಿಗೆ ನೋಟೀಸನ್ನು, ಕಡ್ಡಾಯ ಸೂಚನೆಯನ್ನು ಅಥವಾ ಆದೇಶವನ್ನು ನೀಡಲಾಗಿತ್ತೋ ಆ ವ್ಯಕ್ತಿಯಿಂದ ಅಥವಾ ಆ ವ್ಯಕ್ತಿಗಳ ಪೈಕಿ ಯಾರೇ ಒಬ್ಬನಿಂದ ಕಟ್ಟಡಗಳ ಅಥವಾ ಭೂಮಿಗಳ ಮೇಲಿನ ತೆರಿಗೆಯಂತೆಯೇ ವಸೂಲಿ ಮಾಡಬಹುದು ಮತ್ತು 462ನೇ ಪ್ರಕರಣದ ಮೇರೆಗೆ ಕೆಲಸವನ್ನು ಮಾಡುವಾಗ ಅಥವಾ ಕ್ರಮಗಳನ್ನು ಕೈಗೊಳ್ಳುವಾಗ ಸಂಬಂಧಪಟ್ಟ ಸ್ವತ್ತಿನ ಮೇಲೆ ಸಿಕ್ಕಿದ ಯಾವುದೇ ಸಾಮಗ್ರಿಗಳನ್ನು ಬಳಸಿಕೊಳ್ಳಬಹುದು ಅಥವಾ ಅವುಗಳನ್ನು ಮಾರಬಹುದು ಮತ್ತು ಮಾರಾಟದಿಂದ ಬಂದ ಉತ್ಪತ್ತಿಯನ್ನು ವಹಿಸಿದ ವೆಚ್ಚಗಳ ಸಂದಾಯಕ್ಕಾಗಿ ಅಥವಾ ಸಂದಾಯ ನಿಮಿತ್ತ ವಿನಿಯೋಗಿಸಬಹುದು.

(2) ಯಾವ ವ್ಯಕ್ತಿಗೆ ನೋಟೀಸನ್ನು ನೀಡಲಾಗಿದೆಯೋ ಆ ವ್ಯಕ್ತಿಯು, ಯಾವ ಸ್ವತ್ತಿನ ಸಂಬಂಧದಲ್ಲಿ ಅದನ್ನು ನೀಡಲಾಗಿದೆಯೋ ಆ ಸ್ವತ್ತಿನ ಮಾಲೀಕನಾಗಿದ್ದರೆ, ಆಯುಕ್ತರು (ಅಂಥ ಮಾಲೀಕನ ವಿರುದ್ಧ ಯಾವುದೇ ಕ್ರಮವನ್ನು ಅಥವಾ ಇತರ ವ್ಯವಹರಣೆಯನ್ನು ಪ್ರಾರಂಭಿಸಿರಲಿ ಅಥವಾ ಕೈಗೊಂಡಿರಲಿ ಅಥವಾ ಇಲ್ಲದಿರಲಿ) ಮಾಲೀಕನ ಅಧೀನದಲ್ಲಿರುವ ಅಂಥ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ಅಧಿಭೋಗಿಸುತ್ತಿರುವ ವ್ಯಕ್ತಿ ಯಾರಾದರೂ ಇದ್ದರೆ ಆ ಯಾರೇ ವ್ಯಕ್ತಿಯನ್ನು (1)ನೇ ಉಪಪ್ರಕರಣದ ಮೇರೆಗೆ ಮಾಲೀಕನಿಂದ ವಸೂಲಿ ಮಾಡಬೇಕಾದ ಮೊಬಲಗಿನವರೆಗೆ ಅಥವಾ ಆಯುಕ್ತರು ಯುಕ್ತವೆಂದು ಭಾವಿಸಬಹುದಾದಂಥ ಕಡಿಮೆ ಮೊಬಲಗಿನವರೆಗೆ, ಅಂಥ ಸ್ವತ್ತಿನ ಸಂಬಂಧದಲ್ಲಿ ಅವನು ಸಂದಾಯ ಮಾಡಬೇಕಾದ ಬಾಡಿಗೆಯನ್ನು ಅದು ಬಾಕಿಯಾದಂತೆಲ್ಲ, ಮಾಲೀಕನಿಗೆ ಸಂದಾಯ ಮಾಡುವ ಬದಲು ನಗರಪಾಲಿಕೆಗೆ ಸಂದಾಯ ಮಾಡುವಂತೆ ಅಗತ್ಯಪಡಿಸಬಹುದು ಮತ್ತು ಹಾಗೆ ಸಂದಾಯ ಮಾಡಿದ ಯಾವುದೇ ಮೊಬಲಗನ್ನು ಮಾಲೀಕನು ಸಂದಾಯ ಮಾಡಬಹುದಾದ ಮೊಬಲಗಿನಿಂದ ಮುರಿದುಕೊಳ್ಳಬಹುದು.

(3) ಉಪಪ್ರಕರಣ (2)ರ ಮೇರೆಗೆ ಕ್ರಮವನ್ನು ತೆಗೆದುಕೊಳ್ಳಬೇಕೇ ಅಥವಾ ಬೇಡವೇ ಎಂಬುದನ್ನು ತೀರ್ಮಾನಿಸುವ ಉದ್ದೇಶಕ್ಕಾಗಿ ಆಯುಕ್ತರು ಅಂಥ ಸ್ವತ್ತಿನ ಬಾಬ್ತು ಬಾಡಿಗೆಯಾಗಿ ಸ್ವತ್ತಿನ ಯಾರೇ ಅಧಿಭೋಗದಾರನು ಸಂದಾಯ ಮಾಡಬೇಕಾದ ಮೊತ್ತಕ್ಕೆ ಸಂಬಂಧಿಸಿದ ಮಾಹಿತಿಯನ್ನು ಮತ್ತು ಅದನ್ನು ಯಾರಿಗೆ ಸಂದಾಯ ಮಾಡಬೇಕೋ ಆ ವ್ಯಕ್ತಿಯ ಹೆಸರು ಮತ್ತು ವಿಳಾಸದ ಬಗ್ಗೆ ಮಾಹಿತಿಯನ್ನು ಒದಗಿಸುವಂತೆ ಅವನನ್ನು ಅಗತ್ಯಪಡಿಸಬಹುದು ಮತ್ತು ಅಂಥ ಅಧಿಭೋಗದಾರನು ಅಂಥ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು.

(4) ಈ ಪ್ರಕರಣದ ಉಪಬಂಧವು, ಮೇಲೆ ಹೇಳಿದಂಥ ಯಾವುದೇ ಕೆಲಸದ ವೆಚ್ಚಗಳ ಸಂದಾಯದ ಸಂಬಂಧದಲ್ಲಿ ಯಾರೇ ಮಾಲೀಕನ ಮತ್ತು ಅಧಿಭೋಗದಾರನ ನಡುವೆ ಆಗಿರುವ ಯಾವುದೇ ಕರಾರಿಗೆ ಬಾಧಕವಾಗತಕ್ಕದ್ದಲ್ಲ.

**464. ಸರ್ಚಾರ್ಜುಗಳನ್ನು ಮತ್ತು ಚಾರ್ಜುಗಳನ್ನು ವಸೂಲಿ ಮಾಡುವ ಬಗ್ಗೆ.–** (1) IXನೇ ಅನುಸೂಚಿಯ 16ನೇ ನಿಯಮದ ಮೇರೆಗೆ ಯಾರೇ ವ್ಯಕ್ತಿಯಿಂದ ಬಾಕಿ ಬರಬೇಕಾಗಿದೆ ಎಂದು ಲೆಕ್ಕಪರಿಶೋಧಕರು ಪ್ರಮಾಣೀಕರಿಸಿದ ಪ್ರತಿಯೊಂದು ಮೊತ್ತವನ್ನು ಅಂಥ ವ್ಯಕ್ತಿಯು, ಆಯುಕ್ತರ ತೀರ್ಮಾನವನ್ನು ಅವನು ಸ್ವೀಕರಿಸಿದಂದಿನಿಂದ ಒಂದು ತಿಂಗಳ ಒಳಗಾಗಿ ನಗರಪಾಲಿಕೆಯ ನಿಧಿಗಳನ್ನು ಇಟ್ಟಿರುವ ಖಜಾನೆಗೆ ಅಥವಾ ಬ್ಯಾಂಕಿಗೆ, ಆ ಕಾಲಾವಧಿಯ ಒಳಗೆ ಆ ವ್ಯಕ್ತಿಯು ನ್ಯಾಯಾಲಯಕ್ಕೆ ಅಥವಾ ಸರ್ಕಾರಕ್ಕೆ IXನೇ ಅನುಸೂಚಿಯ 15ನೇ ನಿಯಮದಲ್ಲಿ ಉಪಬಂಧಿಸಿರುವಂತೆ ಅರ್ಜಿ ಸಲ್ಲಿಸಿದ ಹೊರತು, ಸಂದಾಯ ಮಾಡತಕ್ಕದ್ದು;

(2) ಸದರಿ ಮೊತ್ತವನ್ನು ಸಂದಾಯ ಮಾಡದಿದ್ದರೆ, ಅಥವಾ IXನೇ ಅನುಸೂಚಿಯ 15 ಅಥವಾ 16ನೇ ನಿಯಮದಲ್ಲಿ ಉಪಬಂಧಿಸಿರುವಂತೆ ಲೆಕ್ಕಪರಿಶೋಧಕರ ತೀರ್ಮಾನದ ವಿರುದ್ಧ ನ್ಯಾಯಾಲಯಕ್ಕೆ ಅಥವಾ ಸರ್ಕಾರಕ್ಕೆ ಅರ್ಜಿ ಸಲ್ಲಿಸಿದ್ದರೆ, ನ್ಯಾಯಾಲಯವು ಅಥವಾ ಸರ್ಕಾರವು ಬಾಕಿ ಇದೆ ಎಂದು ಘೋಷಿಸುವಂಥ ಮೊತ್ತವು ಆಯುಕ್ತರು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯ ಮೇಲೆ ಆಯುಕ್ತರ ಹೆಸರಿನಲ್ಲಿ ನ್ಯಾಯಾಲಯವು ಡಿಕ್ರಿ ಮಾಡಲಾದ ಮೊಬಲಗು ಎಂಬಂತೆ ಅದೇ ರೀತಿಯಲ್ಲಿ ವಸೂಲಿ ಮಾಡುವಂಥದ್ದು ಆಗಿರತಕ್ಕದ್ದು.

**465. ವೆಚ್ಚಗಳ ಸಂದಾಯವನ್ನು ಕಂತುಗಳಲ್ಲಿ ಸ್ವೀಕರಿಸುವುದಕ್ಕೆ ಒಪ್ಪಲು ಆಯುಕ್ತರ ಅಧಿಕಾರ.–** 470ನೇ ಪ್ರಕರಣದ ಮೇರೆಗೆ ಉಪಬಂಧಿಸಿದ ರೀತಿಯಲ್ಲಿ ಮೇಲೆ ಹೇಳಿದಂಥ ಯಾವುದೇ ವೆಚ್ಚಗಳನ್ನು ವಸೂಲಿ ಮಾಡುವುದಕ್ಕೆ ಬದಲಾಗಿ, ಆಯುಕ್ತರು, ತಾವು ಸೂಕ್ತವೆಂದು ಭಾವಿಸಿದರೆ ಮತ್ತು ಸ್ಥಾಯೀ ಸಮಿತಿಯ ಅನುಮೋದನೆ ಪಡೆದು ಆ ಮೊಬಲಗನ್ನು ಐದು ವರ್ಷಗಳಿಗೆ ಮೀರದ ಅವಧಿಯೊಳಗೆ, ಪ್ರತಿ ವರ್ಷಕ್ಕೆ ಶೇಕಡ ಒಂಬತ್ತರ ದರದಲ್ಲಿ ಅದರ ಮೇಲಿನ ಬಡ್ಡಿಯೊಂದಿಗೆ ಬಾಕಿಯಿರುವ ಪೂರ್ಣ ಮೊಬಲಗು ಸಂದಾಯವಾಗುವುದನ್ನು ಸುನಿಶ್ಚಿತಪಡಿಸಿಕೊಳ್ಳುವ ಹಾಗೆ ಅಂಥ ಮೊಬಲಗುಗಳ ಕಂತುಗಳಲ್ಲಿ ಮತ್ತು ಅಂಥ ಕಾಲಾಂತರಗಳಲ್ಲಿ ಅದನ್ನು ಸಂದಾಯ ಮಾಡುವ ಬಗ್ಗೆ ಅದರ ಸಂದಾಯಕ್ಕೆ ಹೊಣೆಗಾರನಾದ ವ್ಯಕ್ತಿಯಿಂದ ಒಂದು ಒಪ್ಪಂದ ಪತ್ರವನ್ನು ಪಡೆದುಕೊಳ್ಳಬಹುದು.

**466. ಕೆಲವು ಕಾಮಗಾರಿಗಳ ಮೇಲಿನ ವೆಚ್ಚಗಳನ್ನು ಮೇಲ್ಪಾಟು ವೆಚ್ಚಗಳೆಂದು ಘೋಷಿಸಲು ಅಧಿಕಾರ.–** ವಸೂಲಿ ಮಾಡಬೇಕಾದ ವೆಚ್ಚಗಳನ್ನು,–

(ಎ) 189ನೇ ಪ್ರಕರಣ, 225ನೇ ಪ್ರಕರಣ, 227ನೇ ಪ್ರಕರಣ, 272ನೇ ಪ್ರಕರಣದ (1)ನೇ ಉಪ–ಪ್ರಕರಣದ (ಬಿ) ಖಂಡದ, 283ನೇ ಪ್ರಕರಣ, 328ನೇ ಪ್ರಕರಣದ (1) ಮತ್ತು (2)ನೇ ಉಪ–ಪ್ರಕರಣಗಳು, 332ನೇ ಪ್ರಕರಣ, 337ನೇ ಪ್ರಕರಣ, 376ನೇ ಪ್ರಕರಣ ಅಥವಾ 462ನೇ ಪ್ರಕರಣದಲ್ಲಿ; ಅಥವಾ

(ಬಿ) ಈ ಅಧಿನಿಯಮದ ಮೇರೆಗೆ ರಚಿಸಿದ ಯಾವ ನಿಯಮದಲ್ಲಿ ಈ ಪ್ರಕರಣವನ್ನು ಅಂಥ ವೆಚ್ಚಗಳಿಗೆ ಅನ್ವಯವಾಗುವಂತೆ ಮಾಡಲಾಗಿದೆಯೋ ಆ ನಿಯಮದಲ್ಲಿ

– ತಿಳಿಸಿದ ಯಾವುದೇ ಕೆಲಸಕ್ಕೆ ಸಂಬಂಧಿಸಿದಂತೆ ವಹಿಸಿದ್ದರೆ ಅಥವಾ ವಹಿಸಬೇಕಾಗಿದ್ದರೆ, ಆಯುಕ್ತರು, ತಾವು ಸೂಕ್ತವೆಂದು ಭಾವಿಸಿದರೆ ಮತ್ತು ಸ್ಥಾಯೀ ಸಮಿತಿಯ ಅನುಮೋದನೆ ಪಡೆದು ಅಂಥ ವೆಚ್ಚಗಳನ್ನು ಮೇಲ್ವಾಟು ವೆಚ್ಚಗಳೆಂದು ಘೋಷಿಸಬಹುದು.

**467. ಮೇಲ್ವಾಟು ವೆಚ್ಚಗಳನ್ನು ಯಾರು ಸಂದಾಯ ಮಾಡಬೇಕು.–** (1) ಯಾವ ಆವರಣಗಳ ಸಂಬಂಧದಲ್ಲಿ ಅಥವಾ ಯಾವ ಆವರಣಗಳ ಪ್ರಯೋಜನಕ್ಕಾಗಿ ಮೇಲ್ವಾಟು ವೆಚ್ಚಗಳನ್ನು ಮಾಡಲಾಗಿದೆಯೋ ಆ ಆವರಣಗಳ ಮೇಲೆ ಆ ವೆಚ್ಚಗಳು ಋಣಭಾರವಾಗಿರತಕ್ಕದ್ದು ಮತ್ತು ಆಯುಕ್ತರು ಪ್ರತಿಯೊಂದು ಸಂದರ್ಭದಲ್ಲಿ ನಿರ್ಧರಿಸಬಹುದಾದಂತೆ ಇಪ್ಪತ್ತು ವರ್ಷಗಳಿಗೆ ಮೀರದಂಥ ಅವಧಿಯೊಳಗೆ ಅಂಥ ವೆಚ್ಚಗಳನ್ನು ಅವುಗಳ ಮೇಲಿನ ಬಡ್ಡಿಯೊಂದಿಗೆ ತೀರಿಸಲು ಸಾಕಾಗುವಂಥ ಮೊಬಲಗುಗಳ ಕಂತುಗಳಲ್ಲಿ ಮತ್ತು ಅಂಥ ಅಂತರಗಳಲ್ಲಿ, ಅವು ವಸೂಲಿ ಮಾಡುವಂಥವು ಆಗಿರತಕ್ಕದ್ದು.

(2) ಸದರಿ ಕಂತುಗಳು, ಯಾವ ಆವರಣಗಳ ಮೇಲೆ ವೆಚ್ಚಗಳ ಋಣಭಾರ ಹೊರಿಸಲಾಗಿದೆಯೋ ಆ ಯಾವುವೇ ಆವರಣಗಳ ಮಾಲೀಕನು ಅಥವಾ ಅಧಿಭೋಗದಾರನು ಸಂದಾಯ ಮಾಡುವಂಥವುಗಳು ಆಗಿರತಕ್ಕದ್ದು:

ಪರಂತು, ಯಾವುದೇ ಅಂಥ ಕಂತನ್ನು ಅಧಿಭೋಗದಾರನು ಸಂದಾಯ ಮಾಡಿದಾಗ ಅವನು ಮಾಲೀಕನಿಗೆ ಸಂದಾಯ ಮಾಡಬೇಕಾದ ಬಾಡಿಗೆಯಿಂದ ಆ ಕಂತಿನ ಮೊಬಲಗನ್ನು ಮುರಿದುಕೊಳ್ಳಲು ಅಥವಾ ಮಾಲೀಕನಿಂದ ಅದನ್ನು ವಸೂಲಿ ಮಾಡಲು ಅವನು ಹಕ್ಕುಳ್ಳವನಾಗಿರತಕ್ಕದ್ದು.

**468. ಮೇಲ್ವಾಟು ವೆಚ್ಚಗಳಿಗೆ ಸಂಬಂಧಿಸಿದ ಋಣಭಾರದ ವಿಮೋಚನೆ.–** ಯಾವುದೇ ಮೇಲ್ವಾಟು ವೆಚ್ಚಗಳ ಸಂದಾಯದ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ಯಾವುದೇ ಕಾಲದಲ್ಲಿ ಯಾವ ಆವರಣಗಳ ಮೇಲೆ ವೆಚ್ಚಗಳ ಋಣಭಾರ ಹೊರಿಸಲಾಗಿದೆಯೋ, ಆ ಆವರಣದ ಮಾಲೀಕನು ಅಥವಾ ಅಧಿಭೋಗದಾರನು, ಸದರಿ ವೆಚ್ಚಗಳಲ್ಲಿ ಇನ್ನೂ ಸಂದಾಯ ಮಾಡಬೇಕಾಗಿರುವಂಥ ಭಾಗವನ್ನು ಆಯುಕ್ತರಿಗೆ ಸಂದಾಯ ಮಾಡುವ ಮೂಲಕ ಅಂಥ ಋಣಭಾರದಿಂದ ವಿಮೋಚನೆ ಹೊಂದಬಹುದು.

[1][**468ಎ. ಚುನಾವಣಾ ಉದ್ದೇಶಗಳಿಗಾಗಿ ಆವರಣಗಳು, ವಾಹನಗಳು, ಇತ್ಯಾದಿಗಳನ್ನು ಕಡ್ಡಾಯವಾಗಿ ಕೋರುವುದು.–** (1) ಈ ಅಧಿನಿಯಮದ ಮೇರೆಗೆ ನಗರಪಾಲಿಕೆಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿ ರಾಜ್ಯ ಚುನಾವಣಾ ಆಯೋಗವು ಅಧಿಕೃತಗೊಳಿಸಿದ ಅಧಿಕಾರಿಗೆ (ಇದರಲ್ಲಿ ಇನ್ನು ಮುಂದೆ "ಕಡ್ಡಾಯವಾಗಿ ಕೋರುವ ಪ್ರಾಧಿಕಾರಿ" ಎಂದು ಉಲ್ಲೇಖಿಸಿದೆ) ಈ ಅಧಿನಿಯಮದ ಮೇರೆಗೆ ಚುನಾವಣೆಗೆ ಸಂಬಂಧಿಸಿದಂತೆ,–

1. 1995ರ ಅಧಿನಿಯಮ ಸಂಖ್ಯೆ 25ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ 468ಎ ಯಿಂದ 468ಜಿ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

(ಎ) ಯಾವುದೇ ಆವರಣವು, ಮತಗಟ್ಟೆಯಾಗಿ ಬಳಸುವ ಉದ್ದೇಶಕ್ಕಾಗಿ ಅಥವಾ ಮತದಾನ ನಡೆದ ತರುವಾಯ ಮತ ಪೆಟ್ಟಿಗೆಗಳನ್ನು ದಾಸ್ತಾನು ಮಾಡುವುದಕ್ಕಾಗಿ ಬೇಕಾಗಿದೆಯೆಂದು ಅಥವಾ ಬೇಕಾಗುವ ಸಂಭವವಿದೆಯೆಂದು ಕಂಡುಬಂದರೆ; ಅಥವಾ

(ಬಿ) ಯಾವುದೇ ವಾಹನವು, ನೌಕೆಯು ಅಥವಾ ಪ್ರಾಣಿಯು ಯಾವುದೇ ಮತಗಟ್ಟೆಗೆ ಅಥವಾ ಯಾವುದೇ ಮತಗಟ್ಟೆಯಿಂದ ಮತ ಪೆಟ್ಟಿಗೆಗಳನ್ನು ಸಾಗಿಸುವ ಅಥವಾ ಅಂಥ ಚುನಾವಣೆಯನ್ನು ನಡೆಸುವಾಗ ಸುವ್ಯವಸ್ಥೆಯನ್ನು ಕಾಪಾಡಲು ಪೊಲೀಸರನ್ನು ಸಾಗಿಸುವ ಅಥವಾ ಅಂಥ ಚುನಾವಣೆಗೆ ಸಂಬಂಧಿಸಿದ ಯಾವುದೇ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿ ಯಾರೇ ಅಧಿಕಾರಿಯನ್ನು ಅಥವಾ ಇತರ ವ್ಯಕ್ತಿಯನ್ನು ಸಾಗಿಸುವ ಉದ್ದೇಶಕ್ಕಾಗಿ ಬೇಕಾಗಿದೆ ಎಂದು ಅಥವಾ ಬೇಕಾಗುವ ಸಂಭವವಿದೆಯೆಂದು ಕಂಡುಬಂದರೆ

– ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಲಿಖಿತ ಆದೇಶದ ಮೂಲಕ ಅಂಥ ಆವರಣವನ್ನು ಅಥವಾ ಸಂದರ್ಭಾನುಸಾರ, ಅಂಥ ವಾಹನವನ್ನು, ನೌಕೆಯನ್ನು ಅಥವಾ ಪ್ರಾಣಿಯನ್ನು ಒದಗಿಸುವಂತೆ ಕಡ್ಡಾಯವಾಗಿ ಕೋರಬಹುದು ಮತ್ತು ಆ ಕಡ್ಡಾಯ ಕೋರಿಕೆಯ ಸಂಬಂಧದಲ್ಲಿ ತನಗೆ ಅಗತ್ಯವೆಂದು ಅಥವಾ ವಿಹಿತವೆಂದು ಕಂಡುಬರಬಹುದಾದಂಥ ಹೆಚ್ಚಿನ ಆದೇಶಗಳನ್ನು ಮಾಡಬಹುದು:

ಪರಂತು, ಯಾರೇ ಅಭ್ಯರ್ಥಿಯ ಚುನಾವಣೆಗೆ ಸಂಬಂಧಿಸಿದ ಯಾವುದೇ ಉದ್ದೇಶಕ್ಕಾಗಿ ಅಂಥ ಅಭ್ಯರ್ಥಿ ಅಥವಾ ಅವನ ಏಜೆಂಟನು ಕಾನೂನುಬದ್ಧವಾಗಿ ಉಪಯೋಗಿಸುತ್ತಿರುವಂಥ ಯಾವುದೇ ವಾಹನವನ್ನು, ನೌಕೆಯನ್ನು ಅಥವಾ ಪ್ರಾಣಿಯನ್ನು ಅಂಥ ಚುನಾವಣೆಗಳ ಮತದಾನವು ಮುಕ್ತಾಯವಾಗುವವರೆಗೆ ಈ ಉಪ–ಪ್ರಕರಣದ ಮೇರೆಗೆ ಕಡ್ಡಾಯವಾಗಿ ಕೋರತಕ್ಕದ್ದಲ್ಲ.

(2) ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು, ಸ್ವತ್ತಿನ ಮಾಲೀಕನಾಗಿರುವುದಾಗಿ ಅಥವಾ ಅದರ ಸ್ವಾಧೀನ ಹೊಂದಿರುವ ವ್ಯಕ್ತಿಯಾಗಿರುವುದಾಗಿ ಭಾವಿಸಲಾದ ವ್ಯಕ್ತಿಯ ಹೆಸರಿಗೆ ಹೊರಡಿಸಿದ ಲಿಖಿತ ಆದೇಶದ ಮೂಲಕ ಕಡ್ಡಾಯ ಕೋರಿಕೆಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಅಂಥ ಆದೇಶವನ್ನು, ಅದನ್ನು ಯಾರ ಹೆಸರಿಗೆ ಹೊರಡಿಸಲಾಗಿದೆಯೋ ಆ ವ್ಯಕ್ತಿಗೆ ನಿಯಮಿಸಿದ ರೀತಿಯಲ್ಲಿ ಜಾರಿ ಮಾಡತಕ್ಕದ್ದು.

(3) ಉಪಪ್ರಕರಣ (1)ರ ಮೇರೆಗೆ ಯಾವುದೇ ಸ್ವತ್ತನ್ನು ಕಡ್ಡಾಯವಾಗಿ ಕೋರಿದಾಗಲೆಲ್ಲಾ, ಅಂಥ ಕಡ್ಡಾಯ ಕೋರಿಕೆಯ ಅವಧಿಯನ್ನು, ಆ ಉಪಪ್ರಕರಣದಲ್ಲಿ ತಿಳಿಸಿದ ಯಾವುದೇ ಉದ್ದೇಶಕ್ಕಾಗಿ ಅಂಥ ಸ್ವತ್ತು ಯಾವ ಅವಧಿಗೆ ಬೇಕಾಗಿದೆಯೋ ಆ ಅವಧಿಯನ್ನು ಮೀರಿ ವಿಸ್ತರಿಸತಕ್ಕದ್ದಲ್ಲ.

(4) ಈ ಪ್ರಕರಣದಲ್ಲಿ,–

(ಎ) "ಆವರಣ" ಎಂದರೆ ಯಾವುದೇ ಭೂಮಿ, ಕಟ್ಟಡ ಅಥವಾ ಕಟ್ಟಡದ ಭಾಗ ಮತ್ತು ಅದು ಗುಡಿಸಲು, ಷೆಡ್ಡು ಅಥವಾ ಇತರ ರಚನೆ ಅಥವಾ ಅದರ ಯಾವುದೇ ಭಾಗವನ್ನು ಒಳಗೊಳ್ಳುತ್ತದೆ;

(ಬಿ) "ವಾಹನ" ಎಂದರೆ ಯಾಂತ್ರಿಕ ಶಕ್ತಿಯಿಂದ ಅಥವಾ ಅನ್ಯಥಾ ಚಾಲಿತವಾಗುವ ರಸ್ತೆ ಸಾರಿಗೆ ಉದ್ದೇಶಕ್ಕಾಗಿ ಬಳಸಲಾಗುವ ಅಥವಾ ಬಳಸಲು ಯೋಗ್ಯವಾದ ಯಾವುದೇ ವಾಹನ.

**468ಬಿ. ಪರಿಹಾರ ಸಂದಾಯ.–** (1) 468ಎ ಪ್ರಕರಣದ ಅನುಸಾರವಾಗಿ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಯಾವುದೇ ಆವರಣವನ್ನು ಕಡ್ಡಾಯವಾಗಿ ಕೋರಿದಾಗಲೆಲ್ಲಾ, ಸಂಬಂಧಪಟ್ಟ ನಗರಪಾಲಿಕೆಯು, ಹಿತಾಕ್ತಿಯುಳ್ಳ ವ್ಯಕ್ತಿಗಳಿಗೆ ಪರಿಹಾರವನ್ನು ಸಂದಾಯ ಮಾಡತಕ್ಕದ್ದು. ಪರಿಹಾರದ ಮೊಬಲಗನ್ನು ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು, ಈ ಕೆಳಕಂಡ ಅಂಶಗಳನ್ನು ಪರ್ಯಾಲೋಚಿಸಿ ನಿರ್ಧರಿಸತಕ್ಕದ್ದು, ಎಂದರೆ:–

(i) ಆವರಣಕ್ಕೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ಬಾಡಿಗೆ ಅಥವಾ ಯಾವುದೇ ಬಾಡಿಗೆಯನ್ನು ಹಾಗೆ ಸಂದಾಯ ಮಾಡಬೇಕಾಗದೇ ಇರುವಾಗ, ಆ ಸ್ಥಳದಲ್ಲಿ ಅಂಥದೇ ಆವರಣಕ್ಕೆ ಸಂದಾಯ ಮಾಡಬೇಕಾದ ಬಾಡಿಗೆ;

(ii) ಆವರಣಗಳನ್ನು ಕಡ್ಡಾಯವಾಗಿ ಕೋರಿದ ಪರಿಣಾಮವಾಗಿ ಹಿತಾಸಕ್ತಿಯುಳ್ಳ ವ್ಯಕ್ತಿಯು ಅವನ ವಾಸಸ್ಥಳವನ್ನು ಅಥವಾ ವ್ಯವಹಾರದ ಸ್ಥಳವನ್ನು ಬಲವಂತವಾಗಿ ಬದಲಾಯಿಸಬೇಕಾಗಿ ಬಂದರೆ, ಅಂಥ ಬದಲಾವಣೆಗೆ ಪ್ರಾಸಂಗಿಕವಾದ ಯುಕ್ತ ವೆಚ್ಚಗಳು, ಯಾವುದಾದರೂ ಇದ್ದರೆ, ಅವುಗಳು:

ಪರಂತು, ಹಾಗೆ ನಿರ್ಧರಿಸಿದ ಪರಿಹಾರದ ಮೊಬಲಗಿನಿಂದ ಬಾಧಿತನಾದ ಹಿತಾಸಕ್ತಿಯುಳ್ಳ ಯಾರೇ ವ್ಯಕ್ತಿಯು (1)ನೇ ಉಪ-ಪ್ರಕರಣದ ಮೇರೆಗಿನ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಗೆ ಅರ್ಜಿಯನ್ನು ಸಲ್ಲಿಸಿದಾಗ, ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಆ ವಿಷಯವನ್ನು ನಿರ್ಧರಣೆಗಾಗಿ ಆ ಸ್ಥಳದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಧೀಶರಿಗೆ ಒಪ್ಪಿಸತಕ್ಕದ್ದು ಮತ್ತು ಸಂದಾಯ ಮಾಡಬೇಕಾದ ಪರಿಹಾರದ ಮೊಬಲಗು ಆ ಸಿವಿಲ್ ನ್ಯಾಯಾಧೀಶರು ನಿರ್ಧರಿಸಬಹುದಾದಂಥದ್ದಾಗಿರತಕ್ಕದ್ದು.

**ವಿವರಣೆ.-** ಈ ಉಪ-ಪ್ರಕರಣದಲ್ಲಿ "ಹಿತಾಸಕ್ತಿಯುಳ್ಳ ವ್ಯಕ್ತಿ" ಎಂದರೆ, ಕಡ್ಡಾಯ ಕೋರಿಕೆಯ ನಿಕಟಪೂರ್ವದಲ್ಲಿ ಕಡ್ಡಾಯವಾಗಿ ಕೋರಿದ ಆವರಣದ ವಾಸ್ತವಿಕ ಸ್ವಾಧೀನತೆಯನ್ನು ಹೊಂದಿದ್ದ ವ್ಯಕ್ತಿ ಅಥವಾ ಯಾರೇ ವ್ಯಕ್ತಿಯು ಅಂಥ ವಾಸ್ತವಿಕ ಸ್ವಾಧೀನತೆಯನ್ನು ಹೊಂದಿಲ್ಲದಿರುವಲ್ಲಿ ಅಂಥ ಆವರಣದ ಮಾಲೀಕ.

(2) 468ಎ ಪ್ರಕರಣದ ಅನುಸಾರವಾಗಿ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಯಾವುದೇ ವಾಹನವನ್ನು, ನೌಕೆಯನ್ನು ಅಥವಾ ಪ್ರಾಣಿಯನ್ನು ಕಡ್ಡಾಯವಾಗಿ ಕೋರಿದಾಗಲೆಲ್ಲಾ ನಗರಪಾಲಿಕೆಯು ಅದರ ಮಾಲೀಕನಿಗೆ ಪರಿಹಾರವನ್ನು ಸಂದಾಯ ಮಾಡತಕ್ಕದ್ದು, ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಪರಿಹಾರದ ಮೊಬಲಗನ್ನು ಅಂಥ ವಾಹನದ, ನೌಕೆಯ ಅಥವಾ ಪ್ರಾಣಿಯ ಬಾಡಿಗೆಗಾಗಿ ಆ ಸ್ಥಳದಲ್ಲಿ ಚಾಲ್ತಿಯಲ್ಲಿರುವ ಹಾಸಲುಗಳು ಅಥವಾ ದರಗಳ ಆಧಾರಗಳ ಮೇಲೆ ನಿರ್ಧರಿಸತಕ್ಕದ್ದು:

ಪರಂತು, ಹಾಗೆ ನಿರ್ಧರಿಸಿದ ಪರಿಹಾರ ಮೊಬಲಗಿನಿಂದ ಬಾಧಿತನಾದ, ಅಂಥ ವಾಹನದ, ನೌಕೆಯ ಅಥವಾ ಪ್ರಾಣಿಯ ಮಾಲೀಕನು ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಗೆ ಮೂವತ್ತು ದಿನಗಳೊಳಗೆ ಅರ್ಜಿಯನ್ನು ಸಲ್ಲಿಸಿದಲ್ಲಿ, ಆ ಸ್ಥಳದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಧೀಶರಿಗೆ ಆ ವಿಷಯವನ್ನು ಒಪ್ಪಿಸತಕ್ಕದ್ದು ಮತ್ತು ಸಂದಾಯ ಮಾಡಬೇಕಾದ ಪರಿಹಾರದ ಮೊಬಲಗು ಆ ಸಿವಿಲ್ ನ್ಯಾಯಾಧೀಶರು ನಿರ್ಧರಿಸಬಹುದಾದಂಥದ್ದು ಆಗಿರತಕ್ಕದ್ದು:

ಮತ್ತೂ ಪರಂತು, ಕಡ್ಡಾಯ ಕೋರಿಕೆಯ ನಿಕಟಪೂರ್ವದಲ್ಲಿ ವಾಹನವು ಅಥವಾ ನೌಕೆಯು ಕಂತು ಖರೀದಿ ಒಪ್ಪಂದದ ಕಾರಣದಿಂದಾಗಿ ಅದರ ಮಾಲೀಕನಲ್ಲದ ವ್ಯಕ್ತಿಯ ಸ್ವಾಧೀನದಲ್ಲಿ ಇದ್ದಾಗ, ಈ ಉಪಪ್ರಕರಣದ ಮೇರೆಗೆ ಒಟ್ಟು ಪರಿಹಾರವಾಗಿ ನಿರ್ಧರಿಸಿದ ಮೊಬಲಗನ್ನು ಆ ವ್ಯಕ್ತಿಯ ಮತ್ತು ಮಾಲೀಕನ ನಡುವೆ, ಅವರು ಒಪ್ಪಬಹುದಾದಂಥ ರೀತಿಯಲ್ಲಿ ಮತ್ತು ಅವರು ಒಪ್ಪದಿದ್ದರೆ, ಆ ಬಗ್ಗೆ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ನೇಮಕ ಮಾಡಿದ ಮಧ್ಯಸ್ಥಗಾರನು ತೀರ್ಮಾನಿಸಬಹುದಾದಂಥ ರೀತಿಯಲ್ಲಿ ಹಂಚತಕ್ಕದ್ದು.

**468ಸಿ. ಮಾಹಿತಿಯನ್ನು ಪಡೆಯಲು ಅಧಿಕಾರ.-** ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು 468ಎ ಪ್ರಕರಣದ ಮೇರೆಗೆ ಯಾವುದೇ ಸ್ವತ್ತನ್ನು ಕಡ್ಡಾಯವಾಗಿ ಕೋರುವ ಅಥವಾ 468ಬಿ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಯಾವುದೇ ಪರಿಹಾರವನ್ನು ನಿರ್ಧರಿಸುವ ದೃಷ್ಟಿಯಿಂದ, ಆದೇಶದ ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕಾರಿಗೆ, ಹಾಗೆ ನಿರ್ದಿಷ್ಟಪಡಿಸಬಹುದಾದಂಥ ಸ್ವತ್ತಿಗೆ ಸಂಬಂಧಪಟ್ಟಂತೆ ಅವನಲ್ಲಿರುವಂಥ ಮಾಹಿತಿಯನ್ನು ಒದಗಿಸುವಂತೆ ಯಾರೇ ವ್ಯಕ್ತಿಯನ್ನು ಅಗತ್ಯಪಡಿಸಬಹುದು.

**468ಡಿ. ಆವರಣಗಳು ಇತ್ಯಾದಿಗಳಿಗೆ ಪ್ರವೇಶಿಸುವ ಮತ್ತು ಅವುಗಳನ್ನು ಪರಿಶೀಲಿಸುವ ಅಧಿಕಾರ.-**(1) ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಈ ಬಗ್ಗೆ ಅಧಿಕೃತಗೊಳಿಸಿರುವ ಯಾರೇ ವ್ಯಕ್ತಿಯು 468ಸಿ ಪ್ರಕರಣದ ಮೇರೆಗೆ ಯಾವುದೇ ಆವರಣಗಳು, ವಾಹನ, ನೌಕೆ ಅಥವಾ ಪ್ರಾಣಿಗೆ ಸಂಬಂಧಪಟ್ಟಂತೆ ಆದೇಶವನ್ನು ಮಾಡಬೇಕೇ ಮತ್ತು ಹಾಗೆ ಮಾಡಬೇಕಾದರೆ ಯಾವ ರೀತಿಯಲ್ಲಿ ಮಾಡಬೇಕು ಎಂಬುದನ್ನು ನಿರ್ಧರಿಸುವ ಉದ್ದೇಶಕ್ಕಾಗಿ ಅಥವಾ ಆ ಪ್ರಕರಣದ ಮೇರೆಗೆ ಮಾಡಿದ ಯಾವುದೇ ಆದೇಶದ ಪಾಲನೆಯನ್ನು ಸುನಿಶ್ಚಿತಗೊಳಿಸುವ ದೃಷ್ಟಿಯಿಂದ ಅಂಥ ಯಾವುದೇ ಆವರಣಗಳೊಳಕ್ಕೆ ಪ್ರವೇಶಿಸಬಹುದು ಮತ್ತು ಅಂಥ ಆವರಣಗಳನ್ನು ಮತ್ತು ಅದರಲ್ಲಿರುವ ಯಾವುದೇ ವಾಹನ, ನೌಕೆ ಅಥವಾ ಪ್ರಾಣಿಯನ್ನು ಪರಿಶೀಲಿಸಬಹುದು.

(2) ಈ ಪ್ರಕರಣದಲ್ಲಿ "ಆವರಣಗಳು" ಮತ್ತು "ವಾಹನ" ಎಂಬ ಪದಗಳು 468ಎ ಪ್ರಕರಣದಲ್ಲಿ ಅವುಗಳಿಗೆ ಕೊಟ್ಟಿರುವ ಅರ್ಥವನ್ನೇ ಹೊಂದಿರುತ್ತವೆ.

**468ಇ. ಕಡ್ಡಾಯವಾಗಿ ಕೋರಿರುವ ಆವರಣಗಳಿಂದ ಹೊರಹಾಕುವುದು.-** (1) 468ಎ ಪ್ರಕರಣದ ಮೇರೆಗೆ ಮಾಡಿದ ಯಾವುದೇ ಆದೇಶವನ್ನು ಉಲ್ಲಂಘಿಸಿ, ಕಡ್ಡಾಯವಾಗಿ ಕೋರಿದ ಯಾವುದೇ ಆವರಣದ ಸ್ವಾಧೀನತೆಯನ್ನು ಉಳಿಸಿಕೊಂಡಿರುವ ಯಾರೇ ವ್ಯಕ್ತಿಯನ್ನು, ಈ ಬಗ್ಗೆ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯಿಂದ ಅಧಿಕಾರ ಪಡೆದಿರುವ ಯಾರೇ ಅಧಿಕಾರಿಯು ಆ ಆವರಣದಿಂದ ಕ್ಷಿಪ್ರವಾಗಿ ಹೊರಹಾಕಬಹುದು.

(2) ಹಾಗೆ ಅಧಿಕಾರ ಪಡೆದಿರುವ ಯಾರೇ ಅಧಿಕಾರಿಯು ಸಾರ್ವಜನಿಕವಾಗಿ ಕಾಣಿಸಿಕೊಳ್ಳದ ಯಾರೇ ಮಹಿಳೆಗೆ ಆವರಣವನ್ನು ಬಿಟ್ಟುಹೋಗಲು ಸೂಕ್ತ ಎಚ್ಚರಿಕೆಯನ್ನು ಮತ್ತು ಸೌಲಭ್ಯವನ್ನು ಕೊಟ್ಟ ತರುವಾಯ, ಯಾವುದೇ ಕಟ್ಟಡದ ಯಾವುದೇ ಬೀಗವನ್ನು ಅಥವಾ ಚಿಲಕವನ್ನು ಕಿತ್ತುಹಾಕಬಹುದು ಅಥವಾ ತೆರೆಯಬಹುದು ಅಥವಾ ಅದರ ಯಾವುದೇ ಬಾಗಿಲನ್ನು ಒಡೆಯಬಹುದು ಅಥವಾ ಹಾಗೆ ಹೊರಹಾಕುವುದಕ್ಕಾಗಿ ಅವಶ್ಯವಾದ ಯಾವುದೇ ಇತರ ಕಾರ್ಯವನ್ನು ಮಾಡಬಹುದು.

**468ಎಫ್. ಕಡ್ಡಾಯ ಕೋರಿಕೆಯಿಂದ ಆವರಣಗಳ ಬಿಡುಗಡೆ.-** (1) 468ಎ ಪ್ರಕರಣದ ಮೇರೆಗೆ ಕಡ್ಡಾಯವಾಗಿ ಕೋರಲಾದ ಯಾವುದೇ ಅವರಣವನ್ನು ಕಡ್ಡಾಯ ಕೋರಿಕೆಯಿಂದ ಬಿಡುಗಡೆ ಮಾಡಬೇಕಾದಾಗ, ಅದರ ಸ್ವಾಧೀನತೆಯನ್ನು, ಆವರಣವನ್ನು ಕಡ್ಡಾಯವಾಗಿ ಕೋರಿದ ಕಾಲದಲ್ಲಿ ಯಾರಿಂದ ಅದನ್ನು ಸ್ವಾಧೀನತೆ ಪಡೆಯಲಾಯಿತೋ ಆ ವ್ಯಕ್ತಿಗೆ ಅಥವಾ ಅಂಥ ಯಾರೇ ವ್ಯಕ್ತಿಯು ಇಲ್ಲದಿದ್ದರೆ ಅಂಥ ಆವರಣದ ಮಾಲೀಕನೆಂದು ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಭಾವಿಸಿದ ವ್ಯಕ್ತಿಗೆ ವಾಪಸು ಮಾಡತಕ್ಕದ್ದು ಮತ್ತು ಹಾಗೆ ಸ್ವಾಧೀನತೆಯನ್ನು ವಾಪಸು ಮಾಡುವುದು, ಹಾಗೆ ವಾಪಸು ಮಾಡುವುದಕ್ಕೆ ಸಂಬಂಧಿಸಿದಂತೆ ಎಲ್ಲ ಹೊಣೆಗಾರಿಕೆಗಳಿಂದ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯನ್ನು ಪೂರ್ಣವಾಗಿ ವಿಮೋಚನೆಗೊಳಿಸಿದಂಥಾಗತಕ್ಕದ್ದು. ಆದರೆ, ಆ ಆವರಣಗಳ ಸ್ವಾಧೀನತೆಯನ್ನು ಯಾರಿಗೆ ಹಾಗೆ ವಾಪಸು ಮಾಡಲಾಯಿತೋ ಆ ವ್ಯಕ್ತಿಯ ವಿರುದ್ಧ, ಆವರಣಗಳಿಗೆ ಸಂಬಂಧಿಸಿದ ಯಾವ ಹಕ್ಕುಗಳನ್ನು ಯಾರೇ ಇತರ ವ್ಯಕ್ತಿಯು, ಕಾನೂನಿನ ಯುಕ್ತ ಕ್ರಮದ ಮೂಲಕ ಜಾರಿಗೊಳಿಸಲು ಹಕ್ಕುಳ್ಳವನಾಗಿರಬಹುದೋ ಆ ಯಾವುದೇ ಹಕ್ಕುಗಳಿಗೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

(2) 468ಎ ಪ್ರಕರಣದ ಮೇರೆಗೆ ಕಡ್ಡಾಯವಾಗಿ ಕೋರಲಾದ ಯಾವುದೇ ಆವರಣದ ಸ್ವಾಧೀನತೆಯನ್ನು (1)ನೇ ಉಪಪ್ರಕರಣದ ಮೇರೆಗೆ ಯಾವ ವ್ಯಕ್ತಿಗೆ ನೀಡಬೇಕಾಗಿದೆಯೋ ಆ ವ್ಯಕ್ತಿಯು ಸಿಗದಿರುವಲ್ಲಿ ಅಥವಾ ತಕ್ಷಣಕ್ಕೆ ಅವನ ಬಗ್ಗೆ ಖಚಿತಪಡಿಸಿಕೊಳ್ಳಲು ಆಗದಿರುವಲ್ಲಿ ಅಥವಾ ಅವನ ಪರವಾಗಿ ವಾಪಸು ಕೊಡುವುದನ್ನು ಸ್ವೀಕರಿಸಲು ಅಧಿಕಾರ ಪಡೆದ ಯಾರೇ ಏಜೆಂಟ್‍ನು ಅಥವಾ ಯಾರೇ ಇತರ ವ್ಯಕ್ತಿಯು ಇಲ್ಲದಿರುವಲ್ಲಿ, ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು, ಅಂಥ ಆವರಣವನ್ನು ಕಡ್ಡಾಯ ಕೋರಿಕೆಯಿಂದ ಬಿಡುಗಡೆ ಮಾಡಲಾಗಿದೆ ಎಂದು ನೋಟೀಸನ್ನು ಅಂಥ ಆವರಣದ ಎದ್ದು ಕಾಣುವ ಭಾಗದಲ್ಲಿ ಮತ್ತು ನಗರಪಾಲಿಕೆಯ ಕಚೇರಿಯ ಸೂಚನಾ ಫಲಕದಲ್ಲಿ ಅಂಟಿಸುವಂತೆ ಮಾಡತಕ್ಕದ್ದು.

(3) (2)ನೇ ಉಪಪ್ರಕರಣದಲ್ಲಿ ಉಪಬಂಧಿಸಿದಂತೆ, ನೋಟೀಸನ್ನು ಸೂಚನಾ ಫಲಕದ ಮೇಲೆ ಅಂಟಿಸಿದಾಗ, ಅಂಥ ನೋಟಿಸಿನಲ್ಲಿ, ನಿರ್ದಿಷ್ಟಪಡಿಸಿದ ಆವರಣಗಳು, ಆ ನೋಟೀಸನ್ನು ಹಾಗೆ ಅಂಟಿಸಿದ ದಿನಾಂಕದಂದು ಮತ್ತು ಅಂದಿನಿಂದ ಕಡ್ಡಾಯ ಕೋರಿಕೆಗೆ ಒಳಪಟ್ಟಿರುವುದು ನಿಂತುಹೋಗತಕ್ಕದ್ದು ಮತ್ತು ಅದರ ಸ್ವಾಧೀನತೆಯನ್ನು ಹೊಂದಲು ಹಕ್ಕುಳ್ಳ ವ್ಯಕ್ತಿಗೆ ಅದನ್ನು ವಾಪಸ್ಸು ಮಾಡಿರುವುದಾಗಿ ಭಾವಿಸತಕ್ಕದ್ದು ಮತ್ತು ಸದರಿ ದಿನಾಂಕದ ತರುವಾಯದ ಯಾವುದೇ ಅವಧಿಗೆ ಅಂಥ ಆವರಣಕ್ಕೆ ಸಂಬಂಧಿಸಿದಂತೆ ಯಾವುದೇ ಪರಿಹಾರಕ್ಕೆ ಅಥವಾ ಇತರ ಕ್ಲೇಮಿಗಾಗಿ ಕಡ್ಡಾಯವಾಗಿ ಕೋರುವ ಪ್ರಾಧಿಕಾರಿಯು ಅಥವಾ ನಗರಪಾಲಿಕೆಯು ಹೊಣೆಯಾಗಿರತಕ್ಕದ್ದಲ್ಲ.

**468ಜಿ. ಕಡ್ಡಾಯ ಕೋರಿಕೆಗೆ ಸಂಬಂಧಿಸಿದ ಯಾವುದೇ ಆದೇಶದ ಉಲ್ಲಂಘನೆಗೆ ದಂಡನೆ.–** ಯಾರೇ ವ್ಯಕ್ತಿಯು, 468ಎ ಪ್ರಕರಣದ ಅಥವಾ 468ಸಿ ಪ್ರಕರಣದ ಮೇರೆಗೆ ಮಾಡಿದ ಯಾವುದೇ ಆದೇಶವನ್ನು ಉಲ್ಲಂಘಿಸಿದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.][1]

1. 1995ರ ಅಧಿನಿಯಮ ಸಂಖ್ಯೆ 25ರ ಮೂಲಕ 26.9.1995 ರಿಂದ ಜಾರಿಗೆ ಬರುವಂತೆ 468ಎ ಯಿಂದ 468ಜಿ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

**469. ಏಜೆಂಟರುಗಳಿಗೆ ಮತ್ತು ನ್ಯಾಸಧಾರಿಗಳಿಗೆ ಪರಿಹಾರ.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಮೂಲಕ ವಿಧಿಸಿದ ಯಾವುದೇ ಹೊಣೆಗಾರಿಕೆಯನ್ನು ನಿರ್ವಹಿಸಲು, ಏಜೆಂಟ್‍ನು, ನ್ಯಾಸಧಾರಿಯು, ಪಾಲಕನು, ವ್ಯವಸ್ಥಾಪಕನು ಅಥವಾ ರಿಸೀವರನು ಬದ್ಧನಾಗಿರುವಲ್ಲಿ ಮತ್ತು ಆ ಹೊಣೆಗಾರಿಕೆಯನ್ನು ನಿರ್ವಹಿಸಲು ಹಣವು ಅಗತ್ಯವಾಗಿರುವಲ್ಲಿ, ಆ ಉದ್ದೇಶಗಳಿಗೆ ಸಾಕಾಗುವಷ್ಟು ಪ್ರಮಾಣದ, ಮುಖ್ಯಸ್ಥನಿಗೆ ಅಥವಾ ಫಲಾನುಭವಿ ಮಾಲೀಕನಿಗೆ ಸೇರಿರುವ ನಿಧಿಗಳು ಅವನಲ್ಲಿದ್ದ ಹೊರತು ಅಥವಾ ಅವನು ಸ್ವತಃ ಅನುಚಿತ ಕಾರ್ಯ ಮಾಡದಿದ್ದರೆ ಅಥವಾ ತಪ್ಪದಿದ್ದರೆ, ಅವನು ಆ ನಿಧಿಗಳನ್ನು ಪಡೆಯಬಹುದಾಗಿದ್ದ ಹೊರತು ಹೊಣೆಗಾರಿಕೆಯನ್ನು ನಿರ್ವಹಿಸಲು ಬದ್ಧನಾಗಿರತಕ್ಕದ್ದಲ್ಲ.

(2) ಈ ಪ್ರಕರಣದ ಮೇರೆಗಿನ ಪರಿಹಾರಕ್ಕೆ ಯಾರೇ ವ್ಯಕ್ತಿಗೆ ಹಕ್ಕಿದೆ ಎಂಬ ವಾಸ್ತವಾಂಶವನ್ನು ರುಜುವಾತುಪಡಿಸುವ ಭಾರವು ಅವನ ಮೇಲೆ ಇರತಕ್ಕದ್ದು.

(3) ಈ ಪ್ರಕರಣದ ಮೇರೆಗಿನ ಪರಿಹಾರಕ್ಕೆ ಯಾರೇ ವ್ಯಕ್ತಿಯು, ತನ್ನ ಹಕ್ಕನ್ನು ಕ್ಲೇಮು ಮಾಡಿದಾಗ, ಮತ್ತು ಸಾಬೀತುಪಡಿಸಿದಾಗ ಆಯುಕ್ತರು ಅವನಿಗೆ ಸಂದರ್ಭಾನುಸಾರ ಮುಖ್ಯಸ್ಥನ ಅಥವಾ ಫಲಾನುಭವಿ ಮಾಲೀಕನ ಪರವಾಗಿ ಅಥವಾ ಅವನ ಬಳಕೆಗಾಗಿ ತನ್ನ ಸುಪರ್ದಿಗೆ ಬರತಕ್ಕ ಮೊದಲ ಹಣವನ್ನು ಮೇಲೆ ಹೇಳಿದಂಥ ಹೊಣೆಗಾರಿಕೆಯನ್ನು ನಿರ್ವಹಿಸಲು ವಿನಿಯೋಗಿಸತಕ್ಕದ್ದೆಂದು ಅವನಿಗೆ ನೋಟೀಸನ್ನು ಕೊಡಬಹುದು ಮತ್ತು ಅವನು ಅಂಥ ನೋಟೀಸನ್ನು ಪಾಲಿಸಲು ತಪ್ಪಿದರೆ ಅಂಥ ಹೊಣೆಗಾರಿಕೆಯನ್ನು ನಿರ್ವಹಿಸಲು ಅವನು ವೈಯಕ್ತಿಕವಾಗಿ ಹೊಣೆಗಾರನಾಗುವನೆಂದು ಭಾವಿಸತಕ್ಕದ್ದು.

**470. ಬಾಕಿ ಇರುವ ಮೊತ್ತಗಳನ್ನು ತೆರಿಗೆಗಳ ಹಾಗೆ ವಸೂಲು ಮಾಡುವುದು.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ಅಥವಾ ವಿನಿಮಯದ ಅಥವಾ ಇತರ ಯಾವುದೇ ಕಾನೂನಿನ ಮೇರೆಗೆ ಅಥವಾ ಈ ಅಧಿನಿಯಮಕ್ಕೆ ಮತ್ತು ನಿಯಮಗಳಿಗೆ, ಉಪವಿಧಿಗಳಿಗೆ ಮತ್ತು ವಿನಿಮಯಗಳಿಗೆ ಅನುಸಾರವಾಗಿ ನೀರು ಸರಬರಾಜು ಅಥವಾ ಒಳಚರಂಡಿಯ ವ್ಯವಸ್ಥೆಗೆ ಸಂಬಂಧಪಟ್ಟ ಕರಾರನ್ನು ಒಳಗೊಂಡಂತೆ ಇತರ ಯಾವುದೇ ಕರಾರಿನ ಮೇರೆಗೆ ಯಾರೇ ವ್ಯಕ್ತಿಯಿಂದ ನಗರಪಾಲಿಕೆಗೆ ಬಾಕಿ ಇರುವ ಎಲ್ಲ ಖರ್ಚುಗಳು, ಹಾನಿಪರಿಹಾರಗಳು, ದಂಡಗಳು, ನಷ್ಟಪರಿಹಾರಗಳು, ಚಾರ್ಜುಗಳು, ಫೀಜುಗಳು, ಬಾಡಿಗೆಗಳು, ವೆಚ್ಚಗಳು, ವಂತಿಗೆಗಳು ಮತ್ತು ಇತರ ಮೊತ್ತಗಳ ವಸೂಲಾತಿ ಬಗ್ಗೆ ಈ ಅಧಿನಿಯಮದಲ್ಲಿ ವಿಶೇಷ ಉಪಬಂಧವಿರದಿದ್ದರೆ, ತಗಾದೆಯ ವಿವರಗಳನ್ನೊಳಗೊಂಡ ಬಿಲ್ಲಿನ ಮೂಲಕ ಮತ್ತು ಸಂದಾಯ ಮಾಡಲು ತಪ್ಪಿದ ಸಂದರ್ಭದಲ್ಲಿ ವಹಿಸಿದ ಹೊಣೆಗಾರಿಕೆಯ ನೋಟೀಸಿನ ಮೂಲಕ, ಅವುಗಳ ವಸೂಲಿಗೆ ತಗಾದೆ ಮಾಡತಕ್ಕದ್ದು ಮತ್ತು ಹಾಗೆ ಬಿಲ್ಲನ್ನು ಜಾರಿ ಮಾಡಿದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ 471ನೇ ಪ್ರಕರಣದ ಮೇರೆಗೆ ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ ಅಂಥ ವ್ಯಕ್ತಿಯು ಅರ್ಜಿ ಸಲ್ಲಿಸಿದ ಹೊರತು Xನೇ ಅಧ್ಯಾಯದಲ್ಲಿ ಉಪಬಂಧಿಸಲಾದ ರೀತಿಯಲ್ಲಿ ಅವುಗಳನ್ನು ವಸೂಲು ಮಾಡಬಹುದು.

**471. ಸಂದಾಯ ಮಾಡಬೇಕಾದ ಮೊತ್ತಗಳನ್ನು ಜಿಲ್ಲಾ ನ್ಯಾಯಾಲಯವು ನಿರ್ಧರಿಸುವುದು.–** 480ನೇ ಪ್ರಕರಣದಲ್ಲಿ ಉಪಬಂಧಿಸಿರದ ಯಾವುದೇ ಪ್ರಕರಣದಲ್ಲಿ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪವಿಧಿಯ, ವಿನಿಯಮದ ಅಥವಾ ಕರಾರಿನ ಮೂಲಕ ಅಥವಾ ಅದರ ಮೇರೆಗೆ ಯಾವುದೇ ಪೌರ ಪ್ರಾಧಿಕಾರವನ್ನು ಅಥವಾ ಯಾರೇ ವ್ಯಕ್ತಿಯನ್ನು ಯಾವುದೇ ಖರ್ಚುಗಳು, ಹಾನಿಪರಿಹಾರಗಳು, ದಂಡಗಳು, ನಷ್ಟಪರಿಹಾರ, ಚಾರ್ಜುಗಳು, ಫೀಜುಗಳು, ಬಾಡಿಗೆಗಳು, ವೆಚ್ಚಗಳು, ವಂತಿಗೆಗಳು ಅಥವಾ 470ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಇತರ ಮೊತ್ತಗಳನ್ನು ಸಂದಾಯ ಮಾಡುವಂತೆ ಅಗತ್ಯಪಡಿಸಿರುವಲ್ಲಿ, ವಿವಾದದ ಸಂದರ್ಭದಲ್ಲಿ, ಮೊಬಲಗನ್ನು ಅಥವಾ ಅದರ ಹಂಚಿಕೆಯನ್ನು 207ನೇ, 407ನೇ ಅಥವಾ 460ನೇ ಪ್ರಕರಣದಲ್ಲಿ ಅಥವಾ ಭೂ ಆರ್ಜನಾ ಅಧಿನಿಯಮ, 1894ರಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಅಂಥ ಖರ್ಚುಗಳು, ಹಾನಿ ಪರಿಹಾರಗಳು, ದಂಡಗಳು, ನಷ್ಟಪರಿಹಾರ, ಚಾರ್ಜುಗಳು, ಫೀಜುಗಳು, ಬಾಡಿಗೆಗಳು, ವೆಚ್ಚಗಳು, ವಂತಿಗೆಗಳು ಅಥವಾ ಇತರ ಮೊತ್ತಗಳನ್ನು ಮೊದಲ ಬಾರಿಗೆ ಸಂದಾಯ ಮಾಡಬೇಕಾಗಿ ಬಂದ ದಿನಾಂಕದಿಂದ ಆರು ತಿಂಗಳ ಒಳಗಾಗಿ, ಯಾವುದೇ ಕಾಲದಲ್ಲಿ ಈ ಉದ್ದೇಶಕ್ಕಾಗಿ ತಮಗೆ ಸಲ್ಲಿಸಿದ ಅರ್ಜಿಯ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ ಜಿಲ್ಲಾ ನ್ಯಾಯಾಲಯವು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ನಿರ್ಧರಿಸತಕ್ಕದ್ದು.

**472. ಜಿಲ್ಲಾ ನ್ಯಾಯಾಲಯದ ಮುಂದೆ ಇರುವ ವ್ಯವಹರಣೆಗಳು.–** (1) 471ನೇ ಪ್ರಕರಣದ ಮೇರೆಗೆ ಸಲ್ಲಿಸಿದ ಅರ್ಜಿಯ ಮೇಲೆ ಜಿಲ್ಲಾ ನ್ಯಾಯಾಲಯವು ಇತರ ಪಕ್ಷಕಾರನನ್ನು ತನ್ನ ಮುಂದೆ ಹಾಜರಾಗುವಂತೆ ಸಮನು ಮಾಡತಕ್ಕದ್ದು.

(2) ಪಕ್ಷಕಾರರು ಹಾಜರಾದ ಮೇಲೆ ಅಥವಾ ಅವರ ಪೈಕಿ ಯಾರೇ ಪಕ್ಷಕಾರರ ಗೈರುಹಾಜರಿಯಲ್ಲಿ, ಸಮನುಗಳನ್ನು ಯುಕ್ತವಾಗಿ ಜಾರಿ ಮಾಡಿರುವುದರ ರುಜುವಾತಿನ ಮೇಲೆ, ಜಿಲ್ಲಾ ನ್ಯಾಯಾಲಯವು ಪ್ರಕರಣವನ್ನು ಕುರಿತು ವಿಚಾರಣೆ ಮಾಡಬಹುದು ಮತ್ತು ನಿರ್ಧರಿಸಬಹುದು.

(3) ಅಂಥ ಪ್ರತಿಯೊಂದು ಪ್ರಕರಣದಲ್ಲೂ ಜಿಲ್ಲಾ ನ್ಯಾಯಾಲಯವು ಖರ್ಚುಗಳ ಮೊಬಲಗನ್ನು ನಿರ್ಧರಿಸತಕ್ಕದ್ದು ಮತ್ತು ಯಾವ ಪಕ್ಷಕಾರರಲ್ಲಿ ಯಾರು ಅದನ್ನು ಸಂದಾಯಮಾಡಬೇಕು ಎಂಬುದನ್ನು ನಿರ್ದೇಶಿಸತಕ್ಕದ್ದು.

**473. ಸಂದಾಯವಾಗಬೇಕಾದ ಮೊತ್ತಗಳನ್ನು ಜಪ್ತಿ ಮೂಲಕ ವಸೂಲಿ ಮಾಡುವುದು.–** 471ನೇ ಪ್ರಕರಣದಲ್ಲಿ ವಿವರಿಸಿದ ರೀತಿಯಲ್ಲಿ ಖಚಿತಪಡಿಸಿಕೊಂಡ ಖರ್ಚುಗಳು, ಹಾನಿಪರಿಹಾರಗಳು, ದಂಡಗಳು, ನಷ್ಟಪರಿಹಾರ, ಚಾರ್ಜುಗಳು, ಫೀಜುಗಳು, ಬಾಡಿಗೆಗಳು, ವೆಚ್ಚಗಳು, ವಂತಿಗೆ ಅಥವಾ ಇತರೆ ಮೊತ್ತಗಳ ಬಾಬ್ತು ಬಾಕಿ ಇರುವ ಮೊತ್ತವನ್ನು ತಗಾದೆ ಮಾಡಿದ ತರುವಾಯ ಹದಿನೈದು ದಿನಗಳ ಒಳಗಾಗಿ ಹೊಣೆಗಾರನಾಗಿರುವ ಪಕ್ಷಕಾರನು ಸಂದಾಯ ಮಾಡದಿದ್ದರೆ ಅಂಥ ಮೊತ್ತವನ್ನು ಜಿಲ್ಲಾ ನ್ಯಾಯಾಲಯದ ವಾರೆಂಟಿನ ಮೇರೆಗೆ ಅಂಥ ಪಕ್ಷಕಾರನ ಚರಾಸ್ತಿಯನ್ನು ಜಪ್ತಿ ಮಾಡುವ ಮತ್ತು ಮಾರಾಟ ಮಾಡುವ ಮೂಲಕ ವಸೂಲು ಮಾಡಬಹುದು.

**474. ಬಾಕಿಗಳ ವಸೂಲಿಗಾಗಿ ಕಾಲಪರಿಮಿತಿ.–** ಅಂಥ ಮೊತ್ತದ ಸಂಬಂಧದಲ್ಲಿ ಸಂದರ್ಭಾನುಸಾರ ಮೊದಲ ಬಾರಿಗೆ ಜಪ್ತಿಯನ್ನು ಮಾಡಬಹುದಾಗಿದ್ದ, ಮೊದಲ ಬಾರಿಗೆ ದಾವೆಯನ್ನು ಹೂಡಬಹುದಾಗಿದ್ದ ಮತ್ತು ಮೊದಲ ಬಾರಿಗೆ ಪ್ರಾಸಿಕ್ಯೂಷನ್‌ನನ್ನು ಪ್ರಾರಂಭಿಸಬಹುದಾಗಿದ್ದ ದಿನಾಂಕದಿಂದ ಆರು ವರ್ಷಗಳ ಅವಧಿ ಪೂರ್ಣಗೊಂಡ ತರುವಾಯ ಈ ಅಧಿನಿಯಮದ ಮೇರೆಗೆ ನಗರಪಾಲಿಕೆಗೆ ಬರಬೇಕಾಗಿದ್ದ ಯಾವುದೇ ಮೊತ್ತದ ಸಂಬಂಧದಲ್ಲಿ ಯಾವುದೇ ಜಪ್ತಿಯನ್ನು ಮಾಡತಕ್ಕದ್ದಲ್ಲ, ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ ಮತ್ತು ಯಾವುದೇ ಪ್ರಾಸಿಕ್ಯೂಷನ್ನನ್ನು ಪ್ರಾರಂಭಿಸತಕ್ಕದ್ದಲ್ಲ.

**475. ಹೆಚ್ಚುವರಿ ಮಾರಾಟ ಉತ್ಪತ್ತಿಗಳ ಬಗ್ಗೆ ವ್ಯವಹರಿಸುವಾಗ ಪ್ರಕ್ರಿಯೆ.–** ಈ ಅಧಿನಿಯಮದ ಉಪಬಂಧಗಳ ಮೇರೆಗೆ ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಮಾರಾಟ ಮಾಡಿದರೆ ಮತ್ತು ನಗರಪಾಲಿಕೆಗೆ ಬರಬೇಕಾದ ಮೊತ್ತವನ್ನು ಮುರಿದುಕೊಂಡ ತರುವಾಯ ಹೆಚ್ಚುವರಿ ಹಣ ಇದ್ದರೆ ಮತ್ತು ಖರ್ಚುಗಳನ್ನು ಮಾರಾಟದ ಉತ್ಪತ್ತಿಗಳಿಂದ ಮುರಿದುಕೊಂಡಿದ್ದರೆ, ಅಂಥ ಹೆಚ್ಚುವರಿ ಹಣವನ್ನು, ಅಂಥ ಹೆಚ್ಚುವರಿ ಹಣಕ್ಕೆ ಸಂಬಂಧಪಟ್ಟಂತೆ ನೋಟೀಸನ್ನು ಜಾರಿ ಮಾಡಿದ ಅಥವಾ ಕಳುಹಿಸಿದ ದಿನಾಂಕದಿಂದ ಮೂರು ವರ್ಷಗಳ ಒಳಗೆ ಆ ಸ್ವತ್ತಿನ ಮಾಲೀಕನು ಕ್ಲೇಮು ಮಾಡಿದರೆ, ಆಯುಕ್ತರು ಅವನಿಗೆ ಸಂದಾಯ ಮಾಡತಕ್ಕದ್ದು. ಆದರೆ, ಅಂಥ ಕಾಲದೊಳಗಾಗಿ ಅಂಥ ಯಾವುದೇ ಕ್ಲೇಮನ್ನು ಸಲ್ಲಿಸದಿದ್ದರೆ ಸದರಿ ಹೆಚ್ಚುವರಿ ಹಣವನ್ನು ನಗರಪಾಲಿಕೆಯ ನಿಧಿಗೆ ಜಮೆ ಮಾಡತಕ್ಕದ್ದು ಮತ್ತು ಹಾಗೆ ಜಮೆ ಮಾಡಿದ ಯಾವುದೇ ಮೊತ್ತದ ವಸೂಲಿಗಾಗಿ ಯಾವುದೇ ದಾವೆಯನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**476. ನಗರಪಾಲಿಕೆ ನಿಧಿಯ ಅಭಿರಕ್ಷೆ ಹೊಂದಿರುವ ವ್ಯಕ್ತಿಗೆ ಸರ್ಕಾರದ ಮತ್ತು ಇತರ ಬಾಕಿಗಳನ್ನು ಸಂದಾಯ ಮಾಡುವಂತೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** ಸರ್ಕಾರಕ್ಕೆ, ಕರ್ನಾಟಕ ರಾಜ್ಯ ವಿದ್ಯುಚ್ಛಕ್ತಿ ಮಂಡಲಿಗೆ, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಗೆ ಅಥವಾ ಇತರ ಯಾವುದೇ ಶಾಸನಬದ್ಧ ಪ್ರಾಧಿಕಾರಕ್ಕೆ ಬಾಕಿ ಇರುವ ಯಾವುದೇ ಮೊಬಲಗನ್ನು ಸಂದಾಯ ಮಾಡಲು ನಗರಪಾಲಿಕೆಯು ತಪ್ಪಿದರೆ, ಸರ್ಕಾರವು ಅಂಥ ನಿಧಿಗೆ ಇರುವ ಇತರ ಯಾವುದೇ ಅಧಿಭಾರಕ್ಕಿಂತ ಹೆಚ್ಚಿನ ಆದ್ಯತೆಯನ್ನು ನೀಡಿ ಅದನ್ನು ಸಂದಾಯ ಮಾಡುವಂತೆ ನಗರಪಾಲಿಕೆಯ ನಿಧಿಯ ಅಭಿರಕ್ಷೆ ಹೊಂದಿರುವ ವ್ಯಕ್ತಿಗೆ ನಿರ್ದೇಶಿಸುವ ಒಂದು ಆದೇಶವನ್ನು ಮಾಡಬಹುದು ಮತ್ತು ಅಂಥ ವ್ಯಕ್ತಿಯು ನಗರಪಾಲಿಕೆಯ ಲೆಕ್ಕದಲ್ಲಿರುವ ನಿಧಿಯಷ್ಟರಮಟ್ಟಿಗೆ ಅಂಥ ಆದೇಶವನ್ನು ಪಾಲಿಸತಕ್ಕದ್ದು.

**477. ದೂರುಗಳನ್ನು ದಾಖಲಿಸುವುದಕ್ಕೆ ಕಾಲ ಪರಿಮಿತಿಯ ಅವಧಿ.–** ಈ ಅಧಿನಿಯಮದ ಯಾವುದೇ ಉಪಬಂಧದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಉಲ್ಲಂಘನೆಯ ಯಾವುದೇ ಅಪರಾಧಕ್ಕಾಗಿ, ಅಪರಾಧವನ್ನು ಮಾಡಿದಂದಿನಿಂದ ಆರು ತಿಂಗಳೊಳಗೆ ಪೋಲೀಸರು ಅಥವಾ ಆಯುಕ್ತರು ಅಥವಾ ಈ ಬಗ್ಗೆ ನಗರಪಾಲಿಕೆಯಿಂದ ಅಥವಾ ಸ್ಥಾಯೀ ಸಮಿತಿಯಿಂದ ಅಥವಾ ಆಯುಕ್ತರಿಂದ ಅಧಿಕೃತನಾದ ವ್ಯಕ್ತಿಯು ದೂರನ್ನು ದಾಖಲಿಸಿದ ಹೊರತು, ಯಾರೇ ವ್ಯಕ್ತಿಯು ಅಧಿವಿಚಾರಣೆಗೆ ಗುರಿಯಾಗತಕ್ಕದ್ದಲ್ಲ:

ಪರಂತು, ಈ ಅಧಿನಿಯಮದ ಮೇರೆಗೆ ಲೈಸೆನ್ಸು ಪಡೆಯಲು ಅನುಮತಿ ಪಡೆಯಲು ಅಥವಾ ನೋಂದಣಿ ಪಡೆಯಲು ತಪ್ಪುವುದು, ಪ್ರಕರಣದ ಉದ್ದೇಶಗಳಿಗಾಗಿ, ಯಾವ ಅವಧಿಗಾಗಿ ಲೈಸೆನ್ಸು, ಅನುಮತಿ ಅಥವಾ ನೋಂದಣಿಯನ್ನು ಅಗತ್ಯಪಡಿಸಲಾಗಿದೆಯೋ ಆ ಅವಧಿ ಯಾವುದಾದರೂ ಇದ್ದರೆ, ಆ ಅವಧಿಯು ಮುಕ್ತಾಯವಾಗುವವರೆಗೆ ಮುಂದುವರಿಯುತ್ತಿರುವ ಅಪರಾಧವೆಂದು ಭಾವಿಸತಕ್ಕದ್ದು ಮತ್ತು ಯಾವುದೇ ಅವಧಿಯನ್ನು ನಿರ್ದಿಷ್ಟಪಡಿಸಿರದಿದ್ದರೆ, ಅಪರಾಧವನ್ನು ಮಾಡಿದಾಗಿನಿಂದ ಹನ್ನೆರಡು ತಿಂಗಳ ಒಳಗೆ ಯಾವುದೇ ಕಾಲದಲ್ಲಿ ದೂರನ್ನು ದಾಖಲಿಸಬಹುದು.

**478. ಅಪರಾಧಗಳ ಸಂಜ್ಞೇಯತೆ.–** ಈ ಅಧಿನಿಯಮದ ವಿರುದ್ಧ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ವಿರುದ್ಧ ನಗರದೊಳಗೆಯಾಗಲಿ ಅಥವಾ ಹೊರಗೆಯಾಗಲಿ ಮಾಡಿದ ಎಲ್ಲ ಅಪರಾಧಗಳು ನಗರದಲ್ಲಿ ಅಧಿಕಾರ ವ್ಯಾಪ್ತಿ ಹೊಂದಿರುವ ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರಿಂದ ಸಂಜ್ಞೇಯವಾಗಿರತಕ್ಕದ್ದು ಮತ್ತು ಅಂಥ ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರು, ಯಾವುದೇ ನಗರಪಾಲಿಕೆಯ ದರವನ್ನು ಅಥವಾ ಇತರ ತೆರಿಗೆಯನ್ನು ಸಂದಾಯ ಮಾಡಲು ಅವರು ಹೊಣೆಗಾರರಾಗಿರುವ ಅಥವಾ ಅವರು ವಿಧಿಸಿದ ಯಾವುದೇ ಜುಲ್ಮಾನೆಯನ್ನು ಯಾವ ನಗರಪಾಲಿಕೆಯ ನಿಧಿಯ ಲೆಕ್ಕಕ್ಕೆ ಸಂದಾಯ ಮಾಡಲಾಗುವುದೋ ಆ ನಿಧಿಯಿಂದ ಅವರು ಪ್ರಯೋಜನ ಪಡೆಯುತ್ತಿರುವ ಕಾರಣ ಮಾತ್ರದಿಂದಲೇ ಅವರು ಅಂಥ ಅಪರಾಧದ ಅಥವಾ ಈ ಮೂಲಕ ನಿರಸನಗೊಳಿಸಿದ ಅಧಿನಿಯಮಿತಿಯ ವಿರುದ್ಧದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳಲು ಅಸಮರ್ಥರಾಗಿರುವುದಾಗಿ ಭಾವಿಸತಕ್ಕದ್ದಲ್ಲ.

**479. ಜುಲ್ಮಾನೆಗಳನ್ನು ಸಂದಾಯ ಮಾಡಲು ತಪ್ಪಿದ್ದಕ್ಕೆ ಕಾರವಾಸ ಮತ್ತು ಜುಲ್ಮಾನೆಗಳ ವಿನಿಯೋಗ.–** (ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುದೇ ನಿಯಮದ, ಉಪವಿಧಿಯ, ಅಥವಾ ವಿನಿಯಮದ ಮೇರೆಗೆ ಮ್ಯಾಜಿಸ್ಟ್ರೇಟರು ವಿಧಿಸಿದ, ನಿರ್ಧರಿಸಿದ ಅಥವಾ ವಸೂಲಿ ಮಾಡಬೇಕಾದ ಯಾವುದೇ ಜುಲ್ಮಾನೆ, ಖರ್ಚುಗಳು, ತೆರಿಗೆ ಅಥವಾ ಇತರ ಹಣದ ಮೊತ್ತವನ್ನು ಸಂದಾಯ ಮಾಡದಿದ್ದಲ್ಲಿ, ಮ್ಯಾಜಿಸ್ಟ್ರೇಟರು ಭಾರತ ದಂಡ ಸಂಹಿತೆಯ 64 ರಿಂದ 70ನೇ ಪ್ರಕರಣಗಳಲ್ಲಿ (ಎರಡೂ ಸೇರಿ) ವಿಧಿಸಿರುವ ಎಲ್ಲ ನಿರ್ಬಂಧಗಳು, ಪರಿಮಿತಿಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಸಂದಾಯ ಮಾಡಲು ತಪ್ಪಿದ ಕಾರಣಕ್ಕಾಗಿ ಅಪರಾಧಿಯನ್ನು ಕಾರಾವಾಸದಲ್ಲಿಡುವಂತೆ ಆದೇಶಿಸಬಹುದು.

(ಬಿ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಮ್ಯಾಜಿಸ್ಟ್ರೇಟರು ವಿಧಿಸಿದ, ನಿರ್ಧರಿಸಿದ ಅಥವಾ ವಸೂಲಿ ಮಾಡಬೇಕಾದ ಯಾವುದೇ ಜುಲ್ಮಾನೆ, ಖರ್ಚುಗಳು, ತೆರಿಗೆ ಅಥವಾ ಇತರ ಮೊತ್ತವು ಅಂಥ ಮ್ಯಾಜಿಸ್ಟ್ರೇಟರು ದಂಡ ಪ್ರಕ್ರಿಯಾ ಸಂಹಿತೆ 1973ರ (ಕೇಂದ್ರ ಅಧಿನಿಯಮ 1974ರ 2) ಮೇರೆಗೆ ವಿಧಿಸಿದ ಜುಲ್ಮಾನೆಯಾಗಿದ್ದರೆ ಹೇಗೋ ಹಾಗೆ ವಸೂಲಿ ಮಾಡುವಂಥಾದ್ದಾಗಿರತಕ್ಕದ್ದು ಮತ್ತು ಅದನ್ನು ವಸೂಲಿ ಮಾಡಿದ ನಂತರ ನಗರಪಾಲಿಕೆಯ ನಿಧಿಗೆ ಜಮೆ ಮಾಡತಕ್ಕದ್ದು.

**480. ನಗರಪಾಲಿಕೆಯ ಸ್ವತ್ತಿಗೆ ಉಂಟಾದ ಹಾನಿಗಾಗಿ ನಷ್ಟ ಪರಿಹಾರದ ಸಂದಾಯ.–** ಯಾವುದೇ ಕಾರ್ಯದಿಂದಾಗಿ ಅಥವಾ ಲೋಪದಿಂದಾಗಿ ಯಾರೇ ವ್ಯಕ್ತಿಯು ಈ ಅಧಿನಿಯಮದ ಉಪಬಂಧಗಳಿಗೆ ವಿರುದ್ಧದ ಅಥವಾ ಈ ಅಧಿನಿಯಮದ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ವಿರುದ್ಧದ ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾದರೆ, ಮತ್ತು ನಗರಪಾಲಿಕೆಯ ಯಾವುದೇ ಸ್ವತ್ತಿಗೆ ಅಂಥ ಕಾರ್ಯದ ಅಥವಾ ಲೋಪದ ಕಾರಣದಿಂದಾಗಿ ಹಾನಿಯುಂಟಾಗಿದ್ದರೆ, ಸದರಿ ವ್ಯಕ್ತಿಯು ಸದರಿ ಅಪರಾಧಕ್ಕಾಗಿ ಅವನು ಗುರಿಯಾಗಬಹುದಾದ ಯಾವುದೇ ಶಿಕ್ಷೆಗೆ ಗುರಿಯಾಗಿದ್ದಾಗ್ಯೂ ಅಂಥ ಹಾನಿಗಾಗಿ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದು. ವಿವಾದದ ಸಂದರ್ಭದಲ್ಲಿ ಸದರಿ ವ್ಯಕ್ತಿಯು ಸಂದಾಯ ಮಾಡಬೇಕಾದ ನಷ್ಟಪರಿಹಾರದ ಮೊಬಲಗನ್ನು, ಸದರಿ ವ್ಯಕ್ತಿಯು, ಸದರಿ ಅಪರಾಧಕ್ಕಾಗಿ ಯಾವ ಮ್ಯಾಜಿಸ್ಟ್ರೇಟರ ಮುಂದೆ ಅಪರಾಧಿಯೆಂದು ನಿರ್ಣೀತನಾಗಿರುವನೋ ಆ ಮ್ಯಾಜಿಸ್ಟ್ರೇಟರು, ಅಪರಾಧ ನಿರ್ಣಯವಾದ ದಿನಾಂಕದಿಂದ ಮೂರು ತಿಂಗಳುಗಳಿಗಿಂತ ಹೆಚ್ಚು ಇಲ್ಲದ ಅವಧಿಯೊಳಗೆ ಆಯುಕ್ತರು ಆ ಉದ್ದೇಶಕ್ಕಾಗಿ ತಮಗೆ ಸಲ್ಲಿಸಿದ ಅರ್ಜಿಯ ಮೇಲೆ ನಿರ್ಧರಿಸತಕ್ಕದ್ದು ಮತ್ತು ಹಾಗೆ ನಿರ್ಧರಿಸಿದ ನಷ್ಟಪರಿಹಾರದ ಮೊಬಲಗನ್ನು ಸಂದಾಯ ಮಾಡಲು ತಪ್ಪಿದಲ್ಲಿ, ಅದಕ್ಕೆ ಹೊಣೆಗಾರನಾಗಿರುವ ವ್ಯಕ್ತಿಗೆ ವಿಧಿಸಿದ ಜುಲ್ಮಾನೆಯಾಗಿದ್ದರೆ ಹೇಗೋ ಹಾಗೆ ಸದರಿ ಮ್ಯಾಜಿಸ್ಟ್ರೇಟರು ಹೊರಡಿಸಿದ ವಾರೆಂಟಿನ ಮೇರೆಗೆ ಅದನ್ನು ವಸೂಲಿ ಮಾಡತಕ್ಕದ್ದು.

**481. ದಾವೆ ಮೂಲಕ ತೆರಿಗೆ ಇತ್ಯಾದಿಗಳ ವಸೂಲಿ.–** ಇದರಲ್ಲಿ ಒಳಗೊಂಡಿರುವುದು ಯಾವುದೂ ಈ ಅಧಿನಿಯಮದ ಮೇರೆಗೆ ಬಾಕಿ ಇರುವ ಯಾವುದೇ ಸುಂಕ, ಫೀಜು, ದರ, ಚಾರ್ಜುಗಳು ಅಥವಾ ಇತರ ಮೊಬಲಗಿನ ವಸೂಲಿಗಾಗಿ ಸಿವಿಲ್ ನ್ಯಾಯಾಲಯದಲ್ಲಿ ನಗರಪಾಲಿಕೆಯು ದಾವೆ ಹೂಡುವುದಕ್ಕೆ ಅಡ್ಡಿ ಉಂಟುಮಾಡತಕ್ಕದ್ದಲ್ಲ

**482. ಪೌರ ಪ್ರಾಧಿಕಾರ, ಅಧಿಕಾರಿಗಳು ಮತ್ತು ಏಜೆಂಟರುಗಳ ವಿರುದ್ಧ ದಾವೆಗಳನ್ನು ಹೂಡುವುದು.–** (1) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮನ ಅಥವಾ ಆದೇಶದ ಅನುಸಾರವಾಗಿ ಅಥವಾ ಅದನ್ನು ಜಾರಿಗೆ ತರುವಲ್ಲಿ ಅಥವಾ ಅದರ ಉದ್ದೇಶಿತ ಜಾರಿಯಲ್ಲಿ ಮಾಡಿದ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ಅಥವಾ ಈ ಅಧಿನಿಯಮವನ್ನು ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮವನ್ನು, ಉಪವಿಧಿಯನ್ನು, ವಿನಿಮಯವನ್ನು ಅಥವಾ ಆದೇಶವನ್ನು ಜಾರಿಗೊಳಿಸುವಾಗ ತೋರಿದ ಯಾವುದೇ ಆರೋಪಿತ ನಿರ್ಲಕ್ಷ್ಯಕ್ಕೆ ಅಥವಾ ಜಾರಿಗೊಳಿಸಲು ತಪ್ಪಿದ್ದಕ್ಕೆ ಸಂಬಂಧಿಸಿದಂತೆ ವ್ಯಾಜ್ಯ ಕಾರಣ, ಕೋರಲಾದ ಪರಿಹಾರ ಮತ್ತು ಉದ್ದೇಶಿತ ವಾದಿಯ ಹೆಸರು ಮತ್ತು ವಾಸಸ್ಥಳವನ್ನು ನಿರೂಪಿಸುವ ನೋಟೀಸನ್ನು ನಗರಪಾಲಿಕೆಯ ಕಚೇರಿಯಲ್ಲಿ ಅಥವಾ ಅಂಥ ಅಧಿಕಾರಿಯ, ನೌಕರನ ಅಥವಾ ವ್ಯಕ್ತಿಯ ವಾಸಸ್ಥಳದಲ್ಲಿ ವಶಾವಣೆ ಮಾಡಿದ ಅಥವಾ ಇರಿಸಿದ ತರುವಾಯ, [1][ಅರವತ್ತು ದಿವಸಗಳು][1] ಮುಕ್ತಾಯವಾಗುವವರೆಗೆ ನಗರಪಾಲಿಕೆಯ ಅಥವಾ ಯಾವುದೇ ಪೌರ ಪ್ರಾಧಿಕಾರದ, ನಗರಪಾಲಿಕೆಯ ಅಧಿಕಾರಿಯ ಅಥವಾ ನೌಕರನ ಅಥವಾ ಅವುಗಳ ನಿರ್ದೇಶನದ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯ ವಿರುದ್ಧ [2][xxx][2] ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ ಮತ್ತು ವಾದಪತ್ರವು, ಅಂಥ ನೋಟೀಸನ್ನು ಹಾಗೆ ವಶಾವಣೆ ಮಾಡಲಾಗಿದೆ ಅಥವಾ ಇರಿಸಲಾಗಿದೆ ಎಂಬ ಬಗ್ಗೆ ನಿರೂಪಣೆಯನ್ನು ಒಳಗೊಂಡಿರತಕ್ಕದ್ದು.

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(1ಎ) ನಗರಪಾಲಿಕೆಯ ಅಥವಾ ಯಾವುದೇ ಪೌರ ಪ್ರಾಧಿಕಾರದ, ನಗರಪಾಲಿಕೆ ಅಧಿಕಾರಿಯ ಅಥವಾ ನೌಕರನ ವಿರುದ್ಧ, ಅಂಥ ಅಧಿಕಾರಿಯು ಅಥವಾ ನೌಕರನು ಅವನ ಪದೀಯ ಸಾಮರ್ಥ್ಯದಲ್ಲಿ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ಜರೂರು ಅಥವಾ ತ್ವರಿತ ಪರಿಹಾರವನ್ನು ಪಡೆಯಲು, ನ್ಯಾಯಾಲಯದ ಅನುಮತಿಯನ್ನು ಪಡೆದು (1)ನೇ ಉಪ-ಪ್ರಕರಣವು ಅಗತ್ಯಪಡಿಸಿದಂತೆ ಯಾವುದೇ ನೋಟೀಸನ್ನು ಜಾರಿ ಮಾಡದೆಯೇ ದಾವೆಯನ್ನು ಹೂಡಬಹುದು. ಆದರೆ ನ್ಯಾಯಾಲಯವು ದಾವೆಯಲ್ಲಿ ಕೋರಿರುವ ಪರಿಹಾರಕ್ಕೆ ಸಂಬಂಧಿಸಿದಂತೆ ಕಾರಣವನ್ನು ತೋರಿಸಲು ಸಂದರ್ಭಾನುಸಾರ ನಗರಪಾಲಿಕೆಯ ಅಧಿಕಾರಿಗೆ ಅಥವಾ ನೌಕರನಿಗೆ ಯುಕ್ತ ಅವಕಾಶವನ್ನು ಕೊಟ್ಟ ಹೊರತು ಆ ದಾವೆಯಲ್ಲಿ ಮಧ್ಯಕಾಲೀನ ಅಥವಾ ಅನ್ಯಥಾ ಇತರ ಪರಿಹಾರವನ್ನು ಕೊಡತಕ್ಕದ್ದಲ್ಲ:

ಪರಂತು, ಪಕ್ಷಕಾರರನ್ನು ಸುನಾವಣೆ ಮಾಡಿದ ತರುವಾಯ ದಾವೆಯಲ್ಲಿ ಯಾವುದೇ ಜರೂರು ಅಥವಾ ತ್ವರಿತ ಪರಿಹಾರವನ್ನು ಕೊಡುವ ಅಗತ್ಯವಿಲ್ಲವೆಂದು ನ್ಯಾಯಾಲಯಕ್ಕೆ ಮನದಟ್ಟಾದರೆ ಅದು (1)ನೇ ಉಪಪ್ರಕರಣದ ಅಗತ್ಯತೆಗಳನ್ನು ಪಾಲಿಸಿದ ತರುವಾಯ ತನಗೆ ಹಾಜರುಪಡಿಸಲು ವಾದಪತ್ರವನ್ನು ಹಿಂತಿರುಗಿಸತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಂಥ ಪ್ರತಿಯೊಂದು ದಾವೆಯನ್ನು ವ್ಯಾಜ್ಯ ಕಾರಣ ಉದ್ಭವಿಸಿದ ದಿನಾಂಕದ ತರುವಾಯ ಆರು ತಿಂಗಳುಗಳೊಳಗೆ ಅಥವಾ ಮುಂದುವರೆಯುತ್ತಿರುವ ಕ್ಷತಿ ಅಥವಾ ಹಾನಿಯ ಸಂದರ್ಭದಲ್ಲಿ ಹಾಗೆ ಮುಂದುವರೆಯುತ್ತಿರುವ ಅವಧಿಯಲ್ಲಿ ಅಥವಾ ಅದು ನಿಂತುಹೋದ ತರುವಾಯ ಆರು ತಿಂಗಳೊಳಗೆ ಪ್ರಾರಂಭಿಸತಕ್ಕದ್ದು.

[1][(3) xxx][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(4) (1)ನೇ ಉಪ-ಪ್ರಕರಣದ ಮೇರೆಗೆ ನೋಟೀಸನ್ನು ಯಾವ ವ್ಯಕ್ತಿಗೆ ಕೊಡಲಾಗಿದೆಯೋ ಆ ಯಾರೇ ವ್ಯಕ್ತಿಯು, ದಾವೆಯನ್ನು ಹೂಡುವುದಕ್ಕೆ ಮುಂಚೆ ವಾದಿಗೆ ಮೊಬಲಗನ್ನು ಕೊಟ್ಟರೆ ಮತ್ತು ವಾದಿಯು ಯಾವುದೇ ಅಂಥ ಕ್ರಮದಲ್ಲಿ ಹಾಗೆ ಕೊಟ್ಟ ಮೊಬಲಗಿಗಿಂತ ಹೆಚ್ಚಿಗೆ ವಸೂಲು ಮಾಡದಿದ್ದರೆ ಅವನು, ಹಾಗೆ ಮೊಬಲಗನ್ನು ಕೊಟ್ಟ ತರುವಾಯ ವಹಿಸಿದ ಯಾವುದೇ ಖರ್ಚುಗಳನ್ನು ವಸೂಲು ಮಾಡತಕ್ಕದ್ದಲ್ಲ ಮತ್ತು ಮೊಬಲಗನ್ನು ಕೊಟ್ಟ ದಿನಾಂಕದಿಂದ ಖರ್ಚುಗಳಿಗೆ ಪ್ರತಿವಾದಿಯು ಹಕ್ಕುಳ್ಳವನಾಗಿರತಕ್ಕದ್ದು.

(5) ಯಾವುದೇ ದಾವೆಯಲ್ಲಿ ಆಯುಕ್ತರು, ನಗರಪಾಲಿಕೆಯ ಅಧಿಕಾರಿ ಅಥವಾ ನೌಕರನು ಪ್ರತಿವಾದಿಯಾಗಿರುವಲ್ಲಿ ಖರ್ಚುಗಳು, ಚಾರ್ಜುಗಳು, ವೆಚ್ಚಗಳು, ಹಾನಿಗಳಿಗಾಗಿ ನಷ್ಟ ಪರಿಹಾರಕ್ಕೆ ಸಂಬಂಧಿಸಿದಂತೆ ಆಗಲಿ ಅಥವಾ ಅನ್ಯಥಾ ಆಗಲಿ ದಾವೆಯಲ್ಲಿ ಅಥವಾ ಅದರ ಪರಿಣಾಮವಾಗಿ ಅವನು ಸಂದಾಯ ಮಾಡಬೇಕಾದ ಯಾವುದೇ ಮೊತ್ತವನ್ನು ಅಥವಾ ಅದರ ಭಾಗವನ್ನು ಸ್ಥಾಯೀ ಸಮಿತಿಯ ಮಂಜೂರಾತಿ ಪಡೆದು ನಗರಪಾಲಿಕೆಯ ನಿಧಿಯಿಂದ ಸಂದಾಯ ಮಾಡಬಹುದು.

**483. ಸಿವಿಲ್ ಮತ್ತು ಕ್ರಿಮಿನಲ್ ಕ್ರಮಗಳನ್ನು ಹೂಡುವುದು, ಇತ್ಯಾದಿಗಳಿಗೆ ಸಂಬಂಧಿಸಿದ ಉಪಬಂಧಗಳು ಮತ್ತು ಕಾನೂನು ಸಲಹೆಯನ್ನು ಪಡೆಯುವುದು.–** ಆಯುಕ್ತರು,–

(ಎ) ಯಾರೇ ವ್ಯಕ್ತಿಯು,–

(i) ಈ ಅಧಿನಿಯಮಕ್ಕೆ, ನಿಯಮಗಳಿಗೆ, ಉಪವಿಧಿಗಳಿಗೆ ಅಥವಾ ವಿನಿಯಮಗಳಿಗೆ ವಿರುದ್ಧದ ಯಾವುದೇ ಅಪರಾಧದ ಬಗ್ಗೆ;

(ii) ನಗರಪಾಲಿಕೆಯ ಯಾವುದೇ ಸ್ವತ್ತಿನ ಅಥವಾ ಹಿತಾಸಕ್ತಿಯ ಅಥವಾ ಈ ಅಧಿನಿಯಮದ ಯುಕ್ತ ಜಾರಿಯ ಮೇಲೆ ಪರಿಣಾಮ ಬೀರುವ ಅಥವಾ ಪರಿಣಾಮ ಬೀರುವ ಸಂಬಂಧವಿರುವಂಥ ಯಾವುದೇ ಅಪರಾಧದ ಬಗ್ಗೆ;

(iii) ಯಾವುದೇ ಬಗೆಯ ಉಪದ್ರವವನ್ನು ಮಾಡುವುದರ ಬಗ್ಗೆ

– ದೋಷಾರೋಪಣೆಗೆ ಗುರಿಯಾಗಿದ್ದರೆ ಆ ವ್ಯಕ್ತಿಯ ವಿರುದ್ಧ ವ್ಯವಹರಣೆಗಳನ್ನು ಕೈಗೊಳ್ಳಬಹುದು ಅಥವಾ ವ್ಯವಹರಣೆಗಳಿಂದ ಹಿಂದೆ ಸರಿಯಬಹುದು;

(ಬಿ) ಈ ಅಧಿನಿಯಮಕ್ಕೆ, ನಿಯಮಗಳಿಗೆ, ಉಪವಿಧಿಗಳಿಗೆ ಅಥವಾ ವಿನಿಯಮಗಳಿಗೆ ವಿರುದ್ಧದ ಯಾವ ಅಪರಾಧಗಳ ಬಗ್ಗೆ ಸರ್ಕಾರವು ರಚಿಸಿದ ನಿಯಮಗಳ ಮೂಲಕ ರಾಜಿ ಮಾಡಿಕೊಳ್ಳಬಹುದೆಂದು ಘೋಷಿಸಬಹುದೋ ಆ ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳಬಹುದು;

(ಸಿ) ತೆರಿಗೆ ನಿರ್ಧರಣೆಯಲ್ಲಿ ಒಂದು ಪಕ್ಷಕಾರರಾಗಿ ದಾವೆಗೆ ಗುರಿಯಾಗಿದ್ದರೆ ಅಥವಾ ಪಕ್ಷಕಾರರಾಗಿ ಸೇರಿದ್ದರೆ, ಸ್ವತಃ ತಮ್ಮನ್ನು ಪ್ರತಿರಕ್ಷಿಸಿಕೊಳ್ಳಬಹುದು;

(ಡಿ) ಚುನಾವಣೆಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ಯಾವುದೇ ವ್ಯವಹರಣೆಗಳ ವಿರುದ್ಧದ ಯಾವುದೇ ಅಪೀಲಿನಲ್ಲಿ ಪ್ರತಿರಕ್ಷಿಸಿಕೊಳ್ಳಬಹುದು ಅಥವಾ ರಾಜಿ ಮಾಡಿಕೊಳ್ಳಬಹುದು.

(ಇ) ನಗರಪಾಲಿಕೆಗೆ ಬಾಕಿ ಇದೆ ಎಂದು ಕ್ಲೇಮು ಮಾಡಿದ ವೆಚ್ಚಗಳ ಅಥವಾ ನಷ್ಟಪರಿಹಾರದ ವಸೂಲಾತಿಗಾಗಿ 471ನೇ ಮತ್ತು 480ನೇ ಪ್ರಕರಣಗಳ ಮೇರೆಗಿನ ವ್ಯವಹರಣೆಗಳನ್ನು ಕೈಗೊಳ್ಳಬಹುದು, ಅವುಗಳಿಂದ ಹಿಂದೆ ಸರಿಯಬಹುದು ಅಥವಾ ಅವುಗಳ ವಿಷಯದಲ್ಲಿ ರಾಜಿ ಮಾಡಿಕೊಳ್ಳಬಹುದು.

(ಎಫ್) ಆಯುಕ್ತರು ಯಾರೇ ವ್ಯಕ್ತಿಯೊಂದಿಗೆ ಮಾಡಿಕೊಂಡ ಕರಾರಿನ ಮೇರೆಗೆ ಸಂದಾಯ ಮಾಡಬೇಕಾದ ದಂಡದ ಸಂಬಂಧದಲ್ಲಿ ಅಂಥ ವ್ಯಕ್ತಿಯ ವಿರುದ್ಧ ಐದು ನೂರು ರೂಪಾಯಿಗಳಿಗೆ ಮೀರದ ಮೊತ್ತಕ್ಕೆ ಸಂಬಂಧಿಸಿದ ಯಾವುದೇ ಕ್ಲೇಮನ್ನು ಅಥವಾ ಸ್ಥಾಯೀ ಸಮಿತಿಯ ಅನುಮೋದನೆಯೊಂದಿಗೆ ಐದು ನೂರು ರೂಪಾಯಿಗಳಿಗೆ ಮೀರುವ ಯಾವುದೇ ಮೊತ್ತಕ್ಕೆ ಸಂಬಂಧಿಸಿದ ಅಂಥ ಯಾವುದೇ ಕ್ಲೇಮನ್ನು ಹಿಂತೆಗೆದುಕೊಳ್ಳಬಹುದು ಅಥವಾ ಅದರ ಬಗ್ಗೆ ರಾಜಿ ಮಾಡಿಕೊಳ್ಳಬಹುದು.

(ಜಿ) ಅನುಕ್ರಮವಾಗಿ ನಗರಪಾಲಿಕೆಯು ಅಥವಾ ಯಾವುದೇ ಪೌರ ಪ್ರಾಧಿಕಾರವು, ಅಧಿಕಾರಿಯು ಅಥವಾ ನೌಕರನು ತಮ್ಮ ಅಧಿಕೃತ ಸಾಮರ್ಥ್ಯದಲ್ಲಿ ಮಾಡಿದ ಯಾವುದೇ ಕಾರ್ಯಕ್ಕೆ ಅಥವಾ ಮಾಡಲು ತಪ್ಪಿದ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಯ ಅಥವಾ ಯಾವುದೇ ಪೌರ ಪ್ರಾಧಿಕಾರದ, ಅಧಿಕಾರಿಯ ಅಥವಾ ನೌಕರನ ವಿರುದ್ಧ ಹೂಡಿದ ಯಾವುದೇ ದಾವೆಯಲ್ಲಿ ಅಥವಾ ಇತರ ಕಾನೂನು ವ್ಯವಹರಣೆಯಲ್ಲಿ [1][XXX][1] ಪ್ರತಿರಕ್ಷಿಸಿಕೊಳ್ಳಬಹುದು:

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ಪರಂತು, ಅವನು ಈ ಖಂಡದ ಮೇರೆಗೆ ಕ್ರಮವನ್ನು ತೆಗೆದುಕೊಂಡ ದಿನಾಂಕದಿಂದ ಹದಿನೈದು ದಿವಸಗಳೊಳಗಾಗಿ ಅಂಥ ಕ್ರಮದ ಬಗ್ಗೆ ನಗರಪಾಲಿಕೆಗೆ ವರದಿ ಮಾಡತಕ್ಕದ್ದು.][1]

1. 1986ರ ಅಧಿನಿಯಮ ಸಂಖ್ಯೆ 32ರ ಮೂಲಕ 17.6.1986 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಹೆಚ್) ಮೇಲೆ ಹೇಳಿದಂತೆ ಮಾಡಿದ ಯಾವುದೇ ಕಾರ್ಯಕ್ಕೆ ಅಥವಾ ಮಾಡಲು ತಪ್ಪಿದ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಯ ವಿರುದ್ಧ ಅಥವಾ ಯಾವುದೇ ಪೌರ ಪ್ರಾಧಿಕಾರದ ಅಧಿಕಾರಿಯ ಅಥವಾ ನೌಕರನ ವಿರುದ್ಧ ಮಾಡಿದ ಯಾವುದೇ ಕ್ಲೇಮಿನ ಬಗ್ಗೆ ಹೂಡಿದ ದಾವೆಯ ಅಥವಾ ಇತರ ಕಾನೂನು ವ್ಯವಹರಣೆಯ ಬಗ್ಗೆ ಸ್ಥಾಯೀ ಸಮಿತಿಯ ಅನುಮೋದನೆ ಪಡೆದು ರಾಜಿ ಮಾಡಿಕೊಳ್ಳಬಹುದು.

(ಐ) ಸ್ಥಾಯೀ ಸಮಿತಿಯ ಅನುಮೋದನೆ ಪಡೆದು ಯಾವುದೇ ದಾವೆಯನ್ನು ಹೂಡಬಹುದು ಮತ್ತು ನಡೆಸಬಹುದು ಅಥವಾ ನಗರಪಾಲಿಕೆಯ ಅಥವಾ ಆಯುಕ್ತರ ಹೆಸರಿನಲ್ಲಿ ಹೂಡಿದ ಯಾವುದೇ ದಾವೆಯಿಂದ ಅಥವಾ ಮಾಡಿದ, (ಎಫ್) ಖಂಡದಲ್ಲಿ ನಿರ್ದಿಷ್ಟಪಡಿಸಿದ ವರ್ಣನೆಯ ಕ್ಲೇಮನ್ನು ಹೊರತುಪಡಿಸಿದ ಯಾವುದೇ ಕ್ಲೇಮಿನಿಂದ ಹಿಂದೆ ಸರಿಯಬಹುದು ಅಥವಾ ಅದರ ಬಗ್ಗೆ ರಾಜಿ ಮಾಡಿಕೊಳ್ಳಬಹುದು.

(ಜೆ) ಈ ಪ್ರಕರಣದಲ್ಲಿ ಮೇಲೆ ಹೇಳಿದ ಖಂಡದಲ್ಲಿ ನಮೂದಿಸಿದ ಯಾವುದೇ ಉದ್ದೇಶಕ್ಕಾಗಿ ಅಥವಾ ಯಾವುದೇ ಪೌರ ಪ್ರಾಧಿಕಾರದಲ್ಲಿ, ಅಧಿಕಾರಿಯಲ್ಲಿ ಅಥವಾ ನೌಕರನಲ್ಲಿ ನಿಹಿತವಾದ ಅಥವಾ ಅದಕ್ಕೆ ಅವರಿಗೆ ವಿಧಿಸಿದ ಯಾವುದೇ ಅಧಿಕಾರವನ್ನು ಅಥವಾ ಕರ್ತವ್ಯವನ್ನು ಕಾನೂನುಬದ್ಧವಾಗಿ ಚಲಾಯಿಸುವುದನ್ನು ಅಥವಾ ನಿರ್ವಹಿಸುವುದನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ಪಡೆಯುವುದು ಅವಶ್ಯವೆಂದು ಅಥವಾ ವಿಹಿತವೆಂದು ತಾವು ಭಾವಿಸಬಹುದಾದಂಥ ಅಥವಾ ಅವರು ಪಡೆಯಬೇಕೆಂದು ನಗರಪಾಲಿಕೆಯು ಅಥವಾ ಸ್ಥಾಯೀ ಸಮಿತಿಯು ಅಪೇಕ್ಷಿಸಬಹುದಾದ ಕಾನೂನು ಸಲಹೆಯನ್ನು ಮತ್ತು ಸಹಾಯವನ್ನು ಪಡೆಯಬಹುದು.

**484. ಕಾನೂನು ಕೋಶ.–** (1) ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರುವ ಅಂಥ ಸಂಖ್ಯೆಯ ಅಧಿಕಾರಿಗಳನ್ನು ಒಳಗೊಂಡ ಕಾನೂನು ಕೋಶವು ನಗರಪಾಲಿಕೆಯಲ್ಲಿ ಇರತಕ್ಕದ್ದು.

(2) ನಗರಪಾಲಿಕೆಯು, ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ, ವಿನಿಯಮಗಳ ಮತ್ತು ಉಪವಿಧಿಗಳ ಉಪಬಂಧಗಳ ಅರ್ಥವಿವರಣೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಮತ್ತು ನಗರಪಾಲಿಕೆಯು ಪಕ್ಷಕಾರ ಆಗಿರುವ ದಾವೆಗಳನ್ನು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ಹೂಡುವುದಕ್ಕೆ, ಅವುಗಳಲ್ಲಿ ಪ್ರತಿರಕ್ಷಿಸಿಕೊಳ್ಳುವುದಕ್ಕೆ, ಅವುಗಳನ್ನು ನಡೆಸುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಸಹ ಕಾನೂನು ಕೋಶದೊಂದಿಗೆ ಸಮಾಲೋಚಿಸತಕ್ಕದ್ದು.

(3) ಕಾನೂನು ಕೋಶದ ವೆಚ್ಚವನ್ನು ನಗರಪಾಲಿಕೆಯ ನಿಧಿಗಳಿಂದ ಭರಿಸತಕ್ಕದ್ದು.

**485. ಸರ್ಕಾರಕ್ಕೆ, ಅಧಿಕಾರಿಗಳಿಗೆ, ಪೌರ ಪ್ರಾಧಿಕಾರಗಳಿಗೆ ಮತ್ತು ನೌಕರರಿಗೆ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮದ ಅಥವಾ ಆದೇಶದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ಸರ್ಕಾರದ ಅಥವಾ ಯಾವುದೇ ಪೌರ ಪ್ರಾಧಿಕಾರದ ಅಥವಾ ಅಧಿಕಾರಿಯ ಅಥವಾ ನೌಕರನ ವಿರುದ್ಧ ಅಥವಾ ಸರ್ಕಾರದ ಅಥವಾ ಯಾವುದೇ ಪೌರ ಪ್ರಾಧಿಕಾರದ ಅಥವಾ ಅಧಿಕಾರಿಯ ಅಥವಾ ನೌಕರನ ನಿರ್ದೇಶನದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆಯನ್ನು, ಪ್ರಾಸಿಕ್ಯೂಷನನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರಕ್ಕದ್ದಲ್ಲ.

**486. ನಿಧಿಯ ನಷ್ಟ, ಪೋಲು ಅಥವಾ ದುರ್ವಿನಿಯೋಗಕ್ಕಾಗಿ ಆಯುಕ್ತರ ಮತ್ತು ಕೌನ್ಸಿಲರನ ಹೊಣೆಗಾರಿಕೆ, ಇತ್ಯಾದಿ.–** (1) ಆಯುಕ್ತರು ಮತ್ತು ಪ್ರತಿಯೊಬ್ಬ ಕೌನ್ಸಿಲರನು, ನಗರಪಾಲಿಕೆಯ ಒಡೆತನದಲ್ಲಿರುವ ಅಥವಾ ಅದರಲ್ಲಿ ನಿಹಿತವಾದ ಯಾವುದೇ ಹಣದ ಅಥವಾ ಇತರ ಸ್ವತ್ತಿನ ನಷ್ಟ, ಪೋಲು ಅಥವಾ ದುರ್ವಿನಿಯೋಗಕ್ಕಾಗಿ, ಅಂಥ ನಷ್ಟ, ಪೋಲು ಅಥವಾ ದುರ್ವಿನಿಯೋಗವು ಅವರ ಬುದ್ಧಿಪೂರ್ವಕ ನಿರ್ಲಕ್ಷ್ಯ ಅಥವಾ ದುರ್ವರ್ತನೆಯ ನೇರ ಪರಿಣಾಮವಾಗಿದ್ದರೆ ಹೊಣೆಗಾರರಾಗಿರತಕ್ಕದ್ದು ಮತ್ತು ಸರ್ಕಾರದ ಪೂರ್ವ ಮಂಜೂರಾತಿ ಪಡೆದು ನಗರಪಾಲಿಕೆಯು ಅವರ ವಿರುದ್ಧ ನಷ್ಟ ಪರಿಹಾರಕ್ಕಾಗಿ ದಾವೆಯನ್ನು ಹೂಡತಕ್ಕದ್ದು.

(2) ಅಂಥ ಪ್ರತಿಯೊಂದು ದಾವೆಯನ್ನು ವ್ಯಾಜ್ಯಕಾರಣವು ಉದ್ಭವಿಸಿದ ದಿನಾಂಕದ ತರುವಾಯ ಮೂರು ವರ್ಷಗಳ ಒಳಗಾಗಿ ಪ್ರಾರಂಭಿಸತಕ್ಕದ್ದು.

**487. ಮೇಯರ್, ಉಪ–ಮೇಯರ್, ಮುಂತಾದವರ ಪ್ರಾಸಿಕ್ಯೂಷನ್‌ಗೆ ಮಂಜೂರಾತಿ.–** ಮೇಯರ್ ಅಥವಾ ಉಪಮೇಯರ್ ಅಥವಾ ಯಾರೇ ಕೌನ್ಸಿಲರು ಅಥವಾ ಆಯುಕ್ತರು ಅಥವಾ ಪ್ರತಿನಿಯೋಜನೆಯ ಮೇಲೆ ನಗರಪಾಲಿಕೆಯಲ್ಲಿ ಕೆಲಸ ಮಾಡುತ್ತಿರುವ ಸರ್ಕಾರದ ಯಾರೇ ಅಧಿಕಾರಿಯು ತನ್ನ ಪದದ ಕರ್ತವ್ಯವನ್ನು ನಿರ್ವಹಿಸುತ್ತಿರುವಾಗ ಅಥವಾ ನಿರ್ವಹಿಸುತ್ತಿರುವನೆಂದು ತಾತ್ಪರ್ಯವಾಗುವಾಗ ಅವನು ಯಾವುದೇ ಅಪರಾಧವನ್ನು ಮಾಡಿರುವುದಾಗಿ ಆರೋಪಿತನಾಗಿದ್ದರೆ ಮ್ಯಾಜಿಸ್ಟ್ರೇಟರು ಸರ್ಕಾರದ ಪೂರ್ವ ಮಂಜೂರಾತಿಯ ಹೊರತು, ಅಂಥ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ.

**488. ನಿರ್ಧರಣೆ, ಇತ್ಯಾದಿಯನ್ನು ಆಕ್ಷೇಪಿಸತಕ್ಕದ್ದಲ್ಲ.–** (1) ಈ ಅಧಿನಿಯಮದ ಅಧಿಕಾರದ ಮೇರೆಗೆ ಮಾಡಲಾದ ಯಾವುದೇ ನಿರ್ಧರಣೆಯನ್ನು ಅಥವಾ ತಗಾದೆಯನ್ನು ಮತ್ತು ವಿಧಿಸಲಾದ ಯಾವುದೇ ಚಾರ್ಜನ್ನು,–

(ಎ) ಯಾರೇ ವ್ಯಕ್ತಿಯ ಹೆಸರು, ನಿವಾಸ, ವ್ಯವಹಾರ ಅಥವಾ ಉದ್ಯೋಗದ ಸ್ಥಳಕ್ಕೆ ಸಂಬಂಧಿಸಿದಂತೆ; ಅಥವಾ

(ಬಿ) ಯಾವುದೇ ಸ್ವತ್ತಿನ ಅಥವಾ ವಸ್ತುವಿನ ವರ್ಣನೆಯಲ್ಲಿ; ಅಥವಾ

(ಸಿ) ನಿರ್ಧರಿಸಿದ, ತಗಾದೆ ಮಾಡಿದ ಅಥವಾ ವಿಧಿಸಿದ ಮೊಬಲಗಿಗೆ ಸಂಬಂಧಿಸಿದಂತೆ

– ಯಾವುದೇ ಲಿಪಿಕ ಪ್ರಮಾದದ ಕಾರಣದಿಂದಾಗಿ ಅಥವಾ ಯಾವುದೇ ತಪ್ಪಿನ ಕಾರಣದಿಂದಾಗಿ ಆಕ್ಷೇಪಿಸತಕ್ಕದ್ದಲ್ಲ ಅಥವಾ ಅದರ ಮೇಲೆ ಪರಿಣಾಮ ಉಂಟಾಗತಕ್ಕದ್ದಲ್ಲ:

ಪರಂತು, ಈ ಅಧಿನಿಯಮದ ಉಪಬಂಧಗಳನ್ನು ಸಾರತಃ ಮತ್ತು ಕಾರ್ಯತಃ ಪಾಲಿಸಿರಬೇಕು ಮತ್ತು ಈ ಅಧಿನಿಯಮದ ಮೇರೆಗೆ ಯಾವುದೇ ವ್ಯವಹರಣೆಗಳನ್ನು ಅದರ ರೂಪದಲ್ಲಿಯ ದೋಷ ಮಾತ್ರದಿಂದಲೇ ಯಾವುದೇ ನ್ಯಾಯಾಲಯವು ರದ್ದುಗೊಳಿಸತಕ್ಕದ್ದಲ್ಲ ಅಥವಾ ತಳ್ಳಿಹಾಕತಕ್ಕದ್ದಲ್ಲ.

(2) ಈ ಅಧಿನಿಯಮದ ಅಧಿಕಾರದ ಮೇರೆಗೆ ಸಂಗ್ರಹಿಸಲಾದ ಹಣದ ಯಾವುದೇ ಮೊತ್ತವನ್ನು ವಸೂಲು ಮಾಡಲು ಅಥವಾ ಸದರಿ ಅಧಿಕಾರದ ಮೇರೆಗೆ ಮಾಡಲಾದ ಯಾವುದೇ ನಿರ್ಧರಣೆಯ ಅಥವಾ ಹಣದ ಸಂಗ್ರಹಣೆಯ ಕಾರಣದಿಂದಾಗಿ ಉಂಟಾದ ಹಾನಿಗೆ ಸಂಬಂಧಿಸಿದಂತೆ ಹಾನಿ ಪರಿಹಾರಗಳನ್ನು ವಸೂಲು ಮಾಡಲು ಯಾವುದೇ ನ್ಯಾಯಾಲಯದಲ್ಲಿ ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ:

ಪರಂತು, ಈ ಅಧಿನಿಯಮದ ಉಪಬಂಧಗಳನ್ನು ಸಾರತಃ ಮತ್ತು ಕಾರ್ಯತಃ ಪಾಲಿಸಿರಬೇಕು.

(3) ಈ ಅಧಿನಿಯಮದ ಮೇರೆಗಿನ ಯಾವುದೇ ಜಪ್ತಿ ಅಥವಾ ಮಾರಾಟವನ್ನು, ಈ ಅಧಿನಿಯಮದ ಉಪಬಂಧಗಳನ್ನು, ನಿಯಮಗಳನ್ನು ಮತ್ತು ಉಪವಿಧಿಗಳನ್ನು ಸಾರತಃ ಮತ್ತು ಕಾರ್ಯತಃ ಪಾಲಿಸಿದ್ದರೆ, ಬಿಲ್ಲಿನಲ್ಲಿ, ನೋಟೀಸಿನಲ್ಲಿ, ಅನುಸೂಚಿಯಲ್ಲಿ, ನಮೂನೆಯಲ್ಲಿ, ಸಮನುಗಳಲ್ಲಿ, ತಗಾದೆ ನೋಟೀಸಿನಲ್ಲಿ, ಜಪ್ತಿ ವಾರಂಟಿನಲ್ಲಿ, ವಿವರಣ ಪಟ್ಟಿಯಲ್ಲಿ ಅಥವಾ ಅದಕ್ಕೆ ಸಂಬಂಧಪಟ್ಟ ಇತರ ವ್ಯವಹರಣೆಯಲ್ಲಿ ಯಾವುದೇ ಪ್ರಮಾದ, ದೋಷ ಇರುವ ಕಾರಣದಿಂದಾಗಿ ಅಥವಾ ಅವು ಯಾವ ರೂಪದಲ್ಲಿ ಇರಬೇಕೋ ಆ ರೂಪದಲ್ಲಿ ಇಲ್ಲದಿರುವ ಕಾರಣದಿಂದಾಗಿ ಕಾನೂನುಬಾಹಿರವೆಂದು ಭಾವಿಸತಕ್ಕದ್ದಲ್ಲ ಅಥವಾ ಅವುಗಳನ್ನು ತಯಾರಿಸುವ ಯಾರೇ ವ್ಯಕ್ತಿಯನ್ನು ಉಲ್ಲಂಘನೆಕಾರನೆಂದು ಭಾವಿಸತಕ್ಕದ್ದಲ್ಲ:

ಪರಂತು, ಯಾವುದೇ ಅಕ್ರಮತೆಯಿಂದ ಬಾಧಿತನಾದ ಪ್ರತಿಯೊಬ್ಬ ವ್ಯಕ್ತಿಯು ಅವನು ಅನುಭವಿಸಿದ ಯಾವುದೇ ವಿಶೇಷ ಹಾನಿಗಾಗಿ ಪರಿಹಾರವನ್ನು ವಸೂಲ್ಮಾಡಬಹುದು.

**489. ಪೋಲೀಸು ಅಧಿಕಾರಿಗಳ ಕರ್ತವ್ಯಗಳು.–** ಪ್ರತಿಯೊಬ್ಬ ಪೋಲೀಸು ಅಧಿಕಾರಿಯ ಕರ್ತವ್ಯವು,–

(ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ಅಥವಾ ವಿನಿಯಮಗಳ ಮೇರೆಗಿನ ಯಾವುದೇ ಅಪರಾಧವನ್ನು ಮಾಡುವುದಕ್ಕೆ ಸಂಚು ಮಾಡಿರುವುದರ ಬಗ್ಗೆ ಅಥವಾ ಆ ಅಪರಾಧವನ್ನು ಮಾಡಿರುವುದರ ಬಗ್ಗೆ ತಾನು ಸ್ವೀಕರಿಸುವಂಥ ಯಾವುದೇ ಮಾಹಿತಿಯನ್ನು ವಿಳಂಬ ಮಾಡದೆ ನಗರಪಾಲಿಕೆಯ ಯುಕ್ತ ಅಧಿಕಾರಿಗೆ ತಿಳಿಸುವುದು;

(ಬಿ) ಈ ಅಧಿನಿಯಮದ ಅಥವಾ ಅಂಥ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಮೇರೆಗೆ ಆಯುಕ್ತರಲ್ಲಿ ಅಥವಾ ನಗರಪಾಲಿಕೆಯ ಅಂಥ ಅಧಿಕಾರಿಯಲ್ಲಿ ಅಥವಾ ನೌಕರನಲ್ಲಿ ಅಥವಾ ವ್ಯಕ್ತಿಯಲ್ಲಿ ನಿಹಿತವಾದ ಯಾವುದೇ ಅಧಿಕಾರವನ್ನು ಕಾನೂನುಸಮ್ಮತವಾಗಿ ಚಲಾಯಿಸುವುದಕ್ಕಾಗಿ, ತಮ್ಮ ನೆರವನ್ನು ಯುಕ್ತವಾಗಿ ಕೋರುವ ಆಯುಕ್ತರಿಗೆ ಅಥವಾ ಆಯುಕ್ತರು ಯಾರಿಗೆ ಅಧಿಕಾರಗಳನ್ನು ಕಾನೂನುಬದ್ಧವಾಗಿ ಪ್ರತ್ಯಾಯೋಜಿಸಿರುವರೋ ಆ ಯಾರೇ ನಗರಪಾಲಿಕೆಯ ಅಧಿಕಾರಿಗೆ ಅಥವಾ ನೌಕರನಿಗೆ ಅಥವಾ ಯಾರೇ ವ್ಯಕ್ತಿಗೆ ನೆರವಾಗುವುದು

– ಆಗಿರತಕ್ಕದ್ದು ಮತ್ತು ಅಂಥ ಎಲ್ಲ ಉದ್ದೇಶಗಳಿಗಾಗಿ, ತಮ್ಮ ಸಾಮಾನ್ಯ ಪೋಲೀಸು ಕರ್ತವ್ಯಗಳನ್ನು ಚಲಾಯಿಸುವಾಗ ಅವರು ಯಾವ ಅಧಿಕಾರಗಳನ್ನು ಹೊಂದಿರುತ್ತಾರೋ ಅದೇ ಅಧಿಕಾರಗಳನ್ನು ಹೊಂದಿರತಕ್ಕದ್ದು.

**490. ವ್ಯಕ್ತಿಗಳನ್ನು ದಸ್ತಗಿರಿ ಮಾಡಲು ಪೋಲೀಸು ಅಧಿಕಾರಿಯ ಅಧಿಕಾರ.–** (1) ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಯಾವುದೇ ಉಪಬಂಧದ ವಿರುದ್ಧ ಯಾರೇ ವ್ಯಕ್ತಿಯು ಅಪರಾಧ ಮಾಡುವುದನ್ನು ಯಾರೇ ಪೋಲೀಸು ಅಧಿಕಾರಿಯು ನೋಡಿದರೆ ತಮಗೆ ಅಂಥ ವ್ಯಕ್ತಿಯ ಹೆಸರು ಮತ್ತು ವಿಳಾಸ ಗೊತ್ತಿರದಿದ್ದರೆ ಮತ್ತು ಆ ಬಗ್ಗೆ ಕೇಳಿದ ಮೇಲೆ ಸದರಿ ವ್ಯಕ್ತಿಯು ತನ್ನ ಹೆಸರನ್ನು ಮತ್ತು ವಿಳಾಸವನ್ನು ಕೊಡಲು ನಿರಾಕರಿಸಿದ್ದರೆ ಅಥವಾ ಅಂಥ ಅಧಿಕಾರಿಯು ಸುಳ್ಳೆಂದು ನಂಬಲು ಕಾರಣವಿರುವಂಥ ಹೆಸರು ಮತ್ತು ವಿಳಾಸವನ್ನು ಅವನು ಕೊಟ್ಟರೆ ಅವರು ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡತಕ್ಕದ್ದು.

(2) ಉಪಪ್ರಕರಣ (1)ರ ಮೇರೆಗೆ ದಸ್ತಗಿರಿ ಮಾಡಿದ ಯಾರೇ ವ್ಯಕ್ತಿಯನ್ನು,–

(ಎ) ಅವನ ನಿಜವಾದ ಹೆಸರು ಮತ್ತು ವಿಳಾಸವನ್ನು ಖಚಿತಪಡಿಸಿಕೊಂಡ ತರುವಾಯ; ಅಥವಾ

(ಬಿ) ದಸ್ತಗಿರಿ ಮಾಡಿದ ವೇಳೆಯಿಂದ ಇಪ್ಪತ್ನಾಲ್ಕು ಗಂಟೆಗೆ ಮೀರದಂತೆ, ಮ್ಯಾಜಿಸ್ಟ್ರೇಟರ ಮುಂದೆ ಅವನನ್ನು ಹಾಜರುಪಡಿಸಲು ಅವಶ್ಯವಾದುದಕ್ಕಿಂತ ಯಾವುದೇ ಹೆಚ್ಚಿನ ಕಾಲ ಮ್ಯಾಜಿಸ್ಟ್ರೇಟರ ಆದೇಶವಿಲ್ಲದೆಯೇ ಅಭಿರಕ್ಷೆಯಲ್ಲಿ ತಡೆಹಿಡಿದಿಟ್ಟುಕೊಳ್ಳತಕ್ಕದ್ದಲ್ಲ.

**491. ನಗರಪಾಲಿಕೆಯ ನೌಕರರು ಪೋಲೀಸು ಅಧಿಕಾರಿಯ ಅಧಿಕಾರಗಳನ್ನು ಚಲಾಯಿಸುವುದು.–** ಸರ್ಕಾರವು, ಈ ಅಧಿನಿಯಮದ ಉದ್ದೇಶಗಳಿಗಾಗಿ ಪೋಲೀಸು ಅಧಿಕಾರಿಯ ಅಧಿಕಾರಗಳನ್ನು ಚಲಾಯಿಸಲು ನಗರಪಾಲಿಕೆಯ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ ಅಥವಾ ನಗರಪಾಲಿಕೆಯ ಅಧಿಕಾರಿಗಳ ಅಥವಾ ನೌಕರರ ಯಾವುದೇ ವರ್ಗಕ್ಕೆ ಅಧಿಕಾರ ನೀಡಬಹುದು.

**492. ನಗರಪಾಲಿಕೆಯ ಭದ್ರತಾದಳ.–** (1) ನಗರಪಾಲಿಕೆಯ ಭದ್ರತಾದಳವೆಂದು ಕರೆಯಲಾಗುವ ಒಂದು ದಳವನ್ನು,–

(i) ನಗರಪಾಲಿಕೆಯ ಒಡೆತನದಲ್ಲಿರುವ ಸ್ವತ್ತಿನ ಉತ್ತಮ ಸಂರಕ್ಷಣೆಗಾಗಿ ಮತ್ತು ಭದ್ರತೆಗಾಗಿ;

(ii) ಆದಾಯದ ಸೋರಿಕೆಗೆ ಅಥವಾ ನಗರಪಾಲಿಕೆಗೆ ಸಂದಾಯವಾಗಬೇಕಾದ ಯಾವುದೇ ತೆರಿಗೆಗೆ ಸಂಬಂಧಪಟ್ಟ ಯಾವುದೇ ವಿಷಯವನ್ನು ಪತ್ತೆಹಚ್ಚುವಾಗ ಮತ್ತು ಅದರ ಬಗ್ಗೆ ತನಿಖೆ ಮಾಡುವಾಗ ನಗರಪಾಲಿಕೆಯ ಅಧಿಕಾರಿಗಳಿಗೆ ನೆರವಾಗುವುದಕ್ಕಾಗಿ;

(iii) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ ಅಥವಾ ವಿನಿಯಮದ ಅಥವಾ ಆದೇಶದ ಮೇರೆಗೆ ಯಾರೇ ವ್ಯಕ್ತಿಯು ಯಾವುದೇ ಅಪರಾಧವನ್ನು ಮಾಡುವುದಕ್ಕೆ ಯಾವುದೇ ಸಂಚು ಮಾಡುತ್ತಿರುವುದರ ಬಗ್ಗೆ ಅಥವಾ ಆ ಅಪರಾಧವನ್ನು ಮಾಡಿರುವುದರ ಬಗ್ಗೆ ಯಾವುದೇ ಮಾಹಿತಿಯನ್ನು ಪರಿಣಾಮಕಾರಿಯಾಗಿ ತಿಳಿಸುವುದಕ್ಕಾಗಿ ಮತ್ತು ಪಡೆಯುವುದಕ್ಕಾಗಿ

– ರಚಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(2) ನಗರಪಾಲಿಕೆಯ ಭದ್ರತಾದಳವು, ನಗರಪಾಲಿಕೆಯು ನಿರ್ಧರಿಸಬಹುದಾದಂಥ ಸಂಖ್ಯೆಯ ಮೇಲ್ವಿಚಾರಣಾ ಅಧಿಕಾರಿಗಳನ್ನು ಮತ್ತು ಸಿಬ್ಬಂದಿಯನ್ನು ಒಳಗೊಂಡಿರತಕ್ಕದ್ದು ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ಆಯುಕ್ತರು ಅವರನ್ನು ನೇಮಕಮಾಡತಕ್ಕದ್ದು.

(3) ಆಯುಕ್ತರು, ನಗರಪಾಲಿಕೆಯ ಭದ್ರತಾದಳದ ಮೇಲೆ ಅಧೀಕ್ಷಣೆ ಮತ್ತು ನಿಯಂತ್ರಣ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಭದ್ರತಾದಳದ ಸಿಬ್ಬಂದಿಯ ನೇಮಕಾತಿ, ಸೇವಾ ಷರತ್ತುಗಳು, ನಡತೆ ಮತ್ತು ಶಿಸ್ತುಪಾಲನೆಗೆ ಸಂಬಂಧಿಸಿದ ವಿಷಯಗಳು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟಿರತಕ್ಕದ್ದು.

**493. ನಗರಪಾಲಿಕೆಯ ಅಧಿಕಾರಿಗಳಿಗೆ, ಏಜಂಟರುಗಳಿಗೆ ಮತ್ತು ಉಪ–ಏಜಂಟರುಗಳಿಗೆ "ಲೋಕನೌಕರ" ಪದದ ಅನ್ವಯ.–** ಪ್ರತಿಯೊಬ್ಬ ಕೌನ್ಸಿಲರ್‌ನನ್ನು, ಅಧಿಕಾರಿಯನ್ನು ಅಥವಾ ನೌಕರನನ್ನು, ನಗರಪಾಲಿಕೆಯ ಯಾವುದೇ ತೆರಿಗೆಯನ್ನು, ಫೀಜನ್ನು, ಅಥವಾ ನಗರಪಾಲಿಕೆಗೆ ಬಾಕಿ ಇರುವ ಇತರ ಮೊತ್ತವನ್ನು ಸಂಗ್ರಹಿಸುವುದಕ್ಕಾಗಿ ಇರುವ ಪ್ರತಿಯೊಬ್ಬ ಕಂಟ್ರಾಕ್ಟರನನ್ನು ಅಥವಾ ಏಜೆಂಟನನ್ನು ಮತ್ತು ಅಂಥ ತೆರಿಗೆಯನ್ನು, ಫೀಜನ್ನು ಅಥವಾ ಮೊತ್ತವನ್ನು ಸಂಗ್ರಹಿಸುವುದಕ್ಕಾಗಿ ಅಂಥ ಯಾರೇ ಕಂಟ್ರಾಕ್ಟರ್‌ನಿಂದ ಅಥವಾ ಏಜೆಂಟನಿಂದ ನಿಯೋಜಿತನಾದ ಪ್ರತಿಯೊಬ್ಬ ವ್ಯಕ್ತಿಯನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯಲ್ಲಿ ಲೋಕನೌಕರ ಎಂದು ಭಾವಿಸತಕ್ಕದ್ದು.

**494. ನಗರಪಾಲಿಕೆ, ಸ್ಥಾಯೀ ಸಮಿತಿ, ಮೇಯರ್, ಮೊದಲಾದವರ ವ್ಯವಹರಣೆಗಳಿಗೆ ಅಡ್ಡಿ ಮಾಡುವುದಕ್ಕೆ ನಿಷೇಧ.–** ನಗರಪಾಲಿಕೆಯು ಅಥವಾ ಯಾವುದೇ ಸ್ಥಾಯೀ ಸಮಿತಿಯು, ಮೇಯರ್ ಅಥವಾ ಉಪಮೇಯರ್ ಮತ್ತು ಕೌನ್ಸಿಲರ್‌ನು, ಆಯುಕ್ತರು ಅಥವಾ ನಗರಪಾಲಿಕೆಯಿಂದ ನಿಯೋಜಿತನಾದ ಯಾರೇ ವ್ಯಕ್ತಿಯು ಅಥವಾ ನಗರಪಾಲಿಕೆಯ ಪರವಾಗಿ ಆಯುಕ್ತರು ಯಾವ ವ್ಯಕ್ತಿಯ ಜೊತೆಗೆ ಕರಾರನ್ನು ಮಾಡಿಕೊಂಡಿರುವರೋ ಆ ಯಾರೇ ವ್ಯಕ್ತಿಯು ತಮ್ಮ ಕರ್ತವ್ಯವನ್ನು ಅಥವಾ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಮಯದ ಅಥವಾ ಆದೇಶದ ಬಲದಿಂದಾಗಿ ಅಥವಾ ಅದರ ಪರಿಣಾಮವಾಗಿ ಯಾವ ಕಾರ್ಯವನ್ನು ಮಾಡಲು ಅವರಿಗೆ ಅಧಿಕಾರ ನೀಡಲಾಗಿದೆಯೋ ಅಥವಾ ಅವರನ್ನು ಅಗತ್ಯಪಡಿಸಲಾಗಿದೆಯೋ ಆ ಕಾರ್ಯವನ್ನು ನೆರವೇರಿಸುವಾಗ ಅವರ ಯಾವುದೇ ವ್ಯವಹರಣೆಗಳಿಗೆ ಯಾರೇ ವ್ಯಕ್ತಿಯು ಅಡ್ಡಿ ಉಂಟುಮಾಡತಕ್ಕದ್ದಲ್ಲ.

**495. ಗುರುತನ್ನು ತೆಗೆದುಹಾಕುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು ಈ ಅಧಿನಿಯಮದಿಂದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ, ಉಪವಿಧಿ, ವಿನಿಯಮ ಅಥವಾ ಆದೇಶದಿಂದ ಅಧಿಕೃತಗೊಳಿಸಿದ ಯಾವುದೇ ಕೆಲಸದ ನಿರ್ವಹಣೆಗೆ ಪ್ರಾಸಂಗಿಕವಾದ ಯಾವುದೇ ಮಟ್ಟವನ್ನು ಅಥವಾ ದಿಕ್ಕನ್ನು ಸೂಚಿಸುವ ಉದ್ದೇಶಕ್ಕಾಗಿ ನಿಲ್ಲಿಸಿರುವ ಯಾವುದೇ ಗುರುತನ್ನು ತೆಗೆದುಹಾಕತಕ್ಕದ್ದಲ್ಲ.

**496. ನೋಟೀಸನ್ನು ತೆಗೆದುಹಾಕುವುದಕ್ಕೆ ಅಥವಾ ಅಳಿಸಿ ಹಾಕುವುದಕ್ಕೆ ನಿಷೇಧ.–** ಯಾರೇ ವ್ಯಕ್ತಿಯು ನಗರ ಪಾಲಿಕೆಯ ಸ್ಥಾಯೀ ಸಮಿತಿಯ ಅಥವಾ ಆಯುಕ್ತರ ಆದೇಶಗಳ ಮೂಲಕ ಅಥವಾ ಮೇರೆಗೆ ಪ್ರದರ್ಶಿಸಿದ ಯಾವುದೇ ನೋಟೀಸನ್ನು ಆ ಬಗ್ಗೆ ಅಧಿಕಾರವಿಲ್ಲದೆ ತೆಗೆದುಹಾಕತಕ್ಕದ್ದಲ್ಲ, ನಾಶಪಡಿಸತಕ್ಕದ್ದಲ್ಲ, ವಿರೂಪಗೊಳಿಸತಕ್ಕದ್ದಲ್ಲ ಅಥವಾ ಅನ್ಯಥಾ ಅಳಿಸಿಹಾಕತಕ್ಕದ್ದಲ್ಲ.

**497. ಸಾರ್ವಜನಿಕ ಸ್ಥಳದ ಅಥವಾ ಸಾಮಗ್ರಿಗಳ ಸಂಬಂಧದಲ್ಲಿ ಅನಧಿಕೃತ ವ್ಯವಹಾರಗಳಿಗೆ ನಿಷೇಧ.–** ಯಾರೇ ವ್ಯಕ್ತಿಯು, ಆ ಬಗ್ಗೆ ಅಧಿಕಾರವಿಲ್ಲದೆ ನಗರ ಪಾಲಿಕೆಯಲ್ಲಿ ನಿಹಿತವಾದ ಭೂಮಿಯಿಂದ ಅಥವಾ ಜಲಮಾರ್ಗಗಳಿಂದ (ಖಾಸಗಿ ಸ್ವತ್ತಾಗಿರದ) ಅಥವಾ ಅವುಗಳಲ್ಲಿ ಅಥವಾ ಅವುಗಳ ಮೇಲೆ ಇರುವ ಮಣ್ಣನ್ನು, ಮರಳನ್ನು, ಅಥವಾ ಇತರ ಸಾಮಗ್ರಿಯನ್ನು ತೆಗೆಯತಕ್ಕದ್ದಲ್ಲ ಅಥವಾ ಯಾವುದೇ ವಸ್ತುಗಳನ್ನು ಶೇಖರಿಸತಕ್ಕದ್ದಲ್ಲ ಅಥವಾ ಯಾವುದೇ ಒತ್ತುವರಿಯನ್ನು ಮಾಡತಕ್ಕದ್ದಲ್ಲ ಅಥವಾ ಅವುಗಳಿಗೆ ಯಾವುದೇ ರೀತಿಯಲ್ಲಿ ಅಡಚಣೆ ಉಂಟುಮಾಡತಕ್ಕದ್ದಲ್ಲ.

**498. ಸವಾಲು ಕೂಗುವುದಕ್ಕೆ ನಿಷೇಧ.–** (1) ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯಿಂದ ಅಥವಾ ಅದರ ಪರವಾಗಿ ಚರ ಅಥವಾ ಸ್ಥಿರ ಸ್ವತ್ತಿನ ಮಾರಾಟಕ್ಕೆ ಸಂಬಂಧಿಸಿದಂತೆ ಯಾವುದೇ ಕರ್ತವ್ಯವನ್ನು ನೆರವೇರಿಸಬೇಕಾಗಿರುವ ನಗರ ಪಾಲಿಕೆಯ ಯಾರೇ ನೌಕರನು ಅಥವಾ ಅಧಿಕಾರಿಯು ಅಂಥ ಮಾರಾಟದಲ್ಲಿ ಮಾರಾಟ ಮಾಡಿದ ಯಾವುದೇ ಸ್ವತ್ತಿಗಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸವಾಲು ಕೂಗತಕ್ಕದ್ದಲ್ಲ ಅಥವಾ ಅದರಲ್ಲಿ ಹಿತಾಸಕ್ತಿಯನ್ನು ಅರ್ಜಿಸತಕ್ಕದ್ದಲ್ಲ.

(2) ಉಪ–ಪ್ರಕರಣ (1)ರ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು ಸೇವೆಯಿಂದ ವಜಾ ಆಗುವುದಕ್ಕೂ ಸಹ ಗುರಿಯಾಗತಕ್ಕದ್ದು.

**499. ಕಂಪೆನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಮೇರೆಗೆ ಯಾವುದೇ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಆ ಅಪರಾಧ ನಡೆದ ಕಾಲದಲ್ಲಿ ಕಂಪೆನಿಯ ಪ್ರಭಾರದಲ್ಲಿದ್ದ ಮತ್ತು ಆ ಕಂಪನಿಯ ವ್ಯವಹಾರವನ್ನು ನಡೆಸುವುದಕ್ಕಾಗಿ ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪೆನಿಯನ್ನು ಅಪರಾಧದ ತಪ್ಪಿತಸ್ಥ ಎಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಈ ಉಪ–ಪ್ರಕರಣದಲ್ಲಿ ಒಳಗೊಂಡಿರುವುದು ಯಾವುದು ಅಪರಾಧವು ತನಗೆ ತಿಳಿಯದೆಯೇ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ಯುಕ್ತವಾದ ಎಲ್ಲ ಜಾಗರೂಕತೆಯನ್ನು ತಾನು ವಹಿಸಿದ್ದೆನೆಂದು ಅಂಥ ಯಾರೇ ವ್ಯಕ್ತಿಯು ರುಜುವಾತುಪಡಿಸಿದರೆ ಅವನನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) ಉಪ–ಪ್ರಕರಣ (1) ರಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೇರೆಗೆ ಅಪರಾಧವನ್ನು ಕಂಪೆನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವನ್ನು ಕಂಪೆನಿಯ ಯಾರೇ ನಿರ್ದೇಶಕರ, ವ್ಯವಸ್ಥಾಪಕರ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಇಲ್ಲವೇ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದಲ್ಲಿ ಅಥವಾ ಅವರ ಯಾವುದೇ ನಿರ್ಲಕ್ಷ್ಯತೆಯಿಂದಾಗಿ ನಡೆಯಿತೆಂದು ಆರೋಪಿಸಬಹುದಾಗಿರುವಲ್ಲಿ ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನೂ ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) 'ಕಂಪನಿ' ಎಂದರೆ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಒಳಗೊಳ್ಳುತ್ತದೆ;

(ಬಿ) ಫರ್ಮಿಗೆ ಸಂಬಂಧಿಸಿದಂತೆ 'ನಿರ್ದೇಶಕ' ಎಂದರೆ ಆ ಫರ್ಮ್‌ನ ಪಾಲುದಾರ.

[1][**499ಎ. ಧ್ವಜದ ಅಧಿಕೃತ ಪ್ರದರ್ಶನ.–** (1) ಯಾರೇ ವ್ಯಕ್ತಿಯು ರಾಷ್ಟ್ರಧ್ವಜವನ್ನು ಅಥವಾ ಸರ್ಕಾರವು ಅನುಮೋದಿಸಿದ ಧ್ವಜವನ್ನು ಹೊರತುಪಡಿಸಿ ಯಾವುದೇ ಇತರ ಧ್ವಜವನ್ನು ನಗರ ಪಾಲಿಕೆಯ ಕಚೇರಿಯ ಮೇಲೆ ಹಾರಿಸತಕ್ಕದ್ದಲ್ಲ.

(2) ಉಪಪ್ರಕರಣ (1)ನ್ನು ಉಲ್ಲಂಘಿಸುವ ಯಾರೇ ಆಗಲಿ, ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಮತ್ತು ಉಲ್ಲಂಘನೆಯು ಮುಂದುವರೆದ ಸಂದರ್ಭದಲ್ಲಿ, ಉಲ್ಲಂಘನೆಯು ಮುಂದುವರೆದ ಪ್ರತಿಯೊಂದು ದಿನಕ್ಕೆ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.][1]

1. 1991ರ ಅಧಿನಿಯಮ ಸಂಖ್ಯೆ 22ರ ಮೂಲಕ 29.4.1991 ರಿಂದ ಜಾರಿಗೆ ಬರುವಂತೆ 499ಎ ಪ್ರಕರಣವನ್ನು ಸೇರಿಸಲಾಗಿದೆ.

**500. [1][ದೊಡ್ಡ ನಗರ ಪ್ರದೇಶ][1]ದೊಳಗೆ [1][ಪಂಚಾಯಿತಿ ಪ್ರದೇಶ][1]ವನ್ನು ವಿಲೀನಗೊಳಿಸುವುದರ ಪರಿಣಾಮ.–** [1][ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993][1]ರ ಮೇರೆಗೆ ಒಂದು ಅಥವಾ ಹೆಚ್ಚು ಕಂದಾಯ ಗ್ರಾಮಗಳನ್ನು ಒಳಗೊಂಡ ಯಾವ ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದಂತೆ ಒಂದು [1][ಪಂಚಾಯಿತಿ ಪ್ರದೇಶ][1]ವನ್ನು ರಚಿಸಲಾಗಿದೆಯೋ ಆ ಯಾವುದೇ ಸ್ಥಳೀಯ ಪ್ರದೇಶವನ್ನು 4ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೇರೆಗಿನ ಅಧಿಸೂಚನೆಯ ಬಲದಿಂದಾಗಿ [1][ದೊಡ್ಡ ನಗರ ಪ್ರದೇಶ][1] ದೊಳಗೆ ಸೇರಿಸಲಾಗಿದ್ದರೆ ಆಗ ಈ ಅಧಿನಿಯಮದಲ್ಲಿ ಅಥವಾ [1][ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993][1] ರಲ್ಲಿ ಏನೇ ಒಳಗೊಂಡಿದ್ದರೂ, ಆದರೆ ಈ ಅಧಿನಿಯಮದ 4ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಅಂಥ ಪ್ರದೇಶವನ್ನು ಯಾವ ದಿನಾಂಕದಂದು [1][ದೊಡ್ಡ ನಗರ ಪ್ರದೇಶ][1]ದೊಳಗೆ ಸೇರಿಸಲಾಗಿದೆಯೋ ಆ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು ಎಂದರೆ:–

(ಎ) [1][ಅಂಥ ಸ್ಥಳೀಯ ಪ್ರದೇಶದ ಗ್ರಾಮ ಪಂಚಾಯತಿಯು][1] (ಇದರಲ್ಲಿ ಇನ್ನು ಮುಂದೆ ಪಂಚಾಯಿತಿ ಎಂದು ಉಲ್ಲೇಖಿಸಲಾಗಿದೆ) ಅಸ್ತಿತ್ವದಲ್ಲಿರುವುದು ನಿಂತುಹೋಗತಕ್ಕದ್ದು ಮತ್ತು ಅಂಥ ಪ್ರದೇಶವು [1][ಯಾವ ತಾಲ್ಲೂಕು ಪಂಚಾಯತಿಯ ಮತ್ತು ಜಿಲ್ಲಾ ಪಂಚಾಯತಿಯ ಅಧಿಕಾರ ವ್ಯಾಪ್ತಿಯೊಳಗೆ ಇದೆಯೋ ಆ ತಾಲ್ಲೂಕು ಪಂಚಾಯಿತಿಯು ಮತ್ತು ಆ ಜಿಲ್ಲಾ ಪಂಚಾಯತಿಯು][1] ಅಂಥ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದು ನಿಂತುಹೋಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ)[1][ಗ್ರಾಮ ಪಂಚಾಯತಿಯ ನಿಧಿ][1] ಯಲ್ಲಿ ವೆಚ್ಚ ಮಾಡದೆ ಉಳಿದಿರುವ ಶಿಲ್ಕು ಮತ್ತು ಪಂಚಾಯಿತಿಗೆ ಸೇರಿದ ಸ್ವತ್ತು (ದರಗಳ, ತೆರಿಗೆಗಳ ಮತ್ತು ಫೀಜುಗಳ ಬಾಕಿಗಳೂ ಸೇರಿದಂತೆ) ಮತ್ತು ಅಂಥ ಅಧಿಸೂಚನೆಗೆ ಮುಂಚೆ ಪಂಚಾಯಿತಿಯಲ್ಲಿ ನಿಹಿತವಾಗಿದ್ದ ಎಲ್ಲ ಹಕ್ಕುಗಳು ಮತ್ತು ಅಧಿಕಾರಗಳು, ಅವುಗಳಿಗೆ ಸಂಬಂಧಿಸಿದಂತೆ ಎಲ್ಲ ಋಣಭಾರಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು [1][ದೊಡ್ಡ ನಗರ ಪ್ರದೇಶ][1]ದ ನಗರಪಾಲಿಕೆಯಲ್ಲಿ (ಇದರಲ್ಲಿ ಇನ್ನು ಮುಂದೆ ನಗರಪಾಲಿಕೆ ಎಂದು ಉಲ್ಲೇಖಿಸಲಾಗಿದೆ) ನಿಹಿತವಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸದರಿ ಸ್ಥಳೀಯ ಪ್ರದೇಶಕ್ಕೆ ಸಂಬಂಧಪಟ್ಟಂತೆ ಸದರಿ ದಿನಾಂಕದ ನಿಕಟ ಪೂರ್ವದಲ್ಲಿ [1][ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993][1] ರ ಮೇರೆಗೆ ಮಾಡಿದ, ಹೊರಡಿಸಿದ, ವಿಧಿಸಿದ ಅಥವಾ ಮಂಜೂರು ಮಾಡಿದ ಯಾವುದೇ ನೇಮಕ, ಅಧಿಸೂಚನೆ,

ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಿದ, ಹೊರಡಿಸಿದ, ವಿಧಿಸಿದ ಅಥವಾ ಮಂಜೂರ್ಮಾಡಿದ ಯಾವುದೇ ನೇಮಕದ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯ ಮೂಲಕ ಅದನ್ನು ರದ್ದುಗೊಳಿಸುವವರೆಗೆ ಅಥವಾ ಮಾರ್ಪಾಡು ಮಾಡುವವರೆಗೆ ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ, ಹೊರಡಿಸಲಾಗಿದೆ, ವಿಧಿಸಲಾಗಿದೆ ಅಥವಾ ಮಂಜೂರು ಮಾಡಲಾಗಿದೆ ಎಂದು ಭಾವಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಡಿ) ಸದರಿ ದಿನಾಂಕದ ನಿಕಟಪೂರ್ವದಲ್ಲಿ ಸದರಿ ಸ್ಥಳೀಯ ಪ್ರದೇಶಕ್ಕೆ ಸಂಬಂಧಪಟ್ಟಂತೆ [1][ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993][1] ರ ಮೇರೆಗೆ ಮಾಡಿದ ಅಥವಾ ಅಧಿಪ್ರಮಾಣೀಕರಿಸಿದ ಎಲ್ಲ ಬಜೆಟ್ ಅಂದಾಜುಗಳು, ನಿರ್ಧರಣೆಗಳು, ನಿರ್ಧರಣಾ ಪಟ್ಟಿಗಳು, ಮೌಲ್ಯಮಾಪನಗಳು ಅಥವಾ ಅಳತೆಗಳನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ ಅಥವಾ ಅಧಿಪ್ರಮಾಣೀಕರಿಸಲಾಗಿದೆಯೆಂದು ಭಾವಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಇ) ಸದರಿ ದಿನಾಂಕದ ನಿಕಟಪೂರ್ವದಲ್ಲಿ ಪಂಚಾಯಿತಿಯು ಅಥವಾ ಅದರ ಪರವಾಗಿ ವಹಿಸಿದ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲ ಋಣಗಳನ್ನು ಮತ್ತು ಬಾಧ್ಯತೆಗಳನ್ನು ಮತ್ತು ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಪಂಚಾಯಿತಿಯು ಅಥವಾ ಅದರ ಪರವಾಗಿ ಮಾಡಿಕೊಂಡ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲ ಕರಾರುಗಳನ್ನು ಈ ಅಧಿನಿಯಮದ ಮೂಲಕ ನಗರಪಾಲಿಕೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ನಗರಪಾಲಿಕೆಯು ವಹಿಸಿದೆ ಎಂದು ಮತ್ತು ಮಾಡಿಕೊಂಡಿದೆ ಎಂದು ಭಾವಿಸತಕ್ಕದ್ದು;

(ಎಫ್) ಸದರಿ ದಿನಾಂಕದ ನಿಕಟಪೂರ್ವದಲ್ಲಿ ಪಂಚಾಯಿತಿಯಲ್ಲಿ ನಿಯೋಜಿತರಾಗಿದ್ದ ಎಲ್ಲ ಅಧಿಕಾರಿಗಳು ಮತ್ತು ನೌಕರರು, ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರು ಆಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಕ್ಕೆ ಅನುಸಾರವಾಗಿ ಬೇರೆ ಏರ್ಪಾಟನ್ನು ಮಾಡುವವರೆಗೆ ಸದರಿ ದಿನಾಂಕದ ನಿಕಟಪೂರ್ವದಲ್ಲಿ ಅವರು ಯಾವ ಸಂಬಳಕ್ಕೆ ಮತ್ತು ಭತ್ಯಗಳಿಗೆ ಹಕ್ಕುಳ್ಳವರಾಗಿದ್ದರೋ ಆ ಸಂಬಳವನ್ನು ಮತ್ತು ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಯಾವ ಸೇವಾ ಷರತ್ತುಗಳಿಗೆ ಅವರು ಒಳಪಟ್ಟಿದ್ದರೋ ಆ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು:

ಪರಂತು, ನಗರಪಾಲಿಕೆಯ ಅಧೀನದಲ್ಲಿನ ಸೇವೆಯ ಅಗತ್ಯತೆಗಳಿಗೆ ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯು ಅವಶ್ಯವಿಲ್ಲವೆಂದು ಅಥವಾ ಸೂಕ್ತವಾಗಿಲ್ಲವೆಂದು ನಗರಪಾಲಿಕೆಯು ಅಭಿಪ್ರಾಯಪಡುವುದೋ ಅಂಥ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ, ಅವನ ನಿಯೋಜನೆಯ ನಿಬಂಧನೆಗಳು ಕೊಡಲು ಅಗತ್ಯಪಡಿಸಿದಂಥ ನೋಟೀಸನ್ನು ಕೊಟ್ಟ ತರುವಾಯ, ಸರ್ಕಾರದ ಪೂರ್ವ ಮಂಜೂರಾತಿಗೆ ಒಳಪಟ್ಟು, ಆ ಯಾರೇ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಮುಂದುವರಿಸದಿರುವುದು ನಗರಪಾಲಿಕೆಗೆ ಸಕ್ಷಮವಾದುದಾಗಿರತಕ್ಕದ್ದು ಮತ್ತು ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಬಿಟ್ಟುಬಿಡಲಾಗಿದೆಯೋ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು ಅವನು ಯಾವ ಪಂಚಾಯಿತಿಯಲ್ಲಿ ನಿಯೋಜಿತನಾಗಿದ್ದನೋ ಆ ಪಂಚಾಯಿತಿಯು ಅಸ್ತಿತ್ವದಲ್ಲಿರುವುದು ನಿಂತುಹೋಗದಿದ್ದರೆ ಹೇಗೋ ಹಾಗೆ ಸೇವೆಯಿಂದ ಅಸಿಂಧುಗೊಳಿಸಿದಾಗ ತೆಗೆದುಕೊಳ್ಳಲು ಅಥವಾ ಪಡೆಯಲು ಅವನು ಹಕ್ಕುಳ್ಳವನಾಗಬಹುದಾಗಿದ್ದ ರಜೆ, ಪಿಂಚಣಿ, ಭವಿಷ್ಯನಿಧಿ ಮತ್ತು ಉಪದಾನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು;

(ಜಿ) ಸದರಿ ದಿನಾಂಕದಂದು ಪಂಚಾಯಿತಿಯ ಮುಂದೆ ಇತ್ಯರ್ಥದಲ್ಲಿದ್ದ ಎಲ್ಲ ವ್ಯವಹರಣೆಗಳು ನಗರಪಾಲಿಕೆಗೆ ವರ್ಗಾವಣೆಯಾಗಿವೆ ಎಂದು ಭಾವಿಸತಕ್ಕದ್ದು ಮತ್ತು ಅವುಗಳನ್ನು ನಗರಪಾಲಿಕೆಯಲ್ಲಿ ಮುಂದುವರಿಸತಕ್ಕದ್ದು;

(ಹೆಚ್) ಯಾವುದೇ ಪ್ರಾಧಿಕಾರದ ಮುಂದೆ ಇತ್ಯರ್ಥದಲ್ಲಿರುವ ಎಲ್ಲ ಅಪೀಲುಗಳನ್ನು ಕಾರ್ಯಸಾಧ್ಯವಾಗಬಹುದಾದಷ್ಟುಮಟ್ಟಿಗೆ ಅವುಗಳನ್ನು ದಾಖಲು ಮಾಡಿದಾಗ, ಸದರಿ ಸ್ಥಳೀಯ ಪ್ರದೇಶವು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಒಳಗೊಂಡಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಐ) ಸದರಿ ದಿನಾಂಕದಂದು ಇತ್ಯರ್ಥದಲ್ಲಿದ್ದ, ಪಂಚಾಯಿತಿಯು ಅಥವಾ ಅದರ ಪರವಾಗಿ ಹೂಡಿದ್ದ ಎಲ್ಲಾ ಪ್ರಾಸಿಕ್ಯೂಷನ್‌ಗಳನ್ನು ಮತ್ತು ಪಂಚಾಯಿತಿಯು ಅಥವಾ ಪಂಚಾಯತಿಯ ಯಾರೇ ಅಧಿಕಾರಿಯು ಹೂಡಿದ ಅಥವಾ ಪಂಚಾಯತಿಯ ಅಥವಾ ಅದರ ಯಾರೇ ಅಧಿಕಾರಿಯ ವಿರುದ್ಧ ಹೂಡಿದ್ದ ಎಲ್ಲ ದಾವೆಗಳನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು, ಅಂಥ ಪ್ರಾಸಿಕ್ಯೂಷನ್‌ಗಳನ್ನು, ದಾವೆಗಳನ್ನು ಅಥವಾ ವ್ಯವಹರಣೆಗಳನ್ನು ಹೂಡಿದಾಗ ಸದರಿ ಸ್ಥಳೀಯ ಪ್ರದೇಶವು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಒಳಗೊಂಡಿದ್ದರೆ ಹೇಗೋ ಹಾಗೆ ನಗರಪಾಲಿಕೆಯು ಮುಂದುವರೆಸತಕ್ಕದ್ದು ಅಥವಾ ಅದರ ವಿರುದ್ಧ ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಜೆ) ನಗರಪಾಲಿಕೆಯಲ್ಲಿ ನಿಹಿತವಾಗಿರುವ, ದರಗಳ, ತೆರಿಗೆಗಳ ಮತ್ತು ಫೀಜುಗಳ ಎಲ್ಲ ಬಾಕಿಗಳು ಈ ಅಧಿನಿಯಮದ ಮೇರೆಗೆ ಅಂಥ ದರಗಳನ್ನು ಮತ್ತು ಫೀಜುಗಳನ್ನು ವಿಧಿಸಲಾಗದಿದ್ದಾಗ್ಯೂ ಈ ಅಧಿನಿಯಮದ ಮೇರೆಗೆ ವಸೂಲಿ ಮಾಡಬಹುದಾದ ತೆರಿಗೆಯ ರೀತಿಯಲ್ಲಿಯೇ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು.

(ಕೆ) ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ನಗರಪಾಲಿಕೆಯು ಪುನಾರಚನೆಯಾಗುವವರೆಗೆ ಈ ಅಧಿನಿಯಮದಲ್ಲಿ ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ [1][ದೊಡ್ಡ ನಗರ ಪ್ರದೇಶ][1] ದಲ್ಲಿ ಸೇರಿಸಿದ ಸ್ಥಳೀಯ ಪ್ರದೇಶದ ಸಾಮಾನ್ಯ ನಿವಾಸಿಗಳಾಗಿರುವ, ಸರ್ಕಾರದಿಂದ ನಾಮನಿರ್ದೇಶಿತರಾಗಿರುವ ಅಷ್ಟು ಸಂಖ್ಯೆಯ ವ್ಯಕ್ತಿಗಳು ನಗರಪಾಲಿಕೆಯ ಹೆಚ್ಚುವರಿ ಕೌನ್ಸಿಲರುಗಳಾಗಿರತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**501.** [1]**[ಪಂಚಾಯಿತಿ ಪ್ರದೇಶ]**[1]**ದ ಭಾಗವನ್ನು** [1]**[ದೊಡ್ಡ ನಗರ ಪ್ರದೇಶ]**[1]**ದೊಳಗೆ ವಿಲೀನಗೊಳಿಸುವುದರ ಪರಿಣಾಮ.–** [1][ಪಂಚಾಯಿತಿ ಪ್ರದೇಶ][1]ದ ಎಲ್ಲೆಗಳೊಳಗಿನ ಪ್ರದೇಶದ ಯಾವುದೇ ಭಾಗವನ್ನು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದರೆ, ಆಗ ಈ ಅಧಿನಿಯಮದಲ್ಲಿ ಅಥವಾ [1][ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993][1] ರಲ್ಲಿ ಏನೇ ಒಳಗೊಂಡಿದ್ದರೂ, ಆದರೆ ಈ ಅಧಿನಿಯಮದ 4ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಅಂಥ ಪ್ರದೇಶವನ್ನು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ, ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು, ಎಂದರೆ:–

(ಎ) ಸರ್ಕಾರವು ಲಿಖಿತ ಆದೇಶದ ಮೂಲಕ ನಿರ್ದೇಶಿಸಬಹುದಾದಷ್ಟು [1][ಗ್ರಾಮ ಪಂಚಾಯಿತಿ ನಿಧಿ][1] ಮತ್ತು [1][ಗ್ರಾಮ ಪಂಚಾಯತಿ][1]ಯಲ್ಲಿ ನಿಹಿತವಾಗಿರುವ ಇತರ ಸ್ವತ್ತುಗಳು ನಗರಪಾಲಿಕೆಯ ನಿಧಿಗೆ ವರ್ಗಾವಣೆಯಾಗತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಲಾದ ಪ್ರದೇಶದ ಭಾಗದಲ್ಲಿ ಉದ್ಭವಿಸುವ ಅಥವಾ ಅದಕ್ಕೆ ಸಂಬಂಧಪಟ್ಟ ಸಿವಿಲ್ ಮತ್ತು ಕ್ರಿಮಿನಲ್ ವ್ಯವಹರಣೆಗಳಿಗೆ, ಕರಾರುಗಳಿಗೆ ಮತ್ತು ಇತರ ವಿಷಯಗಳಿಗೆ ಅಥವಾ ಕಾರ್ಯಗಳಿಗೆ (ತೆರಿಗೆಗಳು, ಫೀಜುಗಳು ಮತ್ತು ಉಪಕರಗಳ ಬಾಕಿಗಳೂ ಸೇರಿದಂತೆ) ಸಂಬಂಧಿಸಿದಂತೆ [1][ಗ್ರಾಮ ಪಂಚಾಯಿತಿ][1]ಯ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು ಮತ್ತು ಅಂಥ ಹಕ್ಕುಗಳನ್ನು ಮತ್ತು ಹೊಣೆಗಾರಿಕೆಗಳನ್ನು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ, ಉಪವಿಧಿಗಳ ಮತ್ತು ಆದೇಶಗಳ ಮೇರೆಗೆ, ನಗರಪಾಲಿಕೆಯು ಅಥವಾ ಅದರ ವಿರುದ್ಧ ಜಾರಿಗೊಳಿಸಬಹುದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸರ್ಕಾರವು ಆದೇಶದ ಮೂಲಕ ನಿರ್ದೇಶಿಸಬಹುದಾದಂಥ [1][ಗ್ರಾಮಪಂಚಾಯಿತಿ][1]ಯ ಅಧಿಕಾರಿಗಳನ್ನು ಮತ್ತು ನೌಕರರನ್ನು ನಗರಪಾಲಿಕೆಗೆ ವರ್ಗಾಯಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1]**[501ಎ.** [2]**[ಒಂದು ಸಣ್ಣ ನಗರ ಪ್ರದೇಶವನ್ನು ಅಥವಾ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುತ್ತಿರುವ ಪ್ರದೇಶವನ್ನು ಒಂದು ದೊಡ್ಡ ನಗರ ಪ್ರದೇಶದೊಳಗೆ]**[2] **ವಿಲೀನಗೊಳಿಸುವುದರ ಪರಿಣಾಮ.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) ಅಥವಾ ಇತರ ಯಾವುದೇ ಕಾನೂನಿನ ಮೇರೆಗೆ ರಚಿತವಾದ ಅಥವಾ ಮುಂದುವರಿಸಿದ [2][ಸಣ್ಣ ನಗರ ಪ್ರದೇಶದಲ್ಲಿ ಅಥವಾ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುತ್ತಿರುವ ಪ್ರದೇಶ][2] ದಲ್ಲಿ ಒಳಗೊಂಡಿರುವ ಯಾವುದೇ ಸ್ಥಳೀಯ ಪ್ರದೇಶವನ್ನು 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗಿನ ಅಧಿಸೂಚನೆಯ ಬಲದಿಂದಾಗಿ [2][ದೊಡ್ಡ ನಗರ ಪ್ರದೇಶ][2]ದಲ್ಲಿ ಸೇರಿಸಿದರೆ, ಆಗ ಈ ಅಧಿನಿಯಮದಲ್ಲಿ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರಲ್ಲಿ ಅಥವಾ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಆದರೆ 4ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು [2][ದೊಡ್ಡ ನಗರ ಪ್ರದೇಶ][2]ದಲ್ಲಿ ಅಂಥ ಪ್ರದೇಶವನ್ನು ಸೇರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು; ಎಂದರೆ:–

1. 1980ರ ಅಧಿನಿಯಮ ಸಂಖ್ಯೆ 28ರ ಮೂಲಕ 10.9.1980 ರಿಂದ ಜಾರಿಗೆ ಬರುವಂತೆ 501ಎ ಯಿಂದ 501ಡಿ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎ) ಅಂಥ ಸ್ಥಳೀಯ ಪ್ರದೇಶದ ಮುನ್ಸಿಪಲ್ ಕೌನ್ಸಿಲ್ ಅಥವಾ [1][ಪಟ್ಟಣ ಪಂಚಾಯತಿಯು][1] (ಇದರಲ್ಲಿ ಇನ್ನು ಮುಂದೆ ಸ್ಥಳೀಯ ಪ್ರಾಧಿಕಾರವೆಂದು ಉಲ್ಲೇಖಿಸಲಾಗಿದೆ) ಅಸ್ತಿತ್ವದಲ್ಲಿ ಇರುವುದು ನಿಂತುಹೋಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) ನಿಧಿಯಲ್ಲಿ ವೆಚ್ಚ ಮಾಡದೆ ಉಳಿದಿರುವ ಶಿಲ್ಕು ಸ್ಥಳೀಯ ಪ್ರಾಧಿಕಾರದ ಮತ್ತು ಸ್ಥಳೀಯ ಪ್ರಾಧಿಕಾರಕ್ಕೆ ಸೇರಿದ ಸ್ವತ್ತು (ದರಗಳ, ತೆರಿಗೆಗಳ ಮತ್ತು ಫೀಜುಗಳ ಬಾಕಿಗಳೂ ಸೇರಿದಂತೆ) ಮತ್ತು ಅಂಥ ಅಧಿಸೂಚನೆಗೆ ಮುಂಚೆ ಸ್ಥಳೀಯ ಪ್ರಾಧಿಕಾರದಲ್ಲಿ ನಿಹಿತವಾಗಿದ್ದ ಎಲ್ಲ ಹಕ್ಕುಗಳು ಮತ್ತು ಅಧಿಕಾರಗಳು, ಅವುಗಳಿಗೆ ಸಂಬಂಧಿಸಿದ ಎಲ್ಲ ಋಣಭಾರಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು [1][ದೊಡ್ಡ ನಗರ ಪ್ರದೇಶ][1]ದ ನಗರಪಾಲಿಕೆಯಲ್ಲಿ (ಇದರಲ್ಲಿ ಇನ್ನುಮುಂದೆ ನಗರಪಾಲಿಕೆ ಎಂದು ಉಲ್ಲೇಖಿಸಲಾಗಿದೆ) ನಿಹಿತವಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸದರಿ ಸ್ಥಳೀಯ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ ಸದರಿ ದಿನಾಂಕದ ನಿಕಟಪೂರ್ವದಲ್ಲಿ ಯಾವುದೇ ಕಾನೂನಿನ ಅಥವಾ ನಿಯಮದ ಮೇರೆಗೆ ಮಾಡಿದ, ಹೊರಡಿಸಿದ, ವಿಧಿಸಿದ ಅಥವಾ ಮಂಜೂರು ಮಾಡಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯು ಜಾರಿಯಲ್ಲಿರುವುದು ಮುಂದುವರೆಯತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಿದ, ಹೊರಡಿಸಿದ, ವಿಧಿಸಿದ ಅಥವಾ ಮಂಜೂರು ಮಾಡಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯ ಮೂಲಕ ಅದನ್ನು ರದ್ದುಗೊಳಿಸುವವರೆಗೆ ಅಥವಾ ಮಾರ್ಪಾಡು ಮಾಡುವವರೆಗೆ ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ, ಹೊರಡಿಸಲಾಗಿದೆ, ವಿಧಿಸಲಾಗಿದೆ ಅಥವಾ ಮಂಜೂರು ಮಾಡಲಾಗಿದೆ ಎಂದು ಭಾವಿಸತಕ್ಕದ್ದು;

(ಡಿ) ಸದರಿ ಸ್ಥಳೀಯ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ, ಸದರಿ ದಿನಾಂಕದ ನಿಕಟಪೂರ್ವದಲ್ಲಿ ಯಾವುದೇ ಕಾನೂನಿನ ಅಥವಾ ನಿಯಮದ ಮೇರೆಗೆ ಮಾಡಿದ ಅಥವಾ ಅಧಿಪ್ರಮಾಣೀಕರಿಸಿದ ಎಲ್ಲ ಬಜೆಟ್ ಅಂದಾಜುಗಳು, ನಿರ್ಧಾರಣೆಗಳು, ನಿರ್ಧಾರಣಾ ಪಟ್ಟಿಗಳು, ಮೌಲ್ಯಮಾಪನಗಳು ಅಥವಾ ಅಳತೆಗಳನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ ಅಥವಾ ಅಧಿಪ್ರಮಾಣೀಕರಿಸಲಾಗಿದೆಯೆಂದು ಭಾವಿಸತಕ್ಕದ್ದು;

(ಇ) ಸದರಿ ದಿನಾಂಕದ ನಿಕಟಪೂರ್ವದಲ್ಲಿ ಸ್ಥಳೀಯ ಪ್ರಾಧಿಕಾರವು ಅಥವಾ ಅದರ ಪರವಾಗಿ ವಹಿಸಿದ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲ ಋಣಗಳನ್ನು ಮತ್ತು ಬಾಧ್ಯತೆಗಳನ್ನು ಮತ್ತು ಸದರಿ ದಿನಾಂಕಕ್ಕೆ ನಿಕಟ ಪೂರ್ವದಲ್ಲಿ ಸ್ಥಳೀಯ ಪ್ರಾಧಿಕಾರವು ಅಥವಾ ಅದರ ಪರವಾಗಿ ಮಾಡಿಕೊಂಡ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲ ಕರಾರುಗಳನ್ನು, ಈ ಅಧಿನಿಯಮದ ಮೂಲಕ ನಗರಪಾಲಿಕೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ನಗರಪಾಲಿಕೆಯು ವಹಿಸಿದೆ ಎಂದು ಮತ್ತು ಮಾಡಿಕೊಂಡಿದೆ ಎಂದು ಭಾವಿಸತಕ್ಕದ್ದು;

(ಎಫ್) ಸದರಿ ದಿನಾಂಕದ ನಿಕಟಪೂರ್ವದಲ್ಲಿ ಸ್ಥಳೀಯ ಪ್ರಾಧಿಕಾರದಲ್ಲಿ ನಿಯೋಜಿತರಾಗಿದ್ದ ಎಲ್ಲ ಅಧಿಕಾರಿಗಳು ಮತ್ತು ನೌಕರರು, ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರು ಆಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಬೇರೆ ಏರ್ಪಾಟನ್ನು ಮಾಡುವವರೆಗೆ ಸದರಿ ದಿನಾಂಕದ ನಿಕಟಪೂರ್ವದಲ್ಲಿ ಅವರು ಯಾವ ಸಂಬಳಕ್ಕೆ ಮತ್ತು ಭತ್ಯೆಗಳಿಗೆ ಹಕ್ಕುಳ್ಳವರಾಗಿದ್ದರೋ ಆ ಸಂಬಳವನ್ನು ಮತ್ತು ಭತ್ಯಗಳನ್ನು ಪಡೆಯತಕ್ಕದ್ದು ಮತ್ತು ಯಾವ ಸೇವಾ ಷರತ್ತುಗಳಿಗೆ ಅವರು ಒಳಪಟ್ಟಿದ್ದರೋ ಆ ಸೇವಾ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು:

ಪರಂತು, ನಗರಪಾಲಿಕೆಯ ಅಧೀನದಲ್ಲಿನ ಸೇವೆಯ ಅಗತ್ಯತೆಗಳಿಗೆ, ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯು ಅವಶ್ಯವಿಲ್ಲವೆಂದು ಅಥವಾ ಸೂಕ್ತವಾಗಿಲ್ಲವೆಂದು ನಗರಪಾಲಿಕೆಯು ಅಭಿಪ್ರಾಯಪಡುವುದೋ ಆ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ ಅವನ ನಿಯೋಜನೆಯ ನಿಬಂಧನೆಗಳು ಕೊಡಲು ಅಗತ್ಯಪಡಿಸಿದಂಥ ನೋಟೀಸನ್ನು ಕೊಟ್ಟ ತರುವಾಯ, ಸರ್ಕಾರದ ಪೂರ್ವ ಮಂಜೂರಾತಿಗೆ ಒಳಪಟ್ಟು ಆ ಯಾರೇ ಅಧಿಕಾರಿಯ ಅಥವಾ ನೌಕರನ ಸೇವೆಗಳನ್ನು ಮುಂದುವರಿಸದಿರುವುದು ನಗರಪಾಲಿಕೆಗೆ ಸಕ್ಷಮವಾದುದಾಗಿರತಕ್ಕದ್ದು ಮತ್ತು ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಬಿಟ್ಟುಬಿಡಲಾಗಿದೆಯೋ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು, ಅವನು ಯಾವ ಸ್ಥಳೀಯ ಪ್ರಾಧಿಕಾರದಲ್ಲಿ ನಿಯೋಜಿತನಾಗಿದ್ದನೋ ಆ ಸ್ಥಳೀಯ ಪ್ರಾಧಿಕಾರವು ಅಸ್ತಿತ್ವದಲ್ಲಿರುವುದು ನಿಂತುಹೋಗದಿದ್ದರೆ ಹೇಗೋ ಹಾಗೆ ಸೇವೆಯಿಂದ ಅಸಿಂಧುಗೊಳಿಸಿದಾಗ ತೆಗೆದುಕೊಳ್ಳಲು ಅಥವಾ ಪಡೆಯಲು ಅವನು ಹಕ್ಕುಳ್ಳವನಾಗಬಹುದಾಗಿದ್ದ ರಜೆ, ಪಿಂಚಣಿ, ಭವಿಷ್ಯನಿಧಿ ಮತ್ತು ಉಪದಾನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

(ಜಿ) ಸದರಿ ದಿನಾಂಕದಂದು ಸ್ಥಳೀಯ ಪ್ರಾಧಿಕಾರದ ಮುಂದೆ ಇತ್ಯರ್ಥದಲ್ಲಿರುವ ಎಲ್ಲ ವ್ಯವಹರಣೆಗಳು ನಗರಪಾಲಿಕೆಗೆ ವರ್ಗಾವಣೆಯಾಗಿವೆ ಎಂದು ಭಾವಿಸತಕ್ಕದ್ದು ಮತ್ತು ಅವುಗಳನ್ನು ನಗರಪಾಲಿಕೆಯಲ್ಲಿ ಮುಂದುವರಿಸತಕ್ಕದ್ದು;

(ಎಚ್) ಯಾವುದೇ ಪ್ರಾಧಿಕಾರದ ಮುಂದೆ ಇತ್ಯರ್ಥದಲ್ಲಿರುವ ಎಲ್ಲ ಅಪೀಲುಗಳನ್ನು ಕಾರ್ಯಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಅವುಗಳನ್ನು ದಾಖಲು ಮಾಡಿದಾಗ, ಸದರಿ ಸ್ಥಳೀಯ ಪ್ರದೇಶವು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಒಳಗೊಂಡಿದ್ದಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಐ) ಸದರಿ ದಿನಾಂಕದಂದು ಇತ್ಯರ್ಥದಲ್ಲಿದ್ದ ಸ್ಥಳೀಯ ಪ್ರಾಧಿಕಾರದಿಂದ ಅಥವಾ ಅದರ ಪರವಾಗಿ ಹೂಡಿದ್ದ ಎಲ್ಲಾ ಪ್ರಾಸಿಕ್ಯೂಷನ್‌ಗಳನ್ನು ಮತ್ತು ಸ್ಥಳೀಯ ಪ್ರಾಧಿಕಾರವು ಅಥವಾ ಸ್ಥಳೀಯ ಪ್ರಾಧಿಕಾರದ ವಿರುದ್ಧ ಅಥವಾ ಸ್ಥಳೀಯ ಪ್ರಾಧಿಕಾರದ ಯಾರೇ ಅಧಿಕಾರಿಯು ಅಥವಾ ಅವರ ವಿರುದ್ಧ ಹೂಡಿದ್ದ ಎಲ್ಲ ದಾವೆಗಳನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು, ಅಂಥ ಪ್ರಾಸಿಕ್ಯೂಷನ್‌ಗಳನ್ನು, ದಾವೆಗಳನ್ನು ಅಥವಾ ವ್ಯವಹರಣೆಗಳನ್ನು ಹೂಡಿದಾಗ ಸದರಿ ಸ್ಥಳೀಯ ಪ್ರದೇಶವು [1][ದೊಡ್ಡ ನಗರ ಪ್ರದೇಶ][1] ದಲ್ಲಿ ಒಳಗೊಂಡಿದ್ದರೆ ಹೇಗೋ ಹಾಗೆ, ನಗರಪಾಲಿಕೆಯು ಮುಂದುವರೆಸತಕ್ಕದ್ದು ಅಥವಾ ಅದರ ವಿರುದ್ಧ ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಜೆ) ನಗರಪಾಲಿಕೆಯಲ್ಲಿ ನಿಹಿತವಾಗಿರುವ ದರಗಳ, ತೆರಿಗೆಗಳ ಮತ್ತು ಫೀಜುಗಳ ಎಲ್ಲ ಬಾಕಿಗಳು, ಈ ಅಧಿನಿಯಮದ ಮೇರೆಗೆ ಅಂಥ ದರಗಳನ್ನು ಮತ್ತು ಫೀಜುಗಳನ್ನು ವಿಧಿಸಲಾಗದಿದ್ದಾಗ್ಯೂ ಈ ಅಧಿನಿಯಮದ ಮೇರೆಗೆ ವಸೂಲು ಮಾಡಬಹುದಾದ ತೆರಿಗೆಯ ರೀತಿಯಲ್ಲಿಯೇ ವಸೂಲು ಮಾಡುವಂಥವುಗಳು ಆಗಿರತಕ್ಕದ್ದು;

(ಕೆ) ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ನಗರಪಾಲಿಕೆಯು ಪುನರ್ರಚನೆಯಾಗುವವರೆಗೆ, ಈ ಅಧಿನಿಯಮದಲ್ಲಿ ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ, [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದ ಸದರಿ ಸ್ಥಳೀಯ ಪ್ರಾಧಿಕಾರದ ಪ್ರದೇಶದ ಸಾಮಾನ್ಯ ನಿವಾಸಿಯಾಗಿರುವ, ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕ, ನಿಯಮಿಸಬಹುದಾದಷ್ಟು ಸಂಖ್ಯೆಯ ವ್ಯಕ್ತಿಗಳು ನಗರಪಾಲಿಕೆಯ ಹೆಚ್ಚುವರಿ ಕೌನ್ಸಿಲರುಗಳಾಗಿರತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**501ಬಿ. [1][ಒಂದು ಸಣ್ಣ ನಗರ ಪ್ರದೇಶದ ಅಥವಾ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುತ್ತಿರುವ ಪ್ರದೇಶದ][1] ಭಾಗವನ್ನು [1][ಒಂದು ದೊಡ್ಡ ನಗರಪ್ರದೇಶದೊಳಗೆ][1] ವಿಲೀನಗೊಳಿಸುವುದರ ಪರಿಣಾಮ.–** ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22) ಅಥವಾ ಇತರ ಯಾವುದೇ ಕಾನೂನಿನ ಮೇರೆಗೆ ರಚಿತವಾದ ಒಂದು [1][ಸಣ್ಣ ನಗರ ಪ್ರದೇಶದಲ್ಲಿ ಅಥವಾ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುತ್ತಿರುವ ಪ್ರದೇಶದಲ್ಲಿ][1] ಒಳಗೊಂಡಿರುವ ಸ್ಥಳೀಯ ಪ್ರದೇಶದ ಯಾವುದೇ ಭಾಗವನ್ನು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದರೆ, ಆಗ ಅಂಥ ಪ್ರದೇಶವನ್ನು [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು; ಎಂದರೆ:–

(ಎ) ಸರ್ಕಾರವು ಲಿಖಿತ ಆದೇಶದ ಮೂಲಕ ನಿರ್ದೇಶಿಸಬಹುದಾದಷ್ಟು, ಮುನ್ಸಿಪಲ್ ಕೌನ್ಸಿಲ್‌ನಲ್ಲಿ, [1][ಅಥವಾ ಒಂದು ಪಟ್ಟಣ ಪಂಚಾಯಿತಿಯಲ್ಲಿ][1] (ಇದರಲ್ಲಿ ಇನ್ನುಮುಂದೆ ಸ್ಥಳೀಯ ಪ್ರಾಧಿಕಾರವೆಂದು ಉಲ್ಲೇಖಿಸಲಾಗಿದೆ) ನಿಹಿತವಾಗಿರುವ ನಿಧಿಗಳು ಮತ್ತು ಇತರ ಸ್ವತ್ತುಗಳು ನಗರಪಾಲಿಕೆಯ ನಿಧಿಗೆ ವರ್ಗಾವಣೆಯಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) [1][ದೊಡ್ಡ ನಗರ ಪ್ರದೇಶ][1]ದಲ್ಲಿ ಸೇರಿಸಿದ ಪ್ರದೇಶದ ಭಾಗದಲ್ಲಿ ಉದ್ಭವಿಸುವ ಅಥವಾ ಅದಕ್ಕೆ ಸಂಬಂಧಪಟ್ಟ ಸಿವಿಲ್ ಮತ್ತು ಕ್ರಿಮಿನಲ್ ವ್ಯವಹರಣೆಗಳಿಗೆ, ಕರಾರುಗಳಿಗೆ ಮತ್ತು ಇತರ ವಿಷಯಗಳಿಗೆ ಅಥವಾ ಕಾರ್ಯಗಳಿಗೆ (ತೆರಿಗೆಗಳು, ಫೀಜುಗಳು ಮತ್ತು ಉಪಕರಗಳ ಬಾಕಿಗಳೂ ಸೇರಿದಂತೆ) ಸಂಬಂಧಿಸಿದಂತೆ ಸ್ಥಳೀಯ ಪ್ರಾಧಿಕಾರದ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು ಮತ್ತು ಅಂಥ ಹಕ್ಕುಗಳನ್ನು ಮತ್ತು ಹೊಣೆಗಾರಿಕೆಗಳನ್ನು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಅಥವಾ ಉಪವಿಧಿಗಳ ಮತ್ತು ಆದೇಶಗಳ ಮೇರೆಗೆ ನಗರಪಾಲಿಕೆಯು ಅಥವಾ ಅದರ ವಿರುದ್ಧ ಜಾರಿಗೊಳಿಸಬಹುದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸರ್ಕಾರವು ಆದೇಶದ ಮೂಲಕ ನಿರ್ದೇಶಿಸಬಹುದಾದಂಥ ಸ್ಥಳೀಯ ಪ್ರಾಧಿಕಾರದ ಅಧಿಕಾರಿಗಳನ್ನು ಮತ್ತು ನೌಕರರನ್ನು ನಗರಪಾಲಿಕೆಗೆ ವರ್ಗಾಯಿಸತಕ್ಕದ್ದು ಮತ್ತು ಹಾಗೆ ವರ್ಗಾಯಿಸಿದ ಅಧಿಕಾರಿಗಳು ಮತ್ತು ನೌಕರರು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಬೇರೆ ಏರ್ಪಾಟು ಮಾಡುವವರೆಗೆ, ಅಂಥ ವರ್ಗಾವಣೆಗೆ ನಿಕಟಪೂರ್ವದಲ್ಲಿ ಅವರು ಹಕ್ಕುಳ್ಳವರಾಗಿದ್ದ ಮತ್ತು ಸಂಬಳವನ್ನು ಮತ್ತು ಭತ್ಯಗಳನ್ನು ಪಡೆಯತಕ್ಕದ್ದು ಮತ್ತು ಯಾವ ಸೇವಾ ಷರತ್ತುಗಳಿಗೆ ಅವರು ಒಳಪಟ್ಟಿದ್ದರೋ ಆ ಸೇವಾ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

**501ಸಿ. ಈ ಅಧಿನಿಯಮದ ಮೇರೆಗೆ [1][ನಗರ ಪೌರಸಭಾ ಪ್ರದೇಶವನ್ನು ಮತ್ತು ಕೆಲವು ಇತರ ಪ್ರದೇಶಗಳನ್ನು ಒಂದು ದೊಡ್ಡ ನಗರ ಪ್ರದೇಶ][1]ವೆಂದು ಘೋಷಿಸುವುದರ ಪರಿಣಾಮ.–** [2][(1)][2] [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ್ನು ಮತ್ತು ಒಂದು ಅಥವಾ ಹೆಚ್ಚು ಇತರ ಸ್ಥಳೀಯ ಪ್ರಾಧಿಕಾರಗಳನ್ನು ಹೊಂದಿರುವ ಯಾವುದೇ ಸ್ಥಳೀಯ ಪ್ರದೇಶವನ್ನು 3ನೇ ಪ್ರಕರಣದ ಮೇರೆಗೆ [1][ದೊಡ್ಡ ನಗರ ಪ್ರದೇಶ][1]ವೆಂದು ಘೋಷಿಸಿದರೆ, ಆಗ ಈ ಅಧಿನಿಯಮದಲ್ಲಿ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರಲ್ಲಿ ಅಥವಾ ಅಂಥ ಇತರ ಸ್ಥಳೀಯ ಪ್ರಾಧಿಕಾರಗಳಿಗೆ ಅನ್ವಯವಾಗುವ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಅಂಥ ಘೋಷಣೆಯ ದಿನಾಂಕದಿಂದ ಜಾರಿಗೆ ಬರುವಂತೆ ಅಂಥ [1][ದೊಡ್ಡ ನಗರಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಮತ್ತು ಸ್ಥಳೀಯ ಪ್ರಾಧಿಕಾರಗಳು ಅಸ್ತಿತ್ವದಲ್ಲಿ ಇರುವುದು ನಿಂತುಹೋಗತಕ್ಕದ್ದು ಮತ್ತು ಅವುಗಳ ಸದಸ್ಯರುಗಳು ತಮ್ಮ ಪದಗಳನ್ನು ತೆರವು ಮಾಡತಕ್ಕದ್ದು ಮತ್ತು ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು, ಎಂದರೆ:–

(ಎ) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಮತ್ತು ಇತರ ಸ್ಥಳೀಯ ಪ್ರಾಧಿಕಾರಗಳಿಗೆ ಅನ್ವಯವಾಗುವ ಕಾನೂನಿನ ಉಪಬಂಧಗಳು [1][ದೊಡ್ಡ ನಗರಪ್ರದೇಶ][1]ವೆಂದು ಘೋಷಿಸಿದ ಸ್ಥಳೀಯ ಪ್ರದೇಶಕ್ಕೆ ಅನ್ವಯವಾಗತಕ್ಕದ್ದಲ್ಲ:

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ.

ಪರಂತು, ಅಂಥ ಘೋಷಣೆಯ ದಿನಾಂಕದ ನಿಕಟಪೂರ್ವದಲ್ಲಿ ಅನ್ವಯವಾಗುವಂತೆ ಜಾರಿಯಲ್ಲಿದ್ದಂಥ [1][ದೊಡ್ಡ ನಗರ ಪ್ರದೇಶ][1]ದ ಪೌರಸಭೆ ಮತ್ತು ಇತರ ಸ್ಥಳೀಯ ಪ್ರಾಧಿಕಾರಗಳಿಗೆ ಸಂಬಂಧಿಸಿದಂತೆ ಸದರಿ ಕಾನೂನುಗಳ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಅಥವಾ ವಿಧಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಗಳು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಅಥವಾ ವಿಧಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸು, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಗಳ ಮೂಲಕ ಅವುಗಳನ್ನು ರದ್ದುಪಡಿಸಿದ ಹೊರತು ಮತ್ತು ರದ್ದುಪಡಿಸುವವರೆಗೆ ಅವುಗಳನ್ನು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಲಾಗಿದೆ, ಹೊರಡಿಸಲಾಗಿದೆ ಅಥವಾ ವಿಧಿಸಲಾಗಿದೆ ಎಂದು ಭಾವಿಸತಕ್ಕದ್ದು;

(ಬಿ) ಸದರಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಮತ್ತು ಸ್ಥಳೀಯ ಪ್ರಾಧಿಕಾರಗಳ ನಿಧಿಗಳಲ್ಲಿ ವೆಚ್ಚ ಮಾಡದೇ ಉಳಿದಿರುವ ಶಿಲ್ಕು ಮತ್ತು ಸದರಿ ಮುನ್ಸಿಪಲ್ ಕೌನ್ಸಿಲ್‌ಗೆ ಮತ್ತು ಸ್ಥಳೀಯ ಪ್ರಾಧಿಕಾರಗಳಿಗೆ ಸೇರಿದ ಸ್ವತ್ತುಗಳು (ದರಗಳ, ತೆರಿಗೆಗಳ ಮತ್ತು ಫೀಜುಗಳ ಬಾಕಿಗಳು ಸೇರಿದಂತೆ) ಮತ್ತು ಅಂಥ ಘೋಷಣೆಗೆ ಮುಂಚೆ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಮತ್ತು ಇತರ ಪ್ರಾಧಿಕಾರಗಳಲ್ಲಿ ನಿಹಿತವಾಗಿದ್ದ ಎಲ್ಲ ಹಕ್ಕುಗಳು, ಹೊಣೆಗಾರಿಕೆಗಳು ಮತ್ತು ಅಧಿಕಾರಗಳು ಅವುಗಳಿಗೆ ಸಂಬಂಧಿಸಿದ ಎಲ್ಲ ಋಣಭಾರಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು, [1][ದೊಡ್ಡ ನಗರ ಪ್ರದೇಶ][1]ದ ನಗರಪಾಲಿಕೆಯಲ್ಲಿ (ಇದರಲ್ಲಿ ಇನ್ನುಮುಂದೆ ನಗರಪಾಲಿಕೆ ಎಂದು ಉಲ್ಲೇಖಿಸಲಾಗಿದೆ) ನಿಹಿತವಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸದರಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ಗೆ ಮತ್ತು ಸ್ಥಳೀಯ ಪ್ರಾಧಿಕಾರಗಳಿಗೆ ಸಂಬಂಧಿಸಿದಂತೆ ಘೋಷಣೆಯ ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಯಾವುದೇ ಕಾನೂನಿನ ಅಥವಾ ನಿಯಮದ ಮೇರೆಗೆ ಮಾಡಿದ ಅಥವಾ ಅಧಿಪ್ರಮಾಣೀಕರಿಸಿದ ಎಲ್ಲ ಬಜೆಟ್ ಅಂದಾಜುಗಳು, ನಿರ್ಧರಣಾ ಪಟ್ಟಿಗಳು, ಮೌಲ್ಯಮಾಪನಗಳು ಅಥವಾ ಅಳತೆಗಳನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ ಅಥವಾ ಅಧಿಪ್ರಮಾಣೀಕರಿಸಲಾಗಿದೆ ಎಂದು ಭಾವಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಡಿ) ಸದರಿ ಘೋಷಣೆಯ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಮತ್ತು ಸ್ಥಳೀಯ ಪ್ರಾಧಿಕಾರಗಳು ಅಥವಾ ಅವುಗಳ ಪರವಾಗಿ ವಹಿಸಿದ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲ ಋಣಗಳನ್ನು ಮತ್ತು ಹೊಣೆಗಾರಿಕೆಗಳನ್ನು ಮತ್ತು ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅವು ಮಾಡಿಕೊಂಡಿದ್ದ ಮತ್ತು ಸದರಿ ದಿನಾಂಕದಂದು ಇದ್ದ ಎಲ್ಲ ಕರಾರುಗಳನ್ನು ಈ ಅಧಿನಿಯಮದ ಮೂಲಕ ಅದಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಗರಪಾಲಿಕೆಯು ವಹಿಸಿದೆಯೆಂದು ಮತ್ತು ಮಾಡಿಕೊಂಡಿದೆ ಎಂದು ಭಾವಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಇ) ಸದರಿ ಘೋಷಣೆಯ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಮತ್ತು ಸ್ಥಳೀಯ ಪ್ರಾಧಿಕಾರಗಳಲ್ಲಿ ನಿಯೋಜಿತರಾಗಿದ್ದ ಎಲ್ಲ ಅಧಿಕಾರಿಗಳು ಮತ್ತು ನೌಕರರು ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರು ಆಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಬೇರೆ ಏರ್ಪಾಟನ್ನು ಮಾಡುವವರೆಗೆ ಅಂಥ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅವರು ಯಾವ ಸಂಬಳ ಮತ್ತು ಭತ್ಯೆಗಳಿಗೆ ಹಕ್ಕುಳ್ಳವರಾಗಿದ್ದರೋ ಆ ಸಂಬಳ ಮತ್ತು ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಯಾವ ಸೇವಾ ಷರತ್ತುಗಳಿಗೆ ಅವರು ಒಳಪಟ್ಟಿದ್ದರೋ ಆ ಸೇವಾ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು:

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಪರಂತು, ನಗರಪಾಲಿಕೆಯ ಅಧೀನದಲ್ಲಿನ ಸೇವೆಯ ಅಗತ್ಯತೆಗಳಿಗೆ, ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯು ಅವಶ್ಯವಿಲ್ಲವೆಂದು ಅಥವಾ ಸೂಕ್ತವಾಗಿಲ್ಲವೆಂದು ನಗರಪಾಲಿಕೆಯು ಅಭಿಪ್ರಾಯಪಡುವುದೋ ಆ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ ಅವನ ನಿಯೋಜನೆಯ ನಿಬಂಧನೆಗಳು ಕೊಡಲು ಅಗತ್ಯಪಡಿಸಿದಂಥ ನೋಟೀಸನ್ನು ಕೊಟ್ಟ ತರುವಾಯ ಸರ್ಕಾರದ ಪೂರ್ವ ಮಂಜೂರಾತಿಗೆ ಒಳಪಟ್ಟು, ಆ ಯಾರೇ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಮುಂದುವರೆಸದಿರುವುದು ನಗರಪಾಲಿಕೆಗೆ ಸಕ್ಷಮವಾದುದಾಗಿರತಕ್ಕದ್ದು ಮತ್ತು ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಬೇಡವೆಂದು ಬಿಟ್ಟುಬಿಡಲಾಗಿದೆಯೋ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು, ಅವನು ಯಾವ ನಗರ ಪೌರಸಭೆ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ನಿಯೋಜಿತನಾಗಿದ್ದನೋ ಆ ನಗರ ಪೌರಸಭೆ ಅಥವಾ ಸ್ಥಳೀಯ ಪ್ರಾಧಿಕಾರವು ಅಸ್ತಿತ್ವದಲ್ಲಿರುವುದು ನಿಂತುಹೋಗದಿದ್ದರೆ ಹೇಗೋ ಹಾಗೆ, ಅಸಮರ್ಥತೆಯ ಕಾರಣದಿಂದ ಅವನನ್ನು ಸೇವೆಯಿಂದ ತೆಗೆದುಹಾಕಿದಾಗ ತೆಗೆದುಕೊಳ್ಳಲು ಅಥವಾ ಪಡೆಯಲು ಅವನು ಹಕ್ಕುಳ್ಳವನಾಗಬಹುದಾಗಿದ್ದಂತಹುದೇ ರಜೆ, ಪಿಂಚಣಿ, ಭವಿಷ್ಯನಿಧಿ ಮತ್ತು ಉಪದಾನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು;

(ಎಫ್) ಸದರಿ ದಿನಾಂಕದಂದು [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಅಥವಾ ಸ್ಥಳೀಯ ಪ್ರಾಧಿಕಾರಗಳ ಮುಂದೆ ಇತ್ಯರ್ಥದಲ್ಲಿದ್ದ ಎಲ್ಲ ವ್ಯವಹರಣೆಗಳು ನಗರಪಾಲಿಕೆಗೆ ವರ್ಗಾವಣೆಯಾಗಿವೆ ಎಂದು ಭಾವಿಸತಕ್ಕದ್ದು ಮತ್ತು ಅವುಗಳನ್ನು ನಗರಪಾಲಿಕೆಯಲ್ಲಿ ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಜಿ) ಯಾವುದೇ ಪ್ರಾಧಿಕಾರದ ಮುಂದೆ ಇತ್ಯರ್ಥದಲ್ಲಿರುವ ಎಲ್ಲ ಅಪೀಲುಗಳನ್ನು ಕಾರ್ಯಸಾಧ್ಯವಾಗಬಹುದಾದಷ್ಟುಮಟ್ಟಿಗೆ, ಅವುಗಳನ್ನು ದಾಖಲು ಮಾಡಿದಾಗ ಸದರಿ ಸ್ಥಳೀಯ ಪ್ರದೇಶವು [1][ದೊಡ್ಡ ನಗರ ಪ್ರದೇಶ][1] ದಲ್ಲಿ ಒಳಗೊಂಡಿದ್ದಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎಚ್) ಸದರಿ ದಿನಾಂಕದಂದು ಇತ್ಯರ್ಥದಲ್ಲಿದ್ದ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಿಂದ ಮತ್ತು ಸ್ಥಳೀಯ ಪ್ರಾಧಿಕಾರದಿಂದ ಅಥವಾ ಅವುಗಳ ಪರವಾಗಿ ಹೂಡಿದ್ದ ಎಲ್ಲಾ ಪ್ರಾಸಿಕ್ಯೂಷನ್‌ಗಳನ್ನು, [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಮತ್ತು ಸ್ಥಳೀಯ ಪ್ರಾಧಿಕಾರಗಳು ಅಥವಾ ಅದರ ಯಾರೇ ಅಧಿಕಾರಿಯು ಹೂಡಿದ್ದ ಅಥವಾ ಅವರ ವಿರುದ್ಧ ಹೂಡಿದ್ದ ಎಲ್ಲಾ ದಾವೆಗಳನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು, ಅಂಥ ಪ್ರಾಸಿಕ್ಯೂಷನ್‌ಗಳನ್ನು, ದಾವೆಗಳನ್ನು ಅಥವಾ ವ್ಯವಹರಣೆಗಳನ್ನು ಹೂಡಿದಾಗ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಮತ್ತು ಸ್ಥಳೀಯ ಪ್ರಾಧಿಕಾರಗಳು [1][ದೊಡ್ಡ ನಗರ ಪ್ರದೇಶ][1] ದಲ್ಲಿ ಒಳಗೊಂಡಿದ್ದಿದ್ದರೆ ಹೇಗೋ ಹಾಗೆ ನಗರಪಾಲಿಕೆಯು ಅವುಗಳನ್ನು ಮುಂದುವರೆಸತಕ್ಕದ್ದು ಅಥವಾ ಅದರ ವಿರುದ್ಧ ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಐ) ನಗರಪಾಲಿಕೆಯಲ್ಲಿ ನಿಹಿತವಾಗಿರುವ ದರಗಳ, ತೆರಿಗೆಗಳ ಮತ್ತು ಫೀಜುಗಳ ಎಲ್ಲ ಬಾಕಿಗಳು ಈ ಅಧಿನಿಯಮದ ಮೇರೆಗೆ ಅಂಥ ದರಗಳನ್ನು ಮತ್ತು ಫೀಜುಗಳನ್ನು ವಿಧಿಸಲಾಗದಿದ್ದಾಗ್ಯೂ, ಈ ಅಧಿನಿಯಮದ ಮೇರೆಗೆ ವಸೂಲು ಮಾಡಬಹುದಾದ ತೆರಿಗೆಯ ರೀತಿಯಲ್ಲಿಯೇ ವಸೂಲಿ ಮಾಡುವಂಥವುಗಳು ಆಗಿರತಕ್ಕದ್ದು;

(ಜೆ) ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ನಗರಪಾಲಿಕೆಯು ಪುನರ್ರಚನೆ ಆಗುವವರೆಗೆ ಈ ಅಧಿನಿಯಮದಲ್ಲಿ ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ, [1][ದೊಡ್ಡ ನಗರ ಪ್ರದೇಶ][1]ದ ನಗರಪಾಲಿಕೆಯ ಕೌನ್ಸಿಲರುಗಳು [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಸದಸ್ಯರನ್ನು ಮತ್ತು ಸರ್ಕಾರವು ನಾಮನಿರ್ದೇಶನ ಮಾಡಬಹುದಾದಷ್ಟು ಸಂಖ್ಯೆಯ ಇತರ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು ಮತ್ತು ಹಾಗೆ ನಾಮನಿರ್ದೇಶಿತರಾದ ವ್ಯಕ್ತಿಗಳು ಕಾರ್ಯಸಾಧ್ಯವಾದಷ್ಟುಮಟ್ಟಿಗೆ, ಯಾವ ಇತರ ಸ್ಥಳೀಯ ಪ್ರಾಧಿಕಾರಗಳು ಅಸ್ತಿತ್ವದಲ್ಲಿರುವುದು ನಿಂತುಹೋಗಿದೆಯೋ ಆ ಸ್ಥಳೀಯ ಪ್ರಾಧಿಕಾರಗಳ ಸದಸ್ಯರಾಗಿರುವ ವ್ಯಕ್ತಿಗಳಾಗಿರತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಕೆ) [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ನಗರಪಾಲಿಕೆಯ ಮೇಯರ್ ಮತ್ತು ಉಪ–ಮೇಯರ್ ಆಗಿರತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎಲ್) ಸದರಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಅಧಿಕಾರಗಳನ್ನು ಚಲಾಯಿಸಲು ಹಾಗೂ ಕರ್ತವ್ಯಗಳನ್ನು ನೆರವೇರಿಸಲು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ 315ನೇ ಅಥವಾ 316ನೇ ಪ್ರಕರಣಗಳ ಉಪಬಂಧಗಳ ಮೇರೆಗೆ ಒಬ್ಬ ಆಡಳಿತಗಾರನನ್ನಾಗಲಿ ಅಥವಾ ಒಬ್ಬ ಅಧಿಕಾರಿಯನ್ನಾಗಲಿ ನೇಮಕ ಮಾಡಿರುವಲ್ಲಿ ಆಗ ಅಂಥ ಆಡಳಿತಗಾರನನ್ನು ಅಥವಾ ಅಧಿಕಾರಿಯನ್ನು ಈ ಅಧಿನಿಯಮದ 99ನೇ ಪ್ರಕರಣದ ಮೇರೆಗೆ [2][xxx][2] ನಗರಪಾಲಿಕೆಗೆ ಸಂಬಂಧಿಸಿದಂತೆ ನೇಮಕಗೊಂಡ ಆಡಳಿತಗಾರನೆಂದು ಭಾವಿಸತಕ್ಕದ್ದು. [2][xxx][2] ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ 315ನೇ ಪ್ರಕರಣದ ಮೇರೆಗೆ ನೇಮಕಗೊಂಡ ಆಡಳಿತಗಾರನಿಗೆ ಸಲಹೆ ನೀಡಲು

ಮತ್ತು ನೆರವಾಗಲು ನೇಮಕಗೊಂಡ ಸಲಹಾ ಪರಿಷತ್ತು ಯಾವುವಾದರೂ ಇದ್ದರೆ ಅದನ್ನು, 99ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ನೇಮಕ ಮಾಡಿದ ಸಲಹಾ ಸಮಿತಿ ಎಂದು ಭಾವಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(2) ಉಪ-ಪ್ರಕರಣ (1)ರಲ್ಲಿ ಉಲ್ಲೇಖಿಸಿದ ಘೋಷಣೆಯ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ, ಈ ಅಧಿನಿಯಮದ ಮೇರೆಗೆ ದೊಡ್ಡನಗರ ಪ್ರದೇಶಕ್ಕಾಗಿ ಒಂದು ನಗರಪಾಲಿಕೆಯನ್ನು ಕ್ರಮಬದ್ಧವಾಗಿ ರಚಿಸತಕ್ಕದ್ದು ಮತ್ತು ಹಾಗೆ ರಚಿತವಾದ ನಗರಪಾಲಿಕೆಯ ಮೊದಲ ಸಭೆಯ ದಿನಾಂಕದಿಂದ ನಗರಪಾಲಿಕೆಯ ಅಧಿಕಾರಗಳನ್ನು ಚಲಾಯಿಸುತ್ತಿರುವ ಮತ್ತು ಕರ್ತವ್ಯಗಳನ್ನು ನೆರವೇರಿಸುತ್ತಿರುವ ನಿಕಾಯವು ವಿಸರ್ಜನೆಯಾಗತಕ್ಕದ್ದು.][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**501ಡಿ. ತೊಂದರೆಗಳ ನಿವಾರಣೆ.–** 501(ಎ) ಅಥವಾ 501(ಬಿ) ಅಥವಾ 501(ಸಿ) ಪ್ರಕರಣದ ಉಪಬಂಧಗಳನ್ನು ಜಾರಿಗೊಳಿಸುವಾಗ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ಆ ಸಂದರ್ಭವು ಅಗತ್ಯಪಡಿಸಬಹುದಾದಂತೆ, ತೊಂದರೆಯನ್ನು ನಿವಾರಿಸಲು ತನಗೆ ಅವಶ್ಯವೆಂದು ಕಂಡುಬರುವ ಯಾವುದೇ ಕಾರ್ಯವನ್ನು ಮಾಡಬಹುದು.]

1. 1980ರ ಅಧಿನಿಯಮ ಸಂಖ್ಯೆ 28ರ ಮೂಲಕ 10.9.1980 ರಿಂದ ಜಾರಿಗೆ ಬರುವಂತೆ 501ಎ ಯಿಂದ 501ಡಿ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

[1]**[502. xxx]**[1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**503. ಈ ಅಧಿನಿಯಮದ ಮೇರೆಗೆ [1][ನಗರ ಪೌರಸಭಾ ಪ್ರದೇಶವನ್ನು ಒಂದು ದೊಡ್ಡನಗರ ಪ್ರದೇಶವೆಂದು][1] ಘೋಷಿಸುವುದು.–** [1][(1) 3ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಯಾವ ಪೌರಸಭೆಯ ಪ್ರದೇಶಕ್ಕೆ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) ಮೇರೆಗೆ ನಗರ ಸಭೆಯನ್ನು ರಚಿಸಲಾಗಿದೆಯೋ ಆ ಪೌರಸಭಾ ಪ್ರದೇಶವನ್ನು ರಾಜ್ಯಪಾಲರು ಅಧಿಸೂಚನೆಯ ಮೂಲಕ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾಗುವ ದಿನಾಂಕದಿಂದ ಜಾರಿಗೆ ಬರುವಂತೆ ಈ ಅಧಿನಿಯಮದ 3ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ದೊಡ್ಡ ನಗರ ಪ್ರದೇಶವೆಂದು ಘೋಷಿಸಬಹುದು][1].

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(2) ಅಂಥ [1][ನಗರ ಪೌರಸಭಾ ಪ್ರದೇಶ][1]ಕ್ಕೆ ಅನ್ವಯವಾಗುವ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಉಪಬಂಧಗಳು, ಘೋಷಣೆಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ (1)ನೇ ಉಪಪ್ರಕರಣದ ಮೇರೆಗೆ [1][ದೊಡ್ಡ ನಗರ ಪ್ರದೇಶ][1]ವೆಂದು ಘೋಷಿಸಿದ ಯಾವುದೇ ಸ್ಥಳೀಯ ಪ್ರದೇಶಕ್ಕೆ ಅನ್ವಯವಾಗತಕ್ಕದ್ದಲ್ಲ:

ಪರಂತು, (1)ನೇ ಉಪ-ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅನ್ವಯವಾಗುವಂತೆ ಜಾರಿಯಲ್ಲಿದ್ದ ಅಂಥ [1][ನಗರ ಪೌರಸಭಾ ಪ್ರದೇಶ][1]ಕ್ಕೆ ಸಂಬಂಧಿಸಿದಂತೆ ಸದರಿ ಅಧಿನಿಯಮದ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಅಥವಾ ವಿಧಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸ್, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಅಥವಾ ವಿಧಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸ್, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯ ಮೂಲಕ ಅವುಗಳನ್ನು ರದ್ದುಪಡಿಸಿದ ಹೊರತು ಮತ್ತು ರದ್ದುಪಡಿಸುವವರೆಗೆ ಅವುಗಳನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ, ಹೊರಡಿಸಲಾಗಿದೆ ಅಥವಾ ವಿಧಿಸಲಾಗಿದೆ ಎಂದು ಭಾವಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(3) ಉಪಪ್ರಕರಣ (1)ರ ಮೇರೆಗೆ ಯಾವುದೇ ಪ್ರದೇಶವನ್ನು [1][ದೊಡ್ಡ ನಗರ ಪ್ರದೇಶ][1] ವೆಂದು ಘೋಷಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು, ಎಂದರೆ:-

(ಎ) ಸದರಿ ಪ್ರದೇಶಕ್ಕೆ ಸಂಬಂಧಿಸಿದಂತೆ ಸದರಿ ಘೋಷಣೆಯ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಮೇರೆಗೆ [1][ದೊಡ್ಡ ನಗರ ಪ್ರದೇಶ][1]ದ ನಗರ ಸಭೆ ಆಗಿ ಕಾರ್ಯನಿರ್ವಹಿಸುತ್ತಿರುವ ನಿಕಾಯವು, ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಂಥ ನಿಕಾಯದ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶಕ್ಕಾಗಿ ನಗರಪಾಲಿಕೆಯನ್ನು ಕ್ರಮಬದ್ಧವಾಗಿ ರಚಿಸುವವರೆಗೆ, ಸದರಿ ಪ್ರದೇಶಕ್ಕೆ ಸಂಬಂಧಿಸಿದಂತೆ ನಗರಪಾಲಿಕೆಗೆ ಈ ಅಧಿನಿಯಮದ ಉಪಬಂಧಗಳ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ಸಕ್ಷಮ ನಿಕಾಯವಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಬಿ) ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶ][1]ದ ನಗರ ಸಭೆಯ ಕೌನ್ಸಿಲರುಗಳಾಗಿ ಪದಧಾರಣ ಮಾಡಿರುವ ಕೌನ್ಸಿಲರುಗಳು ನಗರಪಾಲಿಕೆಯ ಕೌನ್ಸಿಲರುಗಳಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಸಿ) ಸದರಿ [1][ದೊಡ್ಡ ನಗರ ಪ್ರದೇಶ][1]ದ ನಗರ ಸಭೆಯ ಅಧ್ಯಕ್ಷರು, ನಗರಪಾಲಿಕೆಯ ಮೇಯರ್ ಆಗತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮೇಯರ್‌ರವರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಮತ್ತು ಸದರಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಉಪಾಧ್ಯಕ್ಷರು ಈ ಅಧಿನಿಯಮದ ಮೇರೆಗೆ ಸದರಿ ನಗರಪಾಲಿಕೆಯ ಉಪ-ಮೇಯರ್ ಆಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(ಸಿಸಿ) ನಗರ ಸಭೆಯ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ 315ನೇ ಪ್ರಕರಣದ ಅಥವಾ 316ನೇ ಪ್ರಕರಣದ ಉಪಬಂಧಗಳ ಮೇರೆಗೆ ಒಬ್ಬ ಆಡಳಿತಗಾರನನ್ನಾಗಲಿ ಅಥವಾ ಅಧಿಕಾರಿಯನ್ನಾಗಲಿ ನೇಮಕಮಾಡಿರುವಲ್ಲಿ ಆಗ ಅಂಥ ಆಡಳಿತಗಾರನನ್ನು ಅಥವಾ ಅಧಿಕಾರಿಯನ್ನು 99ನೇ ಪ್ರಕರಣದ ಮೇರೆಗೆ [2][XXX][2] ನೇಮಕಗೊಂಡ ಆಡಳಿತಗಾರನೆಂದು ಭಾವಿಸತಕ್ಕದ್ದು. [2][XXX][2] ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ 315ನೇ ಪ್ರಕರಣದ ಮೇರೆಗೆ ನೇಮಕಗೊಂಡ ಆಡಳಿತಗಾರನಿಗೆ ಸಲಹೆ ನೀಡಲು ಮತ್ತು ನೆರವಾಗಲು ನೇಮಕಗೊಂಡ ಸಲಹಾ ಪರಿಷತ್ತು ಯಾವುದಾದರೂ ಇದ್ದರೆ ಅದನ್ನು 99ನೇ ಪ್ರಕರಣದ 6ನೇ ಉಪಪ್ರಕರಣದ ಮೇರೆಗೆ ನೇಮಕ ಮಾಡಿದ ಸಲಹಾ ಸಮಿತಿ ಎಂದು ಭಾವಿಸತಕ್ಕದ್ದು][1].

1. 1978ರ ಅಧಿನಿಯಮ ಸಂಖ್ಯೆ 24ರ ಮೂಲಕ 1.6.1977 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಡಿ) ಪೌರಸಭೆಯ ನಿಧಿಯಲ್ಲಿ ವೆಚ್ಚ ಮಾಡದೆ ಉಳಿದಿರುವ ಶಿಲ್ಕು ಮತ್ತು ಸದರಿ [1][ದೊಡ್ಡ ನಗರ ಪ್ರದೇಶ][1]ದ ನಗರ ಸಭೆಗೆ ಸೇರಿದ ಸ್ವತ್ತು (ದರಗಳ, ತೆರಿಗೆಗಳ ಮತ್ತು ಶುಲ್ಕಗಳ ಬಾಕಿಯೂ ಸೇರಿದಂತೆ) ಮತ್ತು ಅಂಥ ಘೋಷಣೆಗೆ ಮುಂಚೆ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ನಿಹಿತವಾಗಿದ್ದ ಎಲ್ಲ ಹಕ್ಕುಗಳು ಮತ್ತು ಅಧಿಕಾರಗಳು, ಅವುಗಳಿಗೆ ಸಂಬಂಧಿಸಿದ ಎಲ್ಲ ಋಣಭಾರಗಳು ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು, ನಗರಪಾಲಿಕೆಯ ನಿಧಿಯಾಗಿ ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಇ) ಅಂಥ ಪೌರಸಭೆಗೆ ಸಂಬಂಧಿಸಿದಂತೆ ಇತರ ಯಾವುದೇ ಕಾನೂನಿನ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸ್, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಅಥವಾ ವಿಧಿಸಿದ ಯಾವುದೇ ನೇಮಕ, ಅಧಿಸೂಚನೆ, ನೋಟೀಸು, ತೆರಿಗೆ, ಆದೇಶ, ಯೋಜನೆ, ಲೈಸೆನ್ಸ್, ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯ ಮೂಲಕ ಅವುಗಳನ್ನು ರದ್ದುಪಡಿಸಿದ ಹೊರತು ಅಥವಾ ರದ್ದುಪಡಿಸುವವರೆಗೆ ಅವುಗಳನ್ನು, ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ ಅಥವಾ ಹೊರಡಿಸಲಾಗಿದೆ ಅಥವಾ ವಿಧಿಸಲಾಗಿದೆ ಎಂದು ಭಾವಿಸತಕ್ಕದ್ದು;

(ಎಫ್) ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಮೇರೆಗೆ ಮಾಡಿದ ಅಥವಾ ಅಧಿಪ್ರಮಾಣೀಕರಿಸಿದ ಎಲ್ಲ ಬಜೆಟ್ ಅಂದಾಜುಗಳು, ನಿರ್ಧರಣಾ ಪಟ್ಟಿಗಳು, ಮೌಲ್ಯಮಾಪನ ಅಥವಾ ಅಳತೆಗಳನ್ನು ಈ ಅಧಿನಿಯಮದ ಮೇರೆಗೆ ಮಾಡಲಾಗಿದೆ ಅಥವಾ ಅಧಿಪ್ರಮಾಣೀಕರಿಸಲಾಗಿದೆ ಎಂದು ಭಾವಿಸತಕ್ಕದ್ದು;

(ಜಿ) ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಿಂದ ಅಥವಾ ಅದರ ಪರವಾಗಿ ವಹಿಸಿದ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲಾ ಋಣಗಳನ್ನು ಮತ್ತು ಬಾಧ್ಯತೆಗಳನ್ನು ಮತ್ತು ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನಿಂದ ಅಥವಾ ಅದರ ಪರವಾಗಿ ಮಾಡಿಕೊಂಡ ಮತ್ತು ಸದರಿ ದಿನಾಂಕದಂದು ಚಾಲ್ತಿಯಲ್ಲಿದ್ದ ಎಲ್ಲಾ ಕರಾರುಗಳನ್ನು, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನಗರಪಾಲಿಕೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ನಗರಪಾಲಿಕೆಯು ವಹಿಸಿದೆ ಎಂದು ಮತ್ತು ಮಾಡಿಕೊಂಡಿದೆ ಎಂದು ಭಾವಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಎಚ್) ಸದರಿ ಘೋಷಣೆಗೆ ಮುಂಚೆ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಮುಂದೆ ಇತ್ಯರ್ಥದಲ್ಲಿದ್ದ ಎಲ್ಲಾ ವ್ಯವಹರಣೆಗಳನ್ನು ನಗರಪಾಲಿಕೆಯು ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಐ) ಯಾವುದೇ ಪ್ರಾಧಿಕಾರದ ಮುಂದೆ ಇತ್ಯರ್ಥದಲ್ಲಿದ್ದ ಎಲ್ಲಾ ಅಪೀಲುಗಳನ್ನು ಕಾರ್ಯ ಸಾಧ್ಯವಾಗುವಷ್ಟುಮಟ್ಟಿಗೆ, ಅವುಗಳನ್ನು ದಾಖಲು ಮಾಡಿದಾಗ ಸದರಿ ಪ್ರದೇಶವು ನಗರಪಾಲಿಕೆಯಲ್ಲಿ ಒಳಗೊಂಡಿದ್ದಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು;

(ಜೆ) ಸದರಿ ದಿನಾಂಕದಂದು ಇತ್ಯರ್ಥದಲ್ಲಿದ್ದ, ನಗರ ಸಭೆಯು ಅಥವಾ ಅದರ ಪರವಾಗಿ ಹೂಡಿದ್ದ ಎಲ್ಲಾ ಪ್ರಾಸಿಕ್ಯೂಷನ್‌ಗಳನ್ನು ಮತ್ತು [1][ದೊಡ್ಡ ನಗರಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಅಥವಾ ಅದರ ವಿರುದ್ಧ ಅಥವಾ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್‌ನ ಯಾರೇ ಅಧಿಕಾರಿಯು ಅಥವಾ ಅವರ ವಿರುದ್ಧ ಹೂಡಿದ್ದ ಎಲ್ಲಾ ದಾವೆಗಳನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು, ಅಂಥ ಪ್ರಾಸಿಕ್ಯೂಷನ್‌ಗಳನ್ನು, ದಾವೆಗಳನ್ನು ಅಥವಾ ವ್ಯವಹರಣೆಗಳನ್ನು ಹೂಡಿದಾಗ ಅಂಥ ಪ್ರದೇಶವು ನಗರಪಾಲಿಕೆಯಲ್ಲಿ ಒಳಗೊಂಡಿದ್ದಿದ್ದರೆ ಹೇಗೋ ಹಾಗೆ ನಗರಪಾಲಿಕೆಯು ಮುಂದುವರೆಸತಕ್ಕದ್ದು ಅಥವಾ ಅದರ ವಿರುದ್ಧ ಮುಂದುವರಿಸತಕ್ಕದ್ದು;

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

(ಕೆ) ಸದರಿ ದಿನಾಂಕಕ್ಕೆ ನಿಕಟಪೂರ್ವದಲ್ಲಿ [1][ದೊಡ್ಡ ನಗರ ಪ್ರದೇಶದ][1] ಮುನ್ಸಿಪಲ್ ಕೌನ್ಸಿಲ್‌ನಲ್ಲಿ ನಿಯೋಜಿತರಾಗಿದ್ದ ಎಲ್ಲ ಅಧಿಕಾರಿಗಳು ಮತ್ತು ನೌಕರರು ಈ ಅಧಿನಿಯಮದ ಮೇರೆಗೆ ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರು ಆಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಬೇರೆ ಏರ್ಪಾಟು ಮಾಡುವವರೆಗೆ ಅಂಥ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಅವರು ಯಾವ ಸಂಬಳವನ್ನು ಮತ್ತು ಭತ್ಯೆಗಳನ್ನು ಪಡೆಯುತ್ತಿದ್ದರೋ ಆ ಸಂಬಳವನ್ನು ಮತ್ತು ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಯಾವ ಸೇವಾ ಷರತ್ತುಗಳಿಗೆ ಅವರು ಒಳಪಟ್ಟಿದ್ದರೋ ಆ ಸೇವಾ ಷರತ್ತುಗಳಿಗೆ ಒಳಪಡತಕ್ಕದ್ದು:

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

ಪರಂತು, ನಗರಪಾಲಿಕೆಯ ಅಧೀನದಲ್ಲಿನ ಸೇವೆಯ ಅಗತ್ಯತೆಗಳಿಗೆ ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯು ಅವಶ್ಯವಿಲ್ಲವೆಂದು ಅಥವಾ ಸೂಕ್ತವಾಗಿಲ್ಲವೆಂದು ನಗರಪಾಲಿಕೆಯು ಅಭಿಪ್ರಾಯಪಡುವುದೋ ಆ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ ಅವನ ನಿಯೋಜನೆಯ

ನಿಬಂಧನೆಗಳು ಕೊಡಲು ಅಗತ್ಯಪಡಿಸುವಂಥ ನೋಟೀಸನ್ನು ಕೊಟ್ಟ ತರುವಾಯ, ಸರ್ಕಾರದ ಪೂರ್ವ ಮಂಜೂರಾತಿಗೆ ಒಳಪಟ್ಟು, ಆ ಯಾರೇ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಮುಂದುವರಿಸದಿರುವುದು ನಗರಪಾಲಿಕೆಗೆ ಸಕ್ಷಮವಾದುದಾಗಿರತಕ್ಕದ್ದು ಮತ್ತು ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಬೇಡವೆಂದು ಬಿಟ್ಟುಬಿಡಲಾಗಿದೆಯೋ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು, ಅವನು ಯಾವ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲಿನಲ್ಲಿ ನಿಯೋಜಿತನಾಗಿದ್ದನೋ ಆ [1][ದೊಡ್ಡ ನಗರ ಪ್ರದೇಶ][1]ದ ಮುನ್ಸಿಪಲ್ ಕೌನ್ಸಿಲ್ ಅಸ್ತಿತ್ವದಲ್ಲಿರುವುದು ನಿಂತುಹೋಗದಿದ್ದರೆ ಹೇಗೋ ಹಾಗೆ ಅಸಮರ್ಥತೆಯ ಕಾರಣದಿಂದ ಅವನನ್ನು ಸೇವೆಯಿಂದ ತೆಗೆದುಹಾಕಿದಾಗ, ತೆಗೆದುಕೊಳ್ಳಲು ಅಥವಾ ಪಡೆಯಲು ಹಕ್ಕುಳ್ಳವನಾಗಬಹುದಾಗಿದ್ದ ರಜೆ, ಪಿಂಚಣಿ, ಭವಿಷ್ಯನಿಧಿ ಮತ್ತು ಉಪದಾನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

[1][(4) ಉಪ-ಪ್ರಕರಣ (1)ರಲ್ಲಿ ಉಲ್ಲೇಖಿಸಿದ ಘೋಷಣೆಯ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ ಈ ಅಧಿನಿಯಮದ ಮೇರೆಗೆ ದೊಡ್ಡನಗರ ಪ್ರದೇಶಕ್ಕಾಗಿ ಒಂದು ನಗರಪಾಲಿಕೆಯನ್ನು ಕ್ರಮಬದ್ಧವಾಗಿ ರಚಿಸತಕ್ಕದ್ದು ಮತ್ತು ಹಾಗೆ ರಚಿತವಾದ ನಗರಪಾಲಿಕೆಯ ಮೊದಲ ಸಭೆಯ ದಿನಾಂಕದಿಂದ ನಗರಪಾಲಿಕೆಯ ಅಧಿಕಾರಗಳನ್ನು ಚಲಾಯಿಸುತ್ತಿರುವ ಮತ್ತು ಕರ್ತವ್ಯಗಳನ್ನು ನೆರವೇರಿಸುತ್ತಿರುವ ನಿಕಾಯವು ವಿಸರ್ಜನೆಯಾಗತಕ್ಕದ್ದು.

(5) ಉಪ-ಪ್ರಕರಣ (1)ರ ಮೇರೆಗೆ [1][ದೊಡ್ಡ ನಗರ ಪ್ರದೇಶ][1] ಎಂದು ಘೋಷಿಸಲಾದ ಪೌರಸಭಾ ಪ್ರದೇಶದ ನಗರ ಸಭೆಯ ಸ್ವತ್ತುಗಳು, ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಅಂಥ ಘೋಷಣೆಯ ದಿನಾಂಕದಿಂದ ಜಾರಿಗೆ ಬರುವಂತೆ ಸದರಿ [1][ದೊಡ್ಡ ನಗರ ಪ್ರದೇಶ][1]ದ ನಗರಪಾಲಿಕೆಯಲ್ಲಿ ನಿಹಿತವಾಗತಕ್ಕದ್ದು][1].

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 1.6.1994 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**[1][503ಎ. ಅಭಿವೃದ್ಧಿ ಯೋಜನೆಯ ತಯಾರಿಕೆ.–** ಪ್ರತಿಯೊಂದು ನಗರಪಾಲಿಕೆಯು ಪ್ರತಿವರ್ಷ ಒಂದು ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ 310ನೇ ಪ್ರಕರಣದ ಮೇರೆಗೆ ರಚಿಸಿದ ಜಿಲ್ಲಾ ಯೋಜನಾ ಸಮಿತಿಗೆ ಅಥವಾ ಸಂದರ್ಭಾನುಸಾರವಾಗಿ ಈ ಅಧಿನಿಯಮದ 503ಬಿ ಪ್ರಕರಣದ ಮೇರೆಗೆ ರಚಿಸಿದ ಮಹಾನಗರ ಯೋಜನಾ ಸಮಿತಿಗೆ ಸಲ್ಲಿಸತಕ್ಕದ್ದು.

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 503ಎ, 503ಬಿ ಮತ್ತು 503ಸಿ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದ ಅಧಿಸೂಚನೆಯು ಲಭ್ಯವಿರುವುದಿಲ್ಲ.

**503ಬಿ. ಮಹಾನಗರ ಯೋಜನಾ ಸಮಿತಿ.–** (1) ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶಕ್ಕಾಗಿ ಅಂಥ ಇಡೀ ಪ್ರದೇಶಕ್ಕೆ ಅಭಿವೃದ್ಧಿ ಯೋಜನೆಯ ಕರಡನ್ನು ಸಿದ್ಧಪಡಿಸುವುದಕ್ಕಾಗಿ ಒಂದು ಮಹಾನಗರ ಯೋಜನಾ ಸಮಿತಿಯನ್ನು ರಚಿಸತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ **"ಬೆಂಗಳೂರು ಮಹಾನಗರ ಪ್ರದೇಶ"** ಎಂದರೆ ಭಾರತದ ಸಂವಿಧಾನದ 243ಪಿ ಅನುಚ್ಛೇದದ (ಸಿ) ಖಂಡದ ಮೇರೆಗೆ ಮಹಾನಗರ ಪ್ರದೇಶವೆಂದು ರಾಜ್ಯಪಾಲರು ನಿರ್ದಿಷ್ಟಪಡಿಸಿದ ಪ್ರದೇಶ.

(2) ಮಹಾ ನಗರ ಯೋಜನಾ ಸಮಿತಿಯು ಮೂವತ್ತು ವ್ಯಕ್ತಿಗಳನ್ನು ಹೊಂದಿರತಕ್ಕದ್ದು, ಅವರಲ್ಲಿ,–

(ಎ) ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ, ಸಮಿತಿ ಸದಸ್ಯರಲ್ಲಿ ಮೂರನೇ ಎರಡು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸಂಖ್ಯೆಯ ವ್ಯಕ್ತಿಗಳು ನಗರಪಾಲಿಕೆಗಳ ಮತ್ತು ಮುನ್ಸಿಪಲ್ ಕೌನ್ಸಿಲ್‌ಗಳ ಮತ್ತು ಪಟ್ಟಣ ಪಂಚಾಯತಿಗಳ ಚುನಾಯಿತ ಸದಸ್ಯರಿಂದ ಮತ್ತು ಮಹಾನಗರ ಪ್ರದೇಶದಲ್ಲಿನ ಜಿಲ್ಲಾ ಪಂಚಾಯಿತಿಗಳ, ತಾಲ್ಲೂಕು ಪಂಚಾಯಿತಿಗಳ ಮತ್ತು ಗ್ರಾಮಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಮತ್ತು ಅವರುಗಳೆಲ್ಲರ ಪೈಕಿಯಿಂದ ನಗರದ ಮತ್ತು ಇತರ ಮುನ್ಸಿಪಲ್ ಪ್ರದೇಶದ ಮತ್ತು ಜಿಲ್ಲಾ ಪಂಚಾಯತಿಯ, ತಾಲ್ಲೂಕು ಪಂಚಾಯತಿಯ ಮತ್ತು ಗ್ರಾಮಪಂಚಾಯತಿಯ ಅಧಿಕಾರ ವ್ಯಾಪ್ತಿಯಲ್ಲಿರುವ ಪ್ರದೇಶಗಳ ಜನಸಂಖ್ಯೆಯ ನಡುವಿನ ಅನುಪಾತದ ಪ್ರಮಾಣಕ್ಕೆ ಅನುಸಾರವಾಗಿ ನಿಯಮಿಸಿದ ರೀತಿಯಲ್ಲಿ ಚುನಾಯಿತರಾಗತಕ್ಕದ್ದು.

(ಬಿ) (i) ರಾಜ್ಯ ಸರ್ಕಾರವು ನಿರ್ಧರಿಸಬಹುದಾದಷ್ಟು ಸಂಖ್ಯೆಯ ಮತ್ತು ಭಾರತ ಸರ್ಕಾರವು ಅಥವಾ ಸಂದರ್ಭಾನುಸಾರ ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಭಾರತ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಪ್ರತಿನಿಧಿಗಳು;

(ii) ಸಮಿತಿಗೆ ವಹಿಸಿದ ಪ್ರಕಾರ್ಯಗಳನ್ನು ನೆರವೇರಿಸಲು ಅಗತ್ಯವೆಂದು ಭಾವಿಸಬಹುದಾದಷ್ಟು ಸಂಖ್ಯೆಯ, ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಸಂಘಗಳ ಮತ್ತು ಸಂಸ್ಥೆಗಳ ಪ್ರತಿನಿಧಿಗಳು

– ಇರತಕ್ಕದ್ದು;

(3) ಮಹಾನಗರ ಪ್ರದೇಶದಲ್ಲಿ ಯಾರ ಚುನಾವಣಾ ಕ್ಷೇತ್ರಗಳು ಇರುವವೋ ಆ ಲೋಕಸಭೆಯ ಮತ್ತು ರಾಜ್ಯ ವಿಧಾನಸಭೆಯ ಎಲ್ಲಾ ಸದಸ್ಯರು ಮತ್ತು ಅಂಥ ಪ್ರದೇಶದಲ್ಲಿ ಮತದಾರರಾಗಿ ನೋಂದಾಯಿಸಲ್ಪಟ್ಟಿರುವ ರಾಜ್ಯಸಭೆಯ ಮತ್ತು ರಾಜ್ಯ ವಿಧಾನಪರಿಷತ್ತಿನ ಸದಸ್ಯರು ಸಮಿತಿಯ ಖಾಯಂ ಆಹ್ವಾನಿತರಾಗಿರತಕ್ಕದ್ದು.

(4) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಸಮಿತಿಯ ಕಾರ್ಯದರ್ಶಿಯಾಗಿರತಕ್ಕದ್ದು.

(5) ಮಹಾನಗರ ಯೋಜನಾ ಸಮಿತಿಯ ಅಧ್ಯಕ್ಷರನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಆಯ್ಕೆ ಮಾಡತಕ್ಕದ್ದು.

(6) ಮಹಾನಗರ ಯೋಜನಾ ಸಮಿತಿಯು, ಇಡೀ ಬೆಂಗಳೂರು ಮಹಾನಗರ ಪ್ರದೇಶಕ್ಕೆ ಅಭಿವೃದ್ಧಿ ಯೋಜನೆಯ ಕರಡನ್ನು ಸಿದ್ಧಪಡಿಸತಕ್ಕದ್ದು.

(7) ಅಭಿವೃದ್ಧಿ ಯೋಜನೆಯ ಕರಡನ್ನು ಸಿದ್ಧಪಡಿಸುವಾಗ ಮಹಾನಗರ ಯೋಜನಾ ಸಮಿತಿಯು,–

(ಎ) (i) ಮಹಾನಗರ ಪ್ರದೇಶದಲ್ಲಿನ ಸ್ಥಳೀಯ ಪ್ರಾಧಿಕಾರಗಳು ಸಿದ್ಧಪಡಿಸಿದ ಯೋಜನೆಗಳನ್ನು;

(ii) ಆ ಪ್ರದೇಶದ ಸಮನ್ವಯ ಪ್ರಾದೇಶಿಕ ಯೋಜನೆ, ನೀರು ಮತ್ತು ಇತರ ಭೌತಿಕ ಹಾಗೂ ಪ್ರಾಕೃತಿಕ ಸಂಪನ್ಮೂಲಗಳ ಹಂಚಿಕೆ, ಮೂಲಭೂತ ಸೌಲಭ್ಯಗಳ ಸಮಗ್ರ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಯೂ ಒಳಗೊಂಡಂತೆ ಸ್ಥಳೀಯ ಪ್ರಾಧಿಕಾರಗಳ ನಡುವಣ ಸಮಾನ ಹಿತಾಸಕ್ತಿಯ ವಿಷಯಗಳನ್ನು;

(iii) ಭಾರತ ಸರ್ಕಾರವು ಮತ್ತು ರಾಜ್ಯ ಸರ್ಕಾರವು ಗೊತ್ತುಪಡಿಸಿದ ಸಮಗ್ರ ಉದ್ದೇಶಗಳನ್ನು ಮತ್ತು ಆದ್ಯತೆಗಳನ್ನು;

(iv) ಭಾರತ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಏಜೆನ್ಸಿಗಳು ಮಹಾನಗರ ಪ್ರದೇಶದಲ್ಲಿ ಹೂಡುವ ಸಂಭವವಿರುವ ಬಂಡವಾಳಗಳ ವ್ಯಾಪ್ತಿ ಮತ್ತು ಸ್ವರೂಪವನ್ನು ಮತ್ತು ಲಭ್ಯವಿರುವ ಹಣಕಾಸು ಅಥವಾ ಇತರ ಸಂಪನ್ಮೂಲಗಳನ್ನು

– ಗಣನೆಗೆ ತೆಗೆದುಕೊಳ್ಳತಕ್ಕದ್ದು.

(ಬಿ) ರಾಜ್ಯಪಾಲರು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸಂಸ್ಥೆಗಳು ಮತ್ತು ಸಂಘಟನೆಗಳೊಂದಿಗೆ ಸಮಾಲೋಚಿಸತಕ್ಕದ್ದು;

(8) ಮಹಾನಗರ ಯೋಜನಾ ಸಮಿತಿಯ ಅಧ್ಯಕ್ಷರು ಅಂಥ ಸಮಿತಿಯು ಶಿಫಾರಸ್ಸು ಮಾಡಿದಂತಹ ಅಭಿವೃದ್ಧಿ ಯೋಜನೆಯನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**503ಸಿ. ಹಣಕಾಸು ಆಯೋಗ.–** (1) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ 267ನೇ ಪ್ರಕರಣದ ಮೇರೆಗೆ ರಚಿಸಿದ ಹಣಕಾಸು ಆಯೋಗವು ನಗರಪಾಲಿಕೆಗಳ ಹಣಕಾಸು ಪರಿಸ್ಥಿತಿಯನ್ನು ಸಹ ಪರಾಮರ್ಶಿಸತಕ್ಕದ್ದು ಮತ್ತು ರಾಜ್ಯಪಾಲರಿಗೆ,–

(ಎ) (i) ರಾಜ್ಯ ಸರ್ಕಾರದ ಮತ್ತು ನಗರಪಾಲಿಕೆಗಳ ನಡುವೆ ಹಂಚಿಕೆ ಮಾಡಿಕೊಳ್ಳಬಹುದಾದಂಥ, ಸರ್ಕಾರವು ವಿಧಿಸಬಹುದಾದ ತೆರಿಗೆಗಳ, ಶುಲ್ಕಗಳ, ಸುಂಕಗಳ ಮತ್ತು ಫೀಜುಗಳ ನಿವ್ವಳ ಉತ್ಪತ್ತಿಯನ್ನು ರಾಜ್ಯ ಸರ್ಕಾರದ ಮತ್ತು ನಗರಪಾಲಿಕೆಗಳ ನಡುವೆ ಹಂಚಿಕೆ ಮಾಡಿಕೊಳ್ಳುವುದಕ್ಕೆ ಮತ್ತು ಅಂಥ ಉತ್ಪತ್ತಿಯಲ್ಲಿ ತಮ್ಮ ತಮ್ಮ ಪಾಲುಗಳನ್ನು ನಗರಪಾಲಿಕೆಗಳ ನಡುವೆ ಹಂಚಿಕೆ ಮಾಡಿಕೊಳ್ಳುವುದಕ್ಕೆ;

(ii) ನಗರಪಾಲಿಕೆಗಳಿಗೆ ವಹಿಸಿಕೊಡಬಹುದಾದ ಅಥವಾ ಅವುಗಳು ವಿನಿಯೋಗಿಸಬಹುದಾದ ತೆರಿಗೆಗಳ, ಶುಲ್ಕಗಳ, ಸುಂಕಗಳ ಮತ್ತು ಫೀಜುಗಳ ನಿರ್ಧರಣೆಗೆ;

(iii) ರಾಜ್ಯದ ಸಂಚಿತ ನಿಧಿಯಿಂದ ನಗರಪಾಲಿಕೆಗಳಿಗೆ ನೀಡುವ ಸಹಾಯಾನುದಾನಕ್ಕೆ

– ಅನ್ವಯಿಸತಕ್ಕ ತತ್ವಗಳ ಬಗ್ಗೆ,

(ಬಿ) ನಗರಪಾಲಿಕೆಗಳ ಹಣಕಾಸು ಸ್ಥಿತಿಯನ್ನು ಉತ್ತಮಪಡಿಸಲು ಅಗತ್ಯವಾದ ಕ್ರಮಗಳ ಬಗ್ಗೆ;

(ಸಿ) ನಗರಪಾಲಿಕೆಯ ಸುಭದ್ರ ಹಣಕಾಸು ದೃಷ್ಟಿಯಿಂದ ರಾಜ್ಯಪಾಲರು ಹಣಕಾಸು ಆಯೋಗಕ್ಕೆ ಉಲ್ಲೇಖಿಸಬಹುದಾದ ಇತರ ವಿಷಯಗಳ ಬಗ್ಗೆ

– ಶಿಫಾರಸ್ಸು ಮಾಡತಕ್ಕದ್ದು.

(2) ಈ ಪ್ರಕರಣದ ಮೇರೆಗೆ ಹಣಕಾಸು ಆಯೋಗವು ಮಾಡಿದ ಪ್ರತಿಯೊಂದು ಶಿಫಾರಸ್ಸನ್ನು, ಅದರ ಮೇಲೆ ಕೈಗೊಂಡ ಕ್ರಮದ ಬಗೆಗಿನ ವಿವರಣಾತ್ಮಕ ಜ್ಞಾಪನ ಪತ್ರದ ಸಹಿತ, ರಾಜ್ಯಪಾಲರು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.][1]

1. 1994ರ ಅಧಿನಿಯಮ ಸಂಖ್ಯೆ 35ರ ಮೂಲಕ 503ಎ, 503ಬಿ ಮತ್ತು 503ಸಿ ಪ್ರಕರಣಗಳನ್ನು ಪ್ರತ್ಯಾಯೋಜಿಸಲಾಗಿದೆ. ಜಾರಿಗೆ ಬಂದ ಅಧಿಸೂಚನೆಯು ಲಭ್ಯವಿರುವುದಿಲ್ಲ.

**504. ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966ರ ಉಪಬಂಧಗಳಿಗೆ ಬಾಧಕವುಂಟಾಗತಕ್ಕದ್ದಲ್ಲ.–** ಈ ಅಧಿನಿಯಮದ ಉಪಬಂಧಗಳು ಮಾರುಕಟ್ಟೆಗಳಿಗೆ ಮತ್ತು ಇತರ ಆವರಣಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ, 1966ರ ಮೇರೆಗೆ ಸ್ಥಾಪಿಸಿದ ಯಾವುದೇ ಮಾರುಕಟ್ಟೆಗೆ ಅನ್ವಯವಾಗತಕ್ಕದ್ದಲ್ಲ ಮತ್ತು ಯಾವುದೇ ಇತರ ಮಾರುಕಟ್ಟೆಗೆ ಸಂಬಂಧಿಸಿದಂತೆ ಈ ಅಧಿನಿಯಮದ ಉಪಬಂಧಗಳು ಸದರಿ ಅಧಿನಿಯಮಕ್ಕೆ ಹೆಚ್ಚಿಗೆಯಾಗಿ ಇರತಕ್ಕದ್ದು. ಆದರೆ ಅದನ್ನು ಅಲ್ಪೀಕರಿಸುವಂತೆ ಇರತಕ್ಕದ್ದಲ್ಲ.

**505. ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ, 1961ರ ಉಪಬಂಧಗಳಿಗನುಗುಣವಾಗಿ ನಗರಪಾಲಿಕೆಯು ಅಧಿಕಾರಗಳನ್ನು ಚಲಾಯಿಸುವುದು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ,–

(i) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ, 1961ರ 14ನೇ ಪ್ರಕರಣದ ವಿವರಣೆಯಲ್ಲಿ ಪರಿಭಾಷಿಸಿರುವಂತೆ ಭೂ ಬಳಕೆ ಅಥವಾ ಅಭಿವೃದ್ಧಿಗೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನೆರವೇರಿಸಲು ಅಥವಾ ಯಾವುದೇ ಕರ್ತವ್ಯವನ್ನು ನಿರ್ವಹಿಸಲು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಗತ್ಯಪಡಿಸಿದ ನಗರಪಾಲಿಕೆಯು ಅಥವಾ ಯಾರೇ ಅಧಿಕಾರಿಯು ಅಥವಾ ಇತರ ಪ್ರಾಧಿಕಾರವು ಅಂಥ ಭೂ ಬಳಕೆ ಅಥವಾ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ಅಥವಾ ಅಭಿವೃದ್ಧಿ ಯೋಜನೆ ಇಲ್ಲದಿರುವಲ್ಲಿ ಯೋಜನಾ ಪ್ರಾಧಿಕಾರದ ಸಹಮತಿಯೊಂದಿಗೆ ಅಂಥ ಅಧಿಕಾರವನ್ನು ಚಲಾಯಿಸತಕ್ಕದ್ದು ಅಥವಾ ಅಂಥ ಪ್ರಕಾರ್ಯವನ್ನು ನೆರವೇರಿಸತಕ್ಕದ್ದು ಅಥವಾ ಅಂಥ ಕರ್ತವ್ಯವನ್ನು ನಿರ್ವಹಿಸತಕ್ಕದ್ದು;

(ii) ಸದರಿ ನಗರಪಾಲಿಕೆಯು ಅಥವಾ ಯಾರೇ ಅಧಿಕಾರಿಯು ಅಥವಾ ಇತರ ಪ್ರಾಧಿಕಾರವು ಯಾರೇ ವ್ಯಕ್ತಿಗೆ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಗತ್ಯಪಡಿಸಿದ ಯಾವುದೇ ಅನುಮತಿ, ಅನುಮೋದನೆ ಅಥವಾ ಮಂಜೂರಾತಿಯನ್ನು, ಅದು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ, 1961ರ ಉಪಬಂಧಗಳನ್ನು ಯಾವ ವಿಷಯಕ್ಕೆ ಸಂಬಂಧಿಸಿದಂತೆ ಪಾಲಿಸುವುದು ಅವಶ್ಯವಿದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧಿಸಿದ್ದರೆ, ಸದರಿ ಅಧಿನಿಯಮದ ಉಪಬಂಧಗಳನ್ನು ಪಾಲಿಸಿರುವುದರ ಸಮರ್ಥನೆಯಾಗಿ ಅಂಥ ವ್ಯಕ್ತಿಯು, ಸಂದರ್ಭಾನುಸಾರ ನಗರಪಾಲಿಕೆಗೆ ಅಥವಾ ಅಧಿಕಾರಿಗೆ ಅಥವಾ ಇತರ ಪ್ರಾಧಿಕಾರಕ್ಕೆ ಮನವರಿಕೆಯಾಗುವಂತೆ ಸಾಕ್ಷ್ಯವನ್ನು ಹಾಜರುಪಡಿಸಿದ ಹೊರತು, ಕೊಡತಕ್ಕದ್ದಲ್ಲ;

**506. ಮಧ್ಯಕಾಲೀನ ಮತ್ತು ತತ್ಕಾಲೀನ ಉಪಬಂಧಗಳು.–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಬೆಂಗಳೂರು ನಗರಕ್ಕೆ ಮತ್ತು ಹುಬ್ಬಳ್ಳಿ– ಧಾರವಾಡ ನಗರಕ್ಕೆ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ನಗರಪಾಲಿಕೆಯನ್ನು ರಚಿಸುವವರೆಗೆ,–

(i) ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ ಮೇರೆಗೆ ರಚಿಸಿದ [1][ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ][1]ಯು ಮತ್ತು ಬಾಂಬೆ ಪ್ರಾಂತೀಯ ಪೌರ ನಿಗಮಗಳ ಅಧಿನಿಯಮ, 1949ರ ಮೇರೆಗೆ ರಚಿಸಿದ ಹುಬ್ಬಳ್ಳಿ-ಧಾರವಾಡ ನಗರಪಾಲಿಕೆಯು ಸಂದರ್ಭಾನುಸಾರ ಬೆಂಗಳೂರು ನಗರಕ್ಕೆ ಮತ್ತು ಹುಬ್ಬಳ್ಳಿ-ಧಾರವಾಡ ನಗರಕ್ಕೆ ಸಂಬಂಧಿಸಿದಂತೆ ಅಧಿಕಾರಗಳನ್ನು ಚಲಾಯಿಸಲು ಅಂಥ ಪ್ರಾರಂಭದ ದಿನಾಂಕದಂದು ಮತ್ತು ಅಂದಿನಿಂದ ಸಕ್ಷಮ ನಿಕಾಯಗಳಾಗಿರತಕ್ಕದ್ದು;

1.2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(ii) ಈ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೆ ನಿಕಟಪೂರ್ವದಲ್ಲಿ ಸಂದರ್ಭಾನುಸಾರ ಬೆಂಗಳೂರು ಮಹಾನಗರಪಾಲಿಕೆಯ ಅಥವಾ ಹುಬ್ಬಳ್ಳಿ-ಧಾರವಾಡ ನಗರಪಾಲಿಕೆಯ ಮೇಯರ್, ಉಪ-ಮೇಯರ್ ಅಥವಾ ಕೌನ್ಸಿಲರುಗಳಾಗಿ ಪದವನ್ನು ಧಾರಣ ಮಾಡಿದ್ದ ವ್ಯಕ್ತಿಗಳು ಅಂಥ ದಿನಾಂಕದಿಂದ ಜಾರಿಗೆ ಬರುವಂತೆ ಅನುಕ್ರಮವಾಗಿ ಸಂದರ್ಭಾನುಸಾರ [1][ಬೃಹತ್ ಬೆಂಗಳೂರು ಮಹಾನಗರಪಾಲಿಕೆ][1]ಯ ಅಥವಾ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಮೇಯರ್, ಉಪ-ಮೇಯರ್ ಅಥವಾ ಕೌನ್ಸಿಲರುಗಳಾಗತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ರಚಿಸಿದ ಸಂದರ್ಭಾನುಸಾರ [1][ಬೃಹತ್ ಬೆಂಗಳೂರು ಮಹಾನಗರಪಾಲಿಕೆ][1]ಗೆ ಅಥವಾ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಈ ಅಧಿನಿಯಮದ ಅನುಸಾರವಾಗಿ ಮೇಯರ್, ಉಪ-ಮೇಯರ್ ಅಥವಾ ಕೌನ್ಸಿಲರುಗಳನ್ನು ಚುನಾಯಿಸುವವರೆಗೆ ಈ ಅಧಿನಿಯಮದ ಮೇರೆಗೆ ಸಂದರ್ಭಾನುಸಾರ ಮೇಯರ್, ಉಪ-ಮೇಯರ್ ಅಥವಾ ಕೌನ್ಸಿಲರುಗಳಿಗೆ ಪ್ರದತ್ತವಾದ ಪ್ರಕಾರ್ಯಗಳನ್ನು ನಿರ್ವಹಿಸುವುದನ್ನು ಅವರು ಮುಂದುವರಿಸತಕ್ಕದ್ದು;

1. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(iii) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಾಯೀ ಸಮಿತಿಗಳು ಅಂಥ ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ ವಿಸರ್ಜನೆಯಾಗತಕ್ಕದ್ದು ಮತ್ತು ಅಂಥ ಸ್ಥಾಯೀ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರು ಅನುಕ್ರಮವಾಗಿ ಅಧ್ಯಕ್ಷರಾಗಿರುವುದು ಮತ್ತು ಸದಸ್ಯರಾಗಿರುವುದು ನಿಂತುಹೋಗತಕ್ಕದ್ದು ಮತ್ತು ಈ ಅಧಿನಿಯಮದ ಪ್ರಾರಂಭದ ನಿಕಟೋತ್ತರದ ಅವುಗಳ ಮೊದಲ ಸಭೆಯಲ್ಲಿ [1][ಬೃಹತ್ ಬೆಂಗಳೂರು ಮಹಾನಗರಪಾಲಿಕೆ][1]ಯು ಮತ್ತು ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯು ಈ ಅಧಿನಿಯಮದಲ್ಲಿ ಉಪಬಂಧಿಸಲಾದಂತೆ ಸ್ಥಾಯೀ ಸಮಿತಿಗಳ ಸದಸ್ಯರನ್ನು ಚುನಾಯಿಸತಕ್ಕದ್ದು ಮತ್ತು ಹಾಗೆ ರಚಿತವಾದ ಸ್ಥಾಯೀ ಸಮಿತಿಗಳು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಅಧ್ಯಕರನ್ನು ಚುನಾಯಿಸತಕ್ಕದ್ದು ಮತ್ತು ಅಂಥ ಸ್ಥಾಯೀ ಸಮಿತಿಗಳು, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಸಾರ್ವತ್ರಿಕ ಚುನಾವಣೆಗಳನ್ನು ನಡೆಸಿದ ತರುವಾಯ ಸದರಿ ನಗರಪಾಲಿಕೆಯು ಸ್ಥಾಯೀ ಸಮಿತಿಗಳನ್ನು ರಚಿಸುವವರೆಗೆ, ಈ ಅಧಿನಿಯಮದ ಮೇರೆಗಿನ ಸ್ಥಾಯೀ ಸಮಿತಿಗಳ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು;

1.2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

(iv) 508ನೇ ಪ್ರಕರಣದ ಮೇರೆಗೆ ಮಾಡಿದ ಯಾವುದೇ ಆದೇಶಕ್ಕೆ ಒಳಪಟ್ಟು, ಈ ಉಪಪ್ರಕರಣದ ಮೇರೆಗೆ ನಗರಪಾಲಿಕೆಯ ಅಧಿಕಾರಗಳನ್ನು ಚಲಾಯಿಸುತ್ತಿರುವ ಮತ್ತು ನಗರಪಾಲಿಕೆಯ ಕರ್ತವ್ಯಗಳನ್ನು ನೆರವೇರಿಸುತ್ತಿರುವ ನಿಕಾಯಗಳ ಕೌನ್ಸಿಲರುಗಳ ಸ್ಥಾನಗಳಲ್ಲಿನ ಆಕಸ್ಮಿಕ ಖಾಲಿ ಸ್ಥಾನಗಳನ್ನು ಭರ್ತಿ ಮಾಡತಕ್ಕದ್ದು ಮತ್ತು ಅಂಥ ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಬೆಂಗಳೂರು ನಗರದಲ್ಲಿ ಮತ್ತು ಹುಬ್ಬಳ್ಳಿ-ಧಾರವಾಡ ನಗರದಲ್ಲಿ ಸದರಿ ದಿನಾಂಕದ ನಿಕಟಪೂರ್ವದಲ್ಲಿ ಅಂಥ ಖಾಲಿಸ್ಥಾನಗಳನ್ನು ಭರ್ತಿ ಮಾಡುವುದಕ್ಕೆ ಮತ್ತು ಅಂಥ ವಿಷಯಗಳನ್ನು ವಿನಿಯಮಿಸುವುದಕ್ಕೆ ಸಂಬಂಧಿಸಿದ ಉಪಬಂಧಗಳಿಗನುಸಾರವಾಗಿ ವಿನಿಯಮಿಸತಕ್ಕದ್ದು;

[1][(v) ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ ಅಥವಾ ಬಾಂಬೆ ಪ್ರಾಂತೀಯ ಪೌರ ನಿಗಮ ಅಧಿನಿಯಮ, 1949ರ ಉಪಬಂಧಗಳ ಮೇರೆಗೆ, ನಗರಪಾಲಿಕೆಯ ಮತ್ತು ಸ್ಥಾಯೀ ಸಮಿತಿಗಳ ಹಾಗೂ ಇತರ ಸಮಿತಿಗಳ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ಒಬ್ಬ ಆಡಳಿತಗಾರನನ್ನಾಗಲಿ ಅಥವಾ ವ್ಯಕ್ತಿಯನ್ನಾಗಲಿ ನೇಮಕ ಮಾಡಿರುವಲ್ಲಿ ಆಗ ಅಂಥ ಆಡಳಿತಾಧಿಕಾರಿಯನ್ನು ಅಥವಾ ವ್ಯಕ್ತಿಯನ್ನು ಒಂದು ವರ್ಷದ ಅವಧಿಗೆ 99ನೇ ಪ್ರಕರಣದ ಮೇರೆಗೆ ನೇಮಕಮಾಡಿದ ಆಡಳಿತಗಾರನೆಂದು ಭಾವಿಸತಕ್ಕದ್ದು. 101ನೇ ಪ್ರಕರಣದ ಮೇರೆಗೆ ಸದರಿ ಅವಧಿಯನ್ನು ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಅಭಿಪ್ರಾಯಪಟ್ಟರೆ ಅದು ಸದರಿ ಅವಧಿಯನ್ನು ವಿಸ್ತರಿಸಬಹುದು;

1. 1978ರ ಅಧಿನಿಯಮ ಸಂಖ್ಯೆ 24ರ ಮೂಲಕ 1.6.1977 ರಿಂದ ಜಾರಿಗೆ ಬರುವಂತೆ 5ನೇ ಖಂಡ ಮತ್ತು ಪರಂತುಕ ಒಳಗೊಂಡಂತೆ 6ನೇ ಖಂಡವನ್ನು ಸೇರಿಸಲಾಗಿದೆ.

(vi) ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ [1][ಬೃಹತ್ ಬೆಂಗಳೂರು ಮಹಾನಗರಪಾಲಿಕೆ][1]ಯ ಮತ್ತು ಹುಬ್ಬಳ್ಳಿ-ಧಾರವಾಡ ನಗರ ಪಾಲಿಕೆಯ ನಿಯೋಜನೆಯಲ್ಲಿದ್ದ ಎಲ್ಲಾ ಅಧಿಕಾರಿಗಳು ಮತ್ತು ನೌಕರರು ಈ ಅಧಿನಿಯಮದ ಮೇರೆಗೆ ಆಯಾಯ ನಗರಪಾಲಿಕೆಗಳ ಅಧಿಕಾರಿಗಳು ಮತ್ತು ನೌಕರರು ಆಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಬೇರೆ ಏರ್ಪಾಟುಗಳನ್ನು ಮಾಡುವವರೆಗೆ ಅಂಥ ದಿನಾಂಕದ ನಿಕಟಪೂರ್ವದಲ್ಲಿ ಅವರು ಹಕ್ಕುಳ್ಳವರಾಗಿದ್ದ ಸಂಬಳವನ್ನು ಮತ್ತು ಭತ್ಯೆಗಳನ್ನು ಪಡೆಯತಕ್ಕದ್ದು ಮತ್ತು ಅವರು ಯಾವ ಸೇವಾ ಷರತ್ತುಗಳಿಗೆ ಒಳಪಟ್ಟಿದ್ದರೋ ಆ ಸೇವಾ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು:

1. 2009ರ ಅಧಿನಿಯಮ ಸಂಖ್ಯೆ 22ರ ಮೂಲಕ 4.6.2009 ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

ಪರಂತು, ನಗರಪಾಲಿಕೆಯ ಅಧೀನದಲ್ಲಿನ ಸೇವೆಯ ಅಗತ್ಯತೆಗಳಿಗೆ ಯಾವ ಅಧಿಕಾರಿಯ ಅಥವಾ ನೌಕರನ ಸೇವೆಯು ಅವಶ್ಯವಿಲ್ಲವೆಂದು ಅಥವಾ ಸೂಕ್ತವಾಗಿಲ್ಲವೆಂದು ನಗರಪಾಲಿಕೆಯು ಅಭಿಪ್ರಾಯಪಡುವುದೋ ಆ ಯಾರೇ ಅಧಿಕಾರಿಗೆ ಅಥವಾ ನೌಕರನಿಗೆ ಅವನ ನಿಯೋಜನೆಯ ನಿಬಂಧನೆಗಳು ಕೊಡಲು ಅಗತ್ಯಪಡಿಸುವಂಥ ನೋಟೀಸನ್ನು ಕೊಟ್ಟ ತರುವಾಯ, ಸರ್ಕಾರದ ಪೂರ್ವಮಂಜೂರಾತಿಗೆ ಒಳಪಟ್ಟು, ಆ ಯಾರೇ ಅಧಿಕಾರಿಯ ಅಥವಾ ನೌಕರನ ಸೇವೆಯನ್ನು ಮುಂದುವರಿಸದಿರುವುದು ಆಯಾಯ ನಗರಪಾಲಿಕೆಗಳಿಗೆ ಸಕ್ಷಮವಾದುದಾಗಿರತಕ್ಕದ್ದು ಮತ್ತು ಯಾವ ಅಧಿಕಾರಿಯ ಅಥವಾ

ನೌಕರನ ಸೇವೆಯನ್ನು ಬೇಡವೆಂದು ಬಿಟ್ಟುಬಿಡಲಾಗಿದೆಯೋ ಆ ಪ್ರತಿಯೊಬ್ಬ ಅಧಿಕಾರಿಯು ಅಥವಾ ನೌಕರನು ಅವನು ಯಾವ ನಗರಪಾಲಿಕೆಯ ನಿಯೋಜನೆಯಲ್ಲಿ ಇದ್ದನೋ ಆ ನಗರಪಾಲಿಕೆಯು ಅಸ್ತಿತ್ವದಲ್ಲಿರುವುದು ನಿಂತುಹೋಗದಿದ್ದಿದ್ದರೆ ಹೇಗೋ ಹಾಗೆ ಅಸಮರ್ಥತೆಯ ಕಾರಣದಿಂದಾಗಿ ಅವನನ್ನು ಸೇವೆಯಿಂದ ತೆಗೆದುಹಾಕಿದಾಗ ತೆಗೆದುಕೊಳ್ಳಲು ಅಥವಾ ಪಡೆಯಲು ಅವನು ಹಕ್ಕುಳ್ಳವನಾಗಬಹುದಾಗಿದ್ದ ರಜೆ, ಪಿಂಚಣಿ, ಭವಿಷ್ಯನಿಧಿ ಮತ್ತು ಉಪದಾನಕ್ಕೆ ಹಕ್ಕುಳ್ಳವನಾಗಿರತಕ್ಕದ್ದು][1].

1. 1978ರ ಅಧಿನಿಯಮ ಸಂಖ್ಯೆ 24ರ ಮೂಲಕ 1.6.1977 ರಿಂದ ಜಾರಿಗೆ ಬರುವಂತೆ 5ನೇ ಖಂಡ ಮತ್ತು ಪರಂತುಕ ಒಳಗೊಂಡಂತೆ 6ನೇ ಖಂಡವನ್ನು ಸೇರಿಸಲಾಗಿದೆ.

(2) ಸಂದರ್ಭಾನುಸಾರ ಬೆಂಗಳೂರು ನಗರಕ್ಕೆ ಮತ್ತು ಹುಬ್ಬಳ್ಳಿ-ಧಾರವಾಡ ನಗರಕ್ಕೆ ಸಂಬಂಧಿಸಿದಂತೆ ಸರ್ಕಾರವು ಅಧಿಸೂಚನೆ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಅಂಥ ಅವಧಿಯು ಮುಗಿಯುವುದಕ್ಕೆ ಮುಂಚೆ ಈ ಅಧಿನಿಯಮದ ಉಪಬಂಧಗಳ ಮೇರೆಗೆ ನಗರಪಾಲಿಕೆಯನ್ನು ಕ್ರಮಬದ್ಧವಾಗಿ ರಚಿಸತಕ್ಕದ್ದು ಮತ್ತು ಹಾಗೆ ರಚಿತವಾದ ನಗರಪಾಲಿಕೆಯ ಪ್ರಥಮ ಸಭೆಯ ದಿನಾಂಕದಿಂದ ನಗರಪಾಲಿಕೆಯ ಅಧಿಕಾರಗಳನ್ನು ಚಲಾಯಿಸುತ್ತಿರುವ ಮತ್ತು ಕರ್ತವ್ಯಗಳನ್ನು ನೆರವೇರಿಸುತ್ತಿರುವ ನಿಕಾಯಗಳು ವಿಸರ್ಜನೆಯಾಗತಕ್ಕದ್ದು.

**507. ನಿರಸನ ಮತ್ತು ಉಳಿಸುವಿಕೆಗಳು.**– (1) ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ನ್ನು (ಮೈಸೂರು ಅಧಿನಿಯಮ ಸಂಖ್ಯೆ 1949ರ LXIX) ಮತ್ತು ಬಾಂಬೆ ಪ್ರಾಂತೀಯ ಪೌರನಿಗಮ ಅಧಿನಿಯಮ, 1949ನ್ನು (ಬಾಂಬೆ ಅಧಿನಿಯಮ ಸಂಖ್ಯೆ 1949ರ LIX) ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಅಂಥ ನಿರಸನವು,–

(ಎ) ಸದರಿ ಅಧಿನಿಯಮಿತಿಗಳ ಪೂರ್ವಪ್ರವರ್ತನೆಗೆ ಅಥವಾ ಅವುಗಳ ಮೇರೆಗೆ ಕ್ರಮಬದ್ಧವಾಗಿ ಮಾಡಿದ ಅಥವಾ ಮಾಡಲು ಎಡೆಗೊಟ್ಟ ಯಾವುದೇ ಕಾರ್ಯಕ್ಕೆ; ಅಥವಾ

(ಬಿ) ಸದರಿ ಅಧಿನಿಯಮಿತಿಗಳ ಮೇರೆಗೆ ಆರ್ಜಿಸಿದ, ಪ್ರಾಪ್ತವಾದ ಅಥವಾ ವಹಿಸಿದ ಯಾವುದೇ ಹಕ್ಕಿಗೆ, ವಿಶೇಷಾಧಿಕಾರಕ್ಕೆ, ಬಾಧ್ಯತೆಗೆ ಅಥವಾ ಹೊಣೆಗಾರಿಕೆಗೆ; ಅಥವಾ

(ಸಿ) ಸದರಿ ಅಧಿನಿಯಮಿತಿಗಳ ವಿರುದ್ಧವಾಗಿ ಮಾಡಿದ ಯಾವುದೇ ಅಪರಾಧಕ್ಕೆ ಸಂಬಂಧಿಸಿದಂತೆ ಯಾವುದೇ ದಂಡಕ್ಕೆ, ಮುಟ್ಟುಗೋಲಿಗೆ ಅಥವಾ ದಂಡನೆಗೆ; ಅಥವಾ

(ಡಿ) ಮೇಲೆ ಹೇಳಲಾದ ಯಾವುದೇ ಅಂಥ ಹಕ್ಕಿಗೆ, ವಿಶೇಷಾಧಿಕಾರಕ್ಕೆ, ಬಾಧ್ಯತೆಗೆ, ಹೊಣೆಗಾರಿಕೆಗೆ, ಮುಟ್ಟುಗೋಲಿಗೆ ಅಥವಾ ದಂಡನೆಗೆ ಸಂಬಂಧಿಸಿದಂತೆ ಯಾವುದೇ ತನಿಖೆಗೆ, ಕಾನೂನು ವ್ಯವಹರಣೆಗೆ ಅಥವಾ ಪರಿಹಾರೋಪಾಯಕ್ಕೆ

– ಬಾಧಕ ಉಂಟುಮಾಡತಕ್ಕದಲ್ಲ ಮತ್ತು ಈ ಅಧಿನಿಯಮವನ್ನು ಅಂಗೀಕರಿಸಿರದಿದ್ದರೆ ಹೇಗೋ ಹಾಗೆ ಅಂಥ ಯಾವುದೇ ತನಿಖೆಯನ್ನು, ಕಾನೂನು ವ್ಯವಹರಣೆಯನ್ನು ಅಥವಾ ಪರಿಹಾರೋಪಾಯವನ್ನು ಪ್ರಾರಂಭಿಸಬಹುದು, ಮುಂದುವರಿಸಬಹುದು ಅಥವಾ ಜಾರಿಗೊಳಿಸಬಹುದು ಮತ್ತು ಅಂಥ ದಂಡವನ್ನು ಅಥವಾ ದಂಡನೆಯನ್ನು ವಿಧಿಸಬಹುದು ಅಥವಾ ಅಂಥ ಮುಟ್ಟುಗೋಲಿಗೆ ಆದೇಶಿಸಬಹುದು:

ಮತ್ತೂ ಪರಂತು, ಹಿಂದಿನ ಪರಂತುಕಕ್ಕೆ ಒಳಪಟ್ಟು ಸದರಿ ಅಧಿನಿಯಮಿತಿಗಳ ಮೇರೆಗೆ ಮಾಡಿದ ಯಾವುದೇ ಕಾರ್ಯವನ್ನು ಅಥವಾ ಕೈಗೊಂಡ ಯಾವುದೇ ಕ್ರಮವನ್ನು (ಮಾಡಿದ ಯಾವುದೇ ನೇಮಕ ಅಥವಾ ಪ್ರತ್ಯಾಯೋಜನೆ, ವಿಧಿಸಿದ ತೆರಿಗೆ, ಸುಂಕ, ಫೀಜು ಅಥವಾ ಉಪಕರ, ಹೊರಡಿಸಿದ ಅಧಿಸೂಚನೆ, ಆದೇಶ, ಲಿಖಿತಪತ್ರ ಅಥವಾ ನಿರ್ದೇಶನ, ರೂಪಿಸಿದ ನಿಯಮ, ವಿನಿಯಮ, ನಮೂನೆ, ಉಪವಿಧಿ ಅಥವಾ ಕಾರ್ಯವ್ಯವಸ್ಥೆ, ಪಡೆದ ಪ್ರಮಾಣಪತ್ರ, ಮಂಜೂರು ಮಾಡಿದ ಅನುಮತಿ ಅಥವಾ ಲೈಸೆನ್ಸ್ ಅಥವಾ ಮಾಡಿದ ನೋಂದಣಿ ಸೇರಿದಂತೆ) ಈ ಅಧಿನಿಯಮದ ಸಂವಾದಿ ಉಪಬಂಧಗಳ ಮೇರೆಗೆ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಕಾರ್ಯದ ಅಥವಾ ಕೈಗೊಂಡ ಯಾವುದೇ ಕ್ರಮದ ಮೂಲಕ ರದ್ದುಪಡಿಸಿದ ಹೊರತು ಮತ್ತು ರದ್ದುಪಡಿಸುವವರೆಗೆ ತದನುಸಾರವಾಗಿ ಜಾರಿಯಲ್ಲಿ ಮುಂದುವರಿಯತಕ್ಕದ್ದು:

ಮತ್ತೂ ಪರಂತು, ಹಿಂದಿನ ಪರಂತುಕಗಳಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಅಧಿನಿಯಮಿತಿಗಳ ಮೇರೆಗೆ ಸ್ಥಿರ ಸ್ವತ್ತುಗಳ ವರ್ಗಾವಣೆಗಳ ಮೇಲೆ ವಿಧಿಸುವ ಸುಂಕವನ್ನು ಹೊರತುಪಡಿಸಿ, ಯಾವುದೇ ತೆರಿಗೆ, ಸುಂಕ, ಫೀಜು ಅಥವಾ ಉಪಕರವನ್ನು ಈ ಅಧಿನಿಯಮದ ಮೇರೆಗೆ ಅನುಮತಿಸಬಹುದಾದಂಥ ಗರಿಷ್ಠ ದರಕ್ಕಿಂತ ಹೆಚ್ಚಿನ ದರದಲ್ಲಿ ವಿಧಿಸಿರುವಲ್ಲಿ ಅಂಥ ತೆರಿಗೆ, ಸುಂಕ, ಫೀಜು ಅಥವಾ ಉಪಕರವನ್ನು ಅಂಥ ಹೆಚ್ಚಿನ ದರದಲ್ಲಿ ವಿಧಿಸುವುದನ್ನು ಮತ್ತು ವಸೂಲು ಮಾಡುವುದನ್ನು ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಂಡ ಯಾವುದೇ ಕ್ರಮದಿಂದ ರದ್ದುಪಡಿಸಿದ ಹೊರತು ಮತ್ತು ರದ್ದುಪಡಿಸುವವರೆಗೆ ಮುಂದುವರೆಸಬಹುದು:

ಮತ್ತೂ ಪರಂತು, ನಿರಸಿತವಾದ ಯಾವುದೇ ಅಧಿನಿಯಮಿತಿಯ ಯಾವುದೇ ಉಪಬಂಧಕ್ಕೆ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ಯಾವುದೇ ಲಿಖಿತಪತ್ರದಲ್ಲಿ ಮಾಡಿದ ಯಾವುದೇ ಉಲ್ಲೇಖವನ್ನು, ವಿಭಿನ್ನ ಆಶಯವು ಕಂಡುಬಂದ ಹೊರತು ಈ ಅಧಿನಿಯಮದ ಸಂವಾದಿ ಉಪಬಂಧಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

(2) ಉಪಪ್ರಕರಣ (1) ರಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಅಧಿನಿಯಮಿತಿಗಳ ಮೇರೆಗೆ ವಿಧಿಸಿದ ಯಾವುದೇ ತೆರಿಗೆ, ಸುಂಕ, ಫೀಜು ಅಥವಾ ಉಪಕರವನ್ನು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಂಥ ತೆರಿಗೆ, ಸುಂಕ, ಫೀಜು ಅಥವಾ ಉಪಕರವನ್ನು ವಿಧಿಸಲಾಗದಿದ್ದರೂ, ಹಾಗೆ ವಿಧಿಸುವುದಕ್ಕೆ ಮತ್ತು ವಸೂಲಿ ಮಾಡುವುದಕ್ಕೆ ಸಂಬಂಧಪಟ್ಟಂತೆ ಸದರಿ ಅಧಿನಿಯಮಿತಿಗಳ ಮತ್ತು ಅವುಗಳ ಮೇರೆಗೆ ರಚಿಸಿದ ಅಥವಾ ಹೊರಡಿಸಿದ ನಿಯಮಗಳ, ಉಪವಿಧಿಗಳ, ಆದೇಶಗಳ ಮತ್ತು ಅಧಿಸೂಚನೆಗಳ ಉಪಬಂಧಗಳನ್ನು ನಿರಸನಗೊಳಿಸಿರದಿದ್ದರೆ ಹೇಗೋ ಹಾಗೆ ಅವುಗಳನ್ನು ವಿಧಿಸುವುದನ್ನು ಮತ್ತು ವಸೂಲಿ ಮಾಡುವುದನ್ನು ಮುಂದುವರೆಸಬಹುದು.

**508. ಈ ಅಧಿನಿಯಮವನ್ನು ಜಾರಿಗೊಳಿಸುವುದಕ್ಕಾಗಿ ಆದೇಶಗಳು.**– (1) ಈ ಅಧಿನಿಯಮದಲ್ಲಿ ಅಥವಾ ಯಾವುದೇ ಇತರ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ ಸರ್ಕಾರವು,–

(ಎ) ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವುದಕ್ಕಾಗಿ;

(ಬಿ) ನಿಯಮಗಳನ್ನು, ಉಪ-ವಿಧಿಗಳನ್ನು, ವಿನಿಯಮಗಳನ್ನು, ಅಧಿಸೂಚನೆಗಳನ್ನು ಮತ್ತು ಆದೇಶಗಳನ್ನು ಯಾವುದೇ ನಗರಪಾಲಿಕೆಗೆ ಅನ್ವಯಿಸುವಾಗ ಅವುಗಳಿಂದ ಬಿಟ್ಟುಬಿಡುವುದಕ್ಕಾಗಿ ಮತ್ತು ಅವುಗಳಿಗೆ ಸೇರಿಸುವುದಕ್ಕಾಗಿ ಮತ್ತು ಅವುಗಳನ್ನು ಅಳವಡಿಸಿಕೊಳ್ಳುವುದಕ್ಕಾಗಿ ಮತ್ತು ಅವುಗಳನ್ನು ಮಾರ್ಪಾಟು ಮಾಡುವುದಕ್ಕಾಗಿ;

(ಸಿ) ಈ ಅಧಿನಿಯಮದ ಉಪಬಂಧಗಳನ್ನು ಅಳವಡಿಸಿಕೊಳ್ಳುವ ಕಾಲದಲ್ಲಿ ಉದ್ಭವಿಸುವ ತೊಂದರೆಗಳನ್ನು ನಿವಾರಿಸುವುದಕ್ಕಾಗಿ;

(ಡಿ) ನಗರಪಾಲಿಕೆಗಳು ಹಿಂದೆ ನಿರ್ವಹಿಸಿದ ಸೇವೆಗಳನ್ನು ಮತ್ತು ಚಟುವಟಿಕೆಗಳನ್ನು ಆ ನಗರಪಾಲಿಕೆಗಳ ಪರವಾಗಿ ತತ್ಕಾಲದಲ್ಲಿ ನಿರ್ವಹಿಸುವುದನ್ನು ಮುಂದುವರೆಸುವುದನ್ನು ಅಧಿಕೃತಗೊಳಿಸುವುದಕ್ಕಾಗಿ;

(ಇ) ಯಾವುದೇ ನ್ಯಾಯಾಲಯದ ಅಥವಾ ಪ್ರಾಧಿಕಾರದ ಅಧಿಕಾರಗಳನ್ನು ಅಥವಾ ಅಧಿಕಾರ ವ್ಯಾಪ್ತಿಯನ್ನು ಬದಲಾಯಿಸುವುದಕ್ಕಾಗಿ ಮೇಲೆ ಹೇಳಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಅವಶ್ಯವೆಂದು ಅಥವಾ ವಿಹಿತವೆಂದು ತೋರುವವಷ್ಟರಮಟ್ಟಿಗೆ ಮತ್ತು ಅಂಥ ಆದೇಶದಲ್ಲಿ ಹಾಗೆ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಲು ಹೊಸ ನ್ಯಾಯಾಲಯಗಳಿಗೆ ಅಥವಾ ಇತರ ಪ್ರಾಧಿಕಾರಗಳಿಗೆ ಅಧಿಕಾರ ನೀಡುವುದಕ್ಕಾಗಿ

– ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ ಈ ಅಧಿನಿಯಮದ ಉಪಬಂಧಗಳೊಂದಿಗೆ ಅಸಂಗತವಲ್ಲದಂಥ, ತನಗೆ ಅವಶ್ಯಕವೆಂದು ಅಥವಾ ವಿಹಿತವೆಂದು ತೋರುವಂಥ ಉಪಬಂಧವನ್ನು ಕಲ್ಪಿಸಬಹುದು.

(2) ಉಪ-ಪ್ರಕರಣ (1)ರ ಮೇರೆಗಿನ ಯಾವುದೇ ಆದೇಶವನ್ನು ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಉತ್ತರಾನ್ವಯವಾಗಿಯೇ ಆಗಲಿ ಅಥವಾ ಪೂರ್ವಾನ್ವಯವಾಗಿಯೇ ಆಗಲಿ ಜಾರಿಗೊಳಿಸಬಹುದು.

(3) ಉಪ-ಪ್ರಕರಣ (1)ರ ಮೇರೆಗೆ ಮಾಡಿದ ಎಲ್ಲಾ ಆದೇಶಗಳನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಇಡತಕ್ಕದ್ದು ಮತ್ತು ಅವುಗಳನ್ನು ಹಾಗೆ ಇಡಲಾದ ಅಧಿವೇಶನದ ಅವಧಿಯಲ್ಲಿ ರಾಜ್ಯ ವಿಧಾನಮಂಡಲವು ಮಾಡಬಹುದಾದ ಮಾರ್ಪಾಟಿಗೆ ಒಳಪಟ್ಟು ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದಿದ್ದರೆ ಹೇಗೋ ಹಾಗೆ ಅವು ಪರಿಣಾಮವನ್ನು ಹೊಂದಿರತಕ್ಕದ್ದು.

[1][**509. ತೊಂದರೆಗಳ ನಿವಾರಣೆ.**– ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಾಗ ಯಾವುವೇ ತೊಂದರೆಗಳು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ಸಂದರ್ಭಕ್ಕೆ ಅಗತ್ಯವಾಗಬಹುದಾದ ಮತ್ತು ತೊಂದರೆಯನ್ನು ನಿವಾರಿಸಲು, ಅವಶ್ಯಕವೆಂದು ತನಗೆ ಕಂಡುಬರುವ ಯಾವುದೇ ಕ್ರಮವನ್ನು ಕೈಗೊಳ್ಳಬಹುದು.][1]

1. 2005ರ ಅಧಿನಿಯಮ ಸಂಖ್ಯೆ 5ರ ಮೂಲಕ 7.3.2005 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**[1][ಅನುಸೂಚಿ-1**

[71ನೇ ಪ್ರಕರಣವನ್ನು ನೋಡಿ]

1. ಅಧಿಸೂಚನೆ ಸಂಖ್ಯೆ ಯುಡಿಡಿ 4 ಎಂಎನ್‌ವೈ 97, ದಿನಾಂಕ 29.1.2002 ರ ಮೂಲಕ ದಿನಾಂಕ 4.4.2002 ರಿಂದ ಜಾರಿಗೆ ಬರುವಂತೆ ಅನುಸೂಚಿ – I ನ್ನು ಪ್ರತ್ಯಾಯೋಜಿಸಲಾಗಿದೆ.

**ಕರ್ನಾಟಕ ನಗರ ಪಾಲಿಕೆಗಳ (ನಗರ ಪಾಲಿಕೆಯ ಮತ್ತು ಸಮಿತಿಯ ಕಾರ್ಯಕಲಾಪಗಳನ್ನು ನಡೆಸುವುದಕ್ಕಾಗಿ ಕಾರ್ಯವಿಧಾನ) ನಿಯಮಗಳು, 1998**

**1**. ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "**ಪೂರ್ತಿ ದಿನಗಳು**" ಎಂಬುದರಲ್ಲಿ ಭಾನುವಾರಗಳು ಮತ್ತು ರಜಾ ದಿನಗಳು ಸೇರುತ್ತವೆ;

(2) "**ಕೌನ್ಸಿಲ್ ಕಾರ್ಯದರ್ಶಿ**" ಎಂದರೆ ನಗರ ಪಾಲಿಕೆಯ ಕೌನ್ಸಿಲ್ ಕಾರ್ಯದರ್ಶಿ ಮತ್ತು ಅದರಲ್ಲಿ ನಗರ ಪಾಲಿಕೆಯ ಕೌನ್ಸಿಲ್ ಕಾರ್ಯದರ್ಶಿಯ ಕರ್ತವ್ಯಗಳನ್ನು ನಿರ್ವಹಿಸಲು ಮೇಯರ್‌ರವರ ಸಮ್ಮತಿ ಪಡೆದು ಅವರು ಅಧಿಕೃತಗೊಳಿಸಿದ ಯಾರೇ ಅಧಿಕಾರಿಯು ಒಳಗೊಳ್ಳುತ್ತಾನೆ;

(3) "**ಸಭಾ-ಸದನ**" ಎಂದರೆ ಒಂದು ನಗರ ಪಾಲಿಕೆ ಅಥವಾ ನಗರ ಪಾಲಿಕೆಯ ಕೌನ್ಸಿಲ್;

(4) "**ಸಭಾ-ಸದನದ ನಾಯಕ**" ಎಂದರೆ ಸಭಾ ಸದನದ ನಾಯಕನಾಗಿ ಕಾರ್ಯನಿರ್ವಹಿಸಲು ಮೇಯರ್‌ರಿಂದ ಮಾನ್ಯತೆ ಪಡೆದ ಸದಸ್ಯ;

(5) " **ಸದಸ್ಯ**" ಎಂದರೆ ಕೌನ್ಸಿಲರ್;

(6) "**ಪ್ರಸ್ತಾವ ಮಂಡಿಸುವ ಸದಸ್ಯ**" ಎಂದರೆ,–

(i) ಅಧಿಕೃತ ಪ್ರಸ್ತಾವದ ಸಂದರ್ಭದಲ್ಲಿ, ಸ್ಥಾಯಿ ಸಮಿತಿಯ ಅಧ್ಯಕ್ಷ ಅಥವಾ ಸಭಾ-ಸದನದ ನಾಯಕ; ಅಥವಾ

(ii) ಯಾವುದೇ ಇತರ ಪ್ರಸ್ತಾವದ ಸಂದರ್ಭದಲ್ಲಿ, ಪ್ರಸ್ತಾವದ ಸೂಚನಾಪತ್ರವನ್ನು ನೀಡಿರುವ ಸದಸ್ಯ;

(7) "**ಪ್ರಸ್ತಾವ**" ಎಂದರೆ ಈ ನಿಯಮಗಳಿಗೆ ಅನುಸಾರವಾಗಿ ಪರಿಶೀಲನೆಗಾಗಿ ಸಭಾ ಸದನದ ಮುಂದೆ ಮಂಡಿಸಲಾದ ವಿಷಯದ ವಿವರಪತ್ರ;

(8) "**ವಿರೋಧ ಪಕ್ಷದ ನಾಯಕ**" ಎಂದರೆ ಕೌನ್ಸಿಲನ್ನು ರಚಿಸಿರುವಂಥ ಪಕ್ಷವನ್ನು ಹೊರತುಪಡಿಸಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ಹೊಂದಿರುವ ಮತ್ತು ಕೋರಂ ಸಂಖ್ಯಾಬಲವನ್ನು ಹೊಂದಿರುವ ಪಕ್ಷದ ಮತ್ತು ವಿರೋಧಪಕ್ಷದ ನಾಯಕನಾಗಿ ಕಾರ್ಯನಿರ್ವಹಿಸಲು ಮೇಯರ್‌ರವರಿಂದ ಮಾನ್ಯತೆ ಪಡೆದ ಪಕ್ಷದ ನಾಯಕ;

(9) "**ಸಭಾ-ಸದನದ ಆವರಣಗಳು**" ಎಂದರೆ ಸಭಾಮಂದಿರ, ಮೊಗಸಾಲೆ, ಗ್ಯಾಲರಿಗಳು ಮತ್ತು ಮೇಯರ್‌ರವರು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರ ಸ್ಥಳಗಳು ಮತ್ತು ಅವುಗಳು ಒಳಗೊಳ್ಳುತ್ತವೆ;

(10) **"ಖಾಸಗಿ ಸದಸ್ಯ"** ಎಂದರೆ ಮೇಯರ್, ಉಪ ಮೇಯರ್, ಸ್ಥಾಯೀ ಸಮಿತಿಯ ಅಧ್ಯಕ್ಷ ಮತ್ತು ಸಭಾ-ಸದನದ ನಾಯಕನಲ್ಲದ ಒಬ್ಬ ಸದಸ್ಯ;

(11) **"ಅಧಿವೇಶನ"** ಎಂದರೆ ನಗರಪಾಲಿಕೆ ಸಭೆಯ ಉಪವೇಶನದ ಅವಧಿ;

(12) **"ಮಂಡನೆ"** ಎಂದರೆ ಸಭಾ-ಸದನದ ಮುಂದೆ ಮಂಡಿಸುವುದು.

**ಸಭೆಯ ನೋಟೀಸು, ಆಸನ ವ್ಯವಸ್ಥೆ, ಪ್ರಮಾಣವಚನ ಅಥವಾ ಪ್ರತಿಜ್ಞಾ ವಚನ, ಸದಸ್ಯರ ಪಟ್ಟಿ ಮತ್ತು ಪೀಠಾಸೀನ ಅಧಿಕಾರಿ**

**2. ಸಭೆಯ ನೋಟೀಸು.–** ಕೌನ್ಸಿಲನ ಕಾರ್ಯದರ್ಶಿಯವರು ನಗರ ಪಾಲಿಕೆಯ ಸಭೆಯು ಗೊತ್ತುಪಡಿಸಿರುವ ದಿನಾಂಕ, ಕಾಲ ಮತ್ತು ಸ್ಥಳವನ್ನು ನಿರ್ದಿಷ್ಟಪಡಿಸಿ ಪ್ರತಿಯೊಬ್ಬ ಸದಸ್ಯನಿಗೆ ಸಭೆಯ ನೋಟೀಸನ್ನು ನೀಡತಕ್ಕದ್ದು. ಆ ನೋಟೀಸನ್ನು ನಗರ ಪಾಲಿಕೆಯ ಕಚೇರಿಯಲ್ಲಿ ಇಟ್ಟಿರುವ ಕೌನ್ಸಿಲರುಗಳ ವಿಳಾಸಗಳ ರಿಜಿಸ್ಟರಿನಲ್ಲಿ ನಮೂದಿಸಿರುವ ಸದಸ್ಯರ ಅಂಚೆ ವಿಳಾಸಕ್ಕೆ ಕಳುಹಿಸತಕ್ಕದ್ದು.

**3. ಕಾರ್ಯಕಲಾಪ ಸೂಚಿಯ ಸಿದ್ಧತೆ.–** ಕೌನ್ಸಿಲ್‌ನ ಕಾರ್ಯದರ್ಶಿಯವರು ಮೇಯರ್‌ರವರು ನಿರ್ದೇಶನ ನೀಡಿದಂತೆ ಸಭೆಯ ಕಾರ್ಯಕಲಾಪ ಸೂಚಿಯನ್ನು ಸಿದ್ಧಪಡಿಸತಕ್ಕದ್ದು, ಸಭೆಯ ಪ್ರತಿಯೊಂದು ನೋಟೀಸಿನಲ್ಲಿ ಸಭೆಯ ಕಾರ್ಯಕಲಾಪ ಸೂಚಿಯನ್ನು ನಿರ್ದಿಷ್ಟಪಡಿಸತಕ್ಕದ್ದು.

4. **ಸದಸ್ಯರಿಗೆ ಆಸನ ವ್ಯವಸ್ಥೆ.–** ಸದಸ್ಯರು, ಮೇಯರ್‌ರವರು ಗೊತ್ತುಪಡಿಸಬಹುದಾದದಂಥ ಕುಳಿತುಕೊಳ್ಳತಕ್ಕದ್ದು.

5. **ಆಯುಕ್ತರು ಮತ್ತು ಅಧಿಕಾರಿಗಳಿಗೆ ಆಸನ ವ್ಯವಸ್ಥೆ.–** ಮೇಯರ್‌ರವರು ಗೊತ್ತುಪಡಿಸಬಹುದಾದಂಥ ಕ್ರಮದಲ್ಲಿ ಆಯುಕ್ತರು ಮತ್ತು ಅಧಿಕಾರಿಗಳು ಕುಳಿತುಕೊಳ್ಳತಕ್ಕದ್ದು.

6. **ಪ್ರಮಾಣವಚನ ಅಥವಾ ಪ್ರತಿಜ್ಞಾ ವಚನ.–** ಈ ಅಧಿನಿಯಮದ 18ನೇ ಪ್ರಕರಣದ ಅನುಸಾರವಾಗಿ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾವಚನವನ್ನು ಈಗಾಗಲೇ ಸ್ವೀಕಾರ ಮಾಡಿ, ಅದಕ್ಕೆ ತನ್ನ ಸಹಿಯನ್ನು ಹಾಕದೇ ಇರುವ ಸದಸ್ಯನು ಉಪವೇಶನವು ಪ್ರಾರಂಭವಾದಾಗ ಅಥವಾ ಕೌನ್ಸಿಲ್‌ನ ಕಾರ್ಯದರ್ಶಿಗೆ ಲಿಖಿತದಲ್ಲಿ ಮೊದಲೇ ನೋಟೀಸು ನೀಡಿದ ತರುವಾಯ ಯಾವುದೇ ದಿನದಂದು ಅಥವಾ ಮೇಯರ್‌ರವರು ನಿರ್ದೇಶಿಸಬಹುದಾದಂತೆ ಉಪವೇಶನದ ಯಾವುದೇ ಇತರ ಸಮಯದಲ್ಲಿ ಪ್ರಮಾಣವಚನವನ್ನು ಅಥವಾ ಪ್ರತಿಜ್ಞಾವಚನವನ್ನು ಸ್ವೀಕರಿಸಿ ಅದಕ್ಕೆ ತನ್ನ ಸಹಿ ಹಾಕಬಹುದು.

7. **ಸದಸ್ಯರ ಹೆಸರಿನ ಪಟ್ಟಿ.–** ನಗರ ಪಾಲಿಕೆಯ ಸದಸ್ಯರ ಪಟ್ಟಿಯೊಂದನ್ನು ಇಡತಕ್ಕದ್ದು. ಪ್ರತಿಯೊಬ್ಬ ಸದಸ್ಯನು ಪ್ರಮಾಣ ವಚನ ಸ್ವೀಕರಿಸಿದ ತರುವಾಯ ಕೂಡಲೇ ಕೌನ್ಸಿಲ್ ಕಾರ್ಯದರ್ಶಿಯ ಸಮ್ಮುಖದಲ್ಲಿ ಅದರಲ್ಲಿ ಸಹಿ ಮಾಡತಕ್ಕದ್ದು.

8. **ಪೀಠಾಸೀನ ಸದಸ್ಯ.–** ನಗರಪಾಲಿಕೆಯ ಪ್ರತಿಯೊಂದು ಉಪವೇಶನದ ಅಧ್ಯಕ್ಷತೆಯನ್ನು ಮೇಯರ್‌ರವರು ಅಥವಾ ಅವರ ಗೈರುಹಾಜರಿಯಲ್ಲಿ ಉಪಮೇಯರ್‌ರವರು ವಹಿಸತಕ್ಕದ್ದು. ಮೇಯರ್ ಮತ್ತು ಉಪಮೇಯರ್‌ರವರು ಗೈರುಹಾಜರಾಗಿರುವಾಗ, ಉಪವೇಶನದ ಅಧ್ಯಕ್ಷತೆಯನ್ನು ವಹಿಸುವಂತೆ ಮೇಯರ್‌ರವರು ಅಥವಾ ಅವರ ಗೈರುಹಾಜರಿಯಲ್ಲಿ ಉಪಮೇಯರ್‌ರವರು ಸ್ಥಾಯಿ ಸಮಿತಿಯ ಯಾರೇ ಅಧ್ಯಕ್ಷನಿಗೆ ನಿರ್ದೇಶಿಸಿದಾಗ ಅವರು ಉಪವೇಶನದಲ್ಲಿ ಅಧ್ಯಕ್ಷತೆಯನ್ನು ವಹಿಸಬಹುದು.

9. **ಪೀಠಾಸೀನ ವ್ಯಕ್ತಿಗಳ ಅಧಿಕಾರಗಳು.–** ಉಪಮೇಯರ್‌ರವರು ಅಥವಾ ಯಾರೇ ಸದಸ್ಯರು ಸಭೆಯ ಅಧ್ಯಕ್ಷತೆಯನ್ನು ವಹಿಸಿರುವಾಗ, ಮೇಯರ್‌ರವರು ಹಾಗೆ ಅಧ್ಯಕ್ಷತೆಯನ್ನು ವಹಿಸಿದಾಗ ಹೊಂದಿರುವಂಥವೇ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಈ ನಿಯಮಗಳಲ್ಲಿ ಮೇಯರ್‌ರವರಿಗೆ ಮಾಡಿದ ಎಲ್ಲಾ ಉಲ್ಲೇಖಗಳನ್ನು ಈ ಸಂದರ್ಭಗಳಲ್ಲಿ ಹಾಗೆ ಅಧ್ಯಕ್ಷತೆ ವಹಿಸಿರುವ ಅಂಥ ಯಾರೇ ವ್ಯಕ್ತಿಗೆ ಮಾಡಿದ ಉಲ್ಲೇಖಗಳೆಂಬುದಾಗಿ ಭಾವಿಸತಕ್ಕದ್ದು.

**ನಗರ ಪಾಲಿಕೆಯ ಸಭೆ**

**10. ಸಾಮಾನ್ಯ ಸಭೆ.–** ನಗರ ಪಾಲಿಕೆಯು ಕಾರ್ಯಕಲಾಪಗಳ ನಿರ್ವಹಣೆಗಾಗಿ ಕನಿಷ್ಠ ಪಕ್ಷ ತಿಂಗಳಿಗೊಮ್ಮೆಯಾದರೂ ನಗರ ಪಾಲಿಕೆ ಕಚೇರಿಯಲ್ಲಿ ಸಭೆ ಸೇರತಕ್ಕದ್ದು.

**11. ವಿಶೇಷ ಸಭೆ.–** ಮೇಯರ್‌ರವರು, ಯಾವ ನಿರ್ಣಯವನ್ನು ಮಂಡಿಸಲು ಉದ್ದೇಶಿಸಲಾಗಿದೆಯೋ ಆ ನಿರ್ಣಯವನ್ನು ಸ್ಪಷ್ಟವಾಗಿ ತಿಳಿಸಿ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಸಹಿ ಮಾಡಿರುವಂಥ ಲಿಖಿತ ಕೋರಿಕೆಯನ್ನು ಸ್ವೀಕರಿಸಿದ ಮೇಲೆ ವಿಶೇಷ ಸಭೆಯನ್ನು ಕರೆಯತಕ್ಕದ್ದು.

**12. ಸಭಾ-ಸದನದ ಉಪವೇಶನ.–** ಮೇಯರ್‌ರವರ ನಿರ್ದೇಶನದ ಮೇರೆಗೆ, ಸಭಾ-ಸದನದ ಉಪವೇಶನವು ಮೇಯರ್‌ರವರು, ಉಪಮೇಯರ್‌ರವರು ಅಥವಾ ಸಭೆಯ ಅಧ್ಯಕ್ಷತೆ ವಹಿಸಿರುವ ಸದಸ್ಯರು ಅನ್ಯಥಾ ನಿರ್ದೇಶಿಸಿದ ಹೊರತು, ಸಾಮಾನ್ಯವಾಗಿ ಬೆಳಿಗ್ಗೆ 8.00 ಗಂಟೆಗೆ ಪ್ರಾರಂಭವಾಗತಕ್ಕದ್ದು. ಸಭೆಗಳು ಸಾಮಾನ್ಯವಾಗಿ ಸಾಯಂಕಾಲ 7.00 ಗಂಟೆಗೆ ಮುಕ್ತಾಯವಾಗತಕ್ಕದ್ದು.

**13. ಸಭಾ-ಸದನದ ಮುಂದೂಡಿಕೆ.–** ಸಭಾ-ಸದನದ ಉಪವೇಶನವನ್ನು ಅನಿರ್ದಿಷ್ಟ ಕಾಲದವರೆಗೆ ಅಥವಾ ಒಂದು ದಿನದಮಟ್ಟಿಗೆ ಅಥವಾ ಅದೇ ದಿನದ ಒಂದು ಗಂಟೆ ಅವಧಿಗೆ ಅಥವಾ ಆ ದಿನದ ಭಾಗಕ್ಕೆ ಯಾವಾಗ ಮುಂದೂಡಬೇಕೆಂಬುದನ್ನು ಮೇಯರ್‌ರವರು ನಿರ್ಧರಿಸತಕ್ಕದ್ದು:

ಪರಂತು, ಮೇಯರ್‌ರವರು ತಾವು ಯುಕ್ತವೆಂದು ಭಾವಿಸಿದರೆ, ಸಭಾ-ಸದನದ ಉಪವೇಶನವನ್ನು ಯಾವ ದಿನಾಂಕಕ್ಕೆ ಅಥವಾ ಕಾಲದವರಗೆ ಮುಂದೂಡಲಾಗಿತ್ತೋ ಅದಕ್ಕಿಂತ ಮುಂಚೆಯೇ ಅಥವಾ ಸಭಾ ಸದನವನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡಿದ ತರುವಾಯ ಯಾವುದೇ ಕಾಲದಲ್ಲಿ ಸಭಾ-ಸದನದ ಉಪವೇಶನವನ್ನು ಕರೆಯಬಹುದು.

**ಕಾರ್ಯಕಲಾಪಗಳ ಪಟ್ಟಿ**

**14. ನಗರ ಪಾಲಿಕೆಯ ಕಾರ್ಯಕಲಾಪಗಳು.–**ನಗರಪಾಲಿಕೆಯ ಕಾರ್ಯಕಲಾಪಗಳಿಗೆ ಆದ್ಯತೆ ಕೊಡತಕ್ಕದ್ದು ಮತ್ತು ಕೌನ್ಸಿಲ್ ಕಾರ್ಯದರ್ಶಿಯು, ಕಾರ್ಯಕಲಾಪ ಸಲಹಾ ಸಮಿತಿಯು ನಿರ್ಧರಿಸಬಹುದಾದಂಥ ಕ್ರಮದಲ್ಲಿ ಕಾರ್ಯಕಲಾಪಗಳನ್ನು ವ್ಯವಸ್ಥೆ ಮಾಡತಕ್ಕದ್ದು.

**15. ಖಾಸಗಿ ಸದಸ್ಯರ ಕಾರ್ಯಕಲಾಪಗಳು.–** ಮೇಯರ್‌ರವರು ಸಭಾ-ಸದನದ ನಾಯಕನೊಂದಿಗೆ ಸಮಾಲೋಚಿಸಿ, ಖಾಸಗಿ ಸದಸ್ಯರ ಕಾರ್ಯಕಲಾಪಗಳ ನಿರ್ವಹಣೆಗೆ ಯಾವುದೇ ಕಾಲವನ್ನು ಗೊತ್ತುಪಡಿಸಬಹುದು.

**16. ಕಾರ್ಯಕಲಾಪಗಳ ಪಟ್ಟಿ.–** (1) ದಿನದ ಕಾರ್ಯಕಲಾಪಗಳ ಪಟ್ಟಿಯನ್ನು ಕೌನ್ಸಿಲ್ ಕಾರ್ಯದರ್ಶಿಯು ಸಿದ್ಧಪಡಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು, ಆಯುಕ್ತರ ಟಿಪ್ಪಣಿ ಯಾವುದಾದರೂ ಇದ್ದರೆ ಅದರ ಪ್ರತಿಯೊಂದಿಗೆ ಪ್ರತಿಯೊಬ್ಬ ಸದಸ್ಯನ ಉಪಯೋಗಕ್ಕಾಗಿ ಮುನ್ನಾ ದಿನವೇ ದೊರೆಯುವಂತೆ ಮಾಡತಕ್ಕದ್ದು:

ಪರಂತು, ಮೇಯರ್‌ರವರು ಯಾವುದೇ ನಿರ್ದಿಷ್ಟ ದಿನಕ್ಕೆ ಅಥವಾ ದಿನಗಳಿಗೆ ಸಂಬಂಧಿಸಿದಂತೆ ಈ ನಿಯಮ ಅನ್ವಯವಾಗುವುದನ್ನು ಸ್ಥಗಿತಗೊಳಿಸಬಹುದು.

(2) ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು, ದಿನದ ಕಾರ್ಯಕಲಾಪಗಳ ಪಟ್ಟಿಯಲ್ಲಿ ಸೇರಿಸಿರದ ಯಾವುವೇ ಕಾರ್ಯಕಲಾಪಗಳನ್ನು ಮೇಯರ್‌ರವರ ಅನುಮತಿ ಪಡೆಯದೆ ಯಾವುದೇ ಉಪವೇಶನದಲ್ಲಿ ನಿರ್ವಹಿಸತಕ್ಕದ್ದಲ್ಲ.

(3) ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಉಳಿದು ಅಥವಾ ಮೇಯರ್‌ರವರು ಅನ್ಯಥಾ ನಿರ್ದೇಶಿಸಿದ ಹೊರತು, ಯಾವ ಕಾರ್ಯಕಲಾಪಗಳಿಗೆ ನೋಟೀಸು ನೀಡಬೇಕಾದ ಅಗತ್ಯವಿದೆಯೋ ಆ ಯಾವುವೇ ಕಾರ್ಯಕಲಾಪಗಳನ್ನು ಆ ವರ್ಗದ ಕಾರ್ಯಕಲಾಪಕ್ಕೆ ಅವಶ್ಯವಾದ ನೋಟೀಸಿನ ಅವಧಿಯು ಮುಕ್ತಾಯವಾಗುವ ದಿನದ ಮುನ್ನಾ ದಿನಕ್ಕೆ ನಿಗದಿಪಡಿಸತಕ್ಕದ್ದಲ್ಲ.

(4) ಮೇಯರ್‌ರವರು ಅನ್ಯಥಾ ನಿರ್ದೇಶಿಸಿದ ಹೊರತು ಖಾಸಗಿ ಸದಸ್ಯರ ನಿರ್ಣಯಗಳ ವಿಲೇಗಾಗಿ ಗೊತ್ತುಪಡಿಸಿದ ಯಾವುದೇ ದಿನದ ಕಾರ್ಯಲಾಪಗಳ ಪಟ್ಟಿಯಲ್ಲಿ ಖಾಸಗಿ ಸದಸ್ಯರ ಯಾವುವೇ ನಿರ್ಣಯಗಳನ್ನು ಸೇರಿಸತಕ್ಕದ್ದಲ್ಲ.

**17. ಅಭಿನಂದನೆ ಅಥವಾ ಸಂತಾಪ ಸೂಚನೆ ನಿರ್ಣಯ.–** ಅಭಿನಂದನೆ ಅಥವಾ ಸಂತಾಪ ಸೂಚನೆ ನಿರ್ಣಯವನ್ನು ಮೇಯರ್‌ರವರ ಅನುಮತಿ ಪಡೆದು ಮತ್ತು ನಿರ್ಣಯಗಳ ಚರ್ಚೆಯನ್ನು ವಿನಿಯಮಿಸುವ ಉಪಬಂಧಗಳಿಗೊಳಪಟ್ಟು, ಯಾವುದೇ ಕಾಲದಲ್ಲಿ ಮಂಡಿಸಬಹುದು.

**18. ಅಭಿನಂದನೆ ಅಥವಾ ಸಂತಾಪಸೂಚನೆ ಪ್ರಸ್ತಾವ.–** ಮೇಯರ್‌ರವರು ಅಥವಾ ಉಪ–ಮೇಯರ್‌ರವರು ಅಥವಾ ಸ್ಥಾಯಿ ಸಮಿತಿಯ ಅಧ್ಯಕ್ಷರು ಅಥವಾ ಸಭಾ–ಸದನದ ನಾಯಕರು ಅಥವಾ ಮೇಯರ್‌ರವರ ಅನುಮತಿ ಪಡೆದು ಒಬ್ಬ ಸದಸ್ಯನು ಅಭಿನಂದನೆ ಅಥವಾ ಸಂತಾಪ ಸೂಚನೆ ಪ್ರಸ್ತಾವವನ್ನು ಮಂಡಿಸಬಹುದು ಮತ್ತು ವಿದ್ಯುಕ್ತ ನಿರ್ಣಯವಿಲ್ಲದೆ ಪ್ರಸ್ತಾವವನ್ನು ಸಭೆಯ ಮುಂದೆ ಯಥೋಚಿತವಾಗಿ ಮಂಡಿಸಬಹುದು.

**ಪ್ರಶ್ನೋತ್ತರಗಳು**

**19. ಪ್ರಶ್ನೋತ್ತರ ವೇಳೆ.–** ಮೇಯರ್‌ರವರು ಅನ್ಯಥಾ ನಿರ್ದೇಶಿಸಿದ ಹೊರತು, ಉಪವೇಶನ ನಡೆಯುವ ಪ್ರತಿಯೊಂದು ದಿನದ ಪ್ರಾರಂಭದ ಮೊದಲ ಒಂದು ಗಂಟೆಯ ಅವಧಿಯು ಪ್ರಶ್ನೆಗಳನ್ನು ಕೇಳುವುದಕ್ಕೆ ಮತ್ತು ಅವುಗಳಿಗೆ ಉತ್ತರಿಸುವುದಕ್ಕೆ ಲಭ್ಯವಿರತಕ್ಕದ್ದು.

ಪ್ರಶ್ನೋತ್ತರ ವೇಳೆಯು ಕಟ್ಟುನಿಟ್ಟಾಗಿ ಒಂದು ಗಂಟೆ ಅವಧಿಗೆ ಮಾತ್ರ ಸೀಮಿತವಾಗಿರತಕ್ಕದ್ದು.

**20. ನೋಟೀಸಿನ ಅವಧಿ.–** ಮೇಯರ್‌ರವರು ಅನ್ಯಥಾ ನಿರ್ದೇಶಿಸಿದ ಹೊರತು, ಒಂದು ಪ್ರಶ್ನೆ ಬಗ್ಗೆ ಹದಿನೈದು ಪೂರ್ಣ ದಿನಗಳಿಗೆ ಕಡಿಮೆ ಇಲ್ಲದ ನೋಟಿಸನ್ನು ನೀಡತಕ್ಕದ್ದು.

**21. ನೋಟೀಸಿನ ನಮೂನೆ.–** ಪ್ರಶ್ನೆಯ ನೋಟೀಸನ್ನು ಕೌನ್ಸಿಲ್ ಕಾರ್ಯದರ್ಶಿಗೆ ಲಿಖಿತದಲ್ಲಿ ನೀಡತಕ್ಕದ್ದು ಮತ್ತು ಅದರಲ್ಲಿ,–

(ಎ) ಪ್ರಶ್ನೆಯನ್ನು ಯಾರಿಗೆ ಕೇಳಲಾಗಿದೆಯೋ ಆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರ ಅಥವಾ ಆಯುಕ್ತರ ಅಧಿಕೃತ ಪದನಾಮವನ್ನು ನಿರ್ದಿಷ್ಟಪಡಿಸಿರತಕ್ಕದ್ದು; ಮತ್ತು

(ಬಿ) ಪ್ರಶ್ನೆಯನ್ನು ಉತ್ತರಕ್ಕಾಗಿ ಪ್ರಶ್ನೆಗಳ ಪಟ್ಟಿಯಲ್ಲಿ ಯಾವ ದಿನಾಂಕದಂದು ಸೇರಿಸಲು ಉದ್ದೇಶಿಸಲಾಗಿದೆಯೋ ಆ ದಿನಾಂಕವನ್ನು ನಿರ್ದಿಷ್ಟಪಡಿಸಿರತಕ್ಕದ್ದು;

(ಸಿ) ನೋಟೀಸ್‌ಗೆ ಒಬ್ಬರಿಗಿಂತ ಹೆಚ್ಚು ಸದಸ್ಯರು ಸಹಿ ಮಾಡಿದ್ದರೆ, ಮೊದಲು ಸಹಿ ಮಾಡಿರುವ ಸದಸ್ಯನು ಮಾತ್ರವೇ ಅದನ್ನು ನೀಡಿರುವುದಾಗಿ ಭಾವಿಸತಕ್ಕದ್ದು.

**22. ಅನುಮತಿಸಿದ ಪ್ರಶ್ನೆಗಳ ನೋಟೀಸು.–** ಮೇಯರ್‌ರವರು ಅನ್ಯಥಾ ನಿರ್ದೇಶಿಸಿದ ಹೊರತು, ಪ್ರಶ್ನೆಯ ನೋಟೀಸನ್ನು, ಆ ಪ್ರಶ್ನೆಯನ್ನು ಯಾರಿಗೆ ಕೇಳಲಾಗಿದೆಯೋ ಆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರಿಗೆ ಅಥವಾ ಆಯುಕ್ತರಿಗೆ ಕೌನ್ಸಿಲ್ ಕಾರ್ಯದರ್ಶಿಯು ಯಾವ ದಿನದಂದು ನೀಡಿದರೋ ಆ ದಿನದಿಂದ ಹತ್ತು ದಿನಗಳು ಮುಕ್ತಾಯವಾಗುವವರೆಗೆ ಅಂಥ ಯಾವುದೇ ಪ್ರಶ್ನೆಯನ್ನು ಉತ್ತರಕ್ಕಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದಲ್ಲ.

**23. ಚುಕ್ಕೆ ಗುರುತಿನ ಪ್ರಶ್ನೆಗಳು.–** ಯಾವ ಸದಸ್ಯನು ತನ್ನ ಪ್ರಶ್ನೆಗೆ ಮೌಖಿಕ ಉತ್ತರವನ್ನು ಬಯಸುತ್ತಾನೋ ಆ ಸದಸ್ಯನು ಅದನ್ನು ಚುಕ್ಕೆ ಗುರುತಿನ ಮೂಲಕ ಭಿನ್ನವಾಗಿ ತೋರಿಸತಕ್ಕದ್ದು. ಆತನು ಅದನ್ನು ಚುಕ್ಕೆ ಗುರುತಿನ ಮೂಲಕ ಭಿನ್ನವಾಗಿ ತೋರಿಸದಿದ್ದರೆ ಆ ಪ್ರಶ್ನೆಯನ್ನು ಲಿಖಿತ ಉತ್ತರಕ್ಕಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದು.

ಯಾವ ಸದಸ್ಯನು ನೋಟೀಸನ್ನು ನೀಡಿರುವನೊ ಆ ಸದಸ್ಯನು ಹಾಜರಿಲ್ಲದಿದ್ದರೆ ಆ ಪ್ರಶ್ನೆಯನ್ನು ಬಿಟ್ಟುಬಿಡಲಾಗುವುದು.

**24. ಚುಕ್ಕೆ ಗುರುತಿನ ಪ್ರಶ್ನೆಗಳ ಸಂಖ್ಯಾ ಮಿತಿ.–** (1) ಅದೇ ಸದಸ್ಯರು ಚುಕ್ಕೆ ಗುರುತಿನ ಮೂಲಕ ಭಿನ್ನವಾಗಿ ತೋರಿಸಿದ ಒಂದಕ್ಕಿಂತ ಹೆಚ್ಚಿಲ್ಲದ ಪ್ರಶ್ನೆಯನ್ನು ಮತ್ತು ಒಟ್ಟು ಇಪ್ಪತ್ತಕ್ಕೆ ಮೀರದ ಪ್ರಶ್ನೆಗಳನ್ನು ಯಾವುದೇ ಒಂದು ದಿನದಂದು ಮೌಖಿಕ ಉತ್ತರಗಳಿಗಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದು:

ಪರಂತು, ಒಂದು ಪ್ರಶ್ನೆಯನ್ನು ಮುಂದೂಡಿದಾಗ ಅಥವಾ ಮೌಖಿಕ ಉತ್ತರಕ್ಕಾಗಿಯ ಪ್ರಶ್ನೆಗಳ ಒಂದು ಪಟ್ಟಿಯಿಂದ ಇನ್ನೊಂದು ಪಟ್ಟಿಗೆ ವರ್ಗಾಯಿಸಿದಾಗ, ಒಬ್ಬನೇ ಸದಸ್ಯನ ಹೆಸರಿನಲ್ಲಿ ಒಂದಕ್ಕಿಂತ ಹೆಚ್ಚು ಪ್ರಶ್ನೆಗಳು ಇರಬಹುದು ಮತ್ತು ಒಟ್ಟು ಪ್ರಶ್ನೆಗಳ ಸಂಖ್ಯೆಯು ಹಾಗೇ ಮುಂದೂಡಿದ ಅಥವಾ ವರ್ಗಾಯಿಸಿದ ಪ್ರಶ್ನೆಗಳ ಸಂಖ್ಯೆಯಷ್ಟು ಹೆಚ್ಚಾಗಬಹುದು.

(2) ಮೌಖಿಕ ಉತ್ತರಕ್ಕಾಗಿಯ ಪಶ್ನೆಗಳನ್ನು ಯಾವ ಕ್ರಮದಲ್ಲಿ ಸೇರಿಸಬೇಕು ಎಂಬುದನ್ನು ನೋಟೀಸನ್ನು ನೀಡುವ ಸದಸ್ಯನು ಸೂಚಿಸತಕ್ಕದ್ದು ಮತ್ತು ಅಂಥ ಯಾವುದೇ ಕ್ರಮವನ್ನು ಸೂಚಿಸಿರದಿದ್ದರೆ, ಒಂದು ನಿರ್ದಿಷ್ಟ ಸಮಯದಲ್ಲಿ ನೋಟೀಸ್‌ಗಳನ್ನು ಯಾವ ಕ್ರಮದಲ್ಲಿ ಸ್ವೀಕರಿಸಲಾಯಿತೋ ಆ ಕ್ರಮದಲ್ಲಿ ಪ್ರಶ್ನೆಗಳನ್ನು ಮೌಖಿಕ ಉತ್ತರಕ್ಕಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದು.

25. **ಚುಕ್ಕೆ ಗುರುತಿಲ್ಲದ ಪ್ರಶ್ನೆಗಳು.–** (1) ಪ್ರಶ್ನೆಯನ್ನು ಚುಕ್ಕೆ ಗುರುತಿನ ಮೂಲಕ ಭಿನ್ನವಾಗಿ ತೋರಿಸಿರದಿದ್ದರೆ ಅಥವಾ ಯಾವುದೇ ದಿನದಂದು ಮೌಖಿಕ ಉತ್ತರಕ್ಕಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸಿರುವ ಒಂದು ಪ್ರಶ್ನೆಯನ್ನು ಆ ದಿನದಂದು ಪ್ರಶ್ನೆಗಳಿಗೆ ಉತ್ತರಿಸುವುದಕ್ಕಾಗಿ ಲಭ್ಯ ಇರುವ ಸಮಯದೊಳಗೆ ಉತ್ತರಿಸುವುದಕ್ಕಾಗಿ ಕರೆಯದಿದ್ದರೆ, ಆ ಪ್ರಶ್ನೆಯನ್ನು ಯಾರಿಗೆ ಕೇಳಲಾಗಿತ್ತೋ ಆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರು ಅಥವಾ ಆಯುಕ್ತರು, ಪ್ರಶ್ನೋತ್ತರ ವೇಳೆಯ ಕೊನೆಯಲ್ಲಿ ಅಥವಾ ಸಂದರ್ಭಾನುಸಾರ ಮೌಖಿಕ ಉತ್ತರಕ್ಕಾಗಿಯ ಪ್ರಶ್ನೆಗಳನ್ನು ವಿಲೆ ಮಾಡಿದ ಕೂಡಲೇ ಅಂಥ ಪ್ರಶ್ನೆಗೆ ಲಿಖಿತ ಉತ್ತರವನ್ನು ಸಭೆಯಲ್ಲಿ ಮಂಡಿಸಿರುವುದಾಗಿ ಭಾವಿಸತಕ್ಕದ್ದು:

ಪರಂತು, ಒಬ್ಬ ಸದಸ್ಯನು ಮೇಯರ್‌ರವರು ಕರೆದಾಗ, ತನ್ನ ಹೆಸರಿನಲ್ಲಿರುವ ಪ್ರಶ್ನೆಯನ್ನು ಕೇಳುವುದು ತನ್ನ ಉದ್ದೇಶವಾಗಿಲ್ಲವೆಂದು ತಿಳಿಸಿದರೆ, ಆ ಪ್ರಶ್ನೆಯನ್ನು ಹಿಂತೆಗೆದುಕೊಳ್ಳಲಾಗಿದೆಯೆಂದು ಪರಿಗಣಿಸತಕ್ಕದ್ದು ಮತ್ತು ಅದಕ್ಕೆ ಯಾವುದೇ ಲಿಖಿತ ಉತ್ತರವನ್ನು ಸಭೆಯಲ್ಲಿ ಮಂಡಿಸಲಾಗಿದೆಯೆಂದು ಭಾವಿಸತಕ್ಕದ್ದಲ್ಲ.

(2) ಯಾವ ದಿನದಂದು ಉಪವೇಶನ ನಡೆಯಿತೋ ಆ ಯಾವುದೇ ದಿನದಂದು ಪ್ರಶ್ನೋತ್ತರ ವೇಳೆ ಇಲ್ಲದಿದ್ದರೆ, ಆ ದಿನದಂದು ಲಿಖಿತ ಉತ್ತರಕ್ಕಾಗಿಯ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸಿರುವ ಪ್ರಶ್ನೆಗಳಿಗೆ ಲಿಖಿತ ಉತ್ತರಗಳೇನಾದರೂ ಇದ್ದಲ್ಲಿ, ಆ ಲಿಖಿತ ಉತ್ತರಗಳನ್ನು, ಪ್ರಶ್ನೆಗಳನ್ನು ಯಾರಿಗೆ ಕೇಳಲಾಗಿದೆಯೋ ಆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರ ಅಥವಾ ಆಯುಕ್ತರ ಪರವಾಗಿ ಸಭಾ–ಸದನದ ನಾಯಕರು ಸಭೆಯಲ್ಲಿ ಮಂಡಿಸತಕ್ಕದ್ದು.

(3) ಯಾವ ಪ್ರಶ್ನೆಗೆ ಲಿಖಿತ ಉತ್ತರವನ್ನು ನೀಡಲಾಗಿದೆಯೋ ಆ ಪ್ರಶ್ನೆಗೆ ಮೌಖಿಕ ಉತ್ತರವನ್ನು ನೀಡತಕ್ಕದ್ದಲ್ಲ ಮತ್ತು ಆ ಪ್ರಶ್ನೆಯ ಸಂಬಂಧದಲ್ಲಿ ಪೂರಕ ಪ್ರಶ್ನೆಗಳನ್ನು ಕೇಳತಕ್ಕದ್ದಲ್ಲ.

26. **ಪ್ರಶ್ನೆಗಳ ಅಂಗೀಕಾರಾರ್ಹತೆಯ ಷರತ್ತುಗಳು.–** (1) ಉಪ ನಿಯಮ (2)ರ ಉಪಬಂಧಗಳಿಗೊಳಪಟ್ಟು, ಪ್ರಶ್ನೆಯನ್ನು ಯಾರಿಗೆ ಕೇಳಲಾಗಿದೆಯೋ ಆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರ ಅಥವಾ ಆಯುಕ್ತರ ವಿಶೇಷ ಸಂಜ್ಞೇಯತೆಯೊಳಗೆ ಬರುವ ಸಾರ್ವಜನಿಕ ಮಹತ್ವದ ವಿಷಯಗಳ ಬಗ್ಗೆ ಮಾಹಿತಿಯನ್ನು ಪಡೆಯುವ ಉದ್ದೇಶದಿಂದ ಪ್ರಶ್ನೆಯನ್ನು ಕೇಳಬಹುದು.

(2) ಪ್ರಶ್ನೆ ಕೇಳುವ ಹಕ್ಕು ಈ ಮುಂದಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ:–

(ಎ) ಪ್ರಶ್ನೆಯು ಒಂದೇ ಒಂದು ವಿಷಯಕ್ಕೆ ಸಂಬಂಧಪಟ್ಟಿರತಕ್ಕದ್ದು;

(ಬಿ) ಪ್ರಶ್ನೆಯನ್ನು ಮಾಹಿತಿಗಾಗಿಯ ಕೋರಿಕೆ ಮಾತ್ರವೇ ಎಂಬ ರೀತಿಯಲ್ಲಿ ರೂಪಿಸಿರತಕ್ಕದ್ದು;

(ಸಿ) ಪ್ರಶ್ನೆಯು ಸಂದಿಗ್ಧವಾಗಿರತಕ್ಕದ್ದಲ್ಲ ಅಥವಾ ಅಸ್ಪಷ್ಟವಾಗಿರತಕ್ಕದ್ದಲ್ಲ;

(ಡಿ) ಪ್ರಶ್ನೆಯನ್ನು ಸ್ಪಷ್ಟವಾಗುವಂತೆ ಮಾಡುವುದಕ್ಕಾಗಿ ಕಡ್ಡಾಯವಾಗಿ ಅವಶ್ಯಕವಾಗಿರದ ಯಾವುದೇ ಹೆಸರನ್ನು ಅಥವಾ ನಿರೂಪಣೆಯನ್ನು ಪ್ರಶ್ನೆಯಲ್ಲಿ ತರತಕ್ಕದ್ದಲ್ಲ;

(ಇ) ಪ್ರಶ್ನೆಯು ಒಂದು ನಿರೂಪಣೆಯನ್ನು ಒಳಗೊಂಡಿದ್ದರೆ, ಆ ನಿರೂಪಣೆಯ ಖಚಿತತೆಯ ಬಗ್ಗೆ ಸದಸ್ಯನು ಸ್ವತಃ ತನ್ನನ್ನು ಜವಾಬ್ದಾರನನ್ನಾಗಿಸಿಕೊಳ್ಳತಕ್ಕದ್ದು;

(ಎಫ್) ಪ್ರಶ್ನೆಯು ಚರ್ಚೆಗಳನ್ನು, ಊಹೆಗಳನ್ನು, ವ್ಯಂಗ್ಯೋಕ್ತಿಗಳನ್ನು, ದೋಷಾರೋಪಣೆಗಳನ್ನು, ಹೊಗಳಿಕೆಗಳನ್ನು ಅಥವಾ ಮಾನಹಾನಿಕರ ಹೇಳಿಕೆಗಳನ್ನು ಒಳಗೊಂಡಿರತಕ್ಕದ್ದಲ್ಲ;

(ಜಿ) ಪ್ರಶ್ನೆಯನ್ನು ಯಾವುದಾದರೂ ಒಂದು ವಿಚಾರದ ಬಗ್ಗೆ ಅಭಿಪ್ರಾಯವನ್ನು ಅಥವಾ ಕಾಲ್ಪನಿಕ ಹೇಳಿಕೆಯನ್ನು ವ್ಯಕ್ತಪಡಿಸುವುದಕ್ಕಾಗಿ ಕೇಳತಕ್ಕದ್ದಲ್ಲ;

(ಹೆಚ್) ಪ್ರಶ್ನೆಯನ್ನು ವ್ಯಕ್ತಿಯ ಪದೀಯ ಸಾಮರ್ಥ್ಯದಲ್ಲಿ ಹೊರತು ಯಾರೇ ವ್ಯಕ್ತಿಯ ಚಾರಿತ್ರ್ಯದ ಅಥವಾ ನಡತೆಯ ಬಗ್ಗೆ ಕೇಳತಕ್ಕದ್ದಲ್ಲ;

(ಐ) ಪ್ರಶ್ನೆಯು ಸಾಮಾನ್ಯವಾಗಿ ಒಂದು ನೂರ ಐವತ್ತು ಪದಗಳನ್ನು ಮೀರತಕ್ಕದ್ದಲ್ಲ;

(ಜೆ) ಪ್ರಶ್ನೆಯು, ಯಾವ ವಿಷಯವು ನಗರ ಪಾಲಿಕೆಗೆ ಸಂಬಂಧಪಡುವುದಿಲ್ಲವೋ ಆ ವಿಷಯಕ್ಕೆ ಸಂಬಂಧಿಸಿರತಕ್ಕದ್ದಲ್ಲ;

(ಕೆ) ಪ್ರಶ್ನೆಯನ್ನು, ಯಾವ ಸಮಿತಿಯ ವ್ಯವಹರಣೆಗಳನ್ನು ಸಭಾ–ಸದನದ ಮುಂದೆ ಮಂಡಿಸಿಲ್ಲವೋ ಅಂಥ ಸಮಿತಿಯ ವ್ಯವಹರಣೆಗಳ ಬಗ್ಗೆ ಕೇಳತಕ್ಕದ್ದಲ್ಲ;

(ಎಲ್) ಪ್ರಶ್ನೆಯು ವ್ಯಕ್ತಿಗತ ಚಾರಿತ್ರ್ಯದ ಬಗ್ಗೆ ದೂಷಣೆಯನ್ನು ಮಾಡತಕ್ಕದ್ದಲ್ಲ ಅಥವಾ ಅಂಥ ದೂಷಣೆಯನ್ನು ಧ್ವನಿಸುವಂತಿರತಕ್ಕದ್ದಲ್ಲ;

(ಎಂ) ಪ್ರಶ್ನೆಗೆ ಕೊಡುವ ಉತ್ತರದ ಮಿತಿಯೊಳಗೆ ವ್ಯವಹರಿಸಲು ಸಾಧ್ಯವಿಲ್ಲದ ತುಂಬಾ ದೊಡ್ಡ ಕಾರ್ಯನೀತಿಯ ಪ್ರಶ್ನೆಗಳನ್ನು ಎತ್ತತಕ್ಕದ್ದಲ್ಲ;

(ಎನ್) ಯಾವ ಪ್ರಶ್ನೆಗಳಿಗೆ ಈಗಾಗಲೇ ಉತ್ತರಿಸಲಾಗಿದೆಯೋ ಅಥವಾ ಉತ್ತರಿಸಲು ನಿರಾಕರಿಸಲಾಗಿದೆಯೋ ಆ ಪ್ರಶ್ನೆಗಳನ್ನು ಸಾರತಃ ಪುನರಾವರ್ತನೆ ಮಾಡತಕ್ಕದ್ದಲ್ಲ;

(ಓ) ಪ್ರಶ್ನೆಯನ್ನು ಕ್ಷುಲ್ಲಕ ವಿಷಯಗಳ ಬಗ್ಗೆ ಮಾಹಿತಿಯನ್ನು ಕೇಳತಕ್ಕದ್ದಲ್ಲ;

(ಪಿ) ಪ್ರಶ್ನೆಯು ಸಾಮಾನ್ಯವಾಗಿ ಗತಚರಿತ್ರೆ ವಿಷಯಗಳ ಬಗ್ಗೆ ಮಾಹಿತಿಯನ್ನು ಕೇಳತಕ್ಕದ್ದಲ್ಲ;

(ಕ್ಯೂ) ಪ್ರಶ್ನೆಯು ಸುಲಭವಾಗಿ ದೊರೆಯುವ ದಸ್ತಾವೇಜುಗಳಲ್ಲಿ ಅಥವಾ ಸಾಮಾನ್ಯ ಪುರಾಮರ್ಶನ ಗ್ರಂಥಗಳಲ್ಲಿ ತಿಳಿಸಿರುವ ಮಾಹಿತಿಯನ್ನು ಕೇಳತಕ್ಕದ್ದಲ್ಲ;

(ಆರ್) ಪ್ರಶ್ನೆಯು ನಗರ ಪಾಲಿಕೆಗೆ ಮೂಲತಃ ಜವಾಬ್ದಾರಿಯಾಗಿರದ ಸಂಸ್ಥೆಗಳ ಅಥವಾ ವ್ಯಕ್ತಿಗಳ ನಿಯಂತ್ರಣದಲ್ಲಿರುವ ವಿಷಯಗಳನ್ನು ಎತ್ತತಕ್ಕದ್ದಲ್ಲ;

(ಎಸ್) ಪ್ರಶ್ನೆಯು ನ್ಯಾಯಾಲಯದಿಂದ ನ್ಯಾಯ ನಿರ್ಣಯವಾಗಬೇಕಾಗಿರುವ ವಿಷಯದ ಬಗ್ಗೆ ಮಾಹಿತಿಯನ್ನು ಕೇಳತಕ್ಕದ್ದಲ್ಲ;

(ಟಿ) ಪ್ರಶ್ನೆಯು ಸಾಮಾನ್ಯವಾಗಿ ನ್ಯಾಯಿಕ ಅಥವಾ ಅರೆ ನ್ಯಾಯಿಕ ಪ್ರಕಾರ್ಯಗಳನ್ನು ನಿರ್ವಹಿಸುತ್ತಿರುವ ಯಾವುದೇ ಶಾಸನಬದ್ಧ ನ್ಯಾಯಾಧಿಕರಣದ ಅಥವಾ ಶಾಸನಬದ್ಧ ಪ್ರಾಧಿಕಾರದ ಮುಂದೆ ಅಥವಾ ಯಾವುದೇ ವಿಷಯದ ಬಗ್ಗೆ ವಿಚಾರಣೆ ಮಾಡಲು ಅಥವಾ ತನಿಖೆ ಮಾಡಲು ನೇಮಕಗೊಂಡ ಯಾವುದೇ ವಿಚಾರಣಾ ಆಯೋಗದ ಅಥವಾ ನ್ಯಾಯಾಲಯದ ಮುಂದೆ ಇತ್ಯರ್ಥವಾಗದೆ ಉಳಿದಿರುವ ಯಾವುದೇ ವಿಷಯಗಳ ಬಗ್ಗೆ ಕೇಳತಕ್ಕದ್ದಲ್ಲ. ಆದರೆ, ವಿಚಾರಣೆಯ ಕಾರ್ಯವಿಧಾನಕ್ಕೆ ಅಥವಾ ವಿಷಯಕ್ಕೆ ಅಥವಾ ಹಂತಕ್ಕೆ ಸಂಬಂಧಿಸಿದ ವಿಷಯಗಳನ್ನು ಉಲ್ಲೇಖಿಸುವುದರಿಂದ ನ್ಯಾಯಾಧಿಕರಣವು ಅಥವಾ ವಿಚಾರಣಾ ಆಯೋಗವು ಅಥವಾ ನ್ಯಾಯಾಲಯವು ಆ ವಿಷಯವನ್ನು ಪರಿಶೀಲಿಸುವುದಕ್ಕೆ ಬಾಧಕ ಉಂಟಾಗುವ ಸಂಭವವಿರದಿದ್ದರೆ ಅಂಥ ವಿಷಯಗಳನ್ನು ಉಲ್ಲೇಖಿಸಬಹುದು.

**27. ನಗರ ಪಾಲಿಕೆ ಮತ್ತು ಸರ್ಕಾರದ ನಡುವಿನ ಪತ್ರ ವ್ಯವಹಾರದ ವಿಷಯದ ಬಗ್ಗೆ ಪ್ರಶ್ನೆಗಳು.–** ನಗರಪಾಲಿಕೆ ಮತ್ತು ಸರ್ಕಾರದ ನಡುವಿನ ಪತ್ರ ವ್ಯವಹಾರದ ವಸ್ತು ವಿಷಯವಾಗಿರುವ ಅಥವಾ ವಸ್ತು ವಿಷಯವಾಗಿದ್ದ ವಿಷಯಗಳ ಬಗ್ಗೆ, ವಾಸ್ತವಾಂಶಗಳಿಗೆ ಸಂಬಂಧಿಸಿದಂತೆ ಹೊರತು, ಯಾವುದೇ ಪ್ರಶ್ನೆಯನ್ನು ಕೇಳತಕ್ಕದ್ದಲ್ಲ ಮತ್ತು ಅದಕ್ಕೆ ಕೊಡುವ ಉತ್ತರವು ವಾಸ್ತವಾಂಶದ ಹೇಳಿಕೆಗೆ ಸೀಮಿತವಾಗಿರತಕ್ಕದ್ದು.

**28. ಮೇಯರ್ ಅವರು ಪ್ರಶ್ನೆಯ ಅಂಗೀಕಾರಾರ್ಹತೆಯನ್ನು ನಿರ್ಧರಿಸುವುದು.–** (1) ಈ ನಿಯಮಗಳ ಮೇರೆಗೆ ಒಂದು ಪಶ್ನೆಯು ಅಥವಾ ಅದರ ಭಾಗವು ಅಂಗೀಕಾರ್ಹವಾಗಿದೆಯೋ ಅಥವಾ ಇಲ್ಲವೆ ಎಂಬುದನ್ನು ಮೇಯರ್‌ರವರು ನಿರ್ಧರಿಸತಕ್ಕದ್ದು ಮತ್ತು ಯಾವುದೇ ಪ್ರಶ್ನೆಯು ಅಥವಾ ಅದರ ಭಾಗವು ಪ್ರಶ್ನೆಯನ್ನು ಕೇಳುವ ಹಕ್ಕಿನ ದುರುಪಯೋಗವಾಗಿದೆ ಎಂದು ಅಥವಾ ಸಭಾ–ಸದನದಲ್ಲಿ ಕಾರ್ಯಕಲಾಪಗಳನ್ನು ನಡೆಸುವುದಕ್ಕೆ ಅಡ್ಡಿ ಉಂಟುಮಾಡುವಂಥದಾಗಿದೆಯೆಂದು ಅಥವಾ ಅದಕ್ಕೆ ಪ್ರತಿಕೂಲ ಪರಿಣಾಮ ಉಂಟುಮಾಡುವಂಥದ್ದಾಗಿದೆಯೆಂದು ಅಥವಾ ಈ ನಿಯಮಗಳನ್ನು ಉಲ್ಲಂಘಿಸುವಂಥದ್ದಾಗಿದೆಯೆಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಅಂಥ ಯಾವುದೇ ಪ್ರಶ್ನೆಯನ್ನು ಅಥವಾ ಅದರ ಭಾಗವನ್ನು ಸಮ್ಮತಿಸದೆ ಇರಬಹುದು.

(2) ನಿಯಮ 21ರ ಉಪಬಂಧಗಳಿಗೊಳಪಟ್ಟು, ಯಾವುದೇ ಪ್ರಶ್ನೆಯನ್ನು ಅಂಗೀಕರಿಸಬೇಕೇ ಅಥವಾ ಬೇಡವೇ ಎಂಬುದನ್ನು ನಿರ್ಧರಿಸಲು ಹೆಚ್ಚಿನ ಸಮಯದ ಅವಶ್ಯಕತೆ ಇದೆ ಎಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಸದಸ್ಯನು ತನ್ನ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿರುವ ದಿನಾಂಕದ ನಂತರದ ದಿನಾಂಕದಂದು, ಉತ್ತರಿಸುವುದಕ್ಕಾಗಿ ಆ ಪ್ರಶ್ನೆಯನ್ನು ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸುವಂತೆ ನಿರ್ದೇಶಿಸಬಹುದು.

**29. ಪ್ರಶ್ನೆಯನ್ನು ಚುಕ್ಕೆ ಗುರುತಿನ ಪ್ರಶ್ನೆಯೆಂದು ಪರಿಗಣಿಸಬೇಕೆ ಅಥವಾ ಚುಕ್ಕೆ ಗುರುತಿಲ್ಲದ ಪ್ರಶ್ನೆಯೆಂದು ಪರಿಗಣಿಸಬೇಕೆ ಎಂಬುದನ್ನು ಮೇಯರ್‌ರವರು ನಿರ್ಧರಿಸುವುದು.–** ಮೌಖಿಕ ಉತ್ತರವನ್ನು ಅಪೇಕ್ಷಿಸಿ ಕೇಳಲಾದ ಯಾವುದೇ ಪ್ರಶ್ನೆಗೆ ಲಿಖಿತ ಉತ್ತರವು ಹೆಚ್ಚು ಸೂಕ್ತವಾಗಬಹುದಾದ ಸ್ವರೂಪದ್ದಾಗಿದೆಯೆಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಮೇಯರ್‌ರವರು ಅಂಥ ಪ್ರಶ್ನೆಯನ್ನು ಲಿಖಿತ ಉತ್ತರ ನೀಡಬೇಕಾದ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸುವಂತೆ ನಿರ್ದೇಶಿಸಬಹುದು:

ಪರಂತು, ಮೇಯರ್‌ರವರು ತಮಗೆ ಸೂಕ್ತವೆನಿಸಿದರೆ, ಮೌಖಿಕ ಉತ್ತರ ಅಪೇಕ್ಷಿಸಿ ಪ್ರಶ್ನೆ ಕೇಳಿರುವ ಸದಸ್ಯನನ್ನು ಕರೆಯಿಸಿ ಮೌಖಿಕ ಉತ್ತರ ಅಪೇಕ್ಷಿಸಿರುವುದಕ್ಕೆ ಕಾರಣಗಳನ್ನು ಸಂಕ್ಷಿಪ್ತವಾಗಿ ತಿಳಿಸಲು ಕೇಳಬಹುದು ಮತ್ತು ಅಂಥ ಕಾರಣಗಳನ್ನು ಪರಿಶೀಲಿಸಿದ ತರುವಾಯ, ಆ ಪ್ರಶ್ನೆಯನ್ನು ಲಿಖಿತ ಉತ್ತರ ಕೋರಿ ಬಂದ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸುವಂತೆ ನಿರ್ದೇಶಿಸಬಹುದು.

**30. ಪ್ರಶ್ನೆಗಳ ಪಟ್ಟಿ.–** ಅನುಮತಿಸಿರುವ ಪ್ರಶ್ನೆಗಳನ್ನು ಮೇಯರ್‌ರವರ ಆದೇಶಗಳಿಗನುಸಾರವಾಗಿ ಸಂದರ್ಭಾನುಸಾರ, ಮೌಖಿಕ ಅಥವಾ ಲಿಖಿತ ಉತ್ತರ ನೀಡುವುದಕ್ಕಾಗಿ ನಿಗದಿಪಡಿಸಿದ ದಿನದ ಪ್ರಶ್ನೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದು.

**31. ಪ್ರಶ್ನೆಗಳನ್ನು ಕೇಳುವ ರೀತಿ.–** (1) ಪ್ರಶ್ನೆಗಳನ್ನು ಕೇಳುವ ಸಮಯ ಬಂದಾಗ, ಮೇಯರ್‌ರವರು ಪ್ರಶ್ನೆಗಳ ಪಟ್ಟಿಯಲ್ಲಿ ಪ್ರಶ್ನೆಯು ಯಾವ ಸದಸ್ಯನ ಹೆಸರಿನಲ್ಲಿ ಇದೆಯೋ ಆ ಪ್ರತಿಯೊಬ್ಬ ಸದಸ್ಯನನ್ನು ಅನುಕ್ರಮವಾಗಿ ಕರೆಯತಕ್ಕದ್ದು.

(2) ಸದಸ್ಯನನ್ನು ಹಾಗೆ ಕರೆದಾಗ, ಸದಸ್ಯನು, ತನ್ನ ಆಸನದಿಂದ ಎದ್ದು ನಿಂತುಕೊಳ್ಳತಕ್ಕದ್ದು ಮತ್ತು ತನ್ನ ಹೆಸರಿನಲ್ಲಿರುವ ಪ್ರಶ್ನೆಯನ್ನು ಕೇಳುವ ಉದ್ದೇಶ ತನಗಿಲ್ಲವೆಂದು ಆತನು ಹೇಳದಿದ್ದರೆ, ಪ್ರಶ್ನೆಗಳ ಪಟ್ಟಿಯಲ್ಲಿ ಇರುವ ತನ್ನ ಪ್ರಶ್ನೆಯ ಸಂಖ್ಯೆಯನ್ನು ಸೂಚಿಸಿ ಆ ಪ್ರಶ್ನೆಯನ್ನು ಕೇಳತಕ್ಕದ್ದು.

(3) ಎಲ್ಲ ಪ್ರಶ್ನೆಗಳನ್ನು ಕೇಳಲು ಅವಕಾಶ ನೀಡಿದ ತರುವಾಯ, ಮೇಯರ್‌ರವರು ಸಮಯವಿದ್ದರೆ ಪ್ರಶ್ನೆಯು ಯಾವ ಸದಸ್ಯನ ಹೆಸರಿನಲ್ಲಿದೆಯೋ ಆ ಸದಸ್ಯನು ಸಭಾ–ಸದನದಲ್ಲಿ ಇರದೇ ಇದ್ದುದರಿಂದ ಯಾವ ಪ್ರಶ್ನೆಯನ್ನು ಕೇಳಿರಲಿಲ್ಲವೊ ಆ ಯಾವುದೇ ಪ್ರಶ್ನೆಯನ್ನು ಕೇಳಲು ಪುನಃ ಅವಕಾಶ ನೀಡಬಹುದು.

**32. ಪೂರಕ ಪ್ರಶ್ನೆಗಳು.–**(1) ನಿಯಮ 19ರ ಮೇರೆಗೆ ಪ್ರಶ್ನೋತ್ತರ ವೇಳೆಯಲ್ಲಿ ಯಾವುದೇ ಪ್ರಶ್ನೆಯ ಮೇಲೆ ಅಥವಾ ಯಾವುದೇ ಪ್ರಶ್ನೆಗೆ ನೀಡಿದ ಉತ್ತರದ ಮೇಲೆ ಯಾವುದೇ ಚರ್ಚೆಗೆ ಅನುಮತಿ ನೀಡತಕ್ಕದ್ದಲ್ಲ.

ಪೂರಕ ಪ್ರಶ್ನೆಗಳು ಎರಡಕ್ಕೆ ಸೀಮಿತವಾಗಿರಬೇಕು.

(2) ಯಾರೇ ಸದಸ್ಯನು ಮೇಯರ್‌ರವರು ಕರೆದಾಗ ಯಾವ ವಾಸ್ತವಾಂಶಕ್ಕೆ ಸಂಬಂಧಿಸಿದಂತೆ ಉತ್ತರ ನೀಡಲಾಗಿದೆಯೋ ಆ ಯಾವುದೇ ವಾಸ್ತವಾಂಶದ ಬಗ್ಗೆ ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳುವ ಉದ್ದೇಶಕ್ಕಾಗಿ ಪೂರಕ ಪ್ರಶ್ನೆಯನ್ನು ಕೇಳಬಹುದು:

ಪರಂತು, ಯಾವುದೇ ಪೂರಕ ಪ್ರಶ್ನೆಯು ಪ್ರಶ್ನೋತ್ತರಕ್ಕೆ ಸಂಬಂಧಿಸಿದ ನಿಯಮವನ್ನು ಉಲ್ಲಂಘಿಸುತ್ತದೆಯೆಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಅವರು ಅಂಥ ಯಾವುದೇ ಪೂರಕ ಪ್ರಶ್ನೆಯನ್ನು ಕೇಳಲು ಅನುಮತಿಸತಕ್ಕದ್ದಲ್ಲ.

**33. ಪ್ರಶ್ನೆಗಳು ನಿಯಮಗಳಿಗೆ ಅನುಗುಣವಾಗಿರುವಂತೆ ಮಾಡಲು ಅವುಗಳನ್ನು ತಿದ್ದುಪಡಿ ಮಾಡುವುದು.–** ಪ್ರಶ್ನೆಯ ಸ್ವರೂಪ ಅಥವಾ ವಸ್ತು ವಿಷಯವು ನಿಯಮಗಳಿಗೆ ವಿರುದ್ಧವಾಗಿದೆ ಎಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಅವರು ಪ್ರಶ್ನೆಗಳನ್ನು ನಿಯಮಗಳಿಗೆ ಅನುಗುಣವಾಗಿರುವಂತೆ ಸರಿಪಡಿಸಬಹುದು ಮತ್ತು ತದನುಸಾರವಾಗಿ ಆ ಬಗ್ಗೆ ಸಂಬಂಧಪಟ್ಟ ಸದಸ್ಯರಿಗೆ ತಿಳಿಸಬಹುದು.

**34. ಸದಸ್ಯರುಗಳಿಗೆ ಕಳುಹಿಸಿದ ಇತ್ಯರ್ಥದಲ್ಲಿರುವ ಪ್ರಶ್ನೆಗಳು ರದ್ದಾಗುವುದು.–** ಪ್ರಶ್ನೆಯ ಬಗ್ಗೆ ನೋಟೀಸ್‌ಗೆ ಸಂಬಂಧಿಸಿದಂತೆ ಸದಸ್ಯನಿಗೆ ಉಲ್ಲೇಖವನ್ನು ಮಾಡಿರುವಲ್ಲಿ ಮತ್ತು ಅವರಿಂದ ಯಾವುದೇ ಉತ್ತರ ಬಂದಿಲ್ಲದಿರುವಲ್ಲಿ ಅಥವಾ ಅವರಿಂದ ಬಂದ ಉತ್ತರವು ಮೇಯರ್‌ರವರು ಪರಿಶೀಲನೆ ಮಾಡಲು ಮತ್ತು ಸೂಕ್ತ ದಿನಾಂಕದಂದು ಪ್ರಶ್ನೋತ್ತರದ ಪಟ್ಟಿಯಲ್ಲಿ ಅದನ್ನು ಸೇರಿಸಿದರೆ ಆ ಪ್ರಶ್ನೆಯನ್ನು ಮಂಡಿಸುವುದಕ್ಕೆ ತುಂಬಾ ತಡವಾಗಿರುವ ಸಂದರ್ಭದಲ್ಲಿ, ಅಂಥ ನೋಟೀಸು ರದ್ದಾಗಿದೆಯೆಂದು ಭಾವಿಸತಕ್ಕದ್ದು.

**35. ಪ್ರಶ್ನೆಗಳಿಗೆ ಉತ್ತರವನ್ನು ಮುಂಚಿತವಾಗಿ ಪ್ರಕಟಿಸುವುದು.–** ಪ್ರಶ್ನೆಗಳಿಗೆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರು ಅಥವಾ ಆಯುಕ್ತರು ಸಭಾ–ಸದನದಲ್ಲಿ ನೀಡಲು ಉದ್ದೇಶಿಸಿರುವ ಉತ್ತರವನ್ನು ಸಭಾ–ಸದನದಲ್ಲಿ ವಾಸ್ತವವಾಗಿ ನೀಡುವವರೆಗೆ ಅಥವಾ ಸಭಾ–ಸದನದ ಮುಂದೆ ಮಂಡಿಸುವವರೆಗೆ ಪ್ರಕಟಣೆಗಾಗಿ ಬಿಡುಗಡೆ ಮಾಡತಕ್ಕದ್ದಲ್ಲ.

### ಗಮನ ಸೆಳೆಯುವುದು

**36. ಗಮನ ಸೆಳೆಯುವುದಕ್ಕೆ ಸಂಬಂಧಿಸಿದ ಕಾರ್ಯವಿಧಾನ.–** (1) ಯಾರೇ ಸದಸ್ಯನು ಮೇಯರ್‌ರವರ ಪೂರ್ವಾನುಮತಿ ಪಡೆದು, ನಗರ ಪಾಲಿಕೆಯ ಕಾಮಗಾರಿಯನ್ನು ಕಾರ್ಯಗತಗೊಳಿಸುವಲ್ಲಿ ತೋರಿರುವ ಯಾವುದೇ ನಿರ್ಲಕ್ಷ್ಯದ ಬಗ್ಗೆ ಅಥವಾ ನಗರ ಪಾಲಿಕೆ ಸ್ವತ್ತನ್ನು ಪೋಲು ಮಾಡುತ್ತಿರುವ ಬಗ್ಗೆ ಅಥವಾ ಯಾವುದೇ ಪ್ರದೇಶದ ಬೇಡಿಕೆಗಳ ಬಗ್ಗೆ ಅಥವಾ ಸಾರ್ವಜನಿಕ ಮಹತ್ವದ ಯಾವುದೇ ಇತರ ತುರ್ತು ವಿಷಯದ ಬಗ್ಗೆ ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರ ಅಥವಾ ಆಯುಕ್ತರ ಗಮನ ಸೆಳೆಯಬಹುದು ಮತ್ತು ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರು ಅಥವಾ ಆಯುಕ್ತರು ಒಂದು ಸಂಕ್ಷಿಪ್ತ ಹೇಳಿಕೆಯನ್ನು ಕೊಡಬಹುದು ಅಥವಾ ಸ್ವಲ್ಪ ಸಮಯದ ನಂತರ ಅಥವಾ ಇನ್ನೊಂದು ದಿನ ತಮ್ಮ ಹೇಳಿಕೆ ನೀಡಲು ಕಾಲಾವಕಾಶ ಬೇಕೆಂದು ಕೇಳಿಕೊಳ್ಳಬಹುದು:

ಪರಂತು, ಯಾರೇ ಸದಸ್ಯನು ಯಾವುದೇ ಒಂದು ಉಪವೇಶನಕ್ಕೆ ಸಂಬಂಧಿಸಿದಂತೆ ಅಂಥ ಎರಡಕ್ಕಿಂತ ಹೆಚ್ಚು ನೋಟೀಸುಗಳನ್ನು ನೀಡತಕ್ಕದ್ದಲ್ಲ.

(2) ಹೇಳಿಕೆಯನ್ನು ನೀಡಿದ ಕಾಲದಲ್ಲಿ ಅಂಥ ಹೇಳಿಕೆಯ ಮೇಲೆ ಯಾವುದೇ ಚರ್ಚೆ ಮಾಡತಕ್ಕದ್ದಲ್ಲ, ಆದರೆ ಕಲಾಪಗಳ ಪಟ್ಟಿಯಲ್ಲಿ ಆ ಬಾಬು ಯಾವ ಸದಸ್ಯನ ಹೆಸರಿನಲ್ಲಿ ಇದೆಯೋ ಅಂಥ ಪ್ರತಿಯೊಬ್ಬ ಸದಸ್ಯರು ಮೇಯರ್ ಅವರ ಅನುಮತಿ ಪಡೆದು ಪ್ರಶ್ನೆಯನ್ನು/ ಸ್ಪಷ್ಟೀಕರಣವನ್ನು ಕೇಳಬಹುದು.

**ವಿವರಣೆಗಳು.–** (i) ನೋಟೀಸಿಗೆ ಒಬ್ಬರಿಗಿಂತ ಹೆಚ್ಚು ಸದಸ್ಯರು ಸಹಿ ಮಾಡಿದ್ದರೆ, ಮೊದಲು ಸಹಿ ಮಾಡಿರುವ ಸದಸ್ಯನೇ ಆ ನೋಟೀಸನ್ನು ನೀಡಿದ್ದಾನೆಂದು ಭಾವಿಸತಕ್ಕದ್ದು.

(ii) ಬೆಳಗ್ಗೆ 10.00 ಗಂಟೆಯವರೆಗೆ ಸ್ವೀಕರಿಸಿದ ಸಭೆಯ ನೋಟೀಸುಗಳನ್ನು ಆ ದಿನದಂದು 10.00 ಗಂಟೆಯಲ್ಲಿ ಸ್ವೀಕರಿಸಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಒಂದೇ ವಿಷಯ ಕುರಿತು ನೀಡಿರುವ ಪ್ರತಿಯೊಂದು ನೋಟೀಸಿನ ಪರಸ್ಪರ ಆದ್ಯತೆಯನ್ನು ನಿರ್ಧರಿಸುವುದಕ್ಕಾಗಿ ಬ್ಯಾಲೇಟ್ ನಡೆಸಸತಕ್ಕದ್ದು. 10.00 ಗಂಟೆಯ ನಂತರ ಸ್ವೀಕರಿಸಲಾದ ನೋಟೀಸುಗಳನ್ನು ಅಧಿವೇಶನದ ಮುಂದಿನ ದಿನಕ್ಕೆ ನೀಡಲಾಗಿದೆಯೆಂದು ಭಾವಿಸತಕ್ಕದ್ದು.

(3) ಒಂದೇ ಉಪವೇಶನದಲ್ಲಿ ಅಂಥ ಎರಡಕ್ಕಿಂತ ಹೆಚ್ಚು ವಿಷಯಗಳನ್ನು ಎತ್ತತಕ್ಕದ್ದಲ್ಲ.

(4) ಒಂದೇ ದಿನಕ್ಕೆ ಒಂದಕ್ಕಿಂತ ಹೆಚ್ಚು ವಿಷಯವನ್ನು ಮಂಡಿಸಿರುವ ಸಂದರ್ಭದಲ್ಲಿ, ಯಾವ ವಿಷಯವು ಹೆಚ್ಚು ಜರೂರಾದುದು ಮತ್ತು ಮುಖ್ಯವಾದುದು ಎಂದು ಮೇಯರ್‌ರವರು ಅಭಿಪ್ರಾಯಪಡುವರೋ ಅಂಥ ವಿಷಯಕ್ಕೆ ಆದ್ಯತೆ ನೀಡತಕ್ಕದ್ದು.

(5) ಯಾವ ಉಪವೇಶನಕ್ಕಾಗಿ ನೋಟೀಸುಗಳನ್ನು ನೀಡಲಾಗಿದೆಯೋ ಆ ಉಪವೇಶನದಲ್ಲಿ ಕೈಗೆತ್ತಿಕೊಳ್ಳದಿರುವಂಥ ಆ ಎಲ್ಲಾ ನೋಟೀಸುಗಳು, ಮೇಯರ್‌ರವರು ಆ ನೋಟೀಸುಗಳ ಪೈಕಿ ಯಾವುದೇ ನೋಟೀಸನ್ನು ತರುವಾಯದ ಉಪವೇಶನಕ್ಕಾಗಿ ಅಂಗೀಕರಿಸಿದ ಹೊರತು, ಉಪವೇಶನದ ಕೊನೆಯಲ್ಲಿ ರದ್ದಾಗತಕ್ಕದ್ದು.

### ನಿರ್ಣಯಗಳು

**37. ನಿರ್ಣಯದ ವಸ್ತು ವಿಷಯ.–** ಈ ನಿಯಮಗಳ ಉಪಬಂಧಗಳಿಗೊಳಪಟ್ಟು, ಒಬ್ಬ ಸದಸ್ಯ ಅಥವಾ ಸ್ಥಾಯೀ ಸಮಿತಿಯ ಅಧ್ಯಕ್ಷರು ಅಥವಾ ಸಭಾ–ಸದನದ ನಾಯಕರು ಸಾರ್ವಜನಿಕ ಮಹತ್ವದ ಯಾವುದೇ ವಿಷಯಕ್ಕೆ ಸಂಬಂಧಿಸಿದ ನಿರ್ಣಯವನ್ನು ಮಂಡಿಸಬಹುದು.

**38. ನಿರ್ಣಯದ ನೋಟೀಸು.–** ನಿರ್ಣಯವನ್ನು ಮಂಡಿಸಲು ಇಚ್ಛಿಸುವ ಒಂದು ಸ್ಥಾಯಿ ಸಮಿತಿಯ ಅಧ್ಯಕ್ಷನಲ್ಲದ ಅಥವಾ ಸಭಾ–ಸದನದ ನಾಯಕನಲ್ಲದ ಸದಸ್ಯನು ಆ ಮಟ್ಟಿಗೆ, ಬ್ಯಾಲೆಟ್ ನಡೆಸುವ ದಿನಾಂಕಕ್ಕಿಂತ ಕೊನೆಯ ಪಕ್ಷ ಏಳು ಪೂರ್ಣ ದಿನಗಳಿಗೆ ಮುಂಚೆ ನೋಟೀಸನ್ನು ನೀಡತಕ್ಕದ್ದು ಮತ್ತು ತಾನು ಮಂಡಿಸಲು ಇಚ್ಛಿಸುವ ನಿರ್ಣಯದ ಪಾಠವನ್ನು ನೋಟೀಸಿನ ಜೊತೆಗೆ ಸಲ್ಲಿಸತಕ್ಕದ್ದು.

**39. ನಿರ್ಣಯದ ನಮೂನೆ.–** ನಿರ್ಣಯವು ಅಭಿಪ್ರಾಯ ಘೋಷಣೆಯ ಅಥವಾ ಶಿಫಾರಸ್ಸಿನ ರೂಪದಲ್ಲಿರಬಹುದು ಅಥವಾ ಸಭಾ–ಸದನವು ನೀಡಿದ ಅನುಮೋದನೆಯನ್ನು ಅಥವಾ ಅನುಮೋದನೆಯನ್ನು ದಾಖಲು ಮಾಡುವ ರೂಪದಲ್ಲಿರಬಹುದು ಅಥವಾ ನಗರ ಪಾಲಿಕೆಯ ಕಾರ್ಯನೀತಿಯ ಅಥವಾ ಸಂದೇಶವನ್ನು ತಿಳಿಸುವ ಅಥವಾ ಒಂದು ಕ್ರಮಕೈಗೊಳ್ಳಲು ಆದೇಶಿಸುವ, ಒತ್ತಾಯಪಡಿಸುವ ಅಥವಾ ವಿನಂತಿಸುವ ರೂಪದಲ್ಲಿರಬಹುದು ಅಥವಾ ನಗರ ಪಾಲಿಕೆಯು ಪರಿಶೀಲನೆ ಮಾಡುವುದಕ್ಕಾಗಿ ಒಂದು ವಿಷಯದ ಅಥವಾ ಸನ್ನಿವೇಶದ ಬಗ್ಗೆ ಗಮನ ಸೆಳೆಯುವಂಥ ರೂಪದಲ್ಲಿ ಅಥವಾ ಮೇಯರ್‌ರವರು ಸೂಕ್ತವೆಂದು ಭಾವಿಸಬಹುದಾದಂಥ ಇತರ ರೂಪದಲ್ಲಿರಬಹುದು.

**40. ನಿರ್ಣಯದ ಅಂಗೀಕಾರಾರ್ಹತೆ.–** ನಿರ್ಣಯವು ಅಂಗೀಕಾರವಾಗಬೇಕಾದರೆ ಅದು ಈ ಮುಂದಿನ ಷರತ್ತುಗಳನ್ನು ಪೂರೈಸತಕ್ಕದ್ದು, ಎಂದರೆ:–

(i) ಅದನ್ನು ಸ್ಪಷ್ಟವಾಗಿ ಮತ್ತು ನಿಖರವಾಗಿ ಹೇಳಿರತಕ್ಕದ್ದು ಮತ್ತು ಅದು ಮುಖ್ಯವಾಗಿ ಒಂದು ನಿರ್ದಿಷ್ಟ ಅಂಶವನ್ನು ಎತ್ತಿರತಕ್ಕದ್ದು;

(ii) ಅದು ಚರ್ಚೆಗಳನ್ನು, ಊಹೆಗಳನ್ನು, ವ್ಯಂಗ್ಯೋಕ್ತಿಗಳನ್ನು, ದೋಷಾರೋಪಣೆಗಳನ್ನು ಅಥವಾ ಮಾನಹಾನಿಕರ ಹೇಳಿಕೆಗಳನ್ನು ಒಳಗೊಂಡಿರತಕ್ಕದ್ದಲ್ಲ;

(iii) ಅದರಲ್ಲಿ ವ್ಯಕ್ತಿಗಳ ಪದೀಯ ಸಾಮರ್ಥ್ಯದಲ್ಲಿ ಅಥವಾ ಸಾರ್ವಜನಿಕ ಸಾಮರ್ಥ್ಯದಲ್ಲಿ ಹೊರತು, ಅವರ ನಡತೆಯ ಅಥವಾ ಚಾರಿತ್ರ್ಯದ ಬಗ್ಗೆ ಅದರಲ್ಲಿ ಉಲ್ಲೇಖಿಸಿರತಕ್ಕದ್ದಲ್ಲ;

(iv) ಅದು ನ್ಯಾಯಾಲಯದ ನ್ಯಾಯ ನಿರ್ಣಯಕ್ಕೆ ಒಳಪಟ್ಟಿರುವಂಥ ಯಾವುದೇ ವಿಷಯಕ್ಕೆ ಸಂಬಂಧಪಟ್ಟಿರತಕ್ಕದ್ದಲ್ಲ.

**41. ಮೇಯರ್‌ರವರು ಅಂಗೀಕಾರಾರ್ಹತೆಯನ್ನು ನಿರ್ಧರಿಸುವುದು.–** ಈ ನಿಯಮಗಳ ಮೇರೆಗೆ ನಿರ್ಣಯವು ಅಥವಾ ಅದರ ಯಾವುದೇ ಭಾಗವು ಅಂಗೀಕಾರಕ್ಕೆ ಅರ್ಹವಾದುದಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಮೇಯರ್‌ರವರು ನಿರ್ಧರಿಸತಕ್ಕದ್ದು ಮತ್ತು ಯಾವುದೇ ನಿರ್ಣಯವು ಅಥವಾ ಅದರ ಭಾಗವು ನಿರ್ಣಯವನ್ನು ಮಂಡಿಸುವ ಹಕ್ಕಿನ ದುರುಪಯೋಗವಾಗಿದೆಯೆಂದು ಅಥವಾ ಸಭೆಯ ಕಾರ್ಯವಿಧಾನಗಳಿಗೆ ಅಡ್ಡಿ ಮಾಡುವಂಥದ್ದಾಗಿದೆಯೆಂದು ಅಥವಾ ಪ್ರತಿಕೂಲ ಪರಿಣಾಮವನ್ನುಂಟು ಮಾಡುವಂಥದ್ದಾಗಿದೆಯೆಂದು ಅಥವಾ ಈ ನಿಯಮಗಳನ್ನು ಉಲ್ಲಂಘಿಸುವಂಥದ್ದಾಗಿದೆಯೆಂದು ಮೇಯರ್‌ರವರು ಅಭಿಪ್ರಾಯಪಟ್ಟಲ್ಲಿ, ಅಂಥ ಯಾವುದೇ ನಿರ್ಣಯವನ್ನು ಅಥವಾ ಅದರ ಭಾಗವನ್ನು ಅನುಮತಿಸದೇ ಇರಬಹುದು.

**42. ನ್ಯಾಯಾಧಿಕರಣಗಳ, ಆಯೋಗಗಳ ಮುಂದಿರುವ ವಿಷಯಗಳು.–** ಯಾವುದೇ ನ್ಯಾಯಿಕ ಅಥವಾ ಅರೆನ್ಯಾಯಿಕ ಪ್ರಕಾರ್ಯಗಳನ್ನು ನಿರ್ವಹಿಸುತ್ತಿರುವ ಯಾವುದೇ ಶಾಸನಬದ್ಧ ನ್ಯಾಯಾಧಿಕರಣದ ಅಥವಾ ಶಾಸನಬದ್ಧ ಪ್ರಾಧಿಕಾರದ ಅಥವಾ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸಲು ಅಥವಾ ತನಿಖೆ ನಡೆಸಲು ನೇಮಕಗೊಂಡ ಯಾವುದೇ ವಿಚಾರಣಾ ಆಯೋಗದ ಅಥವಾ ನ್ಯಾಯಾಲಯದ ಮುಂದೆ ಇತ್ಯರ್ಥದಲ್ಲಿ ಇರುವ ವಿಷಯದ ಮೇಲೆ ಚರ್ಚೆಗೆ ಅವಕಾಶ ನೀಡುವ ಯಾವುದೇ ನಿರ್ಣಯವನ್ನು ಮಂಡಿಸಲು ಸಾಮಾನ್ಯವಾಗಿ ಅನುಮತಿ ನೀಡತಕ್ಕದ್ದಲ್ಲ:

ಪರಂತು, ಅಂಥ ವಿಷಯವನ್ನು ಸಭಾ–ಸದನದಲ್ಲಿ ಎತ್ತಲು ಅನುಮತಿ ನೀಡುವುದರಿಂದ ಶಾಸನಬದ್ಧ ನ್ಯಾಯಾಧಿಕರಣವು, ಶಾಸನಬದ್ಧ ಪ್ರಾಧಿಕಾರವು, ಆಯೋಗವು ಅಥವಾ ನ್ಯಾಯಾಲಯವು ಅಂಥ ವಿಷಯವನ್ನು ಪರಿಶೀಲಿಸುವುದಕ್ಕೆ ಪ್ರತಿಕೂಲ ಪರಿಣಾಮ ಉಂಟಾಗುವ ಸಂಭವವಿಲ್ಲವೆಂದು ಮೇಯರ್‌ರವರಿಗೆ ಮನದಟ್ಟಾದರೆ, ಮೇಯರ್‌ರವರು ತಮ್ಮ ವಿವೇಚನಾನುಸಾರ, ಆ ವಿಷಯವನ್ನು ವಿಚಾರಣೆಯ ಕಾರ್ಯವಿಧಾನಕ್ಕೆ ಅಥವಾ ವಿಷಯಕ್ಕೆ ಅಥವಾ ಹಂತಕ್ಕೆ ಸಂಬಂಧಪಟ್ಟಿದ್ದರೆ, ಹೇಗೋ ಹಾಗೆ ಸಭಾ–ಸದನದಲ್ಲಿ ಎತ್ತುವುದಕ್ಕೆ ಅನುಮತಿಸಬಹುದು.

**43. ನಿರ್ಣಯಗಳ ಮಂಡನೆ.–** (1) ಕಾರ್ಯಕಲಾಪಗಳ ಪಟ್ಟಿಯಲ್ಲಿ ಒಂದು ನಿರ್ಣಯವು ಯಾವ ಸದಸ್ಯನ ಹೆಸರಿನಲ್ಲಿದೆಯೋ ಆ ಸದಸ್ಯನು, ಆ ನಿರ್ಣಯವನ್ನು ಹಿಂತೆಗೆದುಕೊಳ್ಳಲು ತಾನು ಇಚ್ಚಿಸಿದ ಹೊರತು, ಅವನ ಹೆಸರನ್ನು ಕರೆದಾಗ, ನಿರ್ಣಯವನ್ನು ಮಂಡಿಸತಕ್ಕದ್ದು; ಮತ್ತು ಕಾರ್ಯಕಲಾಪಗಳ ಪಟ್ಟಿಯಲ್ಲಿ ಇರುವ ಕ್ರಮದಲ್ಲಿ ವಿಧ್ಯುಕ್ತ ಪ್ರಸ್ತಾವದ ಮೂಲಕ ತನ್ನ ಭಾಷಣವನ್ನು ಪ್ರಾರಂಭಿಸತಕ್ಕದ್ದು.

(2) ಒಬ್ಬ ಸದಸ್ಯನು ಮೇಯರ್‌ರವರ ಅನುಮತಿ ಪಡೆದು, ಯಾವ ಸದಸ್ಯನ ಹೆಸರಿನಲ್ಲಿ ಕಾರ್ಯಕಲಾಪಗಳ ಪಟ್ಟಿಯಲ್ಲಿ ಅದೇ ನಿರ್ಣಯವು ಕೆಳಗೆ ಇದೆಯೋ, ಆ ಯಾರೇ ಇತರ ಸದಸ್ಯನಿಗೆ ಆ ನಿರ್ಣಯವನ್ನು ತನ್ನ ಪರವಾಗಿ ಮಂಡಿಸಲು ಅಧಿಕಾರ ಕೊಡಬಹುದು ಮತ್ತು ಹಾಗೆ ಅಧಿಕಾರ ಪಡೆದ ಸದಸ್ಯನು ತದನುಸಾರವಾಗಿ ಆ ನಿರ್ಣಯವನ್ನು ಮಂಡಿಸಬಹುದು.

(3) ಆಯುಕ್ತರು ಮೇಯರ್‌ರವರ ಅನುಮತಿ ಪಡೆದು, ಯಾವುದೇ ನಿರ್ಣಯವನ್ನು ಮಂಡಿಸಲು ಸಭಾ–ಸದನದ ನಾಯಕನಿಗೆ ಅಧಿಕಾರ ನೀಡಬಹುದು ಮತ್ತು ಹಾಗೆ ಅಧಿಕಾರ ಪಡೆದ ಸಭಾ–ಸದನದ ನಾಯಕನು ತದನುಸಾರವಾಗಿ ನಿರ್ಣಯವನ್ನು ಮಂಡಿಸಬಹುದು.

(4) ನಿರ್ಣಯವನ್ನು ಮಂಡಿಸಲು ಕರೆದಾಗ, ಸ್ಥಾಯಿ ಸಮಿತಿಯ ಅಧ್ಯಕ್ಷರಲ್ಲದ ಅಥವಾ ಸಭಾ–ಸದನದ ನಾಯಕನಲ್ಲದ ಸದಸ್ಯನು ಸಭೆಗೆ ಗೈರು ಹಾಜರಾಗಿದ್ದರೆ, ಈ ಸಂಬಂಧದಲ್ಲಿ ಅವನಿಂದ ಲಿಖಿತದಲ್ಲಿ ಅಧಿಕಾರ ಪಡೆದ ಯಾರೇ ಇತರ ಸದಸ್ಯನು ಮೇಯರ್‌ರವರ ಅನುಮತಿ ಪಡೆದು, ಗೈರು ಹಾಜರಾಗಿರುವ ಸದಸ್ಯನ ಹೆಸರಿನಲ್ಲಿ ಇರುವ ನಿರ್ಣಯವನ್ನು ಮಂಡಿಸಬಹುದು.

**44. ತಿದ್ದುಪಡಿಗಳು.–** (1) ನಿರ್ಣಯವನ್ನು ಮಂಡಿಸಿದ ತರುವಾಯ, ಯಾರೇ ಸದಸ್ಯನು ನಿರ್ಣಯಗಳಿಗೆ ಸಂಬಂಧಪಟ್ಟ ನಿಯಮಗಳಿಗೊಳಪಟ್ಟು, ನಿರ್ಣಯದ ತಿದ್ದುಪಡಿಗೆ ಪ್ರಸ್ತಾವಿಸಬಹುದು.

(2) ಯಾವ ದಿನ ನಿರ್ಣಯವನ್ನು ಮಂಡಿಸಲಾಗುತ್ತದೊ ಆ ದಿನಕ್ಕೆ ಒಂದು ದಿನ ಮೊದಲು ತಿದ್ದುಪಡಿಗೆ ಸಂಬಂಧಪಟ್ಟ ನೋಟೀಸನ್ನು ನೀಡಿರದಿದ್ದರೆ, ಯಾರೇ ಸದಸ್ಯನು ತಿದ್ದುಪಡಿಯನ್ನು ಪ್ರಸ್ತಾವಿಸುವುದಕ್ಕೆ ಆಕ್ಷೇಪಿಸಬಹುದು ಮತ್ತು ಮೇಯರ್‌ರವರು ತಿದ್ದುಪಡಿಯನ್ನು ಪ್ರಸ್ತಾವಿಸಲು ಅನುಮತಿ ಕೊಟ್ಟ ಹೊರತು, ಅಂಥ ಆಕ್ಷೇಪಣೆಯು ಚಾಲ್ತಿಯಲ್ಲಿರತಕ್ಕದ್ದು.

(3) ಕೌನ್ಸಿಲ್ ಕಾರ್ಯದರ್ಶಿಯು ಸಮಯ ಇದ್ದರೆ ಯಾವ ತಿದ್ದುಪಡಿಗಳ ಸಂಬಂಧದಲ್ಲಿ ನೋಟೀಸುಗಳು ಬಂದಿವೆಯೋ ಆ ತಿದ್ದುಪಡಿಗಳ ಪಟ್ಟಿಯನ್ನು ಕಾಲಕಾಲಕ್ಕೆ ಸದಸ್ಯರಿಗೆ ದೊರೆಯುವಂತೆ ಮಾಡತಕ್ಕದ್ದು.

**45. ಮಾತನಾಡುವುದಕ್ಕೆ ಕಾಲಮಿತಿ.–** ಮೇಯರ್‌ರವರ ಅನುಮತಿ ಪಡೆದ ಹೊರತು, ನಿರ್ಣಯದ ಮೇಲೆ ಹದಿನೈದು ನಿಮಿಷಗಳ ಅವಧಿಗಿಂತ ಹೆಚ್ಚು ಮಾತನಾಡತಕ್ಕದ್ದಲ್ಲ:

ಪರಂತು, ಸ್ಥಾಯೀ ಸಮಿತಿಯ ಅಧ್ಯಕ್ಷನು ಅಥವಾ ಸಭಾ–ಸದನದ ನಾಯಕನು ನಿರ್ಣಯವನ್ನು ಮಂಡಿಸಿ ಮೊದಲ ಸಲ ಮಾತನಾಡುವಾಗ, ನಿರ್ಣಯವನ್ನು ಮಂಡಿಸುವವರು ಮೂವತ್ತು ನಿಮಿಷಗಳವರೆಗೆ ಅಥವಾ ಮೇಯರ್‌ರವರು ಅನುಮತಿಸಬಹುದಾದಷ್ಟು ಹೆಚ್ಚು ಸಮಯದವರೆಗೆ ಮಾತನಾಡಬಹುದು:

ಮತ್ತೂ ಪರಂತು, ನಿರ್ಣಯದ ಮೇಲಿನ ಚರ್ಚೆಯು ಸಂಬಂಧಪಟ್ಟ ಸ್ಥಾಯೀ ಸಮಿತಿಯ ಅಧ್ಯಕ್ಷನ ಅಥವಾ ಸಭಾ–ಸದನದ ನಾಯಕನ ಉತ್ತರವೂ ಸೇರಿದಂತೆ ಎರಡು ಗಂಟೆಗಳಿಗಿಂತ ಹೆಚ್ಚಾಗತಕ್ಕದ್ದಲ್ಲ.

**46. ಚರ್ಚೆಯ ವ್ಯಾಪ್ತಿ.–** ನಿರ್ಣಯದ ಮೇಲಿನ ಚರ್ಚೆಯು ಕಟ್ಟುನಿಟ್ಟಾಗಿ ನಿರ್ಣಯಕ್ಕೆ ಸುಸಂಗತವಾದುದಾಗಿರತಕ್ಕದ್ದು ಮತ್ತು ನಿರ್ಣಯದ ವಿಷಯ ವ್ಯಾಪ್ತಿಯೊಳಗೆ ಇರತಕ್ಕದ್ದು.

**47. ನಿರ್ಣಯವನ್ನು ಮತ್ತು ತಿದ್ದುಪಡಿಯನ್ನು ಹಿಂತೆಗೆದುಕೊಳ್ಳುವುದು.–** (1) ಕಾರ್ಯಕಲಾಪಗಳ ಪಟ್ಟಿಯಲ್ಲಿ ನಿರ್ಣಯವು ಯಾವ ಸದಸ್ಯನ ಹೆಸರಿನಲ್ಲಿ ಇರುವುದೋ ಆ ಸದಸ್ಯನು ನಿರ್ಣಯವನ್ನು ಹಿಂತೆಗೆದುಕೊಳ್ಳಲು ಇಚ್ಚಿಸಿದರೆ, ಅವನ ಹೆಸರನ್ನು ಕರೆದಾಗ ಅವನು ನಿರ್ಣಯವನ್ನು ಹಿಂತೆಗೆದುಕೊಳ್ಳಬಹುದು ಮತ್ತು ಅವನು ಆ ಬಗ್ಗೆ ಒಂದು ಹೇಳಿಕೆಯನ್ನು ಕೊಟ್ಟರೆ ಸಾಕು.

(2) ನಿರ್ಣಯವನ್ನು ಮಂಡಿಸಿದ ಅಥವಾ ನಿರ್ಣಯಕ್ಕೆ ತಿದ್ದುಪಡಿಯನ್ನು ಸೂಚಿಸಿದ ಸದಸ್ಯನು, ಸಭಾ-ಸದನದ ಅನುಮತಿ ಪಡೆದ ಹೊರತು ಅದನ್ನು ಹಿಂತೆಗೆದುಕೊಳ್ಳತಕ್ಕದ್ದಲ್ಲ.

(3) ಯಾವ ನಿರ್ಣಯವನ್ನು ಅಂಗೀಕರಿಸಲಾಗಿದೆಯೋ ಆ ನಿರ್ಣಯವನ್ನು ಅಧೀವೇಶನದ ಅವಧಿಯಲ್ಲಿ ಚರ್ಚಿಸಲಾಗದಿದ್ದರೆ, ಅದನ್ನು ಹಿಂತೆಗೆದುಕೊಂಡಿರುವುದಾಗಿ ಭಾವಿಸತಕ್ಕದ್ದು.

**48. ನಿರ್ಣಯವನ್ನು ವಿಂಗಡಿಸುವುದು.–** ಹಲವಾರು ಅಂಶಗಳನ್ನು ಒಳಗೊಂಡ ಯಾವುದೇ ನಿರ್ಣಯವನ್ನು ಚರ್ಚಿಸುವಾಗ, ಮೇಯರ್ ಅವರು ಆ ನಿರ್ಣಯವನ್ನು ವಿಂಗಡಿಸಬಹುದು ಮತ್ತು ತಾವು ಸೂಕ್ತವೆಂದು ಭಾವಿಸುವಂತೆ ನಿರ್ಣಯದ ಪ್ರತಿಯೊಂದು ಅಂಶವನ್ನು ಅಥವಾ ಯಾವುದೇ ಅಂಶವನ್ನು ಪ್ರತ್ಯೇಕವಾಗಿ ಸದಸ್ಯರ ಮತಕ್ಕೆ ಇಡಬಹುದು.

**49. ನಿರ್ಣಯದ ಪುನರಾವರ್ತನೆ.–** (1) ನಿರ್ಣಯವನ್ನು ಮಂಡಿಸಿದಾಗ ಮತ್ತು ಅದನ್ನು ಮತಕ್ಕೆ ಹಾಕಿದ ಮೇಲೆ ಬಹುಮಟ್ಟಿಗೆ ಅದೇ ವಿಷಯವನ್ನು ಎತ್ತುವ ಯಾವುದೇ ನಿರ್ಣಯವನ್ನು ಅಥವಾ ತಿದ್ದುಪಡಿಯನ್ನು ಮೊದಲಿನ ನಿರ್ಣಯವನ್ನು ಮಂಡಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಮಂಡಿಸತಕ್ಕದ್ದಲ್ಲ.

(2) ಸಭಾ-ಸದನದ ಅನುಮತಿ ಪಡೆದು ನಿರ್ಣಯವನ್ನು ಹಿಂತೆಗೆದುಕೊಂಡಾಗ, ಬಹುಮಟ್ಟಿಗೆ ಅದೇ ವಿಷಯವನ್ನು ಎತ್ತುವ ಯಾವುದೇ ನಿರ್ಣಯವನ್ನು ಅದೇ ಅಧಿವೇಶನದಲ್ಲಿ ಮಂಡಿಸತಕ್ಕದ್ದಲ್ಲ.

**50. ನಿರ್ಣಯದ ಪ್ರತಿಯನ್ನು ಸಂಬಂಧಪಟ್ಟವರಿಗೆ ಕಳುಹಿಸಿಕೊಡುವುದು.–** ಸಭಾ-ಸದನವು ಅಂಗೀಕರಿಸಿದ ಪ್ರತಿಯೊಂದು ನಿರ್ಣಯದ ಪ್ರತಿಯನ್ನು ಸಂಬಂಧಪಟ್ಟ ಸ್ಥಾಯೀ ಸಮಿತಿಯ ಅಧ್ಯಕ್ಷರಿಗೆ ಮತ್ತು ಆಯುಕ್ತರಿಗೆ ಕಳುಹಿಸಿಕೊಡತಕ್ಕದ್ದು.

**51. ನಿರ್ಣಯದ ಮಾರ್ಪಾಡು.–** ನಗರ ಪಾಲಿಕೆಯ ಯಾವುದೇ ನಿರ್ಣಯವನ್ನು, ಅದನ್ನು ಅಂಗೀಕರಿಸಿದ ತರುವಾಯ, ಆ ಬಗ್ಗೆ ಕರೆಯಲಾದ ವಿಶೇಷ ಅಧಿವೇಶನದಲ್ಲಿ ಹೊರತು ಮತ್ತು ಒಟ್ಟು ಸದಸ್ಯರ ಮೂರನೇ ಎರಡಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಬೆಂಬಲಿಸಿದ ನಗರಪಾಲಿಕೆಯ ನಿರ್ಣಯದ ಮೂಲಕ ಹೊರತು, ಮೂರು ತಿಂಗಳುಗಳ ಒಳಗಾಗಿ ಮಾರ್ಪಾಟು ಮಾಡತಕ್ಕದ್ದಲ್ಲ ಅಥವಾ ರದ್ದುಪಡಿಸತಕ್ಕದ್ದಲ್ಲ.

**ಪ್ರಸ್ತಾವಗಳ ಮೇಲೆ ತೀರ್ಮಾನಗಳು**

**52. ಪ್ರಸ್ತಾವದ ನೋಟೀಸ್.–** ಪ್ರಸ್ತಾವದ ನೋಟೀಸನ್ನು ಮೇಯರ್ ಅವರಿಗೆ ಲಿಖಿತದಲ್ಲಿ ನೀಡತಕ್ಕದ್ದು.

**53. ಪ್ರಸ್ತಾವವನ್ನು ಮಂಡಿಸುವುದು.–** ಪ್ರಸ್ತಾವದ ನೋಟೀಸನ್ನು ನೀಡಿರುವ ಸದಸ್ಯನ ಹೆಸರನ್ನು ಕರೆದಾಗ, ಅವನು,–

(ಎ) ಪ್ರಸ್ತಾವವನ್ನು ಮಂಡಿಸುವ ಇಚ್ಛೆ ತನಗಿಲ್ಲವೆಂದು ಹೇಳತಕ್ಕದ್ದು; ಅಥವಾ

(ಬಿ) ಪ್ರಸ್ತಾವವನ್ನು ಮಂಡಿಸಲು ಇಚ್ಛಿಸಿದ ಸಂದರ್ಭದಲ್ಲಿ, ಕಾರ್ಯಕಲಾಪಗಳ ಪಟ್ಟಿಯಲ್ಲಿರುವ ವಿಧ್ಯುಕ್ತ ಪ್ರಸ್ತಾವವನ್ನು ಮಂಡಿಸಿ ತನ್ನ ಮಾತನ್ನು ಪ್ರಾರಂಭಿಸತಕ್ಕದ್ದು.

**54. ಪ್ರಸ್ತಾವವನ್ನು ಹಿಂತೆಗೆದುಕೊಳ್ಳುವುದು.–** (1) ಪ್ರಸ್ತಾವವನ್ನು ಮಂಡಿಸಿರುವ ಸದಸ್ಯನು ಸಭಾ-ಸದನದ ಅನುಮತಿ ಪಡೆದು ಅದನ್ನು ಹಿಂತೆಗೆದುಕೊಳ್ಳಬಹುದು.

(2) ಮೇಯರ್‌ರವರು ಸಭಾ-ಸದನದ ಅಭಿಪ್ರಾಯವನ್ನು ತೆಗೆದುಕೊಂಡು ಅನುಮತಿಯನ್ನು ನೀಡಬೇಕೇ ಹೊರತು, ಆ ಪ್ರಶ್ನೆಯ ಪ್ರಾಮುಖ್ಯತೆಯ ಮೇಲಲ್ಲ. ಮೇಯರ್‌ರವರು "ಪ್ರಸ್ತಾವವನ್ನು ಹಿಂತೆಗೆದುಕೊಳ್ಳಬಹುದೇ?" ಎಂದು ಕೇಳತಕ್ಕದ್ದು. ಒಂದು ವೇಳೆ ಯಾರೂ ಇದಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸದಿದ್ದರೆ, ಮೇಯರ್‌ರವರು "ಪ್ರಸ್ತಾವವನ್ನು ಅನುಮತಿ ಮೇರೆಗೆ ಹಿಂತೆಗೆದುಕೊಳ್ಳಲಾಗಿದೆ" ಎಂದು ಹೇಳತಕ್ಕದ್ದು. ಆದರೆ ಯಾರೇ ಸದಸ್ಯರಿಂದ ಅಸಮ್ಮತಿ ಸೂಚಕ ಮಾತು ಕೇಳಿ ಬಂದರೆ ಅಥವಾ ಒಬ್ಬ ಸದಸ್ಯನು ಚರ್ಚೆಯನ್ನು ಮುಂದುವರಿಸಲು ಎದ್ದು ನಿಂತರೆ ಮೇಯರ್‌ರವರು ಆ ಕೂಡಲೇ ಪ್ರಸ್ತಾವವನ್ನು ಮಂಡಿಸತಕ್ಕದ್ದು:

ಪರಂತು, ಪ್ರಸ್ತಾವಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಿದರೆ, ತಿದ್ದುಪಡಿಯು ಇತ್ಯರ್ಥವಾಗುವವರೆಗೆ ಮೂಲ ಪ್ರಸ್ತಾವವನ್ನು ಹಿಂತೆದುಕೊಳ್ಳತಕ್ಕದ್ದಲ್ಲ.

**55. ವಿಷಯವನ್ನು ಪ್ರಸ್ತಾವಿಸುವುದು.–** ಪ್ರಸ್ತಾವವನ್ನು ಮಂಡಿಸಿದ ಮೇಲೆ ಮೇಯರ್‌ರವರು ಸಭಾ-ಸದನದ ಪರಿಶೀಲನೆಗಾಗಿ ಪ್ರಸ್ತಾವವನ್ನು ಓದಿ ವಿಷಯವನ್ನು ಪ್ರಸ್ತಾವಿಸತಕ್ಕದ್ದು.

**56. ಸರದಿ ಪ್ರಕಾರ ಮಾತನಾಡುವುದು ಮತ್ತು ಉತ್ತರ ನೀಡಲು ಹಕ್ಕು.–** (1) ಪ್ರಸ್ತಾವವನ್ನು ಸಭೆಯಲ್ಲಿ ಮಂಡಿಸಿದ ಸದಸ್ಯನು ಮಾತನಾಡಿದ ಮೇಲೆ ಇತರ ಸದಸ್ಯರು, ಮೇಯರ್‌ರವರು ಅವರ ಹೆಸರನ್ನು ಕರೆದಾಗ ಮಾತ್ರ ಆ ಪ್ರಸ್ತಾವ ಕುರಿತು ಮಾತನಾಡಬಹುದು. ಯಾರೇ ಸದಸ್ಯನು ಮೇಯರ್‌ರವರು ಕರೆದಾಗ ಮಾತನಾಡದಿದ್ದರೆ, ಮೇಯರ್‌ರವರ ಅನುಮತಿಯ ಪಡೆದ ಹೊರತು ಅಥವಾ ಚರ್ಚೆಯ ತರುವಾಯದ ಯಾವುದೇ ಹಂತದಲ್ಲಿ, ಪ್ರಸ್ತಾವ ಕುರಿತು ಮಾತನಾಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

(2) ಉತ್ತರಿಸುವ ತಮ್ಮ ಹಕ್ಕನ್ನು ಚಲಾಯಿಸುವಾಗ ಹೊರತು ಅಥವಾ ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಮೇಯರ್‌ರವರ ಅನುಮತಿ ಪಡೆದ ಹೊರತು, ಯಾರೇ ಸದಸ್ಯನು ಯಾವುದೇ ಪ್ರಸ್ತಾವದ ಮೇಲೆ ಒಂದಕ್ಕಿಂತ ಹೆಚ್ಚು ಸಲ ಮಾತನಾಡತಕ್ಕದ್ದಲ್ಲ.

**57. ಭಾಷಣಗಳ ಕಾಲಾವಧಿ.–** ಮೇಯರ್‌ರವರು ನಿಯಮಗಳಲ್ಲಿ ನಿರ್ದಿಷ್ಟವಾಗಿ ಉಪಬಂಧಗಳನ್ನು ಕಲ್ಪಿಸಿಲ್ಲದ ಪ್ರಕರಣಗಳಲ್ಲಿ ಮತ್ತು ಸಭಾ-ಸದನದ ಮುಂದಿರುವ ಕಾರ್ಯಕಲಾಪಗಳ ಹಾಲಿಸ್ಥಿತಿಯನ್ನು ಮತ್ತು ಪ್ರಸ್ತಾವದ ಸ್ವರೂಪವನ್ನು ಗಮನದಲ್ಲಿರಿಸಿಕೊಂಡು, ಪ್ರಸ್ತಾವವನ್ನು ಕುರಿತು ಮಾತನಾಡುವುದಕ್ಕೆ ಕಾಲಮಿತಿಯನ್ನು ನಿಗದಿಪಡಿಸಬಹುದು.

**58. ಮೇಯರ್‌ರವರ ಭಾಷಣ.–** ಮೇಯರ್‌ರವರು, ಯಾವುದೇ ಸಮಯದಲ್ಲಿ ತಾವಾಗಿಯಾಗಲಿ ಅಥವಾ ಸದಸ್ಯನು ಯಾವುದೇ ಒಂದು ಅಂಶವನ್ನು ಎತ್ತಿದಾಗ ಅಥವಾ ಸದಸ್ಯನು ಮನವಿಯ ಮಾಡಿಕೊಂಡಾಗ, ಸಭಾ-ಸದನದ ಮುಂದೆ ಪರ್ಯಾಲೋಚನೆಯಲ್ಲಿರುವ ವಿಷಯದ ಮೇಲೆ ಸದಸ್ಯರು ಚರ್ಚೆ ಮಾಡುತ್ತಿರುವಾಗ ಅವರಿಗೆ ನೆರವು ನೀಡುವ ಉದ್ದೇಶದಿಂದ ಸಭಾ-ಸದನವನ್ನು ಉದ್ದೇಶಿಸಿ ಮಾತನಾಡಬಹುದು ಮತ್ತು ಹಾಗೆ ಅವರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಒಂದು ತೀರ್ಮಾನ ಎಂದು ಭಾವಿಸತಕ್ಕದ್ದಲ್ಲ.

59. **ಮೇಯರ್‌ರವರು ಮಾತನಾಡಲು ಎದ್ದು ನಿಂತಾಗ ಅನುಸರಿಸಬೇಕಾದ ಕಾರ್ಯವಿಧಾನ.**– (1) ಮೇಯರ್‌ರವರು ಮಾತನಾಡಲು ಎದ್ದು ನಿಂತಾಗಲೆಲ್ಲಾ, ಅವರ ಮಾತುಗಳನ್ನು ಮೌನವಾಗಿದ್ದು ಆಲಿಸತಕ್ಕದ್ದು ಮತ್ತು ಆ ಸಮಯದಲ್ಲಿ ಮಾತನಾಡುತ್ತಿದ್ದ ಅಥವಾ ಆರಂಭಿಸಿದ್ದ ಯಾರೇ ಸದಸ್ಯನು ಕೂಡಲೇ ತನ್ನ ಸ್ಥಾನದಲ್ಲಿ ಕುಳಿತುಕೊಳ್ಳತಕ್ಕದ್ದು.

(2) ಮೇಯರ್‌ರವರು ಸಭಾ–ಸದನವನ್ನುದ್ದೇಶಿಸಿ ಮಾತನಾಡುತ್ತಿರುವಾಗ ಯಾರೇ ಸದಸ್ಯನು ತನ್ನ ಆಸನದಿಂದ ಎದ್ದು ಹೋಗತಕ್ಕದ್ದಲ್ಲ.

60. **ಮೇಯರ್‌ರವರ ಉತ್ತರವು ಚರ್ಚೆಯನ್ನು ಮುಕ್ತಾಯಗೊಳಿಸುವುದು.**– ಮೂಲ ಪ್ರಸ್ತಾವದ ಬಗ್ಗೆ ಮೇಯರ್‌ರವರ ಉತ್ತರದಿಂದ ಎಲ್ಲ ಸಂದರ್ಭಗಳಲ್ಲಿಯೂ ಚರ್ಚೆಯು ಮುಕ್ತಾಯಗೊಳ್ಳತಕ್ಕದ್ದು.

61. **ಮುಕ್ತಾಯ.**– (1) ಪ್ರಸ್ತಾವವನ್ನು ಮಂಡಿಸಿದ ತರುವಾಯ, ಯಾವುದೇ ಸಮಯದಲ್ಲಿ ಯಾರೇ ಸದಸ್ಯನು "ಈಗ ಪ್ರಶ್ನೆಯನ್ನು ಸಭೆಯ ಅಭಿಮತಕ್ಕೆ ಹಾಕಬೇಕು" ಎಂದು ಪ್ರಸ್ತಾವವನ್ನು ಮಂಡಿಸಬಹುದು ಮತ್ತು ಈ ಪ್ರಸ್ತಾವದಿಂದಾಗಿ ಈ ನಿಯಮಗಳ ದುರುಪಯೋಗವಾಗುತ್ತದೆಂದು ಅಥವಾ ಯುಕ್ತ ಚರ್ಚೆಗೆ ಇರುವ ಹಕ್ಕನ್ನು ಇದು ಉಲ್ಲಂಘಿಸುತ್ತದೆಂದು ಮೇಯರ್‌ರವರಿಗೆ ಕಂಡುಬಂದ ಹೊರತು, ಮೇಯರ್‌ರವರು "ಈಗ ಪ್ರಶ್ನೆಯನ್ನು ಸಭೆಯ ಅಭಿಮತಕ್ಕೆ ಹಾಕಬೇಕು" ಎಂದು ಪ್ರಸ್ತಾವವನ್ನು ಮಂಡಿಸತಕ್ಕದ್ದು.

(2) "ಈಗ ಪ್ರಶ್ನೆಯನ್ನು ಸಭೆಯ ಅಭಿಮತಕ್ಕೆ ಹಾಕಬೇಕು" ಎಂಬ ಪ್ರಸ್ತಾವಕ್ಕೆ ಸಭೆಯ ಅನುಮೋದನೆ ದೊರೆತಲ್ಲಿ, ಅದಕ್ಕೆ ಆನುಷಂಗಿಕವಾದ ಪ್ರಶ್ನೆಯನ್ನು ಅಥವಾ ಪ್ರಶ್ನೆಗಳನ್ನು ಹೆಚ್ಚಿನ ಚರ್ಚೆ ಇಲ್ಲದೆ ಕೂಡಲೇ ಸಭೆಯ ಅಭಿಮತಕ್ಕೆ ಹಾಕತಕ್ಕದ್ದು:

ಪರಂತು, ಮೇಯರ್‌ರವರು ಸದಸ್ಯನಿಗೆ, ಈ ನಿಯಮಗಳ ಮೇರೆಗೆ ಅವನಿಗೆ ಉತ್ತರ ನೀಡಲು ಇರುವ ಯಾವುದೇ ಹಕ್ಕನ್ನು ಚಲಾಯಿಸಲು ಅವಕಾಶ ನೀಡಬಹುದು.

62. **ಸಭಾ–ಸದನದ ತೀರ್ಮಾನವನ್ನು ಪಡೆಯಲು ಅನುಸರಿಸಬೇಕಾದ ಕಾರ್ಯವಿಧಾನ.**– ಸಭಾ–ಸದನದ ತೀರ್ಮಾನವನ್ನು ಅಗತ್ಯಪಡಿಸುವ ವಿಷಯವನ್ನು ಸದಸ್ಯನು ಮಂಡಿಸಿದ ಪ್ರಸ್ತಾವದ ಮೇಲೆ ಮೇಯರ್‌ರವರು ಪ್ರಶ್ನೆಯನ್ನು ಸಭೆಯ ಅಭಿಮತಕ್ಕೆ ಹಾಕುವ ಮೂಲಕ ನಿರ್ಧರಿಸತಕ್ಕದ್ದು.

63. **ಪ್ರಸ್ತಾವ ಮತ್ತು ಪ್ರಶ್ನೆಗಳನ್ನು ಅಭಿಮತಕ್ಕಾಗಿ ಹಾಕುವುದು.**– ಒಂದು ಪ್ರಸ್ತಾವವನ್ನು ಮಂಡಿಸಿದಾಗ, ಮೇಯರ್‌ರವರು, ಪ್ರಶ್ನೆಯನ್ನು ಪರ್ಯಾಲೋಚನೆಗಾಗಿ ಮತ್ತು ಸಭಾ–ಸದನದ ತೀರ್ಮಾನಕ್ಕಾಗಿ ಪ್ರಸ್ತಾವಿಸತಕ್ಕದ್ದು. ಆ ಪ್ರಸ್ತಾವವು ಎರಡು ಅಥವಾ ಹೆಚ್ಚು ಪ್ರತ್ಯೇಕ ವಿಚಾರಗಳನ್ನು ಒಳಗೊಂಡಿದ್ದರೆ, ಆ ವಿಚಾರಗಳನ್ನು ಮೇಯರ್‌ರವರು ಪ್ರತ್ಯೇಕ ಪ್ರಶ್ನೆಗಳಾಗಿ ಪ್ರಸ್ತಾವಿಸಬಹುದು.

64. **ಧ್ವನಿಮತವನ್ನು ಪಡೆದುಕೊಂಡ ಮೇಲೆ ಸದಸ್ಯರು ಆ ವಿಷಯದ ಮೇಲೆ ಮಾತನಾಡಕೂಡದು.**– ಮೇಯರ್‌ರವರು ಪ್ರಶ್ನೆಯ ಮೇಲೆ ಸದಸ್ಯರಿಂದ "ಹೌದು" ಅಥವಾ "ಇಲ್ಲ" ಎಂಬ ಎರಡೂ ಧ್ವನಿಮತ ಪಡೆದುಕೊಂಡ ತರುವಾಯ, ಯಾರೇ ಸದಸ್ಯರು ಆ ವಿಷಯದ ಮೇಲೆ ಮಾತನಾಡತಕ್ಕದ್ದಲ್ಲ.

65. **ಮತಕ್ಕೆ ಹಾಕುವುದು.**– (1) ಚರ್ಚೆಯು ಮುಕ್ತಾಯವಾದ ನಂತರ, ಮೇಯರ್‌ರವರು ಚರ್ಚೆಯ ವಿಷಯವನ್ನು ಸಭೆಯ ಮುಂದೆ ಮಂಡಿಸತಕ್ಕದ್ದು ಮತ್ತು ಪ್ರಸ್ತಾವದ ಪರವಾಗಿ ಇರುವವರನ್ನು "ಹೌದು" ಎಂದು ಹೇಳುವಂತೆ ಮತ್ತು ಪ್ರಸ್ತಾವಕ್ಕೆ ವಿರುದ್ಧವಾಗಿರುವವರನ್ನು " ಇಲ್ಲ" ಎಂದು ಹೇಳುವಂತೆ ತಿಳಿಸತಕ್ಕದ್ದು.

(2) ಮೇಯರ್‌ರವರು, ಆಗ, ತೀರ್ಮಾನವು "ಹೌದು" ಎಂದು ಹೇಳುವವರಿಗೆ (ಅಥವಾ ಸಂದರ್ಭಾನುಸಾರ "ಇಲ್ಲ" ಎಂದು ಹೇಳುವವರಿಗೆ) "ಪ್ರಸ್ತಾವಕ್ಕೆ ಒಪ್ಪಿಗೆ ಕೊಟ್ಟಿದ್ದಾರೆ" ಎಂದು ತಿಳಿಸತಕ್ಕದ್ದು. ಒಂದು ವಿಷಯದ ತೀರ್ಮಾನಕ್ಕೆ ಸಂಬಂಧಿಸಿದಂತೆ ಮೇಯರ್‌ರವರ ಅಭಿಪ್ರಾಯವನ್ನು ಪ್ರಶ್ನಿಸದಿದ್ದರೆ, ಮೇಯರ್‌ರವರು "ಹೌದು" (ಅಥವಾ ಸಂದರ್ಭಾನುಸಾರ "ಇಲ್ಲ") ಎಂದು ಎರಡು ಸಲ ಹೇಳತಕ್ಕದ್ದು ಮತ್ತು ಸಭಾ–ಸದನದ ಮುಂದಿರುವ ವಿಷಯವನ್ನು ತದನುಸಾರವಾಗಿ ತೀರ್ಮಾನಿಸತಕ್ಕದ್ದು.

(3) ಒಂದು ವಿಷಯದ ತೀರ್ಮಾನಕ್ಕೆ ಸಂಬಂಧಿಸಿದಂತೆ ಮೇಯರ್‌ರವರ ಅಭಿಪ್ರಾಯವನ್ನು ಪ್ರಶ್ನಿಸಿದರೆ, ಅವರು ವಿಷಯವನ್ನು ಮತಕ್ಕೆ ಹಾಕುವುದರ ಸೂಚಕ ಎರಡು ನಿಮಿಷಗಳವರೆಗೆ ಗಂಟೆಯನ್ನು ಬಾರಿಸುವಂತೆ ವ್ಯವಸ್ಥೆ ಮಾಡತಕ್ಕದ್ದು.

(4) ಎರಡು ನಿಮಿಷ ಆದ ಮೇಲೆ, ಅವರು ಬಾಗಿಲನ್ನು ಮುಚ್ಚಿಸತಕ್ಕದ್ದು ಮತ್ತು ವಿಷಯವನ್ನು ಎರಡನೆಯ ಸಲ ಮತಕ್ಕೆ ಹಾಕತಕ್ಕದ್ದು ಮತ್ತು ಪ್ರಸ್ತಾವದ ಪರವಾಗಿರುವವರು "ಹೌದು" ಎಂದು ಹೇಳುವಂತೆ ಮತ್ತು ಪ್ರಸ್ತಾವಕ್ಕೆ ವಿರುದ್ಧವಾಗಿರುವವರು "ಇಲ್ಲ" ಎಂದು ಹೇಳುವಂತೆ ಹೇಳತಕ್ಕದ್ದು.

(5) ವಿಷಯದ ಬಗೆಗಿನ ತೀರ್ಮಾನಕ್ಕೆ ಸಂಬಂಧಿಸಿದಂತೆ, ಮೇಯರ್‌ರವರ ಅಭಿಪ್ರಾಯವನ್ನು ಪುನಃ ಪ್ರಶ್ನಿಸಿದರೆ, ಅವರು "ಹೌದು" ಎಂದು ಹೇಳುವ ಸದಸ್ಯರನ್ನು ಮತ್ತು "ಇಲ್ಲ" ಎಂದು ಹೇಳುವ ಸದಸ್ಯರನ್ನು ಅನುಕ್ರಮವಾಗಿ ತಮ್ಮ ತಮ್ಮ ಸ್ಥಳದಲ್ಲಿ ಎದ್ದು ನಿಲ್ಲುವಂತೆ ಹೇಳತಕ್ಕದ್ದು ಮತ್ತು ಎಣಿಕೆ ಮಾಡಿದ ನಂತರ ಸಭಾ–ಸದನದ ತೀರ್ಮಾನವನ್ನು ಪ್ರಕಟಿಸತಕ್ಕದ್ದು. ಅಂಥ ಸಂದರ್ಭದಲ್ಲಿ ಮತ ನೀಡಿದ ಸದಸ್ಯರ ಹೆಸರುಗಳನ್ನು ದಾಖಲು ಮಾಡತಕ್ಕದ್ದಲ್ಲ.

(6) ಆಯುಕ್ತರು ಮತ್ತು ಅಧಿನಿಯಮದ 7ನೇ ಪ್ರಕರಣದ (1)ನೇ ಉಪ–ಪ್ರಕರಣದ (ಬಿ) ಖಂಡದಲ್ಲಿ ತಿಳಿಸಿದ ವ್ಯಕ್ತಿಗಳು ಮತ ನೀಡುವ ಹಕ್ಕನ್ನು ಹೊಂದಿರತಕ್ಕದ್ದಲ್ಲ.

(7) ಎಲ್ಲ ವಿಷಯಗಳನ್ನು ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಬಹುಮತದ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಮತಗಳು ಸಮಾನವಾಗಿ ಬಂದ ಪ್ರತಿಯೊಂದು ಸಂದರ್ಭದಲ್ಲಿ, ಮೇಯರ್‌ರವರು, ಉಪ–ಮೇಯರ್‌ರವರು ಅಥವಾ ಅಧ್ಯಕ್ಷತೆ ವಹಿಸಿರುವವರು ಎರಡನೇ ಅಥವಾ ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು ಮತ್ತು ಅದನ್ನು ಚಲಾಯಿಸತಕ್ಕದ್ದು.

66. **ಸದಸ್ಯನ ಮತದಾನಕ್ಕೆ ಆಕ್ಷೇಪಣೆ.**– ಸಭಾ–ಸದನದಲ್ಲಿ ವಿಷಯವನ್ನು ಮತಕ್ಕೆ ಹಾಕಿದಾಗ ತೀರ್ಮಾನಿಸಬೇಕಾದ ವಿಷಯದಲ್ಲಿ ಸದಸ್ಯರೊಬ್ಬರು ಚಲಾಯಿಸಿದ ಮತವನ್ನು ವೈಯಕ್ತಿಕ, ಹಣಕಾಸು ಅಥವಾ ನೇರ ಹಿತಾಸಕ್ತಿಯನ್ನು ಹೊಂದಿರುವ ಕಾರಣದ ಮೇಲೆ ಪ್ರಶ್ನಿಸಿದರೆ ಮೇಯರ್‌ರವರು, ಪ್ರಶ್ನಿಸಿದ ಸದಸ್ಯನನ್ನು ಆತನ ಆಕ್ಷೇಪಣೆಗೆ ಇರುವ ಕಾರಣಗಳನ್ನು ನಿಖರವಾಗಿ ತಿಳಿಸುವಂತೆ ಕರೆ ಕೊಡಬಹುದು ಮತ್ತು ಯಾವ ಸದಸ್ಯನ ಮತವನ್ನು ಪ್ರಶ್ನಿಸಲಾಗಿದೆಯೋ ಆ ಸದಸ್ಯನನ್ನು ತನ್ನ ವಾದವನ್ನು ಮಂಡಿಸುವಂತೆ ಕೇಳಬಹುದು ಮತ್ತು ಆ ಸದಸ್ಯನ ಮತವನ್ನು ತಿರಸ್ಕರಿಸಬೇಕೇ ಅಥವಾ ಬೇಡವೇ ಎಂಬ ಬಗ್ಗೆ ತೀರ್ಮಾನಿಸತಕ್ಕದ್ದು ಮತ್ತು ಆ ಕುರಿತು ಮೇಯರ್‌ರವರ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು:

ಪರಂತು, ಸದಸ್ಯನ ಅಥವಾ ಸದಸ್ಯರ ಮತವನ್ನು, ಮೇಯರ್‌ರವರು ತೀರ್ಮಾನ ತೆಗೆದುಕೊಂಡ ತರುವಾಯ ಮತ್ತು ಫಲಿತಾಂಶವನ್ನು ಪ್ರಕಟಿಸುವ ಮೊದಲು ಪ್ರಶ್ನಿಸತಕ್ಕದ್ದು.

**ವಿವರಣೆ.–** ಈ ನಿಯಮದ ಉದ್ದೇಶಕ್ಕಾಗಿ, ಸದಸ್ಯರ ಹಿತಾಸಕ್ತಿಯು ನೇರವಾದುದು, ವೈಯಕ್ತಿಕವಾದುದು ಅಥವಾ ಹಣಕಾಸಿಗೆ ಸಂಬಂಧಿಸಿದುದು ಮತ್ತು ಯಾರ ಮತವನ್ನು ಪ್ರಶ್ನಿಸಲಾಗಿದೆಯೋ ಆ ವ್ಯಕ್ತಿಗೆ ಪ್ರತ್ಯೇಕವಾಗಿ ಸೇರಿದ್ದಾಗಿರತಕ್ಕದ್ದೇ ಹೊರತು, ಪ್ರಮಾಣಾನುಗುಣ ನೀತಿಯ ಅನ್ವಯ ಸಾರ್ವಜನಿಕರ ಅಥವಾ ಅವರ ಯಾವುದೇ ವರ್ಗದ ಅಥವಾ ಭಾಗದ ಹಿತಾಸಕ್ತಿಯಂತೆಯೇ ಇರಬಾರದು.

**ಮೇಯರ್‌ರವರ ಭಾಷಣ**

67. **ಮೇಯರ್‌ರವರ ಭಾಷಣ.–** ಮೇಯರ್‌ರವರ ಆಯ್ಕೆಯ ತರುವಾಯದ ಅಥವಾ ಪ್ರತಿವರ್ಷದ ಮೊದಲ ಅಧಿವೇಶನದಲ್ಲಿ ಮೇಯರ್‌ರವರು ಸದನವನ್ನುದ್ದೇಶಿಸಿ ಭಾಷಣ ಮಾಡತಕ್ಕದ್ದು ಮತ್ತು ನಗರ ಪಾಲಿಕೆಯ ದಕ್ಷ ಮತ್ತು ಪರಿಣಾಮಕಾರಿ ಕಾರ್ಯನಿರ್ವಹಣೆಗಾಗಿ ಮತ್ತು ಸಾರ್ವಜನಿಕ ಆರೋಗ್ಯದ ರಕ್ಷಣೆ, ಸುರಕ್ಷತೆ ಮತ್ತು ಅನುಕೂಲಕ್ಕಾಗಿ ಉದ್ದೇಶಿಸಿರುವ ಕ್ರಿಯಾ ಯೋಜನೆಯ ಬಗ್ಗೆ ತಿಳಿಸತಕ್ಕದ್ದು.

68. **ಚರ್ಚೆಯ ವ್ಯಾಪ್ತಿ.–** ಒಬ್ಬ ಸದಸ್ಯನು ಮಂಡಿಸಿ, ಇನ್ನೊಬ್ಬ ಸದಸ್ಯನು ಅನುಮೋದಿಸಿದ ವಂದನಾ ನಿರ್ಣಯದ ಮೇಲೆ, ಅಂಥ ಭಾಷಣದಲ್ಲಿ ಪ್ರಸ್ತಾಪಿಸಿದ ವಿಷಯದ ಬಗ್ಗೆ ಚರ್ಚಿಸುವ ಸ್ವಾತಂತ್ರ್ಯವನ್ನು ಸಭಾ–ಸದನವು ಹೊಂದಿರತಕ್ಕದ್ದು.

69. **ಮಾತನಾಡುವುದಕ್ಕೆ ಕಾಲಮಿತಿ.–** ಸಭಾ–ಸದನದ ಅಭಿಮತ ತಿಳಿದುಕೊಂಡ ತರುವಾಯ, ಮೇಯರ್‌ರವರು ತಮಗೆ ಸೂಕ್ತವೆಂದು ಭಾವಿಸಿದರೆ, ಅವರು ಮಾತನಾಡುವುದಕ್ಕೆ ಕಾಲಮಿತಿಯನ್ನು ಗೊತ್ತುಪಡಿಸಬಹುದು.

**70. ಆಡಳಿತ ವರದಿಯ ಮಂಡನೆ.–** (1) ಮೇಯರ್‌ರವರು ನಿರ್ದೇಶಿಸಬಹುದಾದಂಥ ದಿನದಂದು ಉಪ–ಮೇಯರ್‌ರವರು ಹಿಂದಿನ ವರ್ಷದ ವಾರ್ಷಿಕ ಆಡಳಿತ ವರದಿಯನ್ನು ಸಭಾ–ಸದನದಲ್ಲಿ ಮಂಡಿಸತಕ್ಕದ್ದು.

(2) ಸಭಾ–ಸದನವು, ಆಡಳಿತ ವರದಿಯನ್ನು ಸಮಗ್ರವಾಗಿ ಅಥವಾ ಅದರಲ್ಲಿ ಒಳಗೊಂಡಿರುವ ದಕ್ಷತೆಯ ಮತ್ತು ಪರಿಣಾಮಕಾರಿತ್ವದ ತತ್ವಗಳ ಯಾವುದೇ ವಿಷಯವನ್ನು ಕುರಿತು ಚರ್ಚೆ ನಡೆಸತಕ್ಕದ್ದು.

(3) ಮೇಯರ್‌ರವರು ಸೂಕ್ತವೆಂದು ಭಾವಿಸಿದರೆ, ಆಡಳಿತ ವರದಿ ಮೇಲೆ ಮಾತನಾಡುವುದಕ್ಕೆ ಅವರು ಕಾಲಮಿತಿಯನ್ನು ಗೊತ್ತುಪಡಿಸಬಹುದು.

71. **ಬಜೆಟ್ ಮೇಲೆ ಸಾಮಾನ್ಯ ಚರ್ಚೆ.–** (1) ಬಜೆಟ್‌ನ್ನು ಸಭಾ–ಸದನದಲ್ಲಿ ಮಂಡಿಸಿದ ದಿನದ ತರುವಾಯ ಮೇಯರ್‌ರವರು ಗೊತ್ತುಪಡಿಸುವ ದಿನದಂದು ಅಥವಾ ದಿನಗಳಂದು ಮತ್ತು ಈ ಉದ್ದೇಶಕ್ಕಾಗಿ ಮೇಯರ್‌ರವರು ಗೊತ್ತುಪಡಿಸಬಹುದಾದಷ್ಟು ಸಮಯ, ಸಭಾ–ಸದನವು ಬಜೆಟ್ ಕುರಿತು ಸಮಗ್ರವಾಗಿ ಅಥವಾ ಅದರಲ್ಲಿ ಅಡಕವಾಗಿರುವ ತತ್ವದ ಯಾವುದೇ ವಿಷಯ ಕುರಿತು ಚರ್ಚೆ ನಡೆಸತಕ್ಕದ್ದು. ಆದರೆ, ಯಾವ ಪ್ರಸ್ತಾವವನ್ನೂ ಮಂಡಿಸತಕ್ಕದ್ದಲ್ಲ ಅಥವಾ ಬಜೆಟ್‌ನ್ನು ಸಭಾ–ಸದನದ ಮತಕ್ಕೆ ಸಲ್ಲಿಸತಕ್ಕದ್ದಲ್ಲ.

(2) ತೆರಿಗೆ ಮತ್ತು ಹಣಕಾಸು ಸ್ಥಾಯಿ ಸಮಿತಿಯ ಅಧ್ಯಕ್ಷರಿಗೆ ಚರ್ಚೆಯ ಕೊನೆಯಲ್ಲಿ ಉತ್ತರಿಸುವ ಸಾಮಾನ್ಯ ಹಕ್ಕು ಇರತಕ್ಕದ್ದು.

(3) ಮೇಯರ್‌ರವರು ಸೂಕ್ತವೆಂದು ಭಾವಿಸಿದರೆ, ಬಜೆಟ್ ಮೇಲೆ ಮಾತನಾಡುವುದಕ್ಕೆ ಅವರು ಕಾಲಮಿತಿಯನ್ನು ಗೊತ್ತುಪಡಿಸಬಹುದು.

72. **ಕಾರ್ಯನಿರ್ವಹಣೆ ಬಜೆಟನ ಮಂಡನೆ.–** (1) ಕಾರ್ಯನಿರ್ವಹಣಾ ಬಜೆಟ್‌ನ್ನು, ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿಯ ಅಧ್ಯಕ್ಷರು ಹಾಗೂ ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಅಧ್ಯಕ್ಷರು ಸಭಾ–ಸದನದ ಮುಂದೆ ಮಂಡಿಸತಕ್ಕದ್ದು.

(2) ಮೇಯರ್‌ರವರು ಗೊತ್ತುಪಡಿಸಿದ ದಿನದಂದು ಮತ್ತು ಮೇಯರ್‌ರವರು ಈ ಉದ್ದೇಶಕ್ಕಾಗಿ ಗೊತ್ತುಪಡಿಸಬಹುದಾದಷ್ಟು ಕಾಲದವರೆಗೆ, ಸಭಾ–ಸದನವು, ಕಾರ್ಯನಿರ್ವಹಣಾ ಬಜೆಟ್‌ಗಳ ಬಗ್ಗೆ ಅಥವಾ ಅವುಗಳಲ್ಲಿ ಒಳಗೊಂಡಿರುವ ಕುಂದುಕೊರತೆಗಳ ಯಾವುದೇ ವಿಷಯದ ಬಗ್ಗೆ ಚರ್ಚಿಸಲು ಸ್ವಾತಂತ್ರ್ಯ ಹೊಂದಿರತಕ್ಕದ್ದು.

(3) ಸಂಬಂಧಪಟ್ಟ ಸ್ಥಾಯಿ ಸಮಿತಿಯ ಅಧ್ಯಕ್ಷರು, ಚರ್ಚೆಯ ಕೊನೆಯಲ್ಲಿ ಉತ್ತರಿಸುವ ಸಾಮಾನ್ಯ ಹಕ್ಕನ್ನು ಹೊಂದಿರತಕ್ಕದ್ದು.

73. **ಲೆಕ್ಕಪತ್ರಗಳ ಮಂಡನೆ.–** ಪ್ರತಿ ಏಪ್ರಿಲ್, ಜೂನ್, ಆಗಸ್ಟ್, ಅಕ್ಟೋಬರ್, ಡಿಸೆಂಬರ್ ಮತ್ತು ಫೆಬ್ರವರಿ ತಿಂಗಳುಗಳಲ್ಲಿ, ಹಿಂದಿನ ವರ್ಷವು ಮುಕ್ತಾಯವಾದುದಾಗಿನಿಂದ, ಯಾವ ತಿಂಗಳಲ್ಲಿ ಅಧಿವೇಶನಗಳನ್ನು ನಡೆಸಲಾಯಿತೋ ಆ ತಿಂಗಳಿಗೆ, ಅದರ ಮುಂಚಿನ ತಿಂಗಳ ಕೊನೆಯವರೆಗೆ ನಗರ ಪಾಲಿಕೆ ನಿಧಿಯ ಲೆಕ್ಕಕ್ಕೆ ಆದ ಜಮೆಗಳ ಮತ್ತು ಆ ನಿಧಿಯ ಲೆಕ್ಕದಿಂದ ಮಾಡಿದ ಬಟವಾಡೆಗಳ ತಃಖ್ತೆಯನ್ನು ಲೆಕ್ಕಪತ್ರ ಸ್ಥಾಯೀ ಸಮಿತಿಯ ಅಧ್ಯಕ್ಷರು ಸಭಾ–ಸದನದ ಮುಂದೆ ಮಂಡಿಸತಕ್ಕದ್ದು.

**ಕೋರಂ**

**ಗೈರುಹಾಜರಿಗೆ ಅನುಮತಿ ಮತ್ತು ಸ್ಥಾನಗಳು ಖಾಲಿಯಾಗುವುದು**

**74. ಕೋರಂ.–** (1) ಒಟ್ಟು ಸದಸ್ಯರ ಸಂಖ್ಯೆಯ ಕನಿಷ್ಠ ಮೂರನೇ ಒಂದರಷ್ಟು ಸದಸ್ಯರು ಹಾಜರಿದ್ದ ಹೊರತು ಯಾವುದೇ ಉಪವೇಶನದಲ್ಲಿ ಯಾವುದೇ ಕಾರ್ಯಕಲಾಪವನ್ನು ನಡೆಸತಕ್ಕದ್ದಲ್ಲ.

(2) ಉಪವೇಶನದ ಯಾವುದೇ ಸಮಯದಲ್ಲಿ ಒಬ್ಬ ಸದಸ್ಯರು ಎಣಿಕೆ ಮಾಡುವಂತೆ ಕೇಳಿದಾಗ, ಮೇಯರ್‌ರವರು ಒಂದು ನಿಮಿಷದವರೆಗೆ ಕೋರಂ ಗಂಟೆಯನ್ನು ಬಾರಿಸಲು ನಿರ್ದೇಶಿಸಿದ ತರುವಾಯ, ಎಣಿಕೆ ಮಾಡಿದಾಗ ಅಗತ್ಯವಾದಷ್ಟು ಕೋರಂ ಇಲ್ಲವೆಂದು ಅವರಿಗೆ ಕಂಡು ಬಂದರೆ, ಅವರು ಕೋರಂ ಆಗುವವರೆಗೆ ಉಪವೇಶನವನ್ನು ಸ್ಥಗಿತಗೊಳಿಸಬಹುದು ಅಥವಾ ಮುಂದೆ ಸ್ವಲ್ಪ ಕಾಲದವರೆಗೆ ಅಥವಾ ಆ ದಿನದ ಮಟ್ಟಿಗೆ ಉಪವೇಶನವನ್ನು ಮುಂದೂಡಬಹುದು.

75. **ಸ್ಥಾನಗಳು ಖಾಲಿಯಾದಾಗ ಮಾಹಿತಿ.–** ಯಾರೇ ಸದಸ್ಯನು ನಗರ ಪಾಲಿಕೆಯ ಅನುಮತಿ ಪಡೆಯದೆ ಸತತ ಮೂರು ತಿಂಗಳುಗಳ ಕಾಲ ನಗರ ಪಾಲಿಕೆಯ ಸಭೆಗಳಿಗೆ ಸ್ವತಃ ಗೈರುಹಾಜರಾದರೆ, ಕೌನ್ಸಿಲ್ ಕಾರ್ಯದರ್ಶಿಯು ಸಭಾ–ಸದನದ ಮುಂದೆ ಆ ಮಾಹಿತಿಯನ್ನು ಇಡುವಂತೆ ಮಾಡತಕ್ಕದ್ದು ಮತ್ತು ಈ ಅಧಿನಿಯಮದ 26ನೇ ಪ್ರಕರಣದ (2)ನೇ ಉಪ–ಪ್ರಕರಣದ ಮೇರೆಗೆ ಪ್ರಾದೇಶಿಕ ಆಯುಕ್ತರಿಗೆ ವರದಿಯನ್ನು ಸಲ್ಲಿಸತಕ್ಕದ್ದು.

**76. ಅನರ್ಹತೆಗೊಂಡಾಗ ಸ್ಥಾನಗಳು ಖಾಲಿಯಾಗುವುದು.–** ಕೌನ್ಸಿಲ್ ಕಾರ್ಯದರ್ಶಿಯು ಸ್ಥಾನಗಳು ಖಾಲಿಯಾದ ಬಗ್ಗೆ ಮಾಹಿತಿಯನ್ನು ಮತ್ತು ಪ್ರಾದೇಶಿಕ ಆಯುಕ್ತರ ತೀರ್ಮಾನವನ್ನು ಅಥವಾ ಅಧಿನಿಯಮದ 26ನೇ ಪ್ರಕರಣದ (2) ಮತ್ತು (3)ನೇ ಉಪ-ಪ್ರಕರಣಗಳ ಮೇರೆಗೆ ಸರ್ಕಾರದ ತೀರ್ಮಾನವನ್ನು ಸದನದ ಮುಂದೆ ಇಡುವಂತೆ ಮಾಡತಕ್ಕದ್ದು.

**77. ಆಸ್ತಿಯ ಘೋಷಣೆಯನ್ನು ಸಲ್ಲಿಸಲು ತಪ್ಪಿದಾಗ ಸ್ಥಾನಗಳು ಖಾಲಿಯಾಗುವುದು.–** ಮೇಯರ್‌ರವರು ಈ ಅಧಿನಿಯಮದ 19ನೇ ಪ್ರಕರಣದ ಮೇರೆಗೆ ಅಗತ್ಯಪಡಿಸಿರುವಂತೆ ಆಸ್ತಿ ಘೋಷಣೆ ಮಾಡಲು ಯಾರೇ ಕೌನ್ಸಿಲರನು ತಪ್ಪಿದ್ದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಈ ಅಧಿನಿಯಮದ 19ನೇ ಪ್ರಕರಣದ (3)ನೇ ಉಪ-ಪ್ರಕರಣಗಳ ಮೇರೆಗೆ ತೀರ್ಮಾನ ಕೈಗೊಳ್ಳಲು ಸರ್ಕಾರಕ್ಕೆ ಕಳುಹಿಸಿಕೊಡುವ ಸಲುವಾಗಿ ಸಭಾ-ಸದನದ ಮುಂದೆ ಇಡುವಂತೆ ಮಾಡತಕ್ಕದ್ದು.

**ಸದಸ್ಯರು ಪಾಲಿಸಬೇಕಾದ ನಿಯಮಗಳು**

**78. ಸಭಾ-ಸದನದಲ್ಲಿ ಸದಸ್ಯರು ಪಾಲಿಸಬೇಕಾದ ನಿಯಮಗಳು.–** ಸಭಾ-ಸದನವು ಉಪವೇಶನದಲ್ಲಿರುವಾಗ, ಸದಸ್ಯನು,–

(i) ನಗರಪಾಲಿಕೆಯ ಕಾರ್ಯಕಲಾಪಕ್ಕೆ ಸಂಬಂಧಪಟ್ಟಿರುವುದನ್ನು ಹೊರತುಪಡಿಸಿ, ಇತರ ಯಾವುದೇ ಪುಸ್ತಕವನ್ನು, ವೃತ್ತಪತ್ರಿಕೆಯನ್ನು ಅಥವಾ ಪತ್ರವನ್ನು ಓದತಕ್ಕದ್ದಲ್ಲ;

(ii) ಯಾರೇ ಸದಸ್ಯರು ಮಾತನಾಡುತ್ತಿರುವಾಗ ಅವರಿಗೆ ಅಸಂಬದ್ಧವಾಗಿ ಮಾಡನಾಡುವ ಅಥವಾ ಕೂಗಾಡುವ ಮೂಲಕ ಅಥವಾ ಇತರ ಯಾವುದೇ ರೀತಿಯಲ್ಲಿ ಅಡ್ಡಿಪಡಿಸತಕ್ಕದ್ದಲ್ಲ;

(iii) ಸಭಾ-ಸದನದೊಳಗೆ ಬರುವಾಗ ಅಥವಾ ಸಭಾ-ಸದನದಿಂದ ಹೊರ ಹೋಗುವಾಗ ಹಾಗೂ ಆಸನದಲ್ಲಿ ಕುಳಿತುಕೊಳ್ಳುವಾಗ ಅಥವಾ ಆಸನವನ್ನು ಬಿಟ್ಟು ಹೋಗುವಾಗ ಪೀಠಕ್ಕೆ ವಂದಿಸತಕ್ಕದ್ದು;

(iv) ಪೀಠದ ಮತ್ತು ಮಾತನಾಡುತ್ತಿರುವ ಯಾರೇ ಸದಸ್ಯನ ಮಧ್ಯೆ ಹಾದುಹೋಗತಕ್ಕದ್ದಲ್ಲ;

(v) ಮೇಯರ್‌ರವರು ಸಭಾ-ಸದನವನ್ನು ಉದ್ದೇಶಿಸಿ ಮಾತನಾಡುತ್ತಿರುವಾಗ ಸಭಾ-ಸದನದಿಂದ ಹೊರಹೋಗತಕ್ಕದ್ದಲ್ಲ;

(vi) ಯಾವಾಗಲೂ ಪೀಠವನ್ನು ಸಂಬೋಧಿಸಿ ಮಾತನಾಡತಕ್ಕದ್ದು;

(vii) ಸಭಾ-ಸದನವನ್ನು ಉದ್ದೇಶಿಸಿ ಮಾತನಾಡುವಾಗ ತನ್ನ ಸ್ಥಾನದಲ್ಲಿರತಕ್ಕದ್ದು;

(viii) ಒಬ್ಬ ಸದಸ್ಯನು ಸಭಾ-ಸದನವನ್ನು ಉದ್ದೇಶಿಸಿ ಮಾತನಾಡುತ್ತಿರುವಾಗ, ಇತರ ಸದಸ್ಯರು ಅಡ್ಡಿಪಡಿಸತಕ್ಕದ್ದಲ್ಲ ಅಥವಾ ಅಡಚಣೆ ಉಂಟು ಮಾಡತಕ್ಕದ್ದಲ್ಲ;

(ix) ಸಭಾ-ಸದನದ ವ್ಯವಹರಣೆಗಳಿಗೆ ಅಡ್ಡಿಯುಂಟು ಮಾಡತಕ್ಕದ್ದಲ್ಲ ಅಥವಾ ಅಡಚಣೆ ಉಂಟು ಮಾಡತಕ್ಕದ್ದಲ್ಲ ಮತ್ತು ಸಭಾ-ಸದನದಲ್ಲಿ ಮಾತನಾಡುತ್ತಿರುವಾಗ, ವೀಕ್ಷಕ ವಿವರಣೆಗಳನ್ನು ನೀಡತಕ್ಕದ್ದಲ್ಲ;

(x) ಯಾವುದೇ ಗ್ಯಾಲರಿಗೆ ಒಬ್ಬ ಸಭಾ-ಸದನಕ್ಕೆ ಹೊರತಾದ ವ್ಯಕ್ತಿಯು ಪ್ರವೇಶಿಸಿದಾಗ ಚಪ್ಪಾಳೆ ತಟ್ಟತಕ್ಕದ್ದಲ್ಲ;

(xi) ಮಾತನಾಡುತ್ತಿರುವಾಗ ಯಾವುದೇ ಗ್ಯಾಲರಿಯಲ್ಲಿರುವ ಸಭಾ-ಸದನಕ್ಕೆ ಹೊರತಾದ ಯಾರೇ ವ್ಯಕ್ತಿಯ ಬಗ್ಗೆ ಪ್ರಸ್ತಾವಿಸತಕ್ಕದ್ದಲ್ಲ;

(xii) ಸಭಾ-ಸದನದಲ್ಲಿ ಘೋಷಣೆಗಳನ್ನು ಕೂಗತಕ್ಕದ್ದಲ್ಲ;

(xiii) ಪೀಠಕ್ಕೆ ಬೆನ್ನು ಮಾಡಿ ಕುಳಿತುಕೊಳ್ಳತಕ್ಕದ್ದಲ್ಲ ಅಥವಾ ನಿಲ್ಲತಕ್ಕದ್ದಲ್ಲ;

(xiv) ಸಭಾ-ಸದನದಲ್ಲಿ ಪೀಠದ ಬಳಿ ಖುದ್ದಾಗಿ ಹೋಗತಕ್ಕದ್ದಲ್ಲ. ಅವಶ್ಯಕತೆ ಇದ್ದರೆ ಅವರು ಸಭಾ-ಸದನದಲ್ಲಿ ಇರುವ ಅಧಿಕಾರಿಗಳಿಗೆ ಚೀಟಿಗಳನ್ನು ಕಳುಹಿಸಬಹುದು;

(xv) ಸಭಾ-ಸದನದಲ್ಲಿ ಯಾವುದೇ ರೀತಿಯ ಬ್ಯಾಡ್ಜುಗಳನ್ನು ಧರಿಸತಕ್ಕದ್ದಲ್ಲ ಅಥವಾ ಪ್ರದರ್ಶಿಸತಕ್ಕದ್ದಲ್ಲ;

(xvi) ಸಭಾ-ಸದನದಲ್ಲಿ ಬಾವುಟಗಳನ್ನು, ಲಾಂಛನಗಳನ್ನು ಅಥವಾ ಯಾವುವೇ ನಿಶಾನೆಗಳನ್ನು ಪ್ರದರ್ಶಿಸತಕ್ಕದ್ದಲ್ಲ;

(xvii) ತನ್ನ ಭಾಷಣ ಮುಗಿದ ಕೂಡಲೇ ಸಭಾ-ಸದನದಿಂದ ಹೊರ ಹೋಗತಕ್ಕದ್ದಲ್ಲ;

(xviii) ಸಭಾ-ಸದನದ ಕಾರ್ಯಕಲಾಪಗಳಿಗೆ ಸಂಬಂಧಿಸದ ಯಾವುದೇ ಬರವಣಿಗೆ, ಪ್ರಶ್ನಾವಳಿ, ಕರಪತ್ರಗಳು, ಪತ್ರಿಕಾ ಹೇಳಿಕೆಗಳು, ಮಡಿಸಿದ ಮುದ್ರಿತ ಕಿರುಪತ್ರಿಕೆ, ಇತ್ಯಾದಿಗಳನ್ನು ಸಭಾ-ಸದನದ ಆವರಣದೊಳಗೆ ವಿತರಿಸತಕ್ಕದ್ದಲ್ಲ;

(xix) ಸಭಾ-ಸದನದಲ್ಲಿ ಪ್ರತಿಭಟನಾ ಸೂಚಕವಾಗಿ ದಸ್ತಾವೇಜುಗಳನ್ನು ಹರಿದುಹಾಕತಕ್ಕದ್ದಲ್ಲ;

(xx) ಸಭಾ-ಸದನದೊಳಕ್ಕೆ ಯಾವುದೇ ಕ್ಯಾಸೆಟ್‌ಅನ್ನು ಅಥವಾ ಟೇಪ್-ರೆಕಾರ್ಡರ್‌ಅನ್ನು ಅಥವಾ ಪೇಜರ್‌ಅನ್ನು ಅಥವಾ ಫೋನ್‌ಅನ್ನು ತರತಕ್ಕದ್ದಲ್ಲ.

**79. ಮೇಯರ್‌ರವರು ಹೆಸರನ್ನು ಕರೆದಾಗ ಸದಸ್ಯರು ಮಾತನಾಡುವುದು.–** ಒಬ್ಬ ಸದಸ್ಯನು ಮಾತನಾಡಲು ಎದ್ದು ನಿಂತಾಗ, ಮೇಯರ್‌ರವರು ಅವನ ಹೆಸರನ್ನು ಕರೆಯತಕ್ಕದ್ದು. ಒಬ್ಬರಿಗಿಂತ ಹೆಚ್ಚು ಸದಸ್ಯರು ಏಕಕಾಲದಲ್ಲಿ ಎದ್ದು ನಿಂತರೆ, ಮೇಯರ್‌ರವರು ಯಾವ ಸದಸ್ಯನ ಹೆಸರನ್ನು ಕರೆಯುತ್ತಾರೋ ಆ ಸದಸ್ಯನು ಮಾತನಾಡಲು ಹಕ್ಕುಳ್ಳವನಾಗಿರತಕ್ಕದ್ದು.

**80. ಸಭಾ-ಸದನವನ್ನು ಉದ್ದೇಶಿಸಿ ಮಾತನಾಡುವ ರೀತಿ.–** ಸಭಾ-ಸದನದ ಮುಂದಿರುವ ಯಾವುದೇ ವಿಷಯದ ಮೇಲೆ ಯಾವುದೇ ಅಭಿಪ್ರಾಯ ವ್ಯಕ್ತಪಡಿಸಲು ಇಚ್ಛಿಸುವ ಸದಸ್ಯನು ತನ್ನ ಸ್ಥಳದಲ್ಲೇ ಎದ್ದು ನಿಂತು ಮೇಯರ್‌ರವರನ್ನು ಸಂಬೋಧಿಸಿ ಮಾತನಾಡತಕ್ಕದ್ದು:

ಪರಂತು, ಖಾಯಿಲೆ ಅಥವಾ ದುರ್ಬಲತೆಯಿಂದಾಗಿ ನಿಲ್ಲಲು ಸಾಧ್ಯವಾಗದಿರುವ ಸದಸ್ಯನಿಗೆ ಕುಳಿತುಕೊಂಡು ಮಾತನಾಡಲು ಅನುಮತಿ ನೀಡಬಹುದು.

**81. ಮಾತನಾಡುವಾಗ ಪಾಲಿಸಬೇಕಾದ ನಿಯಮಗಳು.–** ಸದಸ್ಯನು ಮಾತನಾಡುವಾಗ,–

(i) ಯಾವ ವಾಸ್ತವ ಸಂಗತಿಯ ಬಗ್ಗೆ ನ್ಯಾಯಿಕ ತೀರ್ಮಾನ ಆಗಬೇಕಾಗಿದೆಯೋ ಆ ಯಾವುದೇ ವಾಸ್ತವ ಸಂಗತಿಯನ್ನು ಉಲ್ಲೇಖಿಸತಕ್ಕದ್ದಲ್ಲ

(ii) ಒಬ್ಬ ಸದಸ್ಯನ ವಿರುದ್ಧ ವೈಯಕ್ತಿಕ ದೋಷಾರೋಪಣೆ ಮಾಡತಕ್ಕದ್ದಲ್ಲ;

(iii) ಸಭಾ–ಸದನದ ವ್ಯವಹರಣೆಗಳ ನಿರ್ವಹಣೆ ಬಗ್ಗೆ ಹೀನಾಯವಾಗಿ ಮಾತನಾಡತಕ್ಕದ್ದಲ್ಲ;

(iv) ಅವಿವೇಕದ, ಉದ್ರೇಕಕಾರಿ ಅಥವಾ ಮಾನಹಾನಿಕರ ಮಾತುಗಳನ್ನು ಆಡತಕ್ಕದ್ದಲ್ಲ;

(v) ಸಭಾ–ಸದನದ ಕಾರ್ಯಕಲಾಪಗಳನ್ನು ಅಡ್ಡಿಪಡಿಸುವ ಉದ್ದೇಶಕ್ಕಾಗಿ ಮಾತನಾಡಲು ತನಗಿರುವ ಹಕ್ಕನ್ನು ಬಳಸತಕ್ಕದ್ದಲ್ಲ;

(vi) ಸಭಾ–ಸದನದ ಯಾವುದೇ ತೀರ್ಮಾನವನ್ನು ಕುರಿತು, ಅದನ್ನು ರದ್ದುಪಡಿಸಲು ಪ್ರಸ್ತಾವ ತಂದ ಹೊರತು ಆರೋಪ ಮಾಡತಕ್ಕದ್ದಲ್ಲ.

**82. ಯಾರೇ ವ್ಯಕ್ತಿಯ ವಿರುದ್ಧ ಆಪಾದನೆ.–** ಯಾರೇ ವ್ಯಕ್ತಿಯ ವಿರುದ್ಧ ಮಾನಹಾನಿಕರವಾದ ಅಥವಾ ಅಪರಾಧದಲ್ಲಿ ಸಿಕ್ಕಿಸುವ ಸ್ವರೂಪದ ಯಾವುದೇ ಆಪಾದನೆಯನ್ನು ಮಾಡತಕ್ಕದ್ದಲ್ಲ. ಅಂಥ ಆಪಾದನೆಯು, ಸಭಾ–ಸದನದ ಘನತೆಗೆ ಕುಂದು ತರುವಂಥದ್ದಾಗಿದೆಯೆಂದು ಅಥವಾ ಅಂಥ ಆಪಾದನೆಯನ್ನು ಮಾಡುವುದರಿಂದ ಯಾವುದೇ ಸಾರ್ವಜನಿಕ ಹಿತಾಸಕ್ತಿಯನ್ನು ಕಾಪಾಡಿದಂತಾಗುವುದಿಲ್ಲವೆಂದು ಮೇಯರ್‌ರವರು ಅಭಿಪ್ರಾಯಪಟ್ಟರೆ, ಅವರು ಯಾವುದೇ ಸಮಯದಲ್ಲಿ ಅಂಥ ಯಾವುದೇ ಆಪಾದನೆಯನ್ನು ಮಾಡದಂತೆ ಯಾರೇ ಸದಸ್ಯನನ್ನು ಪ್ರತಿಬಂಧಿಸಬಹುದು.

**83. ಪ್ರಶ್ನೆಯನ್ನು ಮೇಯರ್‌ರವರ ಮೂಲಕ ಕೇಳುವುದು.–** ಚರ್ಚೆಯ ಸಮಯದಲ್ಲಿ ವಿವರಣೆ ಪಡೆಯುವ ಉದ್ದೇಶಕ್ಕಾಗಿ ಅಥವಾ ಯಾವುದೇ ಇತರ ಸಾಕಷ್ಟು ಕಾರಣಕ್ಕಾಗಿ, ಯಾರೇ ಸದಸ್ಯನಿಗೆ ಸಭಾ–ಸದನದ ಪರಿಗಣನೆಯಲ್ಲಿರುವ ಯಾವುದೇ ವಿಷಯದ ಮೇಲೆ ಬೇರೊಬ್ಬ ಸದಸ್ಯನಿಗೆ ಪ್ರಶ್ನೆಯನ್ನು ಕೇಳುವ ಅವಕಾಶ ತನಗೆ ದೊರೆತಾಗ, ಅವನು ಮೇಯರ್‌ರವರ ಮೂಲಕ ಪ್ರಶ್ನೆಯನ್ನು ಕೇಳತಕ್ಕದ್ದು.

**84. ಅಸಂಗತತೆ ಅಥವಾ ಪುನರಾವರ್ತನೆ.–** ಯಾವ ಸದಸ್ಯನು ಅಸಂಗತವಾಗಿ ಮಾತನಾಡುವುದನ್ನು ಪಟ್ಟು ಹಿಡಿದು ಮುಂದುವರೆಸುತ್ತಾನೋ ಅಥವಾ ತನ್ನದೇ ವಾದಗಳನ್ನು ಅಥವಾ ಚರ್ಚೆಯಲ್ಲಿ ಇತರ ಸದಸ್ಯರು ಮಾಡಿದ ವಾದಗಳನ್ನು ಬೇಸರ ಮೂಡಿಸುವ ಹಾಗೆ ಪುನಃ ಪುನಃ ಹೇಳುತ್ತಲೇ ಇರುತ್ತಾನೋ ಆ ಸದಸ್ಯನ ವರ್ತನೆಯನ್ನು ಸಭಾ–ಸದನದ ಗಮನಕ್ಕೆ ತಂದ ತರುವಾಯ, ಮೇಯರ್‌ರವರು ಆ ಸದಸ್ಯನಿಗೆ ಅವನ ಮಾತನ್ನು ನಿಲ್ಲಿಸುವಂತೆ ನಿರ್ದೇಶನ ನೀಡಬಹುದು.

**85. ವೈಯಕ್ತಿಕ ವಿವರಣೆ.–** ಮೇಯರ್‌ರವರ ಅನುಮತಿ ಪಡೆದು, ಒಬ್ಬ ಸದಸ್ಯನು, ಸಭಾ–ಸದನದ ಮುಂದೆ ಯಾವುದೇ ವಿಷಯವು ಇರದಿದ್ದರೂ, ತನ್ನ ವೈಯಕ್ತಿಕ ವಿವರಣೆಯನ್ನು ನೀಡಬಹುದು, ಆದರೆ ಇಂಥ ಸಂದರ್ಭದಲ್ಲಿ ಚರ್ಚಾಸ್ಪದ ವಿಷಯವನ್ನು ಸಭಾ–ಸದನದ ಮುಂದೆ ತರತಕ್ಕದ್ದಲ್ಲ ಮತ್ತು ಯಾವ ಚರ್ಚೆಗೂ ಅವಕಾಶವಿರತಕ್ಕದ್ದಲ್ಲ.

### ಕ್ರಿಯಾಲೋಪ

**86. ಕ್ರಿಯಾಲೋಪ ಮತ್ತು ಆ ಬಗ್ಗೆ ತೀರ್ಮಾನ.–** (1) ಕ್ರಿಯಾಲೋಪವು ಈ ನಿಯಮಗಳ ಅರ್ಥಾನ್ವಯಕ್ಕೆ ಅಥವಾ ಅವುಗಳನ್ನು ಜಾರಿಗೆ ತರುವುದಕ್ಕೆ ಅಥವಾ ಸಭಾ–ಸದನದ ಕಾರ್ಯಕಲಾಪಗಳನ್ನು ಕ್ರಮಪಡಿಸುವಂಥ ಈ ಅಧಿನಿಯಮದ ಪ್ರಕರಣಗಳ ಅರ್ಥಾನ್ವಯಕ್ಕೆ ಅಥವಾ ಅವುಗಳನ್ನು ಜಾರಿಗೆ ತರುವುದಕ್ಕೆ ಸಂಬಂಧಿಸಿರತಕ್ಕದ್ದು ಮತ್ತು ಮೇಯರ್‌ರವರ ಗಮನದೊಳಗಿರುವ ವಿಷಯವನ್ನು ಎತ್ತತಕ್ಕದ್ದು.

(2) ಕ್ರಿಯಾಲೋಪವನ್ನು ಸಭಾ–ಸದನದ ಮುಂದೆ ಆ ಕ್ಷಣದಲ್ಲಿ ಇರುವ ಕಾರ್ಯಕಲಾಪಕ್ಕೆ ಸಂಬಂಧಿಸಿದಂತೆ ಎತ್ತಬಹುದು:

ಪರಂತು, ಕ್ರಿಯಾಲೋಪವು ಸಭಾ–ಸದನದಲ್ಲಿ ಶಿಸ್ತನ್ನು ಕಾಪಾಡುವುದಕ್ಕೆ ಅಥವಾ ಸಭಾ–ಸದನದ ಮುಂದಿರುವ ಕಾರ್ಯಕಲಾಪಗಳನ್ನು ವ್ಯವಸ್ಥೆಗೊಳಿಸುವುದಕ್ಕೆ ಸಂಬಂಧಪಟ್ಟಿದ್ದರೆ, ಕಾರ್ಯಕಲಾಪಗಳ ಒಂದು ಬಾಬು ಮುಗಿದು ಇನ್ನೊಂದು ಬಾಬು ಪ್ರಾರಂಭವಾಗುವುದರ ನಡುವಿನ ಮಧ್ಯಂತರ ಅವಧಿಯಲ್ಲಿ ಕ್ರಿಯಾಲೋಪವನ್ನೆತ್ತಲು ಮೇಯರ್ ಅವರು ಸದಸ್ಯನಿಗೆ ಅನುಮತಿ ನೀಡಬಹುದು.

(3) ಉಪನಿಯಮ (1) ಮತ್ತು (2)ರಲ್ಲಿ ತಿಳಿಸಿರುವ ಷರತ್ತುಗಳಿಗೆ ಒಳಪಟ್ಟು, ಸದಸ್ಯನು, ಒಂದು ಕ್ರಿಯಾಲೋಪವನ್ನು ರೂಪಿಸಬಹುದು ಮತ್ತು ಹಾಗೆ ಎತ್ತಿದ ಅಂಶವು ಕ್ರಿಯಾಲೋಪವೇ ಅಥವಾ ಅಲ್ಲವೇ ಎಂಬುದನ್ನು ಮೇಯರ್‌ರವರು ತೀರ್ಮಾನಿಸತಕ್ಕದ್ದು ಮತ್ತು ಅದು ಕ್ರಿಯಾಲೋಪವಾಗಿದ್ದರೆ, ಅದರ ಬಗ್ಗೆ ತಮ್ಮ ತೀರ್ಮಾನವನ್ನು ಕೊಡತಕ್ಕದ್ದು, ಅವರ ಆ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

(4) ಕ್ರಿಯಾಲೋಪದ ಮೇಲೆ ಯಾವುದೇ ಚರ್ಚೆಗೂ ಅವಕಾಶ ನೀಡತಕ್ಕದ್ದಲ್ಲ. ಆದರೆ, ಮೇಯರ್‌ರವರು ತಾವು ಸೂಕ್ತವೆಂದು ಭಾವಿಸಿದರೆ, ತಮ್ಮ ತೀರ್ಮಾನವನ್ನು ನೀಡುವುದಕ್ಕೆ ಮೊದಲು ಸದಸ್ಯರ ಅಹವಾಲುಗಳನ್ನು ಆಲಿಸಬಹುದು.

(5) ಮೇಯರ್ ಅವರು ಯಾವುದೇ ಕ್ರಿಯಾಲೋಪದ ಮೇಲೆ ತೀರ್ಮಾನವನ್ನು ಕಾಯ್ದಿರಿಸುವ ಹಕ್ಕನ್ನು ಹೊಂದಿರತಕ್ಕದ್ದು.

(6) ಒಬ್ಬ ಸದಸ್ಯರು,–

(ಎ) ಮಾಹಿತಿಯನ್ನು ಕೇಳಲು; ಅಥವಾ

(ಬಿ) ತನ್ನ ಅಭಿಪ್ರಾಯವನ್ನು ವಿವರಿಸಲು; ಅಥವಾ

(ಸಿ) ಯಾವುದೇ ಪ್ರಸ್ತಾವದ ಮೇಲೆ ಒಂದು ವಿಷಯವನ್ನು ಸಭಾ–ಸದನದ ಅಭಿಮತಕ್ಕೆ ಇಡುವಾಗ; ಅಥವಾ

(ಡಿ) ಊಹಾತ್ಮಕವಾದ; ಅಥವಾ

(ಇ) ಮತಕ್ಕೆ ಹಾಕುವುದಕ್ಕಾಗಿ ಗಂಟೆ ಬಾರಿಸಲಿಲ್ಲವೆಂದು ಅಥವಾ ಗಂಟೆಯ ಶಬ್ದ ಕೇಳಿಸಲಿಲ್ಲವೆಂದು

– ಕ್ರಿಯಾಲೋಪವನ್ನು ಎತ್ತತಕ್ಕದ್ದಲ್ಲ.

**ಶಿಸ್ತು ಪಾಲನೆ**

87. **ಮೇಯರ್‌ರವರು ಶಿಸ್ತು ಪಾಲನೆಯಾಗುವಂತೆ ಮತ್ತು ತೀರ್ಮಾನಗಳು ಜಾರಿಯಾಗುವಂತೆ ನೋಡಿಕೊಳ್ಳುವುದು.**– ಮೇಯರ್ ಅವರು ಶಿಸ್ತು ಪಾಲನೆಯಾಗುವಂತೆ ನೋಡಿಕೊಳ್ಳತಕ್ಕದ್ದು ಮತ್ತು ತಮ್ಮ ತೀರ್ಮಾನಗಳನ್ನು ಜಾರಿಗೊಳಿಸುವ ಉದ್ದೇಶಕ್ಕಾಗಿ ಅವಶ್ಯಕವಾದ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು.

88. **ಸದಸ್ಯನನ್ನು ಸಭಾ–ಸದನದಿಂದ ಹೊರಗೆ ಕಳುಹಿಸುವುದು.**– ಮೇಯರ್‌ರವರು ಯಾವ ಸದಸ್ಯನ ನಡವಳಿಕೆಯು ತುಂಬಾ ಅಶಿಸ್ತಿನದಾಗಿದೆ ಎಂದು ಅಭಿಪ್ರಾಯಪಡುವರೋ ಅಂಥ ಸದಸ್ಯನಿಗೆ ಸಭಾ–ಸದನದಿಂದ ಕೂಡಲೇ ಹೊರಹೋಗಬೇಕೆಂದು ನಿರ್ದೇಶಿಸಬಹುದು ಮತ್ತು ಹಾಗೆ ಆದೇಶಿತನಾದ ಯಾರೇ ಸದಸ್ಯನು ಸಭಾ–ಸದನದಿಂದ ಕೂಡಲೇ ಹೊರಹೋಗತಕ್ಕದ್ದು ಮತ್ತು ಆ ದಿನದ ಉಪವೇಶನದ ಉಳಿದ ಅವಧಿಗೆ ಅವನು ಹಾಜರಾಗತಕ್ಕದ್ದಲ್ಲ.

89. **ಸದಸ್ಯನ ಅಮಾನತು.**– (1) ಮೇಯರ್‌ರವರು, ತಾವು ಅವಶ್ಯವೆಂದು ಭಾವಿಸಿದರೆ, ಯಾವ ಸದಸ್ಯನು ಪೀಠದ ಅಧಿಕಾರಕ್ಕೆ ಅಗೌರವ ತೋರುವನೋ ಅಥವಾ ಸಭಾ–ಸದನದ ಕಾರ್ಯಕಲಾಪಗಳಿಗೆ ನಿರಂತರವಾಗಿ ಅಡಚಣೆ ಉಂಟು ಮಾಡುವ ಮೂಲಕ ಸಭಾ–ಸದನದ ನಿಯಮಗಳನ್ನು ದುರುಪಯೋಗಪಡಿಸಿಕೊಳ್ಳುವನೋ ಆ ಸದಸ್ಯನನ್ನು ಹೆಸರಿಸಬಹುದು.

(2) ಮೇಯರ್‌ರವರು ಒಬ್ಬ ಸದಸ್ಯನನ್ನು ಹಾಗೆ ಹೆಸರಿಸಿದರೆ, ಅವರು ಆ ಸದಸ್ಯನನ್ನು (ಅವನನ್ನು ಹೆಸರಿಸಿ) ಆ ಕೂಡಲೇ ಅಧಿವೇಶನದ ಉಳಿದ ಅವಧಿಗೆ ಅಥವಾ ಮೇಯರ್‌ರವರು ಪ್ರಸ್ತಾವದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಆ ಅಧಿವೇಶನದ ಅಂಥ ಭಾಗಕ್ಕೆ ಸದನದಿಂದ ಅಮಾನತು ಮಾಡತಕ್ಕದ್ದು – ಎಂಬ ಪ್ರಸ್ತಾವವನ್ನು ಕೂಡಲೇ ಮಂಡಿಸತಕ್ಕದ್ದು:

ಪರಂತು, ಪ್ರಸ್ತಾವವನ್ನು ಮಂಡಿಸಿದ ನಂತರ ಯಾವುದೇ ಸಮಯದಲ್ಲಿ, ಸಭಾ–ಸದನವು ಅಂಥ ಅಮಾನತ್ತನ್ನು ಕೊನೆಗೊಳಿಸಲಾಗಿದೆ ಎಂದು ನಿರ್ಣಯಿಸಬಹುದು.

(3) ಈ ನಿಯಮಗಳ ಮೇರೆಗೆ ಅಮಾನತ್ತಾದ ಒಬ್ಬ ಸದಸ್ಯನು, ಕೂಡಲೇ ಸಭಾ–ಸದನದ ಆವರಣವನ್ನು ಬಿಟ್ಟು ಹೊರಹೋಗತಕ್ಕದ್ದು.

(4) ಈ ನಿಯಮದ ಮೇರೆಗೆ ಹಾಗೆ ಅಮಾನತ್ತಾದ ಒಬ್ಬ ಸದಸ್ಯನು ಸಭಾ–ಸದನದಿಂದ ಹೊರಹೋಗಲು ನಿರಾಕರಿಸಿದರೆ, ಮೇಯರ್‌ರವರು, ತಮ್ಮ ತೀರ್ಮಾನವನ್ನು ಜಾರಿಗೊಳಿಸಲು, ಅವಶ್ಯಕವಿರುವ ಕನಿಷ್ಠ ಬಲ ಪ್ರಯೋಗದಿಂದ ಅಂಥ ವ್ಯಕ್ತಿಯನ್ನು ಎತ್ತಿ ಹೊರ ಹಾಕಿಸಬಹುದು.

90. **ಉಪವೇಶನವನ್ನು ಸ್ಥಗಿತಗೊಳಿಸುವುದು.**– (1) ಸಭಾ–ಸದನದಲ್ಲಿ ಭಾರಿ ಗೊಂದಲವುಂಟಾದ ಸಂದರ್ಭದಲ್ಲಿ, ಮೇಯರ್‌ರವರು, ಸಭಾ–ಸದನವನ್ನು ಮುಂದೂಡುವುದು ಅಥವಾ ಸ್ಥಗಿತಗೊಳಿಸುವುದು ಅವಶ್ಯವೆಂದು ಭಾವಿಸಿದರೆ, ಅವರು ಸೂಚಿಸಬಹುದಾದಷ್ಟು ಕಾಲದವರೆಗೆ ಸಭಾ–ಸದನವನ್ನು ಮುಂದೂಡಬಹುದು ಅಥವಾ ಸ್ಥಗಿತಗೊಳಿಸಬಹುದು.

**ಕಾರ್ಯಕಲಾಪ ಸಲಹಾ ಸಮಿತಿ**

91. **ಕಾರ್ಯಕಲಾಪ ಸಲಹಾ ಸಮಿತಿ.**– ಸಭಾ–ಸದನದ ಪ್ರಾರಂಭದಲ್ಲಿ ಅಥವಾ ಕಾಲಕಾಲಕ್ಕೆ, ಕಾರ್ಯಕಲಾಪಗಳ ಸಲಹಾ ಸಮಿತಿಯನ್ನು ಮೇಯರ್‌ರವರು ರಚಿಸತಕ್ಕದ್ದು ಮತ್ತು ಅವರು ಆ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು. ಸಮಿತಿಯು, ಎಲ್ಲಾ ಸ್ಥಾಯೀ ಸಮಿತಿಗಳ ಅಧ್ಯಕ್ಷರನ್ನು, ಸಭಾ–ಸದನದ ನಾಯಕನನ್ನು, ವಿರೋಧಪಕ್ಷದ ನಾಯಕನನ್ನು ಹಾಗೂ ಮೇಯರ್‌ರವರು ನಾಮನಿರ್ದೇಶಿಸತಕ್ಕ ಇತರ ಸದಸ್ಯರನ್ನು ಒಳಗೊಂಡಿರತಕ್ಕದ್ದು.

92. **ಸಮಿತಿಯ ಪ್ರಕಾರ್ಯಗಳು.**– (1) ನಿರ್ಣಯಗಳನ್ನು ಮತ್ತು ಮೇಯರ್‌ರವರು ಸಮಿತಿಗೆ ಕಳುಹಿಸಬೇಕೆಂದು ನಿರ್ದೇಶಿಸಬಹುದಾದಂಥ ಇತರ ಕಾರ್ಯಕಲಾಪಗಳನ್ನು ಚರ್ಚಿಸುವುದಕ್ಕಾಗಿ ಹಂಚಿಕೆ ಮಾಡಬೇಕಾದ ಸಮಯದ ಬಗ್ಗೆ ಶಿಫಾರಸು ಮಾಡುವುದು ಸಮಿತಿಯ ಪ್ರಕಾರ್ಯವಾಗಿರತಕ್ಕದ್ದು.

(2) ಸಮಿತಿಯು, ಕಾರ್ಯಕಲಾಪದ ವಿವಿಧ ಹಂತಗಳನ್ನು ಯಾವ ಸಮಯಗಳಲ್ಲಿ ಪೂರ್ಣಗೊಳಿಸಬೇಕಾಗಿದೆಯೋ ಆ ವಿವಿಧ ಸಮಯಗಳನ್ನು ಪ್ರಸ್ತಾವಿತ ವೇಳಾಪಟ್ಟಿಯಲ್ಲಿ ಸೂಚಿಸಲು ಅಧಿಕಾರ ಹೊಂದಿರತಕ್ಕದ್ದು.

(3) ಮೇಯರ್‌ರವರು ಕಾಲಕಾಲಕ್ಕೆ ಸಮಿತಿಗೆ ವಹಿಸಿಕೊಡಬಹುದಾದಂಥ ಇತರೆ ಪ್ರಕಾರ್ಯಗಳನ್ನು ಅದು ಹೊಂದಿರತಕ್ಕದ್ದು.

(4) ಸಮಿತಿಯ ಶಿಫಾರಸುಗಳನ್ನು ಸಭಾ–ಸದನದಲ್ಲಿ ಮಂಡಿಸತಕ್ಕದ್ದು.

(5) ಸಭಾ–ಸದನದ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಂತೆ ಸಮಯದ ಹಂಚಿಕೆಯು ಸಭಾ–ಸದನದ ಆದೇಶವಾಗಿದ್ದಿದ್ದರೆ ಹೇಗೋ ಹಾಗೆ ಜಾರಿಗೆ ಬರತಕ್ಕದ್ದು.

**ನಿರ್ಣಯಗಳ ಅನುಷ್ಠಾನ**

93. **ಮೇಯರ್‌ರವರ ಅಧಿಕಾರಗಳು.**– (1) ಸಭಾ–ಸದನದಲ್ಲಿ ಅಂಗೀಕರಿಸಿದ ನಿರ್ಣಯಗಳ, ಕಾಲಕಾಲಕ್ಕೆ ಸ್ಥಾಯೀ ಸಮಿತಿಗಳ ಅಧ್ಯಕ್ಷರು ಮತ್ತು ಆಯುಕ್ತರು ನೀಡಿದ ಭರವಸೆಗಳ, ವಾಗ್ದಾನಗಳ, ವಚನಗಳ ಅನುಷ್ಠಾನ ಕಾರ್ಯಗಳ ಬಗ್ಗೆ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣ ಮೇಯರ್‌ರವರಲ್ಲಿ ನಿಹಿತವಾಗಿರತಕ್ಕದ್ದು.

(2) ನಿರ್ಣಯಗಳನ್ನು, ಭರವಸೆಗಳನ್ನು ಮತ್ತು ವಚನಗಳನ್ನು ಎಷ್ಟರಮಟ್ಟಿಗೆ ಅನುಷ್ಠಾನಗೊಳಿಸಲಾಗಿದೆ ಎಂಬ ಬಗ್ಗೆ ಮತ್ತು ಅಂಥ ಅನುಷ್ಠಾನವು ಆ ಉದ್ದೇಶಕ್ಕಾಗಿ ಅವಶ್ಯವೆನಿಸುವ ಕನಿಷ್ಠ ಕಾಲದೊಳಗೆ ಆಗಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಮೇಯರ್‌ರವರು ಸಭಾ–ಸದನಕ್ಕೆ ವರದಿ ಮಾಡತಕ್ಕದ್ದು.

(3) ಮೇಯರ್‌ರವರು ನಗರ ಪಾಲಿಕೆಯ ಯಾರೇ ಅಧಿಕಾರಿಯನ್ನು ಸಭಾ–ಸದನದಲ್ಲಿ ಹಾಜರಾಗುವಂತೆ ಮತ್ತು ಅಂಥ ಅಧಿಕಾರಿಯು ವ್ಯವಹರಿಸಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಸಂಗತಿಗಳ ಬಗೆ ಹೇಳಿಕೆ ನೀಡುವಂತೆ ಅಥವಾ ಆತನ ಬಳಿ ಇರುವಂಥ ಮಾಹಿತಿಯನ್ನು ಒದಗಿಸುವಂತೆ ಕೇಳಬಹುದು.

**ಸಾಮಾನ್ಯ ನಿಯಮಗಳು**

94. **ನಗರಪಾಲಿಕೆಯ ಕಾರ್ಯಕಲಾಪಗಳು.**– ಅಧಿನಿಯಮದ, ನಿಯಮಗಳ, ವಿನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ನಗರಪಾಲಿಕೆಯ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಿಲ್ಲದ ಯಾವುದೇ ವಿಷಯವನ್ನು ಎತ್ತತಕ್ಕದ್ದಲ್ಲ ಅಥವಾ ಎತ್ತಲು ಅನುಮತಿಸತಕ್ಕದ್ದಲ್ಲ ಅಥವಾ ಸಭಾ–ಸದನದ ಯಾವುದೇ ಉಪವೇಶನದ ಕಾರ್ಯಸೂಚಿಯಲ್ಲಿ ಸೇರಿಸತಕ್ಕದ್ದಲ್ಲ.

**95. ಸಾರ್ವಜನಿಕರಿಗೆ ಮುಕ್ತ ಪ್ರವೇಶ.–** ನಗರಪಾಲಿಕೆಯ ಎಲ್ಲ ಉಪವೇಶನಗಳಿಗೆ ಸಾರ್ವಜನಿಕರಿಗೆ ಮುಕ್ತ ಪ್ರವೇಶಾವಕಾಶವಿರತಕ್ಕದ್ದು ಆದರೆ, ಮೇಯರ್‌ರವರು ಸಾರ್ವಜನಿಕರಿಗೆ ಸಾಮಾನ್ಯವಾಗಿ ಅಥವಾ ಯಾರೇ ನಿರ್ದಿಷ್ಟ ವ್ಯಕ್ತಿಗೆ ಸದನದಿಂದ ನಿರ್ಗಮಿಸುವಂತೆ ನಿರ್ದೇಶಿಸಬಹುದು.

**96. ಭಾಷೆ.–** ಸಭಾ–ಸದನದ ಕಾರ್ಯಕಲಾಪಗಳನ್ನು ಕನ್ನಡದಲ್ಲಿ ನಡೆಸತಕ್ಕದ್ದು. ಆದರೆ, ಯಾರೇ ಸದಸ್ಯನು, ಮೇಯರ್‌ರವರ ಅನುಮತಿ ಪಡೆದು ಯಾವುದೇ ಇತರ ಭಾಷೆಯಲ್ಲಿ ಸಭಾ–ಸದನವನ್ನು ಉದ್ದೇಶಿಸಿ ಮಾತನಾಡಬಹುದು.

**97. ವ್ಯವಹರಣೆಗಳನ್ನು ದಾಖಲಿಸುವುದು.–** ಕೌನ್ಸಿಲ್ ಕಾರ್ಯದರ್ಶಿಯು, ಸಭಾ–ಸದನದ ಪ್ರತಿಯೊಂದು ಉಪವೇಶನದಲ್ಲಿ ಅದರ ವ್ಯವಹರಣೆಗಳ ನಡವಳಿಗಳನ್ನು ದಾಖಲು ಮಾಡಿಸತಕ್ಕದ್ದು ಮತ್ತು ಅವುಗಳನ್ನು ಸ್ಥಿರೀಕರಿಸುವುದಕ್ಕಾಗಿ ಮುಂದಿನ ಅಧಿವೇಶನದಲ್ಲಿ ಮಂಡಿಸತಕ್ಕದ್ದು.

**98. ಪ್ರತಿಗಳ ನೀಡಿಕೆ.–** (1) ನಡವಳಿಗಳ ಪುಸ್ತಕವನ್ನು, ಯಾರೇ ಕೌನ್ಸಿಲರನು ಹಣ ಸಂದಾಯ ಮಾಡದೆಯೇ ಪರಿಶೀಲಿಸಲು ಮತ್ತು ಮೇಯರ್‌ರವರು ಸಾಮಾನ್ಯ ಅಥವಾ ವಿಶೇಷ ಅದೇಶದ ಮೂಲಕ ನಿರ್ಧರಿಸಬಹುದಾದಂಥ ಫೀಜನ್ನು ಯಾರೇ ಇತರ ವ್ಯಕ್ತಿಯು ಸಂದಾಯ ಮಾಡಿ ಪರಿಶೀಲಿಸಲು – ಎಲ್ಲಾ ಯುಕ್ತ ಸಮಯದಲ್ಲೂ ನಗರ ಪಾಲಿಕೆ ಕಚೇರಿಯಲ್ಲಿ ಮುಕ್ತವಾಗಿಡತಕ್ಕದ್ದು.

(2) ಕೌನ್ಸಿಲ್ ಕಾರ್ಯದರ್ಶಿಯು, ಮೇಯರ್‌ರವರು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ಧರಿಸಬಹುದಾದಂಥ ಫೀಜನ್ನು ಸಂದಾಯ ಮಾಡುವುದರ ಮೇಲೆ ನಗರ ಪಾಲಿಕೆಯ ವ್ಯವಹರಣೆಗಳ ಪ್ರತಿಗಳನ್ನು ನೀಡಬಹುದು.

**99. ಸಭಾ–ಸದನದಲ್ಲಿ ಕಾಗದ ಪತ್ರಗಳನ್ನು ಇಡುವುದು.–** (1) ಅಧಿನಿಯಮದ 71ನೇ ಪ್ರಕರಣದ (3)ನೇ ಉಪ ಪ್ರಕರಣದ ಮತ್ತು 73ನೇ ಪ್ರಕರಣದ ಮೇರೆಗೆ ಸಂಗತಿಗಳ ಹೇಳಿಕೆಯನ್ನು ನೀಡಬೇಕಾದ ಅಥವಾ ಮಾಹಿತಿಯನ್ನು ಒದಗಿಸಬೇಕಾದ ಅಧಿಕಾರಿಗಳು, ಸಭಾ–ಸದನದಲ್ಲಿ ಸಂಬಂಧಪಟ್ಟ ಕಾಗದ ಪತ್ರಗಳನ್ನು ಇಡತಕ್ಕದ್ದು.

(2) ಸಭಾ–ಸದನದಲ್ಲಿ ಇರಿಸಲಾದ ಎಲ್ಲ ಕಾಗದಪತ್ರಗಳನ್ನು ಮತ್ತು ದಸ್ತಾವೇಜುಗಳನ್ನು ಸಾರ್ವಜನಿಕವಾದುವುಗಳೆಂದು ಪರಿಗಣಿಸತಕ್ಕದ್ದು.

**100. ಉಳಿಕೆ ಅಧಿಕಾರಗಳು.–** ಈ ನಿಯಮಗಳಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿರದ ಎಲ್ಲ ವಿಷಯಗಳನ್ನು ಮತ್ತು ಈ ನಿಯಮಗಳ ಸಮಗ್ರ ಕಾರ್ಯನಿರ್ವಹಣೆಗೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು, ಮೇಯರ್‌ರವರು ಕಾಲಕಾಲಕ್ಕೆ ನಿರ್ದೇಶಿಸಬಹುದಾದಂಥ ರೀತಿಯಲ್ಲಿ ವಿನಿಯಮಿಸತಕ್ಕದ್ದು.

### ಸ್ಥಾಯೀ ಸಮಿತಿಗಳು

**101.** ಪ್ರತಿಯೊಂದು ಸ್ಥಾಯೀ ಸಮಿತಿಯು, ಕೊನೆಪಕ್ಷ ವಾರದಲ್ಲಿ ಒಂದು ಬಾರಿ, ಸ್ಥಾಯೀ ಸಮಿತಿಯು ಕಾಲಕಾಲಕ್ಕೆ ಗೊತ್ತುಪಡಿಸತಕ್ಕಂಥ ದಿನದಂದು ಮತ್ತು ಅಂಥ ಸಮಯದಲ್ಲಿ ನಗರ ಪಾಲಿಕೆಯ ಕಚೇರಿಯಲ್ಲಿ ಸಭೆ ಸೇರತಕ್ಕದ್ದು.

**102.** ಸ್ಥಾಯೀ ಸಮಿತಿಯ ಅಧ್ಯಕ್ಷರು, ಯಾವುದೇ ಕಾಲದಲ್ಲಿ ಸಮಿತಿಯ ಸಭೆಯನ್ನು ಕರೆಯಬಹುದು ಮತ್ತು ಆಯುಕ್ತರು ಅಥವಾ ಸಮಿತಿಯ ಮೂವರು ಸದಸ್ಯರು ಸಹಿ ಮಾಡಿರುವ ಕೋರಿಕೆ ಪತ್ರವನ್ನು ಸ್ವೀಕರಿಸಿದ ನಲವತ್ತೆಂಟು ಗಂಟೆಗಳ ಒಳಗಾಗಿ ಸ್ಥಾಯಿ ಸಮಿತಿಯ ಸಭೆ ಕರೆಯತಕ್ಕದ್ದು ಮತ್ತು ನಡೆಸಲಾಗುವ ಕಾರ್ಯಕಲಾಪವನ್ನು ತಿಳಿಸತಕ್ಕದ್ದು.

**103.** ಸಭೆಯ ಪ್ರತಿಯೊಂದು ನೋಟೀಸನ್ನು, ಕೌನ್ಸಿಲ್ ಕಾರ್ಯದರ್ಶಿಯು ನೀಡತಕ್ಕದ್ದು.

**104.** ಯಾವುದೇ ಸಭೆಯಲ್ಲಿ ಸ್ಥಾಯೀ ಸಮಿತಿಯ ಮುಂದೆ ಬರಬಹುದಾದ ಎಲ್ಲ ವಿಷಯಗಳನ್ನು, ಹಾಜರಿದ್ದು ಮತನೀಡುವ ಸದಸ್ಯರ ಬಹುಮತದ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಮತಗಳು ಸಮಸಮವಾಗಿ ಬಂದ ಪ್ರತಿಯೊಂದು ಸಂದರ್ಭದಲ್ಲಿ, ಅಧ್ಯಕ್ಷರು ಅಥವಾ ಅಧ್ಯಕ್ಷತೆ ವಹಿಸಿರುವ ಸದಸ್ಯನು, ಎರಡನೇ ಅಥವಾ ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು ಮತ್ತು ಅದನ್ನು ಚಲಾಯಿಸತಕ್ಕದ್ದು.

**105.** (1) ಪ್ರತಿಯೊಂದು ಸ್ಥಾಯೀ ಸಮಿತಿಯ ವ್ಯವಹರಣೆಗಳ ಎಲ್ಲ ನಡವಳಿಗಳನ್ನು ಒಂದು ಪುಸ್ತಕದಲ್ಲಿ ದಾಖಲಿಸತಕ್ಕದ್ದು ಮತ್ತು ಪ್ರತಿಯೊಂದು ಸಭೆಯು ಮುಕ್ತಾಯವಾದ ತರುವಾಯ ಅಧ್ಯಕ್ಷರು ಅಥವಾ ಅಧ್ಯಕ್ಷತೆ ವಹಿಸಿರುವ ಸದಸ್ಯನು ಅದಕ್ಕೆ ಸಹಿ ಮಾಡತಕ್ಕದ್ದು. ನಡವಳಿಗಳನ್ನು ಕೌನ್ಸಿಲ್ ಕಾರ್ಯದರ್ಶಿಯು ಬರೆಯತಕ್ಕದ್ದು.

(2) ನಡವಳಿ ಪುಸ್ತಕವನ್ನು ನಗರ ಪಾಲಿಕೆಯ ಮುಂದಿನ ಸಭೆಯಲ್ಲಿ ಅದರ ಮುಂದೆ ಇರಿಸತಕ್ಕದ್ದು.

**106.** ಎರಡು ಅಥವಾ ಹೆಚ್ಚು ಸ್ಥಾಯೀ ಸಮಿತಿಗಳು ಪರಸ್ಪರ ವಿರುದ್ಧವಾದ ತೀರ್ಮಾನಗಳನ್ನು ಅಂಗೀಕರಿಸಿದ್ದು, ಅಂಥ ವೈರುಧ್ಯವನ್ನು ಸರಿಪಡಿಸದಿರುವ ಅಥವಾ 62ನೇ ಪ್ರಕರಣದ (4)ನೇ ಉಪ–ಪ್ರಕರಣದಲ್ಲಿ ಉಪಬಂಧಿಸಿರುವಂತೆ ಅಂಥ ಸಮಿತಿಗಳ ಸಭೆಯು ಅಥವಾ ಜಂಟಿ ಸಮಿತಿಯು ಅನ್ಯಥಾ ವ್ಯವಹರಿಸಿದ ಯಾವುದೇ ಸಂದರ್ಭದಲ್ಲಿ, ಆಯುಕ್ತರು, ಮೇಯರ್‌ರವರಿಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು. ಮೇಯರ್‌ರವರು ಆ ವಿಷಯವನ್ನು ನಗರ ಪಾಲಿಕೆಯ ಸಭೆಯಲ್ಲಿ ಮಂಡಿಸತಕ್ಕದ್ದು ಮತ್ತು ನಗರ ಪಾಲಿಕೆಯ ನಿರ್ಣಯದ ನಿರೀಕ್ಷೆಯಲ್ಲಿ, ಆಯುಕ್ತರು, ವಿವಾದಿತ ವಿಷಯದ ಸಂಬಂಧದಲ್ಲಿ ಎಲ್ಲ ಕ್ರಮಗಳನ್ನು ತಡೆಹಿಡಿಯತಕ್ಕದ್ದು.

**107.** ಮೇಯರ್ ಅಥವಾ ಉಪ ಮೇಯರ್‌ರವರನ್ನು ಹೊರತುಪಡಿಸಿ, ಸ್ಥಾಯೀ ಸಮಿತಿಯ ಯಾವ ಸದಸ್ಯನು ಮೂರು ನಿರಂತರ ಸಭೆಗಳಿಗೆ ಹಾಜರಾಗಲು ತಪ್ಪುವನೋ, ಆ ಯಾರೇ ಸದಸ್ಯನು ಅಂಥ ಸ್ಥಾಯೀ ಸಮಿತಿಯ ಸದಸ್ಯನಾಗಿರುವುದು ನಿಂತು ಹೋಗತಕ್ಕದ್ದು. ಆದರೆ ಅವನು ನಗರ ಪಾಲಿಕೆಯಿಂದ ಮತ್ತೆ ಆಯ್ಕೆ ಆಗಬಹುದು.

**108.** ಸ್ಥಾಯೀ ಸಮಿತಿಯ ಪ್ರತಿಯೊಂದು ನಿರ್ಣಯವನ್ನು, ಅಂಥ ನಿರ್ಣಯವನ್ನು ಅಂಗೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಸಮಿತಿಯ ಪ್ರತಿಯೊಬ್ಬ ಸದಸ್ಯನಿಗೆ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ನಗರ ಪಾಲಿಕೆಯ ಒಬ್ಬ ಸದಸ್ಯನು ಮಂಡಿಸಿದ ಪ್ರಸ್ತಾವದ ಮೇಲೆ ನಗರ ಪಾಲಿಕೆಯು, ಅಂಥ ಯಾವುದೇ ನಿರ್ಣಯವನ್ನು ಮಾರ್ಪಾಟು ಮಾಡಬಹುದು ಅಥವಾ ತಿದ್ದುಪಡಿ ಮಾಡಬಹುದು ಅಥವಾ ರದ್ದುಗೊಳಿಸಬಹುದು.]

**ಅನುಸೂಚಿ – II**

[2(10)ನೇ ಮತ್ತು 92ನೇ ಪ್ರಕರಣಗಳನ್ನು ನೋಡಿ]

**ಅವಶ್ಯಕ ಸೇವೆಗಳು**

**ವರ್ಗ – I**

(ಎ) ಬೀದಿ ಅಥವಾ ಆವರಣಗಳನ್ನು ಗುಡಿಸಿ ಶುಚಿಮಾಡುವುದು ಅಥವಾ ಸ್ವಚ್ಛಗೊಳಿಸುವುದು.

(ಬಿ) ಚರಂಡಿಗಳನ್ನು ನಿರ್ವಹಿಸುವುದು, ದುರಸ್ತಿ ಮಾಡುವುದು, ಸ್ವಚ್ಛಗೊಳಿಸುವುದು ಅಥವಾ ರಭಸವಾಗಿ ನೀರು ಹರಿಸಿ ತೊಳೆಯುವುದು.

(ಸಿ) ಮನೆಗಳು, ಕಕ್ಕಸುಗಳು, ಮೂತ್ರಿಗಳು ಅಥವಾ ರೊಚ್ಚುಗುಂಡಿಗಳಿಂದ ಮಲಮೂತ್ರಗಳನ್ನು ಅಥವಾ ಕಲುಷಿತ ವಸ್ತುಗಳನ್ನು ತೆಗೆದುಹಾಕುವುದು ಅಥವಾ ವಿಲೆ ಮಾಡುವುದು.

(ಡಿ) ಪ್ರಾಣಿಗಳ ಶವಗಳನ್ನು ತೆಗೆದುಹಾಕುವುದು.

(ಇ) ಸಾಮಾನ್ಯವಾಗಿ ಉಪದ್ರವಗಳನ್ನು ತಡೆಗಟ್ಟುವುದು.

**ವರ್ಗ – II**

(ಎ) ಅಗ್ನಿಶಾಮಕ ದಳದ ಸೇವೆ.

(ಬಿ) ಈ ಕೆಳಕಂಡವರುಗಳನ್ನು ಎಂದರೆ,–

(i) ಇನ್‌ಸ್ಪೆಕ್ಟರುಗಳು

(ii) ಸಬ್ ಇನ್‌ಸ್ಪೆಕ್ಟರುಗಳು

(iii) ಫೋರ್‌ಮನ್‌ಗಳು

(iv) ಮೆಕ್ಯಾನಿಕ್‌ಗಳು

(v) ವಾಹನ ಚಾಲಕರು

(vi) ಕಾವಲುಗಾರರು

(vii) ಕಾರ್ಮಿಕರು

(viii) ಕೆಲಸಗಾರರು.

– ಇವರನ್ನು ಒಳಗೊಂಡಂತೆ ಯಾವುದೇ ನಗರಪಾಲಿಕೆಯ ನೀರು ಸರಬರಾಜು ಮಾರ್ಗಗಳ, ಚರಂಡಿಗಳ, ಪಂಪಿಂಗ್ ಸ್ಟೇಷನ್‌ಗಳ ಅಥವಾ ಅಗ್ನಿಶಾಮಕ ನೀರೆತ್ತುವ ಕೊಳವೆಯ ನಿರ್ವಹಣೆಗೆ ಅಥವಾ ಸೇವೆಗಳಿಗೆ ಸಂಬಂಧಿಸಿದ ಸೇವೆಗಳು.

(ಸಿ) ಬೀದಿ ದೀಪ ಹಚ್ಚುವವರು.

**ಅನುಸೂಚಿ – III**

*[103ನೇ ಮತ್ತು 147ನೇ ಪ್ರಕರಣಗಳನ್ನು ನೋಡಿ]*

**ತೆರಿಗೆ ವಿಧಿಸುವಿಕೆ ನಿಯಮಗಳು**

**ಭಾಗ – I**

**ಸಾಮಾನ್ಯವಾಗಿ ತೆರಿಗೆಗಳಿಗೆ ಅನ್ವಯಿಸುವ ಸಾಮಾನ್ಯ ಉಪಬಂಧಗಳು**

**1.** (1) ಆಯುಕ್ತರು ಈ ಅಧಿನಿಯಮದ ಮೇರೆಗೆ ತೆರಿಗೆಗೆ ಗುರಿಯಾಗುವ ವ್ಯಕ್ತಿಗಳನ್ನು ಮತ್ತು ಸ್ವತ್ತುಗಳನ್ನು ತೋರಿಸುವ ತೆರಿಗೆ ನಿರ್ಧರಣಾ ಪುಸ್ತಕಗಳನ್ನು ತಾವು ಸೂಕ್ತವೆಂದು ಭಾವಿಸುವಂಥ ನಮೂನೆಯಲ್ಲಿ ಮತ್ತು ಅಂಥ ಭಾಗಗಳಲ್ಲಿ ಮತ್ತು ವಿಭಾಗಗಳಲ್ಲಿ ತಯಾರಿಸತಕ್ಕದ್ದು ಮತ್ತು ಇಡತಕ್ಕದ್ದು.

(2) ತೆರಿಗೆ ನಿರ್ಧರಣಾ ಪುಸ್ತಕಗಳು ಮತ್ತು ಯಾವುದೇ ನಿರ್ಧರಣೆಗೆ ಸಂಬಂಧಪಟ್ಟಂತೆ ಸವಿವರವಾದ ವಿವರಗಳನ್ನು ಪ್ರತ್ಯೇಕ ದಾಖಲೆಗಳಲ್ಲಿ ಇಟ್ಟಿರುವಲ್ಲಿ ಅಂಥ ವಿವರಗಳನ್ನು ಒಳಗೊಂಡಿರುವ ಅದರ ಭಾಗವು ಎಲ್ಲಾ ಯುಕ್ತ ಕಾಲಗಳಲ್ಲಿ ಮತ್ತು ನಗರಪಾಲಿಕೆಗೆ ಯಾವುದೇ ತೆರಿಗೆಯನ್ನು ಸಂದಾಯ ಮಾಡುವ ಯಾರೇ ವ್ಯಕ್ತಿಯು ಅಥವಾ ಅವನ ಅಧಿಕೃತ ಏಜೆಂಟನು ಯಾವುದೇ ಶುಲ್ಕ ಪಾವತಿಸದೆ ಪರಿಶೀಲಿಸಲು ಮುಕ್ತವಾಗಿರತಕ್ಕದ್ದು ಮತ್ತು ಅಂಥ ವ್ಯಕ್ತಿಯು ಅಥವಾ ಏಜೆಂಟನು ಸದರಿ ಪುಸ್ತಕಗಳಿಂದ ಮತ್ತು ದಾಖಲೆಗಳಿಂದ ಶುಲ್ಕ ಪಾವತಿಸದೆ ಉದ್ಧೃತ ಭಾಗವನ್ನು ತೆಗೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು.

(3) ನಗರಪಾಲಿಕೆಯ ಲೆಕ್ಕಪುಸ್ತಕಗಳು ನಗರಪಾಲಿಕೆಗೆ ತೆರಿಗೆಯನ್ನು ಸಂದಾಯ ಮಾಡುವ ಯಾರೇ ವ್ಯಕ್ತಿಯು ಅಥವಾ ಅವನ ಅಧಿಕೃತ ಏಜೆಂಟನು, ನಗರಪಾಲಿಕೆಯು ನಿಗದಿಪಡಿಸತಕ್ಕ ಪ್ರತಿ ತಿಂಗಳಲ್ಲಿನ ದಿನದಂದು ಅಥವಾ ದಿನಗಳಂದು ಶುಲ್ಕ ಪಾವತಿಸದೆ ಪರಿಶೀಲಿಸಲು ಮುಕ್ತವಾಗಿರತಕ್ಕದ್ದು.

**2.** ಆಯುಕ್ತರು ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದ್ದ ಹೊರತು ಪ್ರತಿಯೊಂದು ಸ್ವತ್ತು ಅಥವಾ ವ್ಯಕ್ತಿಯು ಯಾವ ತೆರಿಗೆಗೆ ಗುರಿಯಾಗಬೇಕಾಗಿದೆಯೋ ಆ ತೆರಿಗೆಯನ್ನು ನಿರ್ಧರಿಸತಕ್ಕದ್ದು:

ಪರಂತು, ಆಯುಕ್ತರು ಸಂದಾಯ ಮಾಡಬೇಕಾದ ತೆರಿಗೆಗಳ ಸಂದರ್ಭದಲ್ಲಿ ಮೂಲ ನಿರ್ಧರಣೆಯನ್ನು ಮೇಯರ್‌ರವರು ಮಾಡತಕ್ಕದ್ದು.

**3.** (1) ಆಯುಕ್ತರು, ತೆರಿಗೆಯನ್ನು ಸಂದಾಯ ಮಾಡುವ ಪ್ರತಿಯೊಬ್ಬ ವ್ಯಕ್ತಿಗೆ ತಾವು ಅಥವಾ ತಮ್ಮಿಂದ ಆ ಬಗ್ಗೆ ಕ್ರಮಬದ್ಧವಾಗಿ ಅಧಿಕೃತನಾದ ಯಾರೇ ವ್ಯಕ್ತಿಯು ರುಜು ಮಾಡಿದ ತೆರಿಗೆ ಸಂದಾಯ ರಸೀದಿಯನ್ನು ಕೊಡತಕ್ಕದ್ದು.

(2) ಅಂಥ ರಸೀದಿಯಲ್ಲಿ,–

(ಎ) ಅದರ ದಿನಾಂಕವನ್ನು;

(ಬಿ) ಅದನ್ನು ಯಾರಿಗೆ ಕೊಡಲಾಗಿದೆಯೋ ಆ ವ್ಯಕ್ತಿಯ ಹೆಸರನ್ನು;

(ಸಿ) ಯಾವ ತೆರಿಗೆಗೆ ಸಂಬಂಧಿಸಿದಂತೆ ಹಣವನ್ನು ಸಂದಾಯ ಮಾಡಲಾಗಿದೆಯೋ ಆ ತೆರಿಗೆಯನ್ನು; ಮತ್ತು ಸ್ವತ್ತಿನ ತೆರಿಗೆಯ ಸಂದರ್ಭದಲ್ಲಿ ಯಾವ ಸ್ವತಿಗೆ ಸಂಬಂಧಿಸಿದಂತೆ ಹಣ ಸಂದಾಯ ಮಾಡಲಾಗಿದೆಯೋ ಆ ಸ್ವತ್ತನ್ನು;

(ಡಿ) ಯಾವ ಅವಧಿಗೆ ಹಣ ಸಂದಾಯ ಮಾಡಲಾಗಿದೆಯೋ ಆ ಅವಧಿಯನ್ನು; ಮತ್ತು

(ಇ) ಸಂದಾಯ ಮಾಡಿದ ಮೊಬಲಗನ್ನು

– ನಿರ್ದಿಷ್ಟಪಡಿಸತಕ್ಕದ್ದು.

## ಭಾಗ – II

### ಸ್ವತ್ತು ತೆರಿಗೆಯ ನಿರ್ಧರಣೆ

[1][**4.** ತೆರಿಗೆಗೆ ಗುರಿಯಾಗತಕ್ಕ ಭೂಮಿಯ ಬಂಡವಾಳ ಮೌಲ್ಯವನ್ನು ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ 45ಬಿ ಪ್ರಕರಣಕ್ಕನುಸಾರವಾಗಿ ಅಧಿಸೂಚಿಸಿದ ಭೂಮಿಯ ಅಂದಾಜು ಮಾರುಕಟ್ಟೆ ಮೌಲ್ಯವನ್ನು ಗಮನದಲ್ಲಿರಿಸಿಕೊಂಡು ಮತ್ತು 7ನೇ ನಿಯಮದ ಮೇರೆಗೆ ವಿವರಪಟ್ಟಿಯನ್ನು ಸಲ್ಲಿಸಲು ಗೊತ್ತುಪಡಿಸಿದ ಕೊನೆಯ ದಿನಾಂಕದ ನಿಕಟಪೂರ್ವದಲ್ಲಿ ಚಾಲ್ತಿಯಲ್ಲಿ ಇದ್ದಂತೆ ನಿರ್ಧರಿಸತಕ್ಕದ್ದು.

ಅಂಥ ದಿನಾಂಕದ ತರುವಾಯ ಅಂದಾಜು ಮಾರುಕಟ್ಟೆ ಮೌಲ್ಯದಲ್ಲಿ ಮಂಡಿಸಿದ ಯಾವುದೇ ಮಾರ್ಪಾಡನ್ನು ವರ್ಷಾವಧಿಯಲ್ಲಿ ಸ್ವತ್ತು ತೆರಿಗೆಯ ನಿರ್ಧರಣೆಗಾಗಿ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

1. ಅಧಿಸೂಚನೆ ಸಂಖ್ಯೆ: ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 4ರಿಂದ 19ರವರೆಗಿನ ನಿಯಮಗಳನ್ನು 31–12–2002ರಿಂದ ಜಾರಿಗೆ ಬರುವಂತೆ ಪ್ರತ್ಯಾಯೋಜಿಸಲಾಗಿದೆ.

**5.** ತೆರಿಗೆಗೆ ಗುರಿಯಾಗತಕ್ಕ ಯಾವುದೇ ಭೂಮಿಯ ಅಥವಾ ಕಟ್ಟಡದ ಬಂಡವಾಳ ಮೌಲ್ಯವನ್ನು, ಭೂಮಿಯ ಅಥವಾ ಸಂದರ್ಭಾನುಸಾರ, ಕಟ್ಟಡದ ಅಂದಾಜು ಮಾರುಕಟ್ಟೆ ಮೌಲ್ಯವನ್ನು ಅಂಥ ಭೂಮಿಯ ಅಥವಾ ಕಟ್ಟಡದ ವಿಸ್ತೀರ್ಣದಿಂದ ಗುಣಿಸುವ ಮೂಲಕ ನಿರ್ಧರಿಸತಕ್ಕದ್ದು.

**6.** ಆಯುಕ್ತರು, ನಗರದೊಳಗಿನ ಬೇರೆ ಬೇರೆ ಸ್ಥಳಗಳಲ್ಲಿ ಚಾಲ್ತಿಯಲ್ಲಿರುವ, ತೆರಿಗೆಗೆ ಗುರಿಯಾಗತಕ್ಕ ಭೂಮಿಯ ಅಥವಾ ಕಟ್ಟಡದ ಪ್ರತಿ ಘಟಕದ ಬಂಡವಾಳ ಮೌಲ್ಯವನ್ನು ತಮ್ಮ ಕಚೇರಿಯ ಸೂಚನಾ ಫಲಕದಲ್ಲಿ ಪ್ರಕಟ ಮಾಡಿಸತಕ್ಕದ್ದು.

**7.** ಸ್ವತ್ತು ತೆರಿಗೆ ಸಂದಾಯ ಮಾಡಲು ಹೊಣೆಗಾರನಾಗಿರುವ ಪ್ರತಿಯೊಬ್ಬ ಮಾಲೀಕನು ಅಥವಾ ಅಧಿಭೋಗದಾರನು ಪ್ರತಿ ವರ್ಷದ ಜೂನ್ ತಿಂಗಳ ಮೂವತ್ತನೇ ದಿನಾಂಕದಂದು ಅಥವಾ ಅದಕ್ಕೂ ಮುಂಚೆ ಆಯುಕ್ತರಿಗೆ ಅಥವಾ ಅವರಿಂದ ಅಧಿಕೃತನಾದ ಅಧಿಕಾರಿಗೆ ನಮೂನೆ –1ರಲ್ಲಿ ವಿವರಪಟ್ಟಿಕೆಯನ್ನು ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

[1][**7ಎ. ಸ್ವತ್ತು ತೆರಿಗೆಯಿಂದ ವಿನಾಯಿತಿ ಪಡೆದ ಕಟ್ಟಡಗಳ ಮೇಲೆ ಸೇವಾ ಶುಲ್ಕ ವಿಧಿಸುವುದು.**– (1) ಸಾರ್ವಜನಿಕ ಪೂಜಾ ಸ್ಥಳಗಳನ್ನು ಹೊರತುಪಡಿಸಿ, 110ನೇ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆಯಿಂದ ವಿನಾಯಿತಿ ಪಡೆದ ಕಟ್ಟಡಗಳಿಗೆ ಸಂಬಂಧಿಸಿದಂತೆ, ನಾಗರಿಕ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಅಧಿನಿಯಮದ 111ನೇ ಪ್ರಕರಣದ ಮೇರೆಗೆ ವಿನಾಯಿತಿ ಪಡೆದಿಲ್ಲದಿದ್ದರೆ, ಅಂಥ ಭೂಮಿಗಳಿಗೆ ಅಥವಾ ಕಟ್ಟಡಗಳಿಗೆ ವಿಧಿಸಬಹುದಾದ ಸ್ವತ್ತು ತೆರಿಗೆಯ ಶೇ. 25ರ ದರದಲ್ಲಿ ಸೇವಾ ಶುಲ್ಕವನ್ನು ವಿಧಿಸತಕ್ಕದ್ದು.

1. ಅಧಿಸೂಚನೆ ಸಂ. ಯುಡಿಡಿ 65 ಎಂಎನ್‌ಯು 2002 ದಿನಾಂಕ 27–02–2004ರ ಮೂಲಕ 7ಎ ಮತ್ತು 7ಬಿ ನಿಯಮಗಳನ್ನು 9–3–2004ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಅಂಥ ಕಟ್ಟಡದ ಮಾಲೀಕನು ಅಥವಾ ಅಧಿಭೋಗದಾರನು ಸೇವಾ ಶುಲ್ಕವನ್ನು ಸಂದಾಯ ಮಾಡತಕ್ಕದ್ದು ಮತ್ತು ಆಯುಕ್ತರಿಗೆ ಅಥವಾ ಅಧಿಕೃತನಾದ ಅಧಿಕಾರಿಗೆ 7ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ ನಮೂನೆ–1ಎ ಯಲ್ಲಿ ವಿವರಪಟ್ಟಿಕೆಯನ್ನು ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

**7ಬಿ. ಮೋಟಾರು ವಾಹನಗಳ ಮೇಲೆ ಮೂಲಸೌಕರ್ಯ ಉಪಕರ ವಿಧಿಸುವುದು.**– (1) ನಗರ ಪಾಲಿಕೆಗಳ ಎಲ್ಲೆಗಳೊಳಗೆ ನೋಂದಾಯಿಸಿದ ಮೋಟಾರು ವಾಹನಗಳ ವರ್ಗದ ಮೇಲೆ ಈ ಕೆಳಗೆ ನಿರ್ದಿಷ್ಟಪಡಿಸಲಾದ ದರಗಳಲ್ಲಿ ಮೂಲಸೌಕರ್ಯ ಉಪಕರವನ್ನು ವಿಧಿಸತಕ್ಕದ್ದು:–

| | | |
|---|---|---|
| I | ದ್ವಿಚಕ್ರ ವಾಹನಗಳು | 50/– ರೂ.ಗಳು |
| II | ಲಘು ಮೋಟಾರು ವಾಹನಗಳು | |
| | (1) ತ್ರಿಚಕ್ರ ವಾಹನಗಳು | 100/– ರೂ.ಗಳು |
| | (2) ನಾಲ್ಕು ಚಕ್ರಗಳ ವಾಹನಗಳು | 300/– ರೂ.ಗಳು |
| III | ಮಧ್ಯಮ ಮತ್ತು ಭಾರಿ ವಾಹನಗಳು | |
| | (1) ಪ್ರಯಾಣಿಕರ ವಾಹನ | 400/– ರೂ.ಗಳು |
| | (2) ಸರಕು ಸಾಗಣೆ ವಾಹನ | 500/– ರೂ.ಗಳು. |

(2) ಮೋಟಾರು ವಾಹನಗಳ ಮೇಲೆ ವಿಧಿಸಿದ ಮೂಲಸೌಕರ್ಯ ಉಪಕರವನ್ನು ಮೂಲತಃ ನೋಂದಾಯಿತ ಮಾಲೀಕನಿಂದ ಅಥವಾ ಕಂತು ಖರೀದಿಗೆ, ಒಪ್ಪಂದಕ್ಕೆ, ಬಾಡಿಗೆ ಒಪ್ಪಂದಕ್ಕೆ ಅಥವಾ ಇಡು ಒಪ್ಪಂದಕ್ಕೆ ಒಳಪಟ್ಟಿರುವ ಮೋಟಾರು ವಾಹನದ ಸ್ವಾಧೀನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ವ್ಯಕ್ತಿಯಿಂದ ವಸೂಲಿ ಮಾಡತಕ್ಕದ್ದು.

(3) ಮೂಲಸೌಕರ್ಯ ಉಪಕರವನ್ನು ಸಂದಾಯ ಮಾಡತಕ್ಕದ್ದು ಮತ್ತು ಆಯುಕ್ತರಿಗೆ ಅಥವಾ ಅಧಿಕೃತ ಅಧಿಕಾರಿಗೆ ನಮೂನೆ-Iಬಿ ಯಲ್ಲಿ ವಿವರಪಟ್ಟಿಕೆಯನ್ನು ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(4) ಮೋಟಾರು ವಾಹನದ ಸ್ವಾಧೀನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಮತ್ತು ಯಾವುದೇ ಕಟ್ಟಡದ ಅಥವಾ ವ್ಯವಹಾರ ಸ್ಥಳದ ಅಧಿಭೋಗದಲ್ಲಿರುವ ಕುಟುಂಬದ ಅಥವಾ ಸಂಘದ, ಫರ್ಮಿನ ಅಥವಾ ಕಂಪನಿಯ ಸದಸ್ಯರು ಒಳಗೊಂಡಂತೆ ಹಲವಾರು ನೋಂದಾಯಿತ ಮಾಲೀಕರ ಅಥವಾ ವ್ಯಕ್ತಿಗಳ ಹೊಣೆಗಾರಿಕೆಯು ಜಂಟಿಯಾದುದಾಗಿರತಕ್ಕದ್ದು ಮತ್ತು ಪ್ರತ್ಯೇಕವಾದುದಾಗಿರತಕ್ಕದ್ದು]

**8**. ನಮೂನೆ-Iರಲ್ಲಿ ಇರುವ ವಿವರಪಟ್ಟಿಕೆಯನ್ನು ಖುದ್ದಾಗಿಯಾಗಲಿ ಅಥವಾ ತಲುಪೊಪ್ಪಿಗೆ ಸಹಿತ ನೋಂದಾಯಿತ ಅಂಚೆ ಮೂಲಕವಾಗಲಿ ಸಲ್ಲಿಸತಕ್ಕದ್ದು. ಅದನ್ನು ಖುದ್ದಾಗಿ ಸಲ್ಲಿಸಿದರೆ ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಅದರ ಒಂದು ಪ್ರತಿಯ ಮೇಲೆ ಕ್ರಮಬದ್ಧವಾಗಿ ಸ್ವೀಕೃತಿಯನ್ನು ದಾಖಲಿಸಿ ಅದನ್ನು ಮಾಲೀಕನಿಗೆ ಅಥವಾ ಅಧಿಭೋಗದಾರನಿಗೆ ಹಿಂದಿರುಗಿಸತಕ್ಕದ್ದು.

**9**. ನಿಯಮ 7ರ ಮೇರೆಗೆ ಸ್ವೀಕರಿಸಿದ ವಿವರಪಟ್ಟಿಕೆಯು ಸರಿಯಾಗಿದ್ದರೆ ಮತ್ತು ಪೂರ್ಣವಾಗಿದ್ದರೆ, ಆಯುಕ್ತರು ಅಥವಾ ಸಂದರ್ಭಾನುಸಾರ ಅಧಿಕೃತ ಅಧಿಕಾರಿಯು, ವಿವರಪಟ್ಟಿಕೆಯಲ್ಲಿ ಒದಗಿಸಿದ ಮಾಹಿತಿಯ ಆಧಾರದ ಮೇಲೆ ಸ್ವತ್ತು ತೆರಿಗೆಯನ್ನು ನಿರ್ಧರಿಸಲು ಕ್ರಮ ಜರುಗಿಸುವುದು ಅವಶ್ಯಕವಾಗಿರತಕ್ಕದ್ದು.

**10**. ಯಾವುದೇ ವಿವರಪಟ್ಟಿಕೆಯನ್ನು ಸಲ್ಲಿಸದಿದ್ದರೆ ಅಥವಾ ಸಲ್ಲಿಸಿರುವ ವಿವರಪಟ್ಟಿಕೆಯು ಅಪೂರ್ಣವಾಗಿದ್ದರೆ ಅಥವಾ ಸರಿಯಾಗಿರದಿದ್ದರೆ, ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಮಾಡಿದ ತನಿಖೆಯ ಮತ್ತು ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಮತ್ತು ತಾನು ಅವಶ್ಯವೆಂದು ಪರಿಗಣಿಸಿದಂಥ ವಿಚಾರಣೆಯನ್ನು ನಡೆಸಿದ ತರುವಾಯ, ಸ್ವತ್ತು ತೆರಿಗೆ ನಿರ್ಧರಣೆಗೆ ಕ್ರಮ ಜರುಗಿಸಬಹುದು.

**11**. ಆಯುಕ್ತರು ಅಥವಾ ಸಂದರ್ಭಾನುಸಾರ ಅಧಿಕೃತ ಅಧಿಕಾರಿಯು, ಪ್ರತಿಯೊಂದು ವರ್ಷಕ್ಕಾಗಿ ಪ್ರತಿಯೊಂದು ವಾರ್ಡಿನ ಸಂಬಂಧದಲ್ಲಿ ನಮೂನೆ-IIರಲ್ಲಿ ಸ್ವತ್ತು ತೆರಿಗೆ ರಿಜಿಸ್ಟರನ್ನು ಸಿದ್ಧಪಡಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

**12**. ಆಯುಕ್ತರು, 112ಸಿ ಪ್ರಕರಣದ (2)ನೆ ಉಪ-ಪ್ರಕರಣದ ಉದ್ದೇಶಕ್ಕಾಗಿ ಪ್ರಾಧಿಕಾರಿಯಾಗಿರತಕ್ಕದ್ದು. ಅವರು, ಆ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯು ಸಂದಾಯ ಮಾಡಬೇಕಾದ ದಂಡವನ್ನು ನಿರ್ಧರಿಸುವುದಕ್ಕೆ ಮುಂಚೆ ಅಂಥ ವ್ಯಕ್ತಿಯ ಆಕ್ಷೇಪಣೆಗಳು ಯಾವುವಾದರೂ ಇದ್ದರೆ ಅವುಗಳನ್ನು ಸಲ್ಲಿಸಲು ಆತನಿಗೆ ನೋಟೀಸನ್ನು ನೀಡತಕ್ಕದ್ದು.

**13**. ಆಕ್ಷೇಪಣೆಗಳನ್ನೇನಾದರೂ ಸಲ್ಲಿಸಿದರೆ, ಅವುಗಳನ್ನು ಸ್ವೀಕರಿಸಿದ ನಂತರ ಮತ್ತು ಆಯುಕ್ತರು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ನಡೆಸಿದ ತರುವಾಯ 112ಸಿ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ದಂಡವನ್ನು ಅವರು ನಿರ್ಧರಿಸತಕ್ಕದ್ದು.

**14**. 112ಸಿ ಪ್ರಕರಣದ (2)ನೇ ಉಪ-ಪ್ರಕರಣದ ಮೇರೆಗೆ ಮಾಡಿದ ಆದೇಶದ ವಿರುದ್ಧ ಅಪೀಲನ್ನು, ಸಂಬಂಧಪಟ್ಟ ಪ್ರದೇಶದ ಮೇಲೆ ಅಧಿಕಾರವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು.

**15**. 112ಸಿ ಪ್ರಕರಣದ ಮೇರೆಗೆ ನಿರ್ಧರಿಸಿದ ದಂಡವನ್ನು, ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ಸಂದಾಯ ಮಾಡದಿದ್ದರೆ, ಅದನ್ನು ಸಂದಾಯ ಮಾಡಲು ಹೊಣೆಗಾರನಾದ ವ್ಯಕ್ತಿಗೆ ನಮೂನೆ-IIIರಲ್ಲಿ, ತಗಾದೆ ನೋಟೀಸನ್ನು ನಗರಪಾಲಿಕೆಯು ಜಾರಿ ಮಾಡಿಸತಕ್ಕದ್ದು.

**16**. ನಿಯಮ 14ರ ಮೇರೆಗೆ ಯಾವ ವ್ಯಕ್ತಿಗೆ ತಗಾದೆ ನೋಟೀಸನ್ನು ಜಾರಿ ಮಾಡಲಾಗಿದೆಯೋ ಆ ವ್ಯಕ್ತಿಯು ಅಂಥ ತಗಾದೆ ನೋಟೀಸನ್ನು ಜಾರಿ ಮಾಡಿದ ಮೂವತ್ತು ದಿನಗಳೊಳಗೆ,-

(i) ನೋಟೀಸಿನಲ್ಲಿ ತಗಾದೆ ಮಾಡಿರುವ ಮೊತ್ತವನ್ನು ಸಂದಾಯ ಮಾಡದಿದ್ದರೆ; ಅಥವಾ

(ii) 112ಸಿ ಪ್ರಕರಣದ (3)ನೇ ಉಪ ಪ್ರಕರಣದ ಮೇರೆಗೆ ಅಪೀಲನ್ನು ಸಲ್ಲಿಸದಿದ್ದರೆ

– ಆತನನ್ನು ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನಂತರ ಅಂಥ ಮೊತ್ತವನ್ನು 27ರಿಂದ 37ರವರೆಗಿನ ನಿಯಮಗಳ ಪ್ರಕಾರ ವಸೂಲ್ಮಾಡತಕ್ಕದ್ದು.

**17**. 113ನೇ ಪ್ರಕರಣದ ಮೇರೆಗಿನ ತಗಾದೆ ನೋಟೀಸು ನಮೂನೆ-III ರಲ್ಲಿರತಕ್ಕದ್ದು.

**18**. ದಂಡದ ಜೊತೆಗೆ ಸ್ವತ್ತು ತೆರಿಗೆಯನ್ನು ತಪ್ಪಿತಸ್ಥನೆಂದು ಭಾವಿಸಲಾದ ವ್ಯಕ್ತಿಯಿಂದ 27ರಿಂದ 37ರವರೆಗಿನ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ವಸೂಲು ಮಾಡತಕ್ಕದ್ದು.

**19**. 113ನೇ ಪ್ರಕರಣದ (1)ನೆ ಉಪ-ಪ್ರಕರಣದ ಮೇರೆಗೆ ಜಾರಿ ಮಾಡಿದ ತಗಾದೆ ನೋಟೀಸಿನಲ್ಲಿ ಒಳಗೊಂಡಿರುವ ಯಾವುದೇ ಕ್ಲೇಮಿನ ವಿರುದ್ಧ ಅಪೀಲನ್ನು ಸಂಬಂಧಪಟ್ಟ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ ಸಲ್ಲಿಸಬಹುದು:

ಪರಂತು, ಅಂಥ ಯಾವುದೇ ಅಪೀಲನ್ನು, ಯಾವ ಕಾರಣಗಳ ಮೇಲೆ ವಿವಾದಿತ ಕ್ಲೇಮನ್ನು ಮಾಡಲಾಗಿದೆಯೋ ಆ ಕಾರಣಗಳನ್ನು ತಿಳಿಸಿ, ಲಿಖಿತದಲ್ಲಿ ಅರ್ಜಿಯನ್ನು ಸಲ್ಲಿಸಿದ ಹೊರತು ಮತ್ತು ಅರ್ಜಿದಾರನು ಒಪ್ಪಿಕೊಂಡ ಮೊತ್ತವನ್ನು ನಗರಪಾಲಿಕೆ ಕಚೇರಿಯಲ್ಲಿ ಅರ್ಜಿದಾರನು ಠೇವಣಿ ಇಟ್ಟ ಹೊರತು ವಿಚಾರಣೆ ಮಾಡತಕ್ಕದ್ದಲ್ಲ ಮತ್ತು ನಿರ್ಧರಿಸತಕ್ಕದ್ದಲ್ಲ]

[1][**19ಎ. ಕಟ್ಟಡಗಳ ಮೇಲೆ ಘನತ್ಯಾಜ್ಯ ನಿರ್ವಹಣೆ ಉಪಕರ ದರ.–** ನಗರ ಪಾಲಿಕೆಯ ಎಲ್ಲೆಯೊಳಗೆ ಇರುವ ಕಟ್ಟಡಗಳ ಮೇಲೆ ಘನತ್ಯಾಜ್ಯ ವಸ್ತು ನಿರ್ವಹಣೆ ಉಪಕರವನ್ನು ಈ ಕೆಳಗೆ ನಿರ್ದಿಷ್ಟಪಡಿಸಿದ ಮಾಸಿಕ ದರದಲ್ಲಿ ವಿಧಿಸತಕ್ಕದ್ದು.-

1. ಅಧಿಸೂಚನೆ ಸಂ. ಯುಡಿಡಿ 65 ಎಂಎನ್‌ಯು 2002, ದಿನಾಂಕ 27-2-2004ರ ಮೂಲಕ 9.3.2004ರಿಂದ ಜಾರಿಗೆ ಬರುವಂತೆ 19ಎ ಮತ್ತು 19ಬಿ ನಿಯಮಗಳನ್ನು ಸೇರಿಸಲಾಗಿದೆ.

**I. ವಾಸದ ಕಟ್ಟಡಗಳು:–**

| | | |
|---|---|---|
| (i) | 1000 ಚದರ ಅಡಿಗಳಿಗಿಂತ ಕಡಿಮೆ ಇರುವ ಮೇಲುಪಾಯ ವಿಸ್ತೀರ್ಣ | 10 ರೂ.ಗಳು |
| (ii) | 1000 ಚದರ ಅಡಿಗಳಿಗಿಂತ ಕಡಿಮೆ ಇರದ 3000 ಚದರ ಅಡಿಗಳಿಗಿಂತ ಹೆಚ್ಚಿರದ ಮೇಲುಪಾಯ ವಿಸ್ತೀರ್ಣ | 30 ರೂ.ಗಳು |
| (iii) | 3000 ಚದರ ಅಡಿಗಳನ್ನು ಮೀರಿದ ಮೇಲುಪಾಯ ವಿಸ್ತೀರ್ಣ | 50 ರೂ.ಗಳು. |

**II. ವಾಣಿಜ್ಯ ಕಟ್ಟಡಗಳು.–**

| | | |
|---|---|---|
| (i) | 1000 ಚದರ ಅಡಿಗಳಿಗಿಂತ ಕಡಿಮೆ ಇರುವ ಮೇಲುಪಾಯ ವಿಸ್ತೀರ್ಣ | 50 ರೂ.ಗಳು |
| (ii) | 1000 ಚದರ ಅಡಿಗಳಿಗಿಂತ ಕಡಿಮೆ ಇಲ್ಲದ ಮತ್ತು 5000 ಚದರ ಅಡಿಗಳಿಗಿಂತ ಹೆಚ್ಚಿಲ್ಲದ ಮೇಲುಪಾಯ ವಿಸ್ತೀರ್ಣ | 100 ರೂ.ಗಳು |
| (iii) | 5000 ಚದರ ಅಡಿಗಳಿಗಿಂತ ಹೆಚ್ಚಿರುವ ಮೇಲುಪಾಯ ವಿಸ್ತೀರ್ಣ | 200 ರೂ.ಗಳು. |

**III. ಕೈಗಾರಿಕಾ ಕಟ್ಟಡಗಳು.–**

| | | |
|---|---|---|
| (i) | 1000 ಚದರ ಅಡಿಗಳಿಗಿಂತ ಕಡಿಮೆ ಇಲ್ಲದ ಮೇಲುಪಾಯ ವಿಸ್ತೀರ್ಣ | 100 ರೂ.ಗಳು |
| (ii) | 1000 ಚದರ ಅಡಿಗಳಿಗಿಂತ ಕಡಿಮೆ ಇಲ್ಲದ ಆದರೆ 5000 ಚದರ ಅಡಿಗಳಿಗಿಂತ ಹೆಚ್ಚಿರದ ಮೇಲುಪಾಯ ವಿಸ್ತೀರ್ಣ | 200 ರೂ.ಗಳು |
| (iii) | 5000 ಚದರ ಅಡಿಗಳಿಗಿಂತ ಹೆಚ್ಚಾಗಿರುವ ಮೇಲುಪಾಯ ವಿಸ್ತೀರ್ಣ | 300 ರೂ.ಗಳು. |

**IV. ಹೋಟೇಲುಗಳು, ಕಲ್ಯಾಣ ಮಂಟಪಗಳು, ನರ್ಸಿಂಗ್ ಹೋಂಗಳು**

| | | |
|---|---|---|
| (i) | 10000 ಚದರ ಅಡಿಗಳಿಗಿಂತ ಕಡಿಮೆ ಇರದ ಮೇಲುಪಾಯ ವಿಸ್ತೀರ್ಣ | 300 ರೂ.ಗಳು |
| (ii) | 10,000 ಚದರ ಅಡಿಗಳಿಗಿಂತ ಕಡಿಮೆ ಇರದ ಆದರೆ 50,000 ಚದರ ಅಡಿಗಳಿಗಿಂತ ಹೆಚ್ಚಿಲ್ಲದ ಮೇಲುಪಾಯ ವಿಸ್ತೀರ್ಣ | 500 ರೂ.ಗಳು |
| (iii) | 50,000 ಚದರ ಅಡಿಗಳಿಗಿಂತ ಹೆಚ್ಚಾಗಿರುವ ಮೇಲುಪಾಯ ವಿಸ್ತೀರ್ಣ | 600 ರೂ.ಗಳು. |

**ಟಿಪ್ಪಣಿ:–** ಈ ನಿಯಮಗಳ ಉದ್ದೇಶಕ್ಕಾಗಿ, ಘನ ತ್ಯಾಜ್ಯದಲ್ಲಿ ಕೈಗಾರಿಕೆ ಮತ್ತು ಅಪಾಯಕಾರಿ ತ್ಯಾಜ್ಯವು ಹಾಗೂ ಆಸ್ಪತ್ರೆ ತ್ಯಾಜ್ಯವು ಸೇರುವುದಿಲ್ಲ.

**19ಬಿ. ಘನ ತ್ಯಾಜ್ಯ ನಿರ್ವಹಣಾ ಉಪಕರದ ನಿರ್ಧರಣೆಯ ರೀತಿ ಮತ್ತು ಸಂಗ್ರಹಣೆ.–** (1) ಅಧಿನಿಯಮದ 255 ಮತ್ತು 258ನೇ ಪ್ರಕರಣಗಳ ಮೇರೆಗೆ ಕಸಕಡ್ಡಿಯನ್ನು ಮತ್ತು ಹೊಲಸನ್ನು ತೆಗೆದುಹಾಕಲು ವ್ಯವಸ್ಥೆಗೆ ಅವಕಾಶ ಕಲ್ಪಿಸಿರುವಲ್ಲೆಲ್ಲಾ, ಆಯುಕ್ತರು ಘನತ್ಯಾಜ್ಯ ನಿರ್ವಹಣೆ ಮತ್ತು ನಿಭಾವಣೆಯನ್ನು ಒಂದು ಏಜೆನ್ಸಿಗೆ ವಹಿಸಿಕೊಡಬಹುದು ಮತ್ತು ಕಟ್ಟಡದ ಮಾಲೀಕನಿಂದ ಅಥವಾ ಅಧಿಭೋಗದಾರನಿಂದ 19ಎ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಘನತ್ಯಾಜ್ಯ ನಿರ್ವಹಣಾ ಉಪಕರವನ್ನು ಸಂಗ್ರಹಿಸಲು ಅಂಥ ಏಜೆನ್ಸಿಗೆ ಅಧಿಕಾರ ನೀಡಬಹುದು.

(2) ಮಾಲೀಕರು ಮತ್ತು ಅಧಿಭೋಗದಾರರು ಕಸಕಡ್ಡಿಯನ್ನು ಮತ್ತು ಹೊಲಸನ್ನು ಪೆಟ್ಟಿಗೆಯಲ್ಲಿ ಹಾಕಲು ಅಧಿನಿಯಮದ 256ನೇ ಮತ್ತು 257ನೇ ಪ್ರಕರಣಗಳ ಮೇರೆಗೆ ಆದೇಶಿಸಿ ಸಾರ್ವಜನಿಕ ನೋಟೀಸನ್ನು ಹೊರಡಿಸಿದ್ದಲ್ಲಿ, ಆಯುಕ್ತರು ಘನ ತ್ಯಾಜ್ಯದ ನಿರ್ವಹಣೆ ಮತ್ತು ನಿಭಾವಣೆಯನ್ನು ಕೈಗೊಳ್ಳಲು, ಪ್ರದೇಶದ ನಿವಾಸಿಗಳನ್ನು ಒಳಗೊಂಡ, ನಿವಾಸಿಗಳ ಸಂಘವೂ ಸೇರಿದಂತೆ ಯಾವುದೇ ಖಾಸಗಿ ಏಜೆನ್ಸಿಗೆ ಅನುಮತಿ ನೀಡಬಹುದು ಮತ್ತು ಅಂಥ ಖಾಸಗಿ ಏಜೆನ್ಸಿಗೆ ಕಟ್ಟಡದ ಮಾಲೀಕನಿಂದ ಅಥವಾ ಅದಿಭೋಗದಾರನಿಂದ 19ಎ ನಿಯಮದಲ್ಲಿ ಗೊತ್ತುಪಡಿಸಿದ ಘನತ್ಯಾಜ್ಯ ನಿರ್ವಹಣ ಉಪಕರವನ್ನು ಸಂಗ್ರಹಿಸಲು ಅಧಿಕಾರ ನೀಡಬಹುದು.

(3) ಏಜೆನ್ಸಿಯು, ಆಯುಕ್ತರು ಗೊತ್ತುಪಡಿಸಿದ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಅನುಸಾರವಾಗಿ ಘನತ್ಯಾಜ್ಯ ಉಪಕರವನ್ನು ಸಂಗ್ರಹಿಸತಕ್ಕದ್ದು.

(4) ಇತರ ಪ್ರಕರಣಗಳಲ್ಲಿ, ನಗರಪಾಲಿಕೆಯು ಸ್ವತಃ ತಾನೇ ಘನತ್ಯಾಜ್ಯ ನಿರ್ವಹಣಾ ಉಪಕರವನ್ನು ಸಂಗ್ರಹಿಸಬಹುದು.

(5) ಸ್ಥಾಯೀ ಸಮಿತಿಯು, ಘನತ್ಯಾಜ್ಯ ನಿರ್ವಹಣಾ ಉಪಕರದ ಸಂಬಂಧದಲ್ಲಿ 103ಬಿ ಪ್ರಕರಣದ (3)ನೇ ಉಪ–ಪ್ರಕರಣದ ಉದ್ದೇಶಗಳಿಗಾಗಿ ನಿಯಮಿಸಿದ ಪ್ರಾಧಿಕಾರವಾಗಿರತಕ್ಕದ್ದು.

(6) ಘನತ್ಯಾಜ್ಯ ನಿರ್ವಹಣಾ ಉಪಕರವನ್ನು ಸಂಗ್ರಹಿಸಲು ಅಧಿಕೃತಗೊಂಡ ಏಜೆನ್ಸಿಯ ಯಾವುದೇ ಲೋಪದಿಂದ ಅಥವಾ ದೋಷದಿಂದ ಬಾಧಿತನಾಗುವ ಯಾರೇ ವ್ಯಕ್ತಿಯು ಸಮಿತಿಗೆ ಅಪೀಲು ಸಲ್ಲಿಸಬಹುದು.]

[1][**20–25** x x x x x ]

1. ಅಧಿಸೂಚನೆ ಸಂ. ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ 20ರಿಂದ 25 ರವರೆಗಿನ ನಿಯಮಗಳನ್ನು ಬಿಟ್ಟುಬಿಡಲಾಗಿದೆ.

## ಭಾಗ– III

### ತೆರಿಗೆಗಳ ಸಂಗ್ರಹಣೆ

**26.** (1) ಯಾರೇ ವ್ಯಕ್ತಿಯಿಂದ ಯಾವುದೇ ತೆರಿಗೆ [1][x x x] ಬಾಕಿ ಇರುವಲ್ಲಿ ಆಯುಕ್ತರು, 27ನೇ ನಿಯಮದ ಉಪಬಂಧಗಳನ್ನು ಜಾರಿಗೊಳಿಸಲು ಕ್ರಮ ಜರುಗುವುದಕ್ಕೆ ಮುಂಚೆ ಬಾಕಿ ಇರುವ ಮೊತ್ತವನ್ನು ಕಾಣಿಸಿರುವ ಬಿಲ್ಲನ್ನು ಅಂಥ ವ್ಯಕ್ತಿಗೆ ಬಿಲ್ಲನ್ನು ಜಾರಿ ಮಾಡುವಂತೆ ಅಥವಾ ಕಳುಹಿಸುವಂತೆ ಮಾಡತಕ್ಕದ್ದು:

1. ಅಧಿಸೂಚನೆ ಸಂಖ್ಯೆ ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ "ಯಾವ ತೆರಿಗೆಗೆ ಸಂಬಂಧಿಸಿದಂತೆ 125ನೇ ಪ್ರಕರಣದ ಮೇರೆಗೆ ನೋಟೀಸನ್ನು ಜಾರಿ ಮಾಡಬೇಕಾಗಿದೆಯೋ ಅಥವಾ 12ನೇ ನಿಯಮದ ಮೇರೆಗೆ ನಿರ್ದೇಶನವನ್ನು ಕೊಡಬೇಕಾಗಿದೆಯೋ ಆ ತೆರಿಗೆ ಅಲ್ಲದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡಲಾಗಿದೆ.

ಪರಂತು, ಈ ಉಪನಿಯಮವು, [1][103ಬಿ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಉಪಕರದ, 112ನೇ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಸ್ವತ್ತು ತೆರಿಗೆಯ ಮತ್ತು ದಂಡದ ಮತ್ತು 112ಸಿ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ದಂಡದ] ಸಂಬಂಧದಲ್ಲಿ ಅನ್ವಯವಾಗತಕ್ಕದ್ದಲ್ಲ.

1. "112ನೇ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ಸ್ವತ್ತು ತೆರಿಗೆ" ಎಂಬ ಪದಗಳು ಮತ್ತು ಅಂಕಿಗಳಿಗೆ ಅಧಿಸೂಚನೆ ಸಂಖ್ಯೆ. ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಉಪನಿಯಮ (1)ರ ಮೇರೆಗಿನ [1][xxx] ಬಿಲ್ಲಿಗೆ ಆಯುಕ್ತರು ಸಹಿ ಮಾಡತಕ್ಕದ್ದು ಮತ್ತು ಅದು,–

1. ಅಧಿಸೂಚನೆ ಸಂಖ್ಯೆ ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ "121ನೇ ಪ್ರಕರಣ ಮೇರೆಗಿನ ನೋಟೀಸಿಗೆ ಮತ್ತು" ಎಂಬ ಪದಗಳು ಮತ್ತು ಅಂಕಿಗಳನ್ನು ಬಿಟ್ಟುಬಿಡಲಾಗಿದೆ.

(ಎ) ಯಾವ ಅವಧಿಗೆ ಮತ್ತು ಯಾವ ವೃತ್ತಿಗೆ, ಸ್ವತ್ತಿಗೆ ಅಥವಾ ವಸ್ತುವಿಗೆ ತೆರಿಗೆಯನ್ನು ವಿಧಿಸಲಾಗಿದೆಯೋ ಆ ಅವಧಿಯನ್ನು ಮತ್ತು ಆ ವೃತ್ತಿಯ, ಸ್ವತ್ತಿನ ಅಥವಾ ವಸ್ತುವಿನ ವರ್ಣನೆಯನ್ನು ಮತ್ತು ತಗಾದೆಯ ಇತರ ವಿವರಗಳನ್ನು ಒಳಗೊಂಡ ವಿವರಣ ಪಟ್ಟಿಯನ್ನು; ಮತ್ತು

(ಬಿ) ಸಂದಾಯ ಮಾಡಲು ತಪ್ಪಿದಲ್ಲಿ ವಹಿಸಬಹುದಾದ ಹೊಣೆಗಾರಿಕೆಯ ನೋಟೀಸನ್ನು

– ಒಳಗೊಂಡಿರತಕ್ಕದ್ದು.

**27.** (1) ಯಾವುದೇ ತೆರಿಗೆಯ ಸಂಬಂಧದಲ್ಲಿ ಬಾಕಿ ಇರುವ ಮೊಬಲಗನ್ನು [1][ಬಿಲ್ಲನ್ನು ಜಾರಿಗೊಳಿಸಿದ ದಿನದಿಂದ ಹದಿನೈದು ದಿನಗಳ ಒಳಗಾಗಿ][1] ಸಂದಾಯ ಮಾಡದಿದ್ದರೆ ಮತ್ತು ಯಾವ ವ್ಯಕ್ತಿಯಿಂದ ತೆರಿಗೆ ಬಾಕಿ ಇದೆಯೋ ಆ ವ್ಯಕ್ತಿಯು, ಅದನ್ನು ಏಕೆ ಸಂದಾಯ ಮಾಡಿಲ್ಲ ಎಂಬ ಬಗ್ಗೆ ಆಯುಕ್ತರಿಗೆ ಮನದಟ್ಟಾಗುವಂತೆ ಕಾರಣ ತೋರಿಸದಿದ್ದರೆ, ಆಯುಕ್ತರು ಸುಸ್ತಿದಾರನ ಚರ ಸ್ವತ್ತನ್ನು ತಮ್ಮ ವಾರಂಟಿನ ಮೇರೆಗೆ ಜಪ್ತಿ ಮಾಡುವ ಮತ್ತು ಮಾರಾಟ ಮಾಡುವ ಮೂಲಕ ಅಥವಾ ಸುಸ್ತಿದಾರನು ಯಾವ ಕಟ್ಟಡಕ್ಕೆ ಅಥವಾ ಭೂಮಿಗೆ ಸಂಬಂಧಿಸಿದಂತೆ ತೆರಿಗೆ ಬಾಕಿ ಇದೆಯೋ ಆ ಯಾವುದೇ ಕಟ್ಟಡದ ಅಥವಾ ಭೂಮಿಯ ಅಧಿಭೋಗದಾರನಾಗಿದ್ದರೆ, ಅಂಥ ಕಟ್ಟಡದಲ್ಲಿ ಅಥವಾ ಭೂಮಿಯಲ್ಲಿ ಕಂಡುಬರಬಹುದಾದ ಯಾವುದೇ ಚರ ಸ್ವತ್ತನ್ನು ಜಪ್ತಿ ಮಾಡುವ ಮತ್ತು ಮಾರಾಟ ಮಾಡುವ ಮೂಲಕ, ತೆರಿಗೆಯ ಸಂಬಂಧದಲ್ಲಿ ಬಾಕಿಯಿರುವ ಮೊಬಲಗಿನ ಜೊತೆಗೆ ವಾರಂಟ್ ಫೀಜನ್ನು ಮತ್ತು ಜಪ್ತಿ ಫೀಜನ್ನು ಮತ್ತು ಹಾಗೆ ಜಪ್ತಿ ಮಾಡಿದ ಸ್ವತ್ತನ್ನು ಇಟ್ಟುಕೊಳ್ಳುವುದಕ್ಕೆ ಮತ್ತು ಮಾರಾಟ ಮಾಡುವುದಕ್ಕೆ ಆಗುವಂತಹ ಸಂಭವನೀಯ ವೆಚ್ಚಗಳಿಗೆ ಸಾಕಾಗುವಷ್ಟು ಹೆಚ್ಚಿನ ಮೊತ್ತವನ್ನು ವಸೂಲು ಮಾಡಬಹುದು:

1. ಅಧಿಸೂಚನೆ ಸಂಖ್ಯೆ ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ "121ನೇ ಪ್ರಕರಣದಲ್ಲಿ ಅಥವಾ 12ನೇ ನಿಯಮದಲ್ಲಿ ಅಥವಾ 26ನೇ ನಿಯಮದಲ್ಲಿ ಉಲ್ಲೇಖಿಸಿದ ನೋಟೀಸನ್ನು ಅಥವಾ ಬಿಲ್ಲನ್ನು ಜಾರಿಗೊಳಿಸಿದ ಅಥವಾ ನಿರ್ದೇಶನವನ್ನು ಕೊಟ್ಟ ದಿನದಿಂದ ಹದಿನೈದು ದಿನಗಳ ಒಳಗಾಗಿ ಅಥವಾ "113ನೇ ಪ್ರಕರಣದ ಮೇರೆಗೆ ಅರ್ಧ ವರ್ಷವು ಪ್ರಾರಂಭವಾದ ನಂತರ ಮೂವತ್ತು ದಿನಗಳ ಒಳಗಾಗಿ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

ಪರಂತು, ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ (1908ರ ಕೇಂದ್ರ ಅಧಿನಿಯಮ 5) 60ನೇ ಪ್ರಕರಣದ (1)ನೇ ಉಪ–ಪ್ರಕರಣದ ಪರಂತುಕದಲ್ಲಿ ವಿವರಿಸಿದ ಚರ ಸ್ವತ್ತು ಯಾವಾಗಲೂ ಜಪ್ತಿಗೆ ಗುರಿಯಾಗತಕ್ಕದ್ದಲ್ಲ.

(2) ಯಾವುದೇ ಕಾರಣದಿಂದಾಗಿ, ಸುಸ್ತಿದಾರನ ಸ್ವತ್ತನ್ನು ಜಪ್ತಿ ಮಾಡಲಾಗದಿದ್ದರೆ ಅಥವಾ ಬಾಕಿ ಇರುವ ಹಣಕ್ಕೆ ಸಾಕಾಗುವಷ್ಟು ಸ್ವತ್ತನ್ನು ಜಪ್ತಿ ಮಾಡಲು ಆಗದಿದ್ದರೆ, ಆಯುಕ್ತರು ಸುಸ್ಥಿದಾರನನ್ನು ಮ್ಯಾಜಿಸ್ಟ್ರೇಟರ ಮುಂದೆ ಪ್ರಾಸಿಕ್ಯೂಟ್ ಮಾಡಬಹುದು.

(3) ಇದರಲ್ಲಿ ಒಳಗೊಂಡಿರುವುದು ಯಾವುದೂ, ಈ ಅಧಿನಿಯಮದ ಮೇರೆಗೆ ನಗರ ಪಾಲಿಕೆಗೆ ಬಾಕಿ ಇರುವ ಯಾವುದೇ ತೆರಿಗೆಯ, ಸುಂಕದ ಅಥವಾ ಇತರ ಮೊಬಲಗಿನ ವಸೂಲಿಗಾಗಿ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡದಂತೆ ನಗರ ಪಾಲಿಕೆಯನ್ನು ತಡೆಯತಕ್ಕದ್ದಲ್ಲ.

**28.** ಆಯುಕ್ತರ ಅಥವಾ ಜಪ್ತಿಯ ವಾರಂಟನ್ನು ಜಾರಿ ಮಾಡುವ ಕೆಲಸವನ್ನು ಯಾವ ಅಧಿಕಾರಿಗೆ ವಹಿಸಲಾಗಿದೆಯೋ ಆ ಯಾರೇ ಅಧಿಕಾರಿಯ ಲಿಖಿತ ವಿಶೇಷ ಆದೇಶದ ಮೇರೆಗೆ, ಜಪ್ತಿ ಮಾಡುವ ಸಲುವಾಗಿ ಕಟ್ಟಡದ ಯಾವುದೇ ಹೊರ ಅಥವಾ ಒಳಬಾಗಿಲನ್ನು ಅಥವಾ ಕಿಟಕಿಯನ್ನು, ವಶಕ್ಕೆ ತೆಗೆದುಕೊಳ್ಳಬೇಕಾದ ಸ್ವತ್ತು ಅಂಥ ಕಟ್ಟಡದಲ್ಲಿ ಇದೆಯೆಂದು ನಂಬಲು ಆತನಿಗೆ ಸಮಂಜಸ ಕಾರಣವಿದ್ದರೆ ಮತ್ತು ಕಟ್ಟಡವನ್ನು ಪ್ರವೇಶಿಸಲು ತನಗಿರುವ ಅಧಿಕಾರವನ್ನು ಮತ್ತು ಉದ್ದೇಶವನ್ನು ತಿಳಿಸಿದ ತರುವಾಯವು ತಾನು ಪ್ರವೇಶಿಸುವುದಕ್ಕೆ ವಿದ್ಯುಕ್ತವಾಗಿ ಒತ್ತಾಯಿಸಿದ ತರುವಾಯವು ಕಟ್ಟಡವನ್ನು ಪ್ರವೇಶಿಸಲು ಅವರಿಗೆ ಅನ್ಯಥಾ ಅವಕಾಶ ನೀಡದಿದ್ದರೆ, ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ ಮುರಿದು ತೆರೆಯಬಹುದು:

ಪರಂತು, ಅಂಥ ಅಧಿಕಾರಿಯು, ಮಹಿಳೆಯರಿಗೆ ಪ್ರತ್ಯೇಕವಾಗಿ ಇರಿಸಿರುವ ಯಾವುದೇ ಕೊಠಡಿಯನ್ನು ಪ್ರವೇಶಿಸುವ ಅಥವಾ ಅದರ ಬಾಗಿಲನ್ನು ಮುರಿದು ತೆರೆಯುವ, ತನ್ನ ಉದ್ದೇಶವನ್ನು ಮೂರು ಗಂಟೆ ಮುಂಚಿತವಾಗಿ ತಿಳಿಸಿದ ಹಾಗೂ ಮಹಿಳೆಯರಿಗೆ ಹೊರ ಹೋಗಲು ಅವಕಾಶವನ್ನು ಕೊಟ್ಟ ಹೊರತು, ಅಂಥ ಕೊಠಡಿಯನ್ನು ಪ್ರವೇಶಿಸತಕ್ಕದ್ದಲ್ಲ ಅಥವಾ ಅದರ ಬಾಗಿಲನ್ನು ಮುರಿದು ತೆರೆಯತಕ್ಕದ್ದಲ್ಲ.

**29**. ವಾರಂಟನ್ನು ಜಾರಿ ಮಾಡುವ ಕೆಲಸವನ್ನು ಯಾವ ಅಧಿಕಾರಿಗೆ ವಹಿಸಲಾಗಿದೆಯೋ ಆ ಅಧಿಕಾರಿಯು ಜಪ್ತಿ ಮಾಡುವುದಕ್ಕೆ ಮುಂಚೆ, ಬಾಕಿ ಇರುವ ತೆರಿಗೆಯನ್ನು ಮತ್ತು ವಾರಂಟ್ ಫೀಜನ್ನು ಸಂದಾಯ ಮಾಡುವಂತೆ ತಗಾದೆ ಮಾಡತಕ್ಕದ್ದು; ತೆರಿಗೆಯನ್ನು ಮತ್ತು ಫೀಜನ್ನು ಸಂದಾಯ ಮಾಡಿದರೆ ಜಪ್ತಿ ಮಾಡತಕ್ಕದ್ದಲ್ಲ ಮತ್ತು ತೆರಿಗೆಯನ್ನು ಮತ್ತು ಫೀಜನ್ನು ಸಂದಾಯ ಮಾಡದಿದ್ದರೆ,-

(ಎ) ತಾವು ಅವಶ್ಯವೆಂದು ಭಾವಿಸಬಹುದಾದಂತೆ ಸುಸ್ತಿದಾರನು ಅಂಥ ಚರ ಸ್ವತ್ತನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು;

(ಬಿ) ವಶಕ್ಕೆ ತೆಗೆದುಕೊಂಡ ಸ್ವತ್ತಿನ ತಪಸೀಲು ಪಟ್ಟಿಯನ್ನು ತಯಾರಿಸತಕ್ಕದ್ದು; ಮತ್ತು

(ಸಿ) ಸ್ವತ್ತನ್ನು ವಶಕ್ಕೆ ತೆಗೆದುಕೊಂಡ ಕಾಲದಲ್ಲಿ ವಶಕ್ಕೆ ತೆಗೆದುಕೊಂಡ ಸ್ವತ್ತಿನ ಸ್ವಾಧೀನವನ್ನು ಹೊಂದಿರುವ ವ್ಯಕ್ತಿಗೆ ಸ್ವತ್ತಿನ ತಪಸೀಲು ಪಟ್ಟಿಯ ಮತ್ತು ಮಾರಾಟದ ನೋಟೀಸಿನ ಒಂದು ಪ್ರತಿಯನ್ನು ಕೊಡತಕ್ಕದ್ದು:

ಪರಂತು, ಬಾಕಿ ಇರುವ ಮೊಬಲಗನ್ನು ಸಂದಾಯ ಮಾಡುವುದಕ್ಕೆ ಮತ್ತು ವಶಕ್ಕೆ ತೆಗೆದುಕೊಂಡ ಸ್ವತ್ತನ್ನು ವಾಪಸು ಪಡೆಯುವುದಕ್ಕೆ ಏಳು ದಿನಗಳ ಅವಧಿಯ ಕಾಲಾವಕಾಶವನ್ನು ಕೊಡತಕ್ಕದ್ದು.

**30**. ಅಗತ್ಯಕ್ಕಿಂತ ಹೆಚ್ಚು ಸ್ವತ್ತನ್ನು ಜಪ್ತಿ ಮಾಡತಕ್ಕದ್ದಲ್ಲ, ಅಂದರೆ, ಜಪ್ತಿ ಮಾಡಿದ ಸ್ವತ್ತು ಸಾಧ್ಯವಾದಷ್ಟು ಮಟ್ಟಿಗೆ, ವಾರಂಟು ನೀಡುವುದಕ್ಕೆ, ಜಪ್ತಿ ಮಾಡುವುದಕ್ಕೆ, ಸ್ವತ್ತನ್ನು ಇಟ್ಟುಕೊಳ್ಳುವುದಕ್ಕೆ ಮತ್ತು ಮಾರಾಟ ಮಾಡುವುದಕ್ಕೆ ಪ್ರಾಸಂಗಿಕವಾದ ಎಲ್ಲ ವೆಚ್ಚಗಳೊಂದಿಗೆ, ಸುಸ್ಥಿದಾರನಿಂದ ಬಾಕಿ ಇರುವ ತೆರಿಗೆಯ ಹಣಕ್ಕೆ ಸಮನಾಗಿರತಕ್ಕದ್ದು.

**31**. (1) ತೆರಿಗೆಯ ವಾರಂಟು ಫೀಜಿನ ಮತ್ತು ಜಪ್ತಿ ಫೀಜಿನ ಮತ್ತು ಸ್ವತ್ತನ್ನು ಇರಿಸಿಕೊಳ್ಳುವುದಕ್ಕೆ ಪ್ರಾಸಂಗಿಕವಾದ ವೆಚ್ಚಗಳ ಬಾಬ್ತು ಸುಸ್ಥಿದಾರನಿಂದ ಬಾಕಿ ಇರುವ ಮೊಬಲಗನ್ನು 29ನೇ ನಿಯಮದ ಮೇರೆಗೆ ಕೊಡಲಾದ ನೋಟೀಸಿನಲ್ಲಿ ತಿಳಿಸಿರುವ ಏಳು ದಿನಗಳ ಅವಧಿಯ ಒಳಗಾಗಿ ಸಂದಾಯ ಮಾಡದಿದ್ದರೆ ಮತ್ತು ಜಪ್ತಿ ವಾರಂಟನ್ನು ಆಯುಕ್ತರು ಅಮಾನತುಗೊಳಿಸದಿದ್ದರೆ, ವಶಕ್ಕೆ ತೆಗೆದುಕೊಂಡ ಸ್ವತ್ತನ್ನು ಅಥವಾ ಅದರ ಸಾಕಷ್ಟು ಭಾಗವನ್ನು ಆಯುಕ್ತರ ಆದೇಶದ ಮೇರೆಗೆ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡತಕ್ಕದ್ದು. ಆಯುಕ್ತರು, ಮಾರಾಟದ ಉತ್ಪತ್ತಿಯನ್ನು ತೆರಿಗೆಯ, ವಾರಂಟು ಫೀಜಿನ ಮತ್ತು ಜಪ್ತಿ ಫೀಜಿನ ಮತ್ತು ಸ್ವತ್ತನ್ನು ಇರಿಸಿಕೊಳ್ಳುವುದಕ್ಕೆ ಮತ್ತು ಮಾರಾಟ ಮಾಡುವುದಕ್ಕೆ ತಗುಲಿದ ಪ್ರಾಸಂಗಿಕ ವೆಚ್ಚಗಳ ಬಾಬ್ತು ಬಾಕಿ ಇರುವ ಮೊಬಲಗಿನ ಸಂದಾಯ ಮಾಡಲು ಬಳಸಿಕೊಳ್ಳತಕ್ಕದ್ದು ಮತ್ತು ವಶಕ್ಕೆ ತೆಗೆದುಕೊಂಡ ಕಾಲದಲ್ಲಿ ಸ್ವತ್ತು ಯಾರ ಸ್ವಾಧೀನದಲ್ಲಿತ್ತೋ ಆ ವ್ಯಕ್ತಿಗೆ, ಮಾರಾಟ ಮಾಡಿದ ತರುವಾಯ ಮತ್ತು ಮೇಲೆ ಹೇಳಿದಂತೆ ಅದರ ಉತ್ಪತ್ತಿಗಳನ್ನು ಬಳಸಿದ ತರುವಾಯ ಉಳಿಯಬಹುದಾದಂಥ ಯಾವುದೇ ಸ್ವತ್ತನ್ನು ಮಾರಾಟ ಮಾಡಿದ ದಿನಾಂಕದಿಂದ ಮೂರು ವರ್ಷಗಳ ಒಳಗಾಗಿ ಅಂಥ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದರೆ ಹಿಂತಿರುಗಿಸತಕ್ಕದ್ದು. ಅಂಥ ಯಾವುದೇ ಅರ್ಜಿಯನ್ನು ಸಲ್ಲಿಸದಿದ್ದರೆ, ಹಾಗೆ ಉಳಿದಿರುವ ಸ್ವತ್ತನ್ನು ನಗರಪಾಲಿಕೆಗೆ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು. ತೆರಿಗೆಯ, ವಾರಂಟು ಫೀಜಿನ ಮತ್ತು ಜಪ್ತಿ ಫೀಜಿನ ಮತ್ತು ಸ್ವತ್ತನ್ನು ಇರಿಸಿಕೊಳ್ಳುವುದಕ್ಕೆ ಮತ್ತು ಮಾರಾಟ ಮಾಡುವುದಕ್ಕೆ ಪ್ರಾಸಂಗಿಕವಾದ ವೆಚ್ಚಗಳ ಬಾಬ್ತು ಬಾಕಿ ಇರುವ ಮೊಬಲಗನ್ನು ಸಂದಾಯ ಮಾಡಲು ಮಾರಾಟದ ಉತ್ಪತ್ತಿಗಳು ಸಾಕಾಗದಿದ್ದರೆ ಸಂದಾಯವಾಗದೆ ಉಳಿದಿರುವ ಮೊತ್ತಕ್ಕೆ ಸಂಬಂಧಿಸಿದಂತೆ 27ನೇ ಮತ್ತು 28ನೇ ನಿಯಮಗಳ ಮೇರೆಗೆ ಆಯುಕ್ತರು ಪುನಃ ಕ್ರಮ ತೆಗೆದುಕೊಳ್ಳತಕ್ಕದ್ದು.

(2) ವಶಕ್ಕೆ ತೆಗೆದುಕೊಂಡ ಸ್ವತ್ತು ಬೇಗ ಕೆಟ್ಟು ಹೋಗುವಂಥದ್ದು ಅಥವಾ ಶೀಘ್ರವಾಗಿ ಮತ್ತು ಸ್ವಾಭಾವಿಕವಾಗಿ ಹಾಳಾಗುವಂಥದ್ದಾಗಿರುವಾಗ ಅಥವಾ ಅದನ್ನು ಸುಸ್ಥಿತಿಯಲ್ಲಿ ಇಟ್ಟುಕೊಂಡು ಬರುವುದಕ್ಕೆ ತಗಲುವ ವೆಚ್ಚಗಳು, ಬಾಕಿ ಇರುವ ತೆರಿಗೆಯ ಮೊಬಲಗು ಎರಡೂ ಸೇರಿ ಸ್ವತ್ತಿನ ಮೌಲ್ಯಕ್ಕಿಂತ ಹೆಚ್ಚಾದರೆ, ಬಾಕಿಯಿರುವ ಮೊಬಲಗನ್ನು ಬೇಗನೆ ಸಂದಾಯ ಮಾಡಿದ ಹೊರತು ಸದರಿ ಏಳು ದಿನಗಳ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಯಾವುದೇ ಕಾಲದಲ್ಲಿ ಆ ಸ್ವತ್ತನ್ನು ಆಯುಕ್ತರು ಮಾರಾಟ ಮಾಡಬಹುದು.

(3) ಆಯುಕ್ತರು, ಯಾವುದೇ ಸ್ವತ್ತಿನ ಜಪ್ತಿಯ ಬಗ್ಗೆ ಸದರಿ ಏಳು ದಿವಸಗಳ ಅವಧಿಯೊಳಗೆ ಸಲ್ಲಿಸಿದಂಥ ಯಾವುವೇ ಆಕ್ಷೇಪಣೆಗಳನ್ನು ಪರಿಶೀಲಿಸತಕ್ಕದ್ದು ಮತ್ತು ಆ ಬಗ್ಗೆ ತನಿಖೆಯಾಗುವವರೆಗೆ ಮಾರಾಟವನ್ನು ಮುಂದೂಡಬಹುದು. ಜಪ್ತಿ ಮಾಡಿದ ಸ್ವತ್ತು ಜಪ್ತಿಗೆ ಗುರಿಯಾಗುವಂಥದ್ದು ಆಗಿರಲಿಲ್ಲವೆಂದು ಆಯುಕ್ತರು ತೀರ್ಮಾನಿಸಿದರೆ, ಅವರು ಅದನ್ನು ಹಿಂತಿರುಗಿಸತಕ್ಕದ್ದು ಅಥವಾ ಅದನ್ನು ಈಗಾಗಲೇ ಮಾರಾಟ ಮಾಡಿದ್ದರೆ ಮಾರಾಟದ ಉತ್ಪತ್ತಿಗಳನ್ನು ಅವುಗಳಿಗೆ ಹಕ್ಕುಳ್ಳವನೆಂದು ಕಂಡುಬರುವ ವ್ಯಕ್ತಿಗೆ ಪಾವತಿಸತಕ್ಕದ್ದು ಮತ್ತು ಅವರು 27ನೇ ಮತ್ತು 28ನೇ ನಿಯಮಗಳ ಮೇರೆಗೆ ಪುನಃ ಕ್ರಮವನ್ನು ಕೈಕೊಳ್ಳಬಹುದು; ಮತ್ತು ಆ ಸ್ವತ್ತು ಜಪ್ತಿಗೆ ಗುರಿಯಾಗುವಂಥದ್ದಾಗಿರಲಿಲ್ಲವೆಂಬುದು ಸುಸ್ಥಿದಾರನಿಗೆ ಗೊತ್ತಿದ್ದೂ ಆತ ಬುದ್ಧಿಪೂರ್ವಕವಾಗಿ ಸ್ವತ್ತಿನ ಜಪ್ತಿಗೆ ಅವಕಾಶ ನೀಡಿದ್ದಾನೆಂದು ಆಯುಕ್ತರಿಗೆ ಕಂಡುಬಂದರೆ ಸುಸ್ಥಿದಾರನಿಂದ ಮೊದಲನೇ ಜಪ್ತಿಗೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಎಲ್ಲ ಫೀಜುಗಳನ್ನು ಮತ್ತು ವೆಚ್ಚಗಳನ್ನು ವಸೂಲಿ ಮಾಡತಕ್ಕದ್ದು.

**32.** (ಎ) ಬಾಕಿ ಇರುವ ಯಾವ ಮೊಬಲಗಿಗಾಗಿ ಜಪ್ತಿಯನ್ನು ಮಾಡಲಾಯಿತೋ ಆ ಯಾವುದೇ ಬಾಕಿಯಿರುವ ಮೊಬಲಗಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಮಾಡುವ ಜಪ್ತಿಗಳ ಮೇಲೆ ಫೀಜನ್ನು ಕೆಳಕಂಡ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿದ ದರಗಳಿಗೆ ಅನುಸಾರವಾಗಿ ವಿಧಿಸತಕ್ಕದ್ದು.-

| **ಜಪ್ತಿ ಮೊತ್ತ** | **ಫೀಜು** |
|---|---|
| | **ರೂ. ಪೈ.** |
| ಒಂದು ರೂಪಾಯಿಗಿಂತ ಕಡಿಮೆ | ಇಪ್ಪತ್ತೈದು ಪೈಸೆ |
| ಒಂದು ರೂಪಾಯಿ ಮತ್ತು ಮೇಲ್ಪಟ್ಟು, ಆದರೆ ಐದು ರೂಪಾಯಿಗಳಿಗಿಂತ ಕಡಿಮೆ | ಐವತ್ತು ಪೈಸೆ |
| ಐದು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ಹತ್ತು ರೂಪಾಯಿಗಳಿಗಿಂತ ಕಡಿಮೆ | ಒಂದು ರೂಪಾಯಿ |
| ಹತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ಹದಿನೈದು ರೂಪಾಯಿಗಳಿಗಿಂತ ಕಡಿಮೆ | ಒಂದು ರೂಪಾಯಿ ಐವತ್ತು ಪೈಸೆ |

| | |
|---|---|
| ಹದಿನೈದು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ಇಪ್ಪತ್ತು ರೂಪಾಯಿಗಳಿಗಿಂತ ಕಡಿಮೆ | ಎರಡು ರೂಪಾಯಿಗಳು |
| ಇಪ್ಪತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು , ಆದರೆ ಇಪ್ಪತ್ತೈದು ರೂಪಾಯಿಗಳಿಗಿಂತ ಕಡಿಮೆ | ಎರಡು ರೂಪಾಯಿ ಐವತ್ತು ಪೈಸೆ |
| ಇಪ್ಪತ್ತೈದು ರೂಪಾಯಿಗಳು ಮತ್ತು ಮೇಲ್ಪಟ್ಟು , ಆದರೆ ಮೂವತ್ತು ರೂಪಾಯಿಗಳಿಗಿಂತ ಕಡಿಮೆ | ಮೂರು ರೂಪಾಯಿಗಳು |
| ಮೂವತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು , ಆದರೆ ಮೂವತ್ತೈದು ರೂಪಾಯಿಗಳಿಗಿಂತ ಕಡಿಮೆ | ಮೂರು ರೂಪಾಯಿ ಐವತ್ತು ಪೈಸೆ |
| ಮೂವತ್ತೈದು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ನಲವತ್ತು ರೂಪಾಯಿಗಳಿಗಿಂತ ಕಡಿಮೆ | ನಾಲ್ಕು ರೂಪಾಯಿಗಳು |
| ನಲವತ್ತೈದು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ಐವತ್ತು ರೂಪಾಯಿಗಳಿಗಿಂತ ಕಡಿಮೆ | ಐದು ರೂಪಾಯಿಗಳು |
| ಐವತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು, ಆದರೆ ಅರವತ್ತು ರೂಪಾಯಿಗಳಿಗಿಂತ ಕಡಿಮೆ | ಆರು ರೂಪಾಯಿಗಳು |
| ಅರವತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು , ಆದರೆ ಎಂಬತ್ತು ರೂಪಾಯಿಗಳಿಗಿಂತ ಕಡಿಮೆ | ಏಳು ರೂಪಾಯಿ ಐವತ್ತು ಪೈಸೆ |
| ಎಂಬತ್ತು ರೂಪಾಯಿಗಳು ಮತ್ತು ಮೇಲ್ಪಟ್ಟು , ಆದರೆ ನೂರು ರೂಪಾಯಿಗಳಿಗಿಂತ ಕಡಿಮೆ | ಒಂಬತ್ತು ರೂಪಾಯಿಗಳು |
| ನೂರು ರೂಪಾಯಿಗಳು ಮತ್ತು ಅದಕ್ಕೂ ಮೇಲ್ಪಟ್ಟು | ಹತ್ತು ರೂಪಾಯಿಗಳು |

(ಬಿ) ಅಂತಹ ಫೀಜು,–

(i) ಯಾವುದೇ ಜಾನುವಾರುಗಳ ಪೋಷಣೆ ವೆಚ್ಚವನ್ನು ಅಥವಾ ಜಪ್ತಿಯಾದ ಸ್ವತ್ತನ್ನು ಇಟ್ಟುಕೊಳ್ಳುವುದಕ್ಕೆ ಆದ ಪ್ರಾಸಂಗಿಕವಾದ ವೆಚ್ಚಗಳನ್ನು; ಮತ್ತು

(ii) ಜಪ್ತಿಯಾದ ಸ್ವತ್ತನ್ನು ನೋಡಿಕೊಳ್ಳಲು ನೇಮಿಸಿದ ಸಿಬ್ಬಂದಿಯ ಬಾಬ್ತು ಸಂದಾಯ ಮಾಡಬೇಕಾದ ವೆಚ್ಚವನ್ನು ಅಂದರೆ ಸಿಬ್ಬಂದಿಯ ಪ್ರತಿಯೊಬ್ಬ ಸದಸ್ಯನಿಗೆ ಪ್ರತಿದಿನ ಐವತ್ತು ಪೈಸೆಗಳನ್ನು

– ಹೊರತುಪಡಿಸಿ ಎಲ್ಲ ವೆಚ್ಚಗಳನ್ನು ಒಳಗೊಳ್ಳತಕ್ಕದ್ದು.

**33.** (ಎ) ಸುಸ್ತಿದಾರನ ಚರಾಸ್ತಿಯನ್ನು, ಕರ್ನಾಟಕ ರಾಜ್ಯದೊಳಗೆ ಅದು ಎಲ್ಲೇ ಇದ್ದರೂ ಜಪ್ತಿ ಮಾಡಬಹುದು;

(ಬಿ) ನಗರದ ಎಲ್ಲೆಗಳ ಹೊರಗೆ ಸ್ವತ್ತನ್ನು ಜಪ್ತಿ ಮಾಡುವುದು ಅವಶ್ಯವಾದರೆ, ಆಯುಕ್ತರು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಸರ್ಕಾರವು ನಿರ್ದೇಶಿಸಬಹುದಾದಂಥ ಸ್ಥಳೀಯ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವಂಥ ಸರ್ಕಾರಿ ನೌಕರನ ಹೆಸರಿಗೆ ತನ್ನ ವಾರಂಟನ್ನು ಕಳುಹಿಸತಕ್ಕದ್ದು;

(ಸಿ) ಅಂಥ ಸರ್ಕಾರಿ ನೌಕರನು ಸ್ವತಃ ತಾನೇ ವಾರಂಟನ್ನು ಜಾರಿಗೊಳಿಸತಕ್ಕದ್ದು ಅಥವಾ ತನಗೆ ಅಧೀನವಾಗಿರುವ ಯಾರೇ ವ್ಯಕ್ತಿಯಿಂದ ಜಾರಿಮಾಡಿಸತಕ್ಕದ್ದು;

(ಡಿ) ಈ ಕೆಳಕಂಡ ಖಂಡಗಳಲ್ಲಿ ತಿಳಿಸಿರುವ ಮಾರ್ಪಾಟಿಗೆ ಒಳಪಟ್ಟು 28 ರಿಂದ 32ನೇ ನಿಯಮಗಳ ಉಪಬಂಧಗಳು (ಎರಡನ್ನೂ ಒಳಗೊಂಡು) ವಾರಂಟಿನ ಜಾರಿಗೆ ಮತ್ತು ಮಾರಾಟದ ಉತ್ಪತ್ತಿಗಳ ವಿಲೆಗೆ ಅನ್ವಯವಾಗತಕ್ಕದ್ದು;

(ಇ) 28ನೇ ನಿಯಮದ ಮೇರೆಗೆ ಕ್ರಮಕೈಗೊಳ್ಳುವ ಉದ್ದೇಶಕ್ಕಾಗಿ ಆಯುಕ್ತರ ಯಾವುದೇ ವಿಶೇಷ ಲಿಖಿತ ಆದೇಶದ ಅಗತ್ಯವಿಲ್ಲ. ಆದರೆ ಯಾವ ಸರ್ಕಾರಿ ನೌಕರನ ಹೆಸರಿಗೆ ವಾರಂಟನ್ನು ಕಳುಹಿಸಲಾಗಿದೆಯೋ ಆ ಸರ್ಕಾರಿ ನೌಕರನು ಅದನ್ನು ಜಾರಿಗೊಳಿಸುವ ಜವಾಬ್ದಾರಿಯನ್ನು ತನಗೆ ಅಧೀನನಾಗಿರುವ ಯಾರಿಗಾದರೂ ವಹಿಸಿದರೆ ಅವನು ತನ್ನ ಅಧೀನ ವ್ಯಕ್ತಿಗೆ ಆ ಬಗ್ಗೆ ಲಿಖಿತದಲ್ಲಿ ವಿಶೇಷ ಆದೇಶವನ್ನು ನೀಡತಕ್ಕದ್ದು, ಆ ತರುವಾಯ, ಆ ಅಧೀನ ವ್ಯಕ್ತಿಯು ಆ ನಿಯಮದ ಮೇರೆಗೆ ಕ್ರಮ ತೆಗೆದುಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು;

(ಎಫ್) 31ನೇ ನಿಯಮದ ಮೇರೆಗೆ ಕ್ರಮಕೈಗೊಳ್ಳುವ ಉದ್ದೇಶಕ್ಕಾಗಿ ಯಾವ ಸರ್ಕಾರಿ ನೌಕರನ ಹೆಸರಿಗೆ ವಾರಂಟನ್ನು ಕಳುಹಿಸಲಾಗಿದೆಯೋ ಆ ಸರ್ಕಾರಿ ನೌಕರನು ಆಯುಕ್ತರಿಂದ ಮುಂದಿನ ಯಾವುದೇ ಆದೇಶಗಳಿಲ್ಲದೆಯೇ, ವಶಕ್ಕೆ ತೆಗೆದುಕೊಂಡ ಸ್ವತ್ತನ್ನು ಮಾರಾಟ ಮಾಡಬಹುದು ಅಥವಾ ಮಾರಾಟ ಮಾಡಲು ನಿರ್ದೇಶಿಸಬಹುದು ಮತ್ತು ಮಾರಾಟವು ಪೂರ್ಣಗೊಂಡ ತರುವಾಯ ಸ್ಥಳೀಯವಾಗಿ ವಹಿಸಿದ ವೆಚ್ಚಗಳನ್ನು ಭರಿಸಲು ಅವಶ್ಯವಾಗಬಹುದಾದಂಥ ಯಾವುದೇ ಹಣವನ್ನು ಮುರಿದುಕೊಳ್ಳಬೇಕಾಗಿದ್ದರೆ ಅದನ್ನು ಮುರಿದುಕೊಂಡ ನಂತರ ಉತ್ಪತ್ತಿಗಳನ್ನು ಆಯುಕ್ತರಿಗೆ ರವಾನಿಸತಕ್ಕದ್ದು;

(ಜಿ) ಅಂಥ ಲೋಕ ನೌಕರನಿಗೆ ಸ್ವತಃ ಅವನ ಅಥವಾ ತನಗೆ ಅಧೀನನಾಗಿರುವ ಯಾರೇ ವ್ಯಕ್ತಿಗೆ ಅಂಥ ಯಾವುದೇ ಮಾರಾಟದಲ್ಲಿ ಯಾವುದೇ ಸ್ವತ್ತನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಖರೀದಿಸುವುದು ಕಾನೂನುಬಾಹಿರವಾಗಿರತಕ್ಕದ್ದು.

**34.** ಯಾರೇ ವ್ಯಕ್ತಿಯಿಂದ ಬಾಕಿ ಇರುವ ಯಾವುದೇ ತೆರಿಗೆಯು, 27ನೇ ನಿಯಮದ (1)ನೇ ಉಪ–ನಿಯಮದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ಕೊನೆಯಲ್ಲಿ ಪೂರ್ಣವಾಗಿ ಅಥವಾ ಭಾಗಶಃ ಸಂದಾಯವಾಗದೆ ಉಳಿದಿದ್ದರೆ ಮತ್ತು ಅಂತಹ ವ್ಯಕ್ತಿಯು ಕರ್ನಾಟಕ ರಾಜ್ಯವನ್ನು ಬಿಟ್ಟು ಹೋಗಿದ್ದರೆ ಮತ್ತು

ಪತ್ತೆಯಾಗದಿದ್ದರೆ, ಸಂದಾಯವಾಗದೆ ಉಳಿದಿರುವ ಸದರಿ ತೆರಿಗೆಯು ಅಥವಾ ಅದರ ಅಂಥ ಭಾಗವು, ಅದಕ್ಕೆ ಸಂಬಂಧಿಸಿದಂತೆ ಸಂದಾಯವಾಗಬೇಕಾದ ಎಲ್ಲ ಮೊತ್ತಗಳು ಸೇರಿದಂತೆ, ಅವು ಭೂಕಂದಾಯದ ಬಾಕಿಯಾಗಿದ್ದಿದ್ದರೆ ಅವುಗಳನ್ನು ಹೇಗೆ ವಸೂಲಿ ಮಾಡಲಾಗುತ್ತಿತ್ತೋ ಹಾಗೆ ವಸೂಲು ಮಾಡುವಂಥವು ಆಗಿರತಕ್ಕದ್ದು.

**35.** (1) 27ನೇ ನಿಯಮದ (2)ನೇ ಉಪ–ನಿಯಮದ ಮೇರೆಗೆ ಯಾವ ವ್ಯಕ್ತಿಯನ್ನು ಪ್ರಾಸಿಕ್ಯೂಟ್ ಮಾಡಲಾಗಿದೆಯೋ ಆ ಪ್ರತಿಯೊಬ್ಬ ವ್ಯಕ್ತಿಯು ಅವನಿಂದ ಬಾಕಿ ಇರುವ ಮೊಬಲಗನ್ನು ಸಂದಾಯ ಮಾಡಲು ಬುದ್ಧಿಪೂರ್ವಕವಾಗಿ ತಪ್ಪಿರುವನೆಂದು ಮ್ಯಾಜಿಸ್ಟ್ರೇಟರಿಗೆ ಮನದಟ್ಟಾಗುವಂತೆ ರುಜುವಾತದ ಮೇಲೆ,–

(ಎ) ತೆರಿಗೆಯ ಮತ್ತು ವಾರಂಟು ಫೀಜು ಯಾವುದಾದರೂ ಇದ್ದರೆ ಅದರ; ಮತ್ತು

(ಬಿ) ಜಪ್ತಿಯನ್ನು ಮಾಡಿದ್ದರೆ, ಜಪ್ತಿಯ ಫೀಜಿನ ಮತ್ತು ಜಪ್ತಿ ಮಾಡಿದ ಸ್ವತ್ತನ್ನು ಇರಿಸಿಕೊಂಡಿದ್ದಕ್ಕೆ ಮತ್ತು ಮಾರಾಟ ಮಾಡಿದ್ದಕ್ಕೆ ಪ್ರಾಸಂಗಿಕವಾದ ವೆಚ್ಚಗಳು ಯಾವುದಾದರೂ ಇದ್ದರೆ ಅವುಗಳ

– ಬಾಬ್ತು ಅವನಿಂದ ಬಾಕಿಯಾಗಬಹುದಾದಂಥ ಮೊಬಲಗಿನ ಎರಡರಷ್ಟನ್ನು ಮೀರದ ಜುಲ್ಮಾನೆಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(2) ಉಪ–ನಿಯಮ (1)ರ ಮೇರೆಗಿನ ಅಪರಾಧಕ್ಕಾಗಿ ಯಾರೇ ವ್ಯಕ್ತಿಯನ್ನು ಅಪರಾಧಿಯೆಂದು ನಿರ್ಣಯಿಸಿದಾಗಲೆಲ್ಲಾ, ಮ್ಯಾಜಿಸ್ಟ್ರೇಟರು, ವಿಧಿಸಬಹುದಾದ ಯಾವುದೇ ಜುಲ್ಮಾನೆಯ ಜೊತೆಗೆ, (1)ನೇ ಉಪ–ನಿಯಮದ (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಶೀರ್ಷಿಕೆಗಳಲ್ಲಿ ಹೇಳಿರುವ ಮೊಬಲಗನ್ನು ಕ್ಷಿಪ್ರವಾಗಿ ವಸೂಲು ಮಾಡತಕ್ಕದ್ದು ಮತ್ತು ನಗರಪಾಲಿಕೆಗೆ ಸಂದಾಯ ಮಾಡತಕ್ಕದ್ದು ಮತ್ತು ಪ್ರಾಸಿಕ್ಯೂಷನ್ನಿನ ಖರ್ಚುಗಳೆಂದು ಅವರು ನಿಗದಿಪಡಿಸಬಹುದಾದಂಥ ಮೊಬಲಗು ಯಾವುದಾದರೂ ಇದ್ದರೆ ಅದನ್ನೂ ಸಹ ತಮ್ಮ ವಿವೇಚನಾನುಸಾರ ಕ್ಷಿಪ್ರವಾಗಿ ವಸೂಲು ಮಾಡಬಹುದು ಮತ್ತು ನಗರಪಾಲಿಕೆಗೆ ಸಂದಾಯ ಮಾಡಬಹುದು.

**36.** ಆಯುಕ್ತರಾಗಲಿ ಅಥವಾ ನಗರಪಾಲಿಕೆಯ ಯಾರೇ ಅಧಿಕಾರಿಯಾಗಲಿ ಅಥವಾ ನೌಕರನಾಗಲಿ ಮೇಲೆ ಹೇಳಿದ ನಿಯಮಗಳ ಮೇರೆಗೆ ಜಪ್ತಿ ಮಾಡಿದ ಸ್ವತ್ತಿನ ಯಾವುದೇ ಮಾರಾಟದಲ್ಲಿ ಯಾವುದೇ ಸ್ವತ್ತನ್ನು ಪ್ರತ್ಯಕ್ಷವಾಗಿಯಾಗಲಿ ಅಥವಾ ಪರೋಕ್ಷವಾಗಿಯಾಗಲಿ ಖರೀದಿ ಮಾಡತಕ್ಕದ್ದಲ್ಲ.

**37.** ಈ ನಿಯಮಗಳಲ್ಲಿ "ತೆರಿಗೆ" ಎಂಬ ಪದವು, [1][103ಬಿ ಪ್ರಕರಣದ ಮೇರೆಗೆ ಉಪಕರದ, 112ನೇ ಪ್ರಕರಣದ ಮೇರೆಗೆ ಸ್ವತ್ತು ತೆರಿಗೆಯ ಮತ್ತು ದಂಡದ ಹಾಗೂ 112ಸಿ ಪ್ರಕರಣದ ಮೇರೆಗೆ ದಂಡದ] [1] ರೂಪದಲ್ಲಿ ಅಥವಾ ತೆರಿಗೆಯ ಸಂಬಂಧ ಮಾಡಿಕೊಂಡ ರಾಜಿಯ ಹಣದ ರೂಪದಲ್ಲಿ ಬಾಕಿ ಇರುವ ಸಂದಾಯಗಳನ್ನು ಒಳಗೊಳ್ಳುತ್ತದೆ.

1. ಅಧಿಸೂಚನೆ ಸಂ. ಯುಡಿಡಿ 188 ಎಂಎನ್‌ಯು 2001, ದಿನಾಂಕ: 30–12–2002ರ ಮೂಲಕ 31–12–2002ರಿಂದ ಜಾರಿಗೆ ಬರುವಂತೆ '112ನೇ ಪ್ರಕರಣದ ಮೇರೆಗೆ ದಂಡ' ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

## [1][[2][ ನಮೂನೆ –I

*[7ನೇ ನಿಯಮವನ್ನು ನೋಡಿ]*

1. ಅಧಿಸೂಚನೆ ಸಂಖ್ಯೆ ಯುಡಿಡಿ 188 ಎಂಎನ್‌ಯು 2001, ದಿನಾಂಕ 30–12–2002 ರ ಮೂಲಕ 31–12–2002 ರಿಂದ ಜಾರಿಗೆ ಬರುವಂತೆ ನಮೂನೆ – **I** ರಿಂದ ನಮೂನೆ – **III** ರ ವರೆಗೆ ಸೇರಿಸಲಾಗಿದೆ.
2. ಅಧಿಸೂಚನೆ ಸಂಖ್ಯೆ ಯುಡಿಡಿ 65 ಎಂಎನ್‌ಯು 2002, ದಿನಾಂಕ 27–02–2004 ರ ಮೂಲಕ 9–3–2004 ರಿಂದ ಜಾರಿಗೆ ಬರುವಂತೆ ನಮೂನೆ – **I** ನ್ನು, ನಮೂನೆ – **I, Iಎ** ಮತ್ತು **Iಬಿ** ಎಂಬುದಾಗಿ ಪ್ರತ್ಯಾಯೋಜಿಸಲಾಗಿದೆ.

| **ಸ್ವತ್ತು ತೆರಿಗೆ ವಿವರಪಟ್ಟಿಕೆ** | | |
|---|---|---|
| 1. | ಮಾಲೀಕನ ಹೆಸರು | |
| 2. | ವಿಳಾಸ | |
| 3. | ಅಧಿಭೋಗದಾರನ ಹೆಸರು | |
| 4. | ವಿಳಾಸ | |
| 5. | ತೆರಿಗೆ ನಿರ್ಧರಣೆ ವರ್ಷ | |
| 6. | ವಾರ್ಡಿನ ಸಂಖ್ಯೆ ಮತ್ತು ಹೆಸರು | |
| 7. | ಸ್ಥಳದ ಅಥವಾ ಬೀದಿಯ ಹೆಸರು | |
| **ಖಾಲಿ ಭೂಮಿ** | | |
| 8. | ನಿವೇಶನದ ಸಂಖ್ಯೆ | |
| 9 | ನಿವೇಶನದ ಒಟ್ಟು ವಿಸ್ತೀರ್ಣ | |
| 10 | ಕಟ್ಟಡ ಇರುವ ಭೂಮಿಯ ವಿಸ್ತೀರ್ಣ | |
| 11 | ಖಾಲಿ ಭೂಮಿಯ ವಿಸ್ತೀರ್ಣ<br>(ಸಂಖ್ಯೆ.9– ಸಂಖ್ಯೆ.10) | |

| | | |
|---|---|---|
| 12 | 2421 ಚದರ ಅಡಿಯವರೆಗಿನ ನಿವೇಶನದಲ್ಲಿ ಇರುವ ವಾಸದ ಕಟ್ಟಡಕ್ಕೆ ಹೊಂದಿಕೊಂಡಂತಿರುವ ಖಾಲಿ ಭೂಮಿಯಲ್ಲಿ 538 ಚದರ ಅಡಿಯವರೆಗೆ ಕಳೆಯಿರಿ. | |
| 13. | ಖಾಲಿ ಭೂಮಿಯ ವಿಸ್ತೀರ್ಣ<br>(ಎ) (10760 ಚದರ ಅಡಿಯವರೆಗೆ)<br>(ಬಿ) (10760 ಚದರ ಅಡಿಗಿಂತ ಹೆಚ್ಚು ಮತ್ತು 43040 ಚದರ ಅಡಿಯವರೆಗೆ)<br>(ಸಿ) (43040 ಚದರ ಅಡಿಗಿಂತ ಹೆಚ್ಚು) | |
| 14 | ಪ್ರತಿ ಚದರ ಅಡಿ ಭೂಮಿಯ ಅಂದಾಜು ಮಾರುಕಟ್ಟೆ ಮೌಲ್ಯ | |
| 15 | ತೆರಿಗೆಗೆ ಒಳಪಡುವ ಖಾಲಿ ಭೂಮಿಯ ಬಂಡವಾಳ ಮೌಲ್ಯ<br>(ಎ) 10760 ಚದರ ಅಡಿಯವರೆಗೆ<br>(ಸಂಖ್ಯೆ 13 (ಎ) **x** ಸಂಖ್ಯೆ 14)<br>(ಬಿ) 10760ರಿಂದ 43040 ಚದರ ಅಡಿಯವರೆಗೆ<br>(ಸಂಖ್ಯೆ 13 (ಬಿ) **x** ಸಂಖ್ಯೆ 14)<br>(ಸಿ) 43040 ಚದರ ಅಡಿಗಿಂತ ಹೆಚ್ಚು<br>(ಸಂಖ್ಯೆ 13 (ಸಿ) x ಸಂಖ್ಯೆ 14) | |
| 16 | ಖಾಲಿ ಭೂಮಿಯ ಮೇಲಿನ ಸ್ವತ್ತು ತೆರಿಗೆ ದರ<br>(ಎ) 10760 ಚದರ ಅಡಿಯವರೆಗೆ<br>(ಬಿ) 10760ರಿಂದ 43040 ಚದರ ಅಡಿಯವರೆಗೆ<br>(ಸಿ) 43040 ಚದರ ಅಡಿಗಿಂತ ಹೆಚ್ಚು | |
| **ಖಾಲಿ ಭೂಮಿಯ ಮೇಲಿನ ಸ್ವತ್ತು ತೆರಿಗೆ** | | |
| 17 | ಖಾಲಿ ಭೂಮಿಯ ಮೇಲಿನ ಸ್ವತ್ತು ತೆರಿಗೆ {15(ಎ) **x** 16(ಎ) + 15(ಬಿ) **x** 16(ಬಿ) + 15(ಸಿ) **x** 16(ಸಿ)} | |
| **ಕಟ್ಟಡ** | | |
| 18 | ಕಟ್ಟಡ ಇರುವ ಭೂಮಿಯ ವಿಸ್ತೀರ್ಣ | |
| 19 | ಭೂಮಿಯ ಬಂಡವಾಳ ಮೌಲ್ಯ(ಸಂಖ್ಯೆ 18 **x** ಸಂಖ್ಯೆ 14) | |
| 20 | ಕಟ್ಟಡದ ಬಗೆ | |
| 21 | ಪ್ರತಿಯೊಂದು ಚದರ ಅಡಿಯ ನಿರ್ಮಾಣದ ಅಂದಾಜು ವೆಚ್ಚ | |
| 22 | ಕಟ್ಟಡದ ಮೇಲುಪಾಯದ ವಿಸ್ತೀರ್ಣ | |
| 23 | ಕಟ್ಟಡ ನಿರ್ಮಾಣದ ವೆಚ್ಚ (ಸಂಖ್ಯೆ 21 **x** ಸಂಖ್ಯೆ 22) | |
| 24 | ಕಟ್ಟಡ ನಿರ್ಮಿಸಿ ಎಷ್ಟು ವರ್ಷ ಆಗಿದೆ | |
| 25 | ಸವಕಳಿಯ ದರ | |
| 26 | ಕಟ್ಟಡದ ಸವಕಳಿ (ಸಂಖ್ಯೆ 23 x ಸಂಖ್ಯೆ 25) | |
| 27 | ತೆರಿಗೆಗೆ ಒಳಪಡುವ ಕಟ್ಟಡದ ಬಂಡವಾಳ ಮೌಲ್ಯ<br>(ಸಂಖ್ಯೆ 19 + ಸಂಖ್ಯೆ 23 – ಸಂಖ್ಯೆ 26) | |
| **ಕಟ್ಟಡದ ಮೇಲಿನ ಸ್ವತ್ತು ತೆರಿಗೆ** | | |
| 28 | ಬಳಕೆಯ ಸ್ವರೂಪ | |
| 29 | ಸ್ವತ್ತು ತೆರಿಗೆಯ ದರ | |
| 30 | ಕಟ್ಟಡದ ಮೇಲಿನ ಸ್ವತ್ತು ತೆರಿಗೆ (ಸಂಖ್ಯೆ 27 x ಸಂಖ್ಯೆ 29) | |
| 31 | ಸ್ವಂತ ವಾಸಕ್ಕೆ ಬಳಸುತ್ತಿರುವ ಕಟ್ಟಡದ ಮೇಲೆ ಸೋಡಿ (ಶೇಕಡಾ 50ರಷ್ಟು) | |

| | | |
|---|---|---|
| **ಸಂದಾಯ ಮಾಡಬೇಕಾದ ಒಟ್ಟು ಸ್ವತ್ತು ತೆರಿಗೆ** | | |
| 32 | ಖಾಲಿ ಭೂಮಿಯ ಮತ್ತು ಕಟ್ಟಡದ ಮೇಲೆ ಸಂದಾಯ ಮಾಡಬೇಕಾದ ಒಟ್ಟು ಸ್ವತ್ತು ತೆರಿಗೆ (ಸಂಖ್ಯೆ 17 + ಸಂಖ್ಯೆ 30) (ಸ್ವಂತ ವಾಸಕ್ಕೆ ಬಳಸುತ್ತಿರುವ ಕಟ್ಟಡಕ್ಕೆ ಅಥವಾ (ಸಂಖ್ಯೆ 17 + ಸಂಖ್ಯೆ 31) | |
| **ಉಪಕರ** | | |
| 33 | ಒಟ್ಟು ಉಪಕರ (ಸಂಖ್ಯೆ 32 ರಲ್ಲಿನ ಮೊತ್ತದ ಶೇಕಡಾ 24ರಷ್ಟು) | |
| **ಸಂದಾಯ ಮಾಡಬೇಕಾದ ಮೊಬಲಗು** | | |
| 34 | ಸಂದಾಯ ಮಾಡಬೇಕಾದ ಒಟ್ಟು ಮೊಬಲಗು (ಸಂಖ್ಯೆ 32 + ಸಂಖ್ಯೆ 33) | |
| 35 | ಮುಂಚಿತವಾಗಿ ಸಂದಾಯ ಮಾಡಿದ್ದಕ್ಕಾಗಿ ಸೋಡಿ (ಶೇಕಡಾ 5 ರಷ್ಟು) | |
| 36 | ಸಂದಾಯ ಮಾಡಲಾದ ಮೊಬಲಗು | |
| **ಸಂದಾಯದ ರೀತಿ** | | |
| 37 | ಬ್ಯಾಂಕಿನ ಹೆಸರು | |
| 38 | ಮೊಬಲಗು ಮತ್ತು ಸಂದಾಯದ ದಿನಾಂಕ | |
| 39 | ಚಲನ್ ಸಂಖ್ಯೆ | |
| **ಲಗತ್ತಿಸಲಾದ ದಸ್ತಾವೇಜುಗಳು** | | |
| | (ಎ) ಚಲನ್ | |
| | (ಬಿ) ............. | |

--------- ರವರ ಮಗನಾದ ಅಥವಾ ಮಗಳಾದ ------- ಎಂಬ ನಾನು, (ದಪ್ಪ ಅಕ್ಷರಗಳಲ್ಲಿ ಪೂರ್ಣ ಹೆಸರು) ವಿವರಪಟ್ಟಿಕೆಯಲ್ಲಿ ಮತ್ತು ಲಗತ್ತಿಸಿರುವ ದಸ್ತಾವೇಜುಗಳಲ್ಲಿ ನೀಡಿರುವ ಮಾಹಿತಿಯು ನನಗೆ ತಿಳಿದಿರುವಷ್ಟರ ಮಟ್ಟಿಗೆ ಹಾಗೂ ನಾನು ನಂಬುವಷ್ಟರ ಮಟ್ಟಿಗೆ ಸರಿಯಾಗಿದೆಯೆಂದು, ಪೂರ್ಣವಾದುದಾಗಿದೆಯೆಂದು ಮತ್ತು ಅದನ್ನು ನೈಜವಾಗಿ ನಿರೂಪಿಸಲಾಗಿದೆಯೆಂದು ಹಾಗೂ ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿದೆಯೆಂದು ಶ್ರದ್ಧಾಪೂರ್ವಕವಾಗಿ ಘೋಷಿಸುತ್ತೇನೆ.

**ಸಹಿ**

**ದಿನಾಂಕ**

ಸ್ವೀಕೃತಿ ಸಂಖ್ಯೆ:

ತೆರಿಗೆ ನಿರ್ಧರಣಾ ವರ್ಷ:

ಮೊಹರು ಮತ್ತು ದಿನಾಂಕ:

**ಸಹಿ**

**ಸ್ವೀಕರಿಸುವ ಸಿಬ್ಬಂದಿಯ ಹೆಸರು**

**ನಮೂನೆ-Iಎ**

[7ಎ ನಿಯಮವನ್ನು ನೋಡಿ]

| | |
|---|---|
| **ಸೇವಾ ವೆಚ್ಚಗಳ ವಿವರಪಟ್ಟಿಕೆ** | |
| 1. ಮಾಲೀಕನ ಹೆಸರು | |
| 2. ವಿಳಾಸ | |
| 3. ಅಧಿಭೋಗದಾರನ ಹೆಸರು | |
| 4. ವಿಳಾಸ | |
| 5. ತೆರಿಗೆ ನಿರ್ಧರಣಾ ವರ್ಷ | |
| 6. ವಾರ್ಡಿನ ಸಂಖ್ಯೆ ಮತ್ತು ಹೆಸರು | |
| 7. ಸ್ಥಳ ಅಥವಾ ಬೀದಿಯ ಹೆಸರು | |
| 8. ಕಟ್ಟಡ ಇರುವ ಭೂಮಿಯ ವಿಸ್ತೀರ್ಣ | |

| | | |
|---|---|---|
| 9. ಭೂಮಿಯ ಬಂಡವಾಳ ಮೌಲ್ಯ | | |
| 10. ಕಟ್ಟಡದ ಬಗೆ | | |
| 11. ಪ್ರತಿ ಚದರ ಅಡಿಯ ನಿರ್ಮಾಣದ ಅಂದಾಜು ವೆಚ್ಚ | | |
| 12. ಕಟ್ಟಡದ ಮೇಲುಪಾಯದ ವಿಸ್ತೀರ್ಣ | | |
| 13. ಕಟ್ಟಡದ ನಿರ್ಮಾಣ ವೆಚ್ಚ | | |
| 14. ಕಟ್ಟಡ ನಿರ್ಮಿಸಿ ಎಷ್ಟು ವರ್ಷ ಆಗಿದೆ | | |
| 15. ಸವಕಳಿ ದರ | | |
| 16. ಕಟ್ಟಡದ ಸವಕಳಿ | | |
| 17. ತೆರಿಗೆಗೆ ಒಳಪಡುವ ಕಟ್ಟಡದ ಬಂಡವಾಳ ಮೌಲ್ಯ | | |
| 18. ಭೂಮಿ ಮತ್ತು ಕಟ್ಟಡದ ಒಟ್ಟು ಬಂಡವಾಳ ಮೌಲ್ಯ | | |
| 19. ಸಂದಾಯ ಮಾಡಬೇಕಾದ ಸೇವಾ ವೆಚ್ಚಗಳು | | |
| **ಸಂದಾಯದ ರೀತಿ** | | |
| 20. ಬ್ಯಾಂಕಿನ ಹೆಸರು | | |
| 21. ಮೊಬಲಗು ಮತ್ತು ಸಂದಾಯದ ದಿನಾಂಕ | | |
| 22. ಚಲನ್ ಸಂಖ್ಯೆ | | |
| **ಲಗತ್ತಿಸಿರುವ ದಸ್ತಾವೇಜುಗಳು** | | |
| | (ಎ) ಚಲನ್ | |
| | (ಬಿ) ............. | |

--------- ರವರ ಮಗನಾದ ಅಥವಾ ಮಗಳಾದ ------ ಎಂಬ ನಾನು, (ದಪ್ಪ ಅಕ್ಷರಗಳಲ್ಲಿ ಪೂರ್ಣ ಹೆಸರು) ವಿವರಪಟ್ಟಿಕೆಯಲ್ಲಿ ಮತ್ತು ಲಗತ್ತಿಸಿರುವ ದಸ್ತಾವೇಜುಗಳಲ್ಲಿ ನೀಡಿರುವ ಮಾಹಿತಿಯು ನನಗೆ ತಿಳಿದಿರುವಷ್ಟರಮಟ್ಟಿಗೆ ಹಾಗೂ ನಾನು ನಂಬುವಷ್ಟರ ಮಟ್ಟಿಗೆ ಸರಿಯಾಗಿದೆಯೆಂದು, ಪೂರ್ಣವಾದುದಾಗಿದೆಯೆಂದು ಮತ್ತು ಅದನ್ನು ನೈಜವಾಗಿ ನಿರೂಪಿಸಲಾಗಿದೆಯೆಂದು ಹಾಗೂ ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿದೆಯೆಂದು ಶ್ರದ್ಧಾಪೂರ್ವಕವಾಗಿ ಘೋಷಿಸುತ್ತೇನೆ.

**ಸಹಿ**

**ದಿನಾಂಕ**

ಸ್ವೀಕೃತಿ ಸಂಖ್ಯೆ:

ತೆರಿಗೆ ನಿರ್ಧರಣಾ ವರ್ಷ:

ಮೊಹರು ಮತ್ತು ದಿನಾಂಕ:

**ಸಹಿ**

**ಸ್ವೀಕರಿಸುವ ಸಿಬ್ಬಂದಿಯ ಹೆಸರು**

**ನಮೂನೆ–Iಬಿ**

[7ಬಿ ನಿಯಮವನ್ನು ನೋಡಿ]

| **ಮೂಲಸೌಕರ್ಯ ಉಪಕರದ ವಿವರಪಟ್ಟಿಕೆ** | |
|---|---|
| 1. ಮಾಲೀಕನ ಹೆಸರು | |
| 2. ವಿಳಾಸ | |
| 3. ವಾರ್ಡಿನ ಹೆಸರು ಮತ್ತು ಸಂಖ್ಯೆ | |
| 4. ಸ್ಥಳ ಮತ್ತು ಬೀದಿಯ ಹೆಸರು | |
| 5. ವಾಹನದ ವರ್ಗ | |
| 6. ನೋಂದಣಿ ಸಂಖ್ಯೆ | |
| 7. ಸಂದಾಯ ಮಾಡಿದ ಮೂಲಸೌಕರ್ಯ ಉಪಕರ | |

| | | |
|---|---|---|
| **ಸಂದಾಯದ ರೀತಿ** | | |
| ಎ. ಬ್ಯಾಂಕಿನ ಹೆಸರು | | |
| ಬಿ. ಸಂದಾಯದ ದಿನಾಂಕ | | |
| ಸಿ. ಸಂದಾಯ ಮಾಡಲಾದ ಮೊಬಲಗು | | |
| ಡಿ. ಚಲನ್ ಸಂಖ್ಯೆ | | |
| **ಲಗತ್ತಿಸಿರುವ ದಸ್ತಾವೇಜುಗಳು** | | |
| | (ಎ) ಚಲನ್ | |
| | (ಬಿ) ............. | |

--------- ರವರ ಮಗನಾದ ಅಥವಾ ಮಗಳಾದ ------ ಎಂಬ ನಾನು, (ದಪ್ಪ ಅಕ್ಷರಗಳಲ್ಲಿ ಪೂರ್ಣ ಹೆಸರು) ವಿವರಪಟ್ಟಿಕೆಯಲ್ಲಿ ಮತ್ತು ಲಗತ್ತಿಸಿರುವ ದಸ್ತಾವೇಜುಗಳಲ್ಲಿ ನೀಡಿರುವ ಮಾಹಿತಿಯು ನನಗೆ ತಿಳಿದಿರುವಷ್ಟರಮಟ್ಟಿಗೆ ಹಾಗೂ ನಾನು ನಂಬುವಷ್ಟರ ಮಟ್ಟಿಗೆ ಸರಿಯಾಗಿದೆಯೆಂದು, ಪೂರ್ಣವಾದುದಾಗಿದೆಯೆಂದು ಮತ್ತು ಅದನ್ನು ನೈಜವಾಗಿ ನಿರೂಪಿಸಲಾಗಿದೆಯೆಂದು ಹಾಗೂ ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿದೆಯೆಂದು ಶ್ರದ್ಧಾಪೂರ್ವಕವಾಗಿ ಘೋಷಿಸುತ್ತೇನೆ.

**ಸಹಿ**

**ದಿನಾಂಕ**

ಸ್ವೀಕೃತಿ ಸಂಖ್ಯೆ:

ತೆರಿಗೆ ನಿರ್ಧರಣಾ ವರ್ಷ:

ಮೊಹರು ಮತ್ತು ದಿನಾಂಕ:

**ಸಹಿ**

**ಸ್ವೀಕರಿಸುವ ಸಿಬ್ಬಂದಿಯ ಹೆಸರು]**

**ನಮೂನೆ-II**

*[11ನೇ ನಿಯಮವನ್ನು ನೋಡಿ]*

**ಸ್ವತ್ತು ತೆರಿಗೆ ರಿಜಿಸ್ಟರ್**

| | **ವಾರ್ಡಿನ ಹೆಸರು** | **ಪುಟಸಂಖ್ಯೆ** |
|---|---|---|
| 1. | ಮಾಲೀಕನ ಹೆಸರು | |
| 2. | ವಿಳಾಸ | |
| 3. | ಅಧಿಭೋಗದಾರನ ಹೆಸರು | |
| 4. | ವಿಳಾಸ | |
| 5. | ತೆರಿಗೆ ನಿರ್ಧರಣಾ ವರ್ಷ | |
| 6. | ವಿವರಪಟ್ಟಿಕೆ ಸಂಖ್ಯೆ ಮತ್ತು ಅದನ್ನು ಸಲ್ಲಿಸಿದ ದಿನಾಂಕ | |
| 7 | ಸ್ಥಳ | |
| 8 | ನಿವೇಶನದ ಸಂಖ್ಯೆ | |
| 9 | ಭೂಮಿಯ ವಿಸ್ತೀರ್ಣ | |
| 10 | ಕಟ್ಟಡದ ಸಂಖ್ಯೆ | |
| 11. | ನಿರ್ಮಾಣದ ಬಗೆ | |
| 12 | ಕಟ್ಟಡದ ಮೇಲುಪಾಯದ ವಿಸ್ತೀರ್ಣ | |
| 13. | ಕಟ್ಟಡ ನಿರ್ಮಿಸಿ ಎಷ್ಟು ವರ್ಷ ಆಗಿದೆ | |
| 14. | ಬಳಕೆಯ ಸ್ವರೂಪ | |
| 15. | ಸ್ವತಃ ವಾಸ ಇರುವಿರಾ? ಅಥವಾ ಬಾಡಿಗೆಗೆ ಕೊಟ್ಟಿರುವಿರಾ? | |
| 16. | ಸಂದಾಯ ಮಾಡಿದ ಒಟ್ಟು ಸ್ವತ್ತು ತೆರಿಗೆ | |
| 17 | ಸಂದಾಯ ಮಾಡಿರುವ ಒಟ್ಟು ಉಪಕರಗಳು | |

| | | |
|---|---|---|
| 18. | ಬ್ಯಾಂಕಿನ ಹೆಸರು | |
| 19. | ತೆರಿಗೆ ಸಂದಾಯ ಮಾಡಿದ ದಿನಾಂಕ | |
| 20. | ಸ್ವತ್ತು ತೆರಿಗೆಯ ನಿರ್ಧರಣೆ ಅಥವಾ ಪರಿಷ್ಕರಣೆ | |
| 21. | ಹಕ್ಕು ವರ್ಗಾವಣೆಯ ನೋಟೀಸಿನ ದಿನಾಂಕ (ಪ್ರಕರಣ 114) | |
| 22. | ವರ್ಗಾವಣೆ ಪಡೆದವನ ಹೆಸರು | |
| 23. | ಕಟ್ಟಡಕ್ಕೆ ಸೇರ್ಪಡೆ ಅಥವಾ ಕಟ್ಟಡವನ್ನು ಕೆಡವಿಹಾಕುವಿಕೆ | |
| 24. | ಸೇರ್ಪಡೆ ಮಾಡಲಾದ ಅಥವಾ ಕೆಡವಿಹಾಕಿದ ಕಟ್ಟಡದ ಮೇಲುಪಾಯದ ವಿಸ್ತೀರ್ಣ | |

**ನಮೂನೆ–III**

*[15ನೇ ಮತ್ತು 17ನೇ ನಿಯಮವನ್ನು ನೋಡಿ]*

**ತಗಾದೆ ನೋಟೀಸಿನ ನಮೂನೆ**

-----------

----------- **ಇವರಿಗೆ,**

---- ವರ್ಷಕ್ಕಾಗಿ --- ಸ್ವತ್ತಿನ (ಯಾವ ಸ್ವತ್ತಿಗೆ ಸಂಬಂಧಪಟ್ಟಂತೆ ತೆರಿಗೆ ವಿಧಿಸಬಹುದೋ ಆ ಸ್ವತ್ತನ್ನು ಇಲ್ಲಿ ವಿವರಿಸಿ) ಸಂಬಂಧದಲ್ಲಿ ವಿಧಿಸಬಹುದಾದ ಬಾಕಿ ಇರುವ -------- ಮೊತ್ತವನ್ನು ಸಂದಾಯ ಮಾಡುವಂತೆ ನಗರ ಪಾಲಿಕೆಯು ತಗಾದೆ ಮಾಡುತ್ತದೆಂದು ಮತ್ತು ಈ ನೋಟೀಸನ್ನು ಜಾರಿ ಮಾಡಿದ ಮೂವತ್ತು ದಿನಗಳ ಒಳಗಾಗಿ, ಸದರಿ ಮೊತ್ತವನ್ನು ನಗರ ಪಾಲಿಕೆಯ ನಿಧಿಗೆ ಸಂದಾಯ ಮಾಡದಿದ್ದರೆ ಅಥವಾ ಸಂದಾಯ ಮಾಡದಿರುವುದಕ್ಕೆ ನಗರ ಪಾಲಿಕೆಗೆ ಮನವರಿಕೆಯಾಗುವಂತೆ ಸಾಕಷ್ಟು ಕಾರಣವನ್ನು ತೋರಿಸದಿದ್ದರೆ, ಮೇಲೆ ಹೇಳಿರುವ ಮೊತ್ತವನ್ನು ವೆಚ್ಚಗಳೊಂದಿಗೆ ವಸೂಲಿ ಮಾಡುವುದಕ್ಕಾಗಿ ಜಪ್ತಿ ಅಥವಾ ಮುಟ್ಟುಗೋಲಿನ ವಾರಂಟನ್ನು ಹೊರಡಿಸಲಾಗುವುದೆಂದು ಈ ಮೂಲಕ ನಿಮ್ಮ ಗಮನಕ್ಕೆ ತರಲಾಗಿದೆ.

ದಿನಾಂಕ: ಸಹಿ

----------ನಗರ ಪಾಲಿಕೆಯ ಆದೇಶಾನುಸಾರ]

---

**ಅನುಸೂಚಿ – IV**

*[103ನೇ ಪ್ರಕರಣವನ್ನು ನೋಡಿ]*

**ಅಂಗಡಿಗಳ ಮೇಲಿನ ಮತ್ತು ವ್ಯವಹಾರದ ಅಥವಾ ವೃತ್ತಿಯ**

**ಇತರ ಸ್ಥಳಗಳ ಮೇಲಿನ ತೆರಿಗೆಯ ಗರಿಷ್ಠ ದರಗಳು**

| | ಬಾಬುಗಳು | ವರ್ಗ | | | | | |
|---|---|---|---|---|---|---|---|
| | | 1ನೇ | 2ನೇ | 3ನೇ | 4ನೇ | 5ನೇ | 6ನೇ |
| 1. | ಅಂಗಡಿಗಳು.– ಪ್ರತಿ ಅಂಗಡಿಗೆ ಪ್ರತಿವರ್ಷಕ್ಕೆ | 100 | 80 | 60 | 40 | 20 | 10 |
| 2. | ವ್ಯವಹಾರವನ್ನು ಅಥವಾ ವೃತ್ತಿಯನ್ನು ನಡೆಸುತ್ತಿರುವ ಇತರ ಸ್ಥಳಗಳಿಗೆ,– ಪ್ರತಿ ಸ್ಥಳಕ್ಕೆ ಪ್ರತಿ ವರ್ಷಕ್ಕೆ | 50 | 40 | 30 | 20 | 10 | 5 |

---

**ಅನುಸೂಚಿ – V**

*[103ನೇ ಮತ್ತು 118ನೇ ಪ್ರಕರಣಗಳನ್ನು ನೋಡಿ]*

**ತೆರಿಗೆಯನ್ನು ವಿಧಿಸುವಿಕೆಯ ಗರಿಷ್ಠ ದರಗಳೊಂದಿಗೆ ತೆರಿಗೆಗೆ ಗುರಿಯಾಗುವ**

**ವಾಹನಗಳು, ದೋಣಿಗಳು ಮತ್ತು ಪ್ರಾಣಿಗಳು**

| | | ಪ್ರತಿ ವರ್ಷಕ್ಕೆ ರೂ. ಪೈ |
|---|---|---|
| 1. | ಎರಡು ಅಥವಾ ಹೆಚ್ಚು ಕುದುರೆಗಳಿಂದ, ಹೋರಿಗಳಿಂದ ಅಥವಾ ಎತ್ತುಗಳಿಂದ ಎಳೆಯಲು ನಿರ್ಮಿಸಿದ ಸ್ಪ್ರಿಂಗ್‌ಗಳಿಂದ ಕೂಡಿದ ನಾಲ್ಕು ಚಕ್ರಗಳ ಪ್ರತಿಯೊಂದು ವಾಹನಕ್ಕೆ | 6.00 |

| | | |
|---|---|---|
| 2. | ಪ್ರಾಣಿಗಳಿಂದ ಎಳೆಯಲಾಗುವ ಸ್ಪ್ರಿಂಗ್ ಇಲ್ಲದ ಪ್ರತಿಯೊಂದು ಗಾಡಿಗೆ ಅಥವಾ ಇತರ ವಾಹನಕ್ಕೆ | 4.00 |
| 3. | ಪ್ರತಿಯೊಂದು ದೋಣಿಗೆ | 4.00 |
| 4. | ಪ್ರತಿಯೊಂದು ಆನೆಗೆ | 24.00 |
| 5. | ಪ್ರತಿಯೊಂದು ಕುದುರೆಗೆ | 6.00 |
| 6. | ಪ್ರತಿಯೊಂದು ಎತ್ತಿಗೆ ಅಥವಾ ಹೋರಿಗೆ ಅಥವಾ ಕೋಣಕ್ಕೆ | 1.00 |
| 7. | ಪ್ರತಿಯೊಂದು ಕತ್ತೆಗೆ | 0.50 |
| 8. | ಕರ್ನಾಟಕ ಮೋಟಾರು ವಾಹನಗಳಿಗೆ ತೆರಿಗೆ ವಿಧಿಸುವ ಅಧಿನಿಯಮ, 1957ರ ಮೇರೆಗೆ ಮುನ್ಸಿಪಲ್ ತೆರಿಗೆಯಿಂದ ವಿನಾಯಿತಿ ಗೊಳಿಸಿರುವಂಥವುಗಳನ್ನು ಹೊರತುಪಡಿಸಿ ಪ್ರತಿಯೊಂದು ಟ್ರೇಲರ್‌ಗೆ | 10.00 |

[1][ಅನುಸೂಚಿ – **VI**

*******][1]

1. 1979ರ ಅಧಿನಿಯಮ ಸಂಖ್ಯೆ 21ರ ಮೂಲಕ 31.3.1979 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**ಅನುಸೂಚಿ – VII**

*[103ನೇ ಪ್ರಕರಣವನ್ನು ನೋಡಿ]*

**ನಗರಪಾಲಿಕೆಯ ಎಲ್ಲೆಗಳೊಳಗೆ ಪ್ರವೇಶಿಸುವಾಗ ಸಂದಾಯ ಮಾಡಬೇಕಾದ ಸುಂಕದ ಗರಿಷ್ಠ ದರಗಳು**

| | | ವಾರ್ಷಿಕ ರೂ. ಪೈ |
|---|---|---|
| 1. | ಕರ್ನಾಟಕ ಮೋಟಾರು ವಾಹನಗಳಿಗೆ ತೆರಿಗೆ ವಿಧಿಸುವ ಅಧಿನಿಯಮ, 1957ರ ಮೇರೆಗೆ ಮುನ್ಸಿಪಲ್ ಸುಂಕದಿಂದ ವಿನಾಯಿತಿಗೊಳಿಸಿರುವಂಥವುಗಳನ್ನು ಹೊರತುಪಡಿಸಿ ಮೋಟಾರು ವಾಹನಗಳ ಅಧಿನಿಯಮ, 1939 (ಕೇಂದ್ರ ಅಧಿನಿಯಮ, 1939ರ IV)ರಲ್ಲಿ ಪರಿಭಾಷಿಸಿರುವಂತೆ ಸರಕು ವಾಹನ ಅಥವಾ ಮಜಲು ವಾಹನ. | ಎರಡು ರೂಪಾಯಿಗಳು |
| 2. | ಕರ್ನಾಟಕ ಮೋಟಾರು ವಾಹನಗಳಿಗೆ ತೆರಿಗೆ ವಿಧಿಸುವ ಅಧಿನಿಯಮ, 1957ರ ಮೇರೆಗೆ ಮುನ್ಸಿಪಲ್ ಸುಂಕದಿಂದ ವಿನಾಯಿತಿಗೊಳಿಸಿರುವಂಥವುಗಳನ್ನು ಹೊರತುಪಡಿಸಿ, ಕರ್ನಾಟಕ ಮೋಟಾರು ವಾಹನಗಳ ಅಧಿನಿಯಮ, 1939ರಲ್ಲಿ (ಕೇಂದ್ರ ಅಧಿನಿಯಮ 1939ರ IV) ಪರಿಭಾಷಿಸಿದಂತೆ ಮೋಟಾರು ಕ್ಯಾಬ್‌ಗಳು. | ಎರಡು ರೂಪಾಯಿಗಳು |
| 3. | ಕರ್ನಾಟಕ ಮೋಟಾರು ವಾಹನಗಳಿಗೆ ತೆರಿಗೆ ವಿಧಿಸುವ ಅಧಿನಿಯಮ, 1957ರ ಮೇರೆಗೆ ಮುನ್ಸಿಪಲ್ ಸುಂಕದಿಂದ ವಿನಾಯಿತಿಗೊಳಿಸಿರುವಂಥವುಗಳನ್ನು ಹೊರತುಪಡಿಸಿ ಇತರ ಸರಕು ವಾಹನಗಳಿಗೆ ಲಗತ್ತಿಸಿರುವ ಟ್ರೈಲರ್. | ಒಂದು ರೂಪಾಯಿ |
| 4. | ಪ್ರತಿಯೊಂದು ನಾಲ್ಕು ಚಕ್ರಗಳ ವಾಹನದ ಮೇಲೆ. | ಐವತ್ತು ಪೈಸೆ |
| 5. | ಜಟಕಾ ಗಾಡಿಯನ್ನು ಹೊರತುಪಡಿಸಿ ಸ್ಪ್ರಿಂಗ್ ಮೇಲಿರುವ ಪ್ರತಿಯೊಂದು ದ್ವಿಚಕ್ರ ವಾಹನದ ಮೇಲೆ. | ಇಪ್ಪತ್ತೈದು ಪೈಸೆ |
| 6. | ಭಾರ ಹೇರಿದ ಪ್ರತಿಯೊಂದು ಜಟಕಾ ಗಾಡಿಯ ಮೇಲೆ. | ಹದಿನೈದು ಪೈಸೆ |
| 7. | ಭಾರ ಹೇರಿಲ್ಲದ ಪ್ರತಿಯೊಂದು ಜಟಕಾ ಗಾಡಿಯ ಮೇಲೆ. | ಹತ್ತು ಪೈಸೆ |
| 8. | ಸ್ಪ್ರಿಂಗ್‌ಗಳನ್ನೊಳಗೊಂಡ ಪ್ರತಿಯೊಂದು ಇತರ ವಾಹನದ ಮೇಲೆ. | ಹದಿನೈದು ಪೈಸೆ |
| 9. | ಜೋಡಿ ಎತ್ತುಗಳಿಂದ, ಕೋಣಗಳಿಂದ, ಕುದುರೆಗಳಿಂದ, ಪೋನಿಗಳಿಂದ, ಕತ್ತೆಗಳಿಂದ ಅಥವಾ ಹೇಸರಗತ್ತೆಗಳಿಂದ ಎಳೆಯಲಾಗುವ ಸ್ಪ್ರಿಂಗ್‌ಗಳ ಮೇಲಿರದ ಪ್ರತಿಯೊಂದು ಬಂಡಿಯ ಅಥವಾ ಇತರ ವಾಹನದ ಮೇಲೆ ಭಾರ ಹೇರಿದ್ದರೆ. | ಇಪ್ಪತ್ತೈದು ಪೈಸೆ |
| 10. | ಜೋಡಿ ಎತ್ತುಗಳಿಂದ, ಕೋಣಗಳಿಂದ, ಕುದುರೆಗಳಿಂದ, ಪೋನಿಗಳಿಂದ ಅಥವಾ ಹೇಸರಗತ್ತೆಗಳಿಂದ ಎಳೆಯಲಾಗುವ ಸ್ಪ್ರಿಂಗ್‌ಗಳ ಮೇಲಿರದ ಪ್ರತಿಯೊಂದು ಬಂಡಿಯ ಅಥವಾ ಇತರ ವಾಹನದ ಮೇಲೆ ಭಾರ ಹೇರದಿದ್ದರೆ. | ಹದಿನೈದು ಪೈಸೆ |
| 11. | ಒಂಟಿ ಎತ್ತು, ಕೋಣ, ಕುದುರೆ, ಪೋನಿ, ಕತ್ತೆ ಅಥವಾ ಹೇಸರಗತ್ತೆಯಿಂದ ಎಳೆಯಲಾಗುವ ಸ್ಪ್ರಿಂಗ್‌ಗಳ ಮೇಲಿರದ ಪ್ರತಿಯೊಂದು ಬಂಡಿಯ ಅಥವಾ ಇತರ ವಾಹನದ ಮೇಲೆ ಭಾರ ಹೇರಿದ್ದರೆ. | ಹದಿನೈದು ಪೈಸೆ |
| 12. | ಒಂಟಿ ಎತ್ತು, ಕೋಣ, ಕುದುರೆ, ಪೋನಿ, ಕತ್ತೆ ಅಥವಾ ಹೇಸರಗತ್ತೆಯಿಂದ ಎಳೆಯಲಾಗುವ ಸ್ಪ್ರಿಂಗ್‌ಗಳ ಮೇಲಿರದ ಪ್ರತಿಯೊಂದು ಬಂಡಿಯ ಅಥವಾ ಇತರ ವಾಹನದ ಮೇಲೆ, ಭಾರ ಹೇರಿರದಿದ್ದರೆ. | ಹತ್ತು ಪೈಸೆ |

[1][ಅನುಸೂಚಿ – **VIII**

*[103ನೇ ಪ್ರಕರಣವನ್ನು ನೋಡಿ]*

1. ಅಧಿಸೂಚನೆ ಸಂಖ್ಯೆ. ಯುಡಿಡಿ 106 ಎಂಎನ್‌ವೈ 98, ದಿನಾಂಕ: 04–08–2001ರ ಮೂಲಕ 20–09–2001ರಿಂದ ಜಾರಿಗೆ ಬರುವಂತೆ ಅನುಸೂಚಿ - VIII ಅನ್ನು ಪ್ರತ್ಯಾಯೋಜಿಸಲಾಗಿದೆ.

**ಜಾಹೀರಾತುಗಳ ಮೇಲೆ ತೆರಿಗೆ**

| ಕ್ರ ಸಂ. | ವಿವರಗಳು | ಪ್ರತಿ ವರ್ಷಕ್ಕೆ ತೆರಿಗೆಯ ಗರಿಷ್ಠ ಮೊಬಲಗು ರೂ. |
|---|---|---|
| 1. | ಭೂಮಿ, ಕಟ್ಟಡ, ಗೋಡೆ, ಜಾಹೀರಾತು ಫಲಕಗಳು, ಚೌಕಟ್ಟು, ಸ್ತಂಭ, ರಚನೆಗಳು, ಇತ್ಯಾದಿಗಳ ಮೇಲಿನ ದೀಪಾಲಂಕಾರವಿಲ್ಲದ ಜಾಹೀರಾತುಗಳು,– | ರೂ. |
| | (ಎ) 1 ಚದರ ಮೀಟರ್‌ವರೆಗಿನ ಜಾಗಕ್ಕೆ | 50 |
| | (ಬಿ) 1 ಚದರ ಮೀಟರ್‌ಗಿಂತ ಹೆಚ್ಚು ಮತ್ತು 2.5 ಚದರ ಮೀಟರ್‌ವರೆಗಿನ ಜಾಗಕ್ಕೆ | 80 |
| | (ಸಿ) ಪ್ರತಿಯೊಂದು ಹೆಚ್ಚಿನ 2.5 ಚದರ ಮೀಟರ್ ಜಾಗಕ್ಕೆ ಅಥವಾ ಅದಕ್ಕಿಂತ ಕಡಿಮೆ ಜಾಗಕ್ಕೆ | 80 |
| 2. | ಎತ್ತುಗಳಿಂದ, ಕುದುರೆಗಳಿಂದ ಅಥವಾ ಇತರ ಪ್ರಾಣಿಗಳಿಂದ, ಮನುಷ್ಯರಿಂದ, ಸೈಕಲ್ಲುಗಳಿಂದ ಎಳೆಯಲಾಗುವ ವಾಹನಗಳ ಮೇಲೆ ಒಯ್ಯಲಾಗುವ ಅಥವಾ ಯಾವುದೇ ವಾಹನದ ಮೇಲೆ ಒಯ್ಯಲಾಗುವ ಸಾಧನದ ಮೇಲಿನ ದೀಪಾಲಂಕಾರವಿಲ್ಲದ ಯಾವುದೇ ಜಾಹೀರಾತುಗಳು,– | |
| | (ಎ) 5 ಚದರ ಮೀಟರ್‌ವರೆಗಿನ ಜಾಗಕ್ಕೆ | 300 |
| | (ಬಿ) ಪ್ರತಿಯೊಂದು ಹೆಚ್ಚಿನ 5 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆಯ ಜಾಗಕ್ಕೆ | 300 |
| 3. | ವಾಹನಗಳ ಮೇಲೆ ಒಯ್ಯುವ ದೀಪಾಲಂಕೃತ ಜಾಹೀರಾತು ಫಲಕಗಳು. | |
| | (ಎ) 5 ಚದರ ಮೀಟರ್‌ವರೆಗಿನ ಜಾಗಕ್ಕೆ | 375 |
| | (ಬಿ) ಪ್ರತಿಯೊಂದು ಹೆಚ್ಚಿನ 1 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆಯ ಜಾಗಕ್ಕೆ | 75 |
| 4. | ಸ್ವಿಚ್‌ಬೋರ್ಡ್‌ನವರು ಒಯ್ಯುವ ದೀಪಾಲಂಕೃತವಿಲ್ಲದ ಜಾಹೀರಾತು ಫಲಕಗಳು. | |
| | (ಎ) 1 ಚದರ ಮೀಟರ್‌ಗೆ ಮೀರದ ಪ್ರತಿಯೊಂದು ಫಲಕಕ್ಕೆ | 75 |
| | (ಬಿ) 1 ಚದರ ಮೀಟರ್‌ಗೆ ಮೀರಿದ ಮತ್ತು 2.5 ಚದರ ಮೀಟರ್‌ವರೆಗಿನ ಪ್ರತಿಯೊಂದು ಫಲಕಕ್ಕೆ | 150 |
| | (ಸಿ) ಪ್ರತಿಯೊಂದು ಹೆಚ್ಚಿನ ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆ ವಿಸ್ತೀರ್ಣಕ್ಕೆ | 75 |
| 5. | ಸ್ವಿಚ್‌ಬೋರ್ಡ್‌ನವರು ಒಯ್ಯುವ ದೀಪಾಲಂಕೃತ ಜಾಹೀರಾತು ಫಲಕಗಳು,– | |
| | (ಎ) 1 ಚದರ ಮೀಟರ್ ಮೀರದ ಪ್ರತಿಯೊಂದು ಫಲಕಕ್ಕೆ | 150 |
| | (ಬಿ) 1 ಚದರ ಮೀಟರ್‌ಗೆ ಮೀರಿದ ಮತ್ತು 2.5 ಚದರ ಮೀಟರ್‌ವರೆಗಿನ ಪ್ರತಿಯೊಂದು ಫಲಕಕ್ಕೆ | 250 |
| | (ಸಿ) ಪ್ರತಿಯೊಂದು ಹೆಚ್ಚಿನ 1 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆಯ ವಿಸ್ತೀರ್ಣಕ್ಕೆ | 150 |
| 6. | ಭೂಮಿ, ಕಟ್ಟಡ, ಗೋಡೆ, ಅಥವಾ ಜಾಹೀರಾತು ಫಲಕಗಳು, ಚೌಕಟ್ಟು, ಸ್ತಂಭ, ರಚನೆಗಳು ಇತ್ಯಾದಿಗಳ ಮೇಲಿನ ದೀಪಾಲಂಕೃತ ಜಾಹೀರಾತುಗಳು,– | |
| | (ಎ) 2 ಚದರ ಮೀಟರ್‌ವರೆಗಿನ ಜಾಗಕ್ಕೆ | 75 |
| | (ಬಿ) 2 ಚದರ ಮೀಟರ್‌ಗೆ ಮೀರಿದ ಮತ್ತು 5 ಚದರ ಮೀಟರ್‌ವರೆಗಿನ ಜಾಗಕ್ಕೆ | 150 |
| | (ಸಿ) 5 ಚದರ ಮೀಟರ್‌ಗೆ ಮೀರಿದ ಮತ್ತು 7.5 ಚದರ ಮೀಟರ್‌ವರೆಗಿನ ಜಾಗಕ್ಕೆ | 150 |
| | (ಡಿ) ಪ್ರತಿಯೊಂದು ಹೆಚ್ಚಿನ 2.5 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆ ಜಾಗಕ್ಕೆ | 175 |
| 7. | ಚಿತ್ರಮಂದಿರಗಳಲ್ಲಿ ಹಾಗೂ ಇತರ ಸಾರ್ವಜನಿಕ ಸ್ಥಳಗಳಲ್ಲಿ ತೆರೆಯ ಮೇಲೆ ಲ್ಯಾಂಟರ್ನ್ ಸ್ಲೈಡುಗಳು ಅಥವಾ ಅಂಥವೇ ಸಾಧನಗಳ ಮೂಲಕ ಪ್ರದರ್ಶಿಸುವ ಜಾಹೀರಾತುಗಳು,– | |
| | (ಎ) 5 ಚದರ ಮೀಟರ್‌ವರೆಗಿನ ಜಾಗಕ್ಕೆ | 250 |
| | (ಬಿ) 5 ಚದರ ಮೀಟರ್‌ಗೆ ಮೀರಿದ ಮತ್ತು 7.5 ಚದರ ಮೀಟರ್‌ವರೆಗಿನ ಜಾಗಕ್ಕೆ | 275 |
| | (ಸಿ) ಪ್ರತಿಯೊಂದು ಹೆಚ್ಚಿನ 2.5 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆ ಜಾಗಕ್ಕೆ | 275 |

| ಕ್ರ ಸಂ. | ವಿವರಗಳು | ಪ್ರತಿ ವರ್ಷಕ್ಕೆ ತೆರಿಗೆಯ ಗರಿಷ್ಠ ಮೊಬಲಗು ರೂ. |
|---|---|---|
| 8. | ಬೀದಿಗಳಿಗೆ ಅಡ್ಡಲಾಗಿ ತೂಗುಹಾಕಿದ ದೀಪಾಲಂಕೃತವಿಲ್ಲದ ಜಾಹೀರಾತುಗಳು,– | |
| | (ಎ) 1 ಚದರ ಮೀಟರ್‌ವರೆಗಿನ ಜಾಗಕ್ಕೆ | 50 |
| | (ಬಿ) 1 ಚದರ ಮೀಟರ್‌ಗೆ ಮೀರಿದ ಮತ್ತು 2.5 ಚದರ ಮೀಟರ್‌ವರೆಗಿನ ಜಾಗಕ್ಕೆ | 80 |
| | (ಸಿ) ಪ್ರತಿಯೊಂದು ಹೆಚ್ಚಿನ 2.5 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆ ಜಾಗಕ್ಕೆ | 80 |
| **ಸೂಚನೆ:**– | 8ನೇ ಬಾಬಿನ ಮೇಲೆ ತೆರಿಗೆಯು ಆಯುಕ್ತರು ನಿರ್ಧರಿಸುವಂಥ ಪ್ರಮಾಣಕ್ಕೆ ಅನುಸಾರವಾಗಿ ವಿಧಿಸಲಾಗುವಂಥ ಜಾಗದ ಬಾಡಿಗೆಗೆ ಹೆಚ್ಚಿಗೆಯಾಗಿ ಇರುತ್ತದೆ. | |
| 9. | ಖಾಲಿ ಇರುವ, ಆದರೆ ಅವುಗಳ ಮೇಲೆ ಜಾಹೀರಾತುದಾರನ ಹೆಸರನ್ನು ಹೊಂದಿರುವ ಅಥವಾ "ಬಾಡಿಗೆಗೆ ಇದೆ" ಎಂಬ ಪ್ರಕಟಣೆಯನ್ನು ಪ್ರದರ್ಶಿಸಿರುವ ದೀಪಾಲಂಕೃತವಲ್ಲದ ಜಾಹೀರಾತು ಫಲಕಗಳು. | |
| | (ಎ) 1 ಚದರ ಮೀಟರ್‌ವರೆಗಿನ ಜಾಗಕ್ಕೆ | 25 |
| | (ಬಿ) 1 ಚದರ ಮೀಟರ್‌ಗೆ ಮೀರಿದ 2.5 ಚದರ ಮೀಟರ್‌ವರೆಗಿನ ಜಾಗಕ್ಕೆ | 40 |
| | (ಸಿ) ಪ್ರತಿಯೊಂದು ಹೆಚ್ಚಿನ 2.5 ಚದರ ಮೀಟರ್ ಅಥವಾ ಅದಕ್ಕಿಂತ ಕಡಿಮೆ ಜಾಗಕ್ಕೆ | 40 |
| 10. | ಹರಾಜು ನಡೆಯುವ ಆವರಣಗಳಲ್ಲಿ ಇರುವಂಥವುಗಳನ್ನು ಹೊರತುಪಡಿಸಿ ಪ್ರತಿಯೊಂದು ಹರಾಜು ಮಾರಾಟವನ್ನು ಜಾಹೀರಾತು ಮಾಡುವ ಸೂಕ್ತ ಅಳತೆಯ ಎರಡಕ್ಕಿಂತ ಹೆಚ್ಚಿಲ್ಲದ ಫಲಕಗಳನ್ನು ಆ ಸ್ಥಳದಲ್ಲಿನ ಪ್ರಮುಖ ನಿವೇಶನದ ಮೇಲೆ ಒಂದನ್ನು ಮತ್ತು ನಗರಪಾಲಿಕೆಯ ದೀಪದ ಕಂಬದ ಮೇಲೆ ಒಂದನ್ನು ಹಾಕಲು ಹರಾಜುದಾರರಿಗೆ ಅನುಮತಿ ನೀಡುವುದು. | 500] |

**ಅನುಸೂಚಿ – IX**

*[151ನೇ ಪ್ರಕರಣವನ್ನು ನೋಡಿ]*

**ಹಣಕಾಸು ನಿಯಮಗಳು**

**ಭಾಗ I**

**ನಗರಪಾಲಿಕೆಯ ನಿಧಿಯ ಅಧಿಕೃತ ವೆಚ್ಚ ಮತ್ತು ಹೂಡಿಕೆ ಮತ್ತು ನಿಧಿಯಿಂದ ಸಂದಾಯ ಮಾಡಬೇಕಾದ ರೀತಿ**

1. ಯಾವ ಉದ್ದೇಶಗಳಿಗಾಗಿ ನಗರಪಾಲಿಕೆಯ ನಿಧಿಯನ್ನು ವಿನಿಯೋಗಿಸಬಹುದೋ ಆ ಉದ್ದೇಶಗಳು, ಈ ಅಧಿನಿಯಮದ ಮೂಲಕ ನಿರ್ಬಂಧಿತವಾದವುಗಳೆಂದು ಅಥವಾ ವಿವೇಚನಾಯುಕ್ತವಾದವುಗಳೆಂದು ಸ್ಪಷ್ಟವಾಗಿ ಘೋಷಿಸಿದ ಎಲ್ಲಾ ಉದ್ದೇಶಗಳನ್ನು ಹಾಗೂ ಸಾಮಾನ್ಯವಾಗಿ ನಾಗರೀಕರ ಸುರಕ್ಷೆ, ಆರೋಗ್ಯ, ಅನುಕೂಲತೆ ಅಥವಾ ಶಿಕ್ಷಣಕ್ಕೆ ಅಥವಾ ನಗರದ ಸೌಕರ್ಯಗಳಿಗೆ ಅವಶ್ಯಕವಾದ ಅಥವಾ ಸಹಾಯಕವಾದ, ಎಲ್ಲವನ್ನು ಮತ್ತು ಆಡಳಿತಕ್ಕೆ ಪ್ರಾಸಂಗಿಕವಾದ ಎಲ್ಲವನ್ನು ಒಳಗೊಳ್ಳುತ್ತವೆ ಮತ್ತು ನಿಧಿಯು, ಈ ನಿಯಮಗಳಿಗೆ ಮತ್ತು ಸರ್ಕಾರವು ನಿಯಮಿಸಬಹುದಾದ ಇನ್ನೂ ಹೆಚ್ಚಿನ ನಿಯಮಗಳಿಗೆ ಅಥವಾ ಹೊರಡಿಸಬಹುದಾದಂಥ ವಿಶೇಷ ಆದೇಶಗಳಿಗೆ ಒಳಪಟ್ಟು ನಗರದೊಳಗೆ ವಿನಿಯೋಗಿಸಬಹುದಾದಂಥದ್ದು ಆಗಿರತಕ್ಕದ್ದು ಮತ್ತು ವೆಚ್ಚವನ್ನು ಈ ಅಧಿನಿಯಮದ ಮೂಲಕ ಅಧಿಕೃತಗೊಳಿಸಿದ್ದರೆ ಅಥವಾ ಸರ್ಕಾರವು ವಿಶೇಷವಾಗಿ ಮಂಜೂರು ಮಾಡಿದ್ದರೆ ನಗರದ ಹೊರಗೂ ಅವುಗಳಿಗೆ ವಿನಿಯೋಗಿಸಬಹುದಾದಂಥದ್ದು ಆಗಿರತಕ್ಕದ್ದು.

2. ಆಡಳಿತಕ್ಕೆ ಪ್ರಾಸಂಗಿಕವಾದ ವೆಚ್ಚಗಳ ಬಾಬುಗಳು,–

(ಎ) ನಗರಪಾಲಿಕೆಯ ಮುಖ್ಯ ಕಚೇರಿಗೆ ಮತ್ತು ದಾಖಲೆ ಕೊಠಡಿಗೆ ಮತ್ತು ಇತರ ಕಚೇರಿಗಳಿಗೆ, ಸಲಕರಣೆಗಳನ್ನು ಮತ್ತು ಜೋಡಣೆಗಳನ್ನು ಮತ್ತು ವಿಮೆಯನ್ನು ಒದಗಿಸುವುದನ್ನು ಮತ್ತು ಅವುಗಳನ್ನು ನಿರ್ವಹಿಸುವುದನ್ನು;

(ಬಿ) ಸಂಬಳಗಳು, ಭತ್ಯೆಗಳು, ವಿಶಿಷ್ಟ ಬಗೆಯ ಪೋಷಾಕುಗಳು, ಪಿಂಚಣಿ ಮತ್ತು ಭವಿಷ್ಯನಿಧಿ ವಂತಿಗೆಗಳು, ಉಪದಾನಗಳು ಮತ್ತು ಪಿಂಚಣಿಗಳನ್ನು ಮತ್ತು ಆಯುಕ್ತರಿಗೆ ಮತ್ತು ನಗರಪಾಲಿಕೆಯ ಅಧಿಕಾರಿಗಳಿಗೆ ಹಾಗೂ ನೌಕರರಿಗೆ ಒದಗಿಸಿದ ವಾಹನಗಳ ಖರ್ಚು–ವೆಚ್ಚಗಳನ್ನು, ವೃತ್ತಿಪರ ಅಧಿಕಾರಿಗಳ ಮತ್ತು ಅಧೀನ ನೌಕರರ ಅಧ್ಯಯನ ರಜೆಯ ಭತ್ಯೆಗಳನ್ನು; ಚಿಕಿತ್ಸೆಗಾಗಿ ನಗರಪಾಲಿಕೆಯ ನೌಕರರನ್ನು ಯಾವುದೇ ಆಸ್ಪತ್ರೆಗೆ ಅಥವಾ ಸಂಸ್ಥೆಗೆ ಕಳುಹಿಸಿಕೊಡುವುದನ್ನು; ನಗರಪಾಲಿಕೆಯ ಅಧೀನ ನೌಕರರಿಗೆ ಮಾರಾಟ ಮಾಡುವುದಕ್ಕಾಗಿ ದಿನಸಿ ಪದಾರ್ಥಗಳನ್ನು ಮತ್ತು ಇತರ ಅವಶ್ಯಕ ವಸ್ತುಗಳನ್ನು ಖರೀದಿಸುವುದನ್ನು.

**ವಿವರಣೆ.**– ಈ ನಿಯಮದ ಉದ್ದೇಶಕ್ಕಾಗಿ 'ಸಂಬಳ'ವು ನಗರಪಾಲಿಕೆಯು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂಥ ಬೆಲೆಗಳಲ್ಲಿ ನಗರಪಾಲಿಕೆಯು ವಸ್ತುಗಳನ್ನು ಖರೀದಿಸುವ ಮೂಲಕ ಸಂಬಳದ ಸಂಪೂರ್ಣ ಭಾಗಕ್ಕೆ ಅಥವಾ ಭಾಗಕ್ಕೆ ಬದಲಾಗಿ ವಸ್ತುರೂಪದಲ್ಲಿ ಸಂದಾಯಗಳನ್ನು ಸ್ವೀಕರಿಸಲು ನಗರಪಾಲಿಕೆಯು ಮಂಜೂರು ಮಾಡಿದ ವಿಶೇಷ ಹಕ್ಕು ಯಾವುದಾದರೂ ಇದ್ದರೆ, ಇವುಗಳನ್ನು ಒಳಗೊಳ್ಳತಕ್ಕದ್ದು.

(ಸಿ) ನಗರಪಾಲಿಕೆಯ ಚರ್ಚೆಗಳನ್ನು ವರದಿ ಮಾಡುವ ಖರ್ಚನ್ನು ಒಳಗೊಂಡಂತೆ ಲೇಖನ ಸಾಮಗ್ರಿ, ಮುದ್ರಣ ಮತ್ತು ಕಚೇರಿಯ ಎಲ್ಲ ವೆಚ್ಚಗಳನ್ನು ಮತ್ತು ಜಾಹೀರಾತು ವೆಚ್ಚಗಳನ್ನು;

(ಡಿ) ಕಾನೂನು ವೆಚ್ಚಗಳನ್ನು;

(ಇ) ಚುನಾವಣಾ ವೆಚ್ಚಗಳನ್ನು;

(ಎಫ್) ಲೆಕ್ಕಪರಿಶೋಧಕರ ಫೀಜನ್ನು;

(ಜಿ) ನಗರಪಾಲಿಕೆಯ ಕಾರ್ಯಾಗಾರಗಳ ವ್ಯವಸ್ಥೆ ಮತ್ತು ನಿರ್ವಹಣೆಯನ್ನು;

(ಹೆಚ್) ನಗರಪಾಲಿಕೆಯ ಮೋಜಣಿಗಳನ್ನು, ನಗರದ ಮತ್ತು ಉದ್ದೇಶಿತ ಬಡಾವಣೆಗಳ ನಕಾಶೆಗಳ ತಯಾರಿಕೆಯನ್ನು,

(ಐ) ಸ್ಥಿರ ಸ್ವತ್ತಿನ ಹಕ್ಕು ದಾಖಲೆಗಳ ತಯಾರಿಕೆಯನ್ನು ಮತ್ತು ನಿರ್ವಹಣೆಯನ್ನು; ಮತ್ತು

(ಜೆ) ಅಧಿನಿಯಮದ ಎಲ್ಲ ಅಥವಾ ಯಾವುದೇ ಉದ್ದೇಶಕ್ಕಾಗಿ ಯಾವುದೇ ಭೂಮಿಯ ಆರ್ಜನೆಯನ್ನು

– ಒಳಗೊಳ್ಳುತ್ತವೆ.

3. ನಗರಪಾಲಿಕೆಯು ಸ್ವೀಕರಿಸಿದ ಎಲ್ಲಾ ಹಣವನ್ನು ಸರ್ಕಾರವು ಆದೇಶದ ಮೂಲಕ ನಿರ್ದೇಶಿಸಬಹುದಾದಂಥ ಬ್ಯಾಂಕ್‌ನಲ್ಲಿ ಅಥವಾ ಖಜಾನೆಯಲ್ಲಿ ಇಡತಕ್ಕದ್ದು ಮತ್ತು 'ನಗರಪಾಲಿಕೆ ನಿಧಿ ಖಾತೆ' ಎಂಬ ಹೆಸರಿನ ಖಾತೆಗೆ ಜಮೆ ಮಾಡತಕ್ಕದ್ದು:

ಪರಂತು, ಅಂಥ ಹಣವನ್ನು ಸರ್ಕಾರದ ಮಂಜೂರಾತಿ ಪಡೆದು,–

(i) ಸರ್ಕಾರವು ಅನುಮೋದಿಸಬಹುದಾದಂಥ ಯಾವುದೇ ಭದ್ರತೆಗಳಲ್ಲಿ ಹೂಡಬಹುದು;

(ii) ಸರ್ಕಾರವು ಅನುಮೋದಿಸಿದ ಯಾವುದೇ ಬ್ಯಾಂಕಿನಲ್ಲಿ ನಿಗದಿತ ಠೇವಣಿಯಲ್ಲಿ ಇಡಬಹುದು.

4. (1) ನಗರಪಾಲಿಕೆಯ ನಿಧಿಗೆ ಸಂಬಂಧಿಸಿದಂತೆ ನೀಡಿದ ಎಲ್ಲಾ ಆದೇಶಗಳಿಗೆ ಅಥವಾ ಚೆಕ್ಕುಗಳಿಗೆ, ಆಯುಕ್ತರು ಅಥವಾ [1][ಮುಖ್ಯ ಲೆಕ್ಕಾಧಿಕಾರಿಯು ಅಥವಾ ಈ ಬಗ್ಗೆ ಅವರಿಂದ ಅಧಿಕೃತನಾದ ಯಾರೇ ಅಧಿಕಾರಿಯು][1] ರುಜು ಮಾಡತಕ್ಕದ್ದು ಮತ್ತು ನಿಧಿಯನ್ನು ಯಾವ ಬ್ಯಾಂಕಿನಲ್ಲಿ ಅಥವಾ ಖಜಾನೆಯಲ್ಲಿ ಇಡಲಾಗಿದೆಯೋ ಆ ಬ್ಯಾಂಕ್ ಅಥವಾ ಖಜಾನೆಯು ನಗರಪಾಲಿಕೆಯ ಲೆಕ್ಕದಲ್ಲಿರುವ ನಿಧಿಗಳು ಅವಕಾಶ ಮಾಡಿಕೊಡುವಷ್ಟರಮಟ್ಟಿಗೆ ಹಾಗೆ ರುಜು ಮಾಡಿದ ಎಲ್ಲಾ ಆದೇಶಗಳಿಗೆ ಅಥವಾ ಚೆಕ್ಕುಗಳಿಗೆ ಆ ನಿಧಿಯಿಂದ ಹಣ ಸಂದಾಯ ಮಾಡತಕ್ಕದ್ದು.

1. ಅಧಿಸೂಚನೆ ಸಂ. ಯುಡಿಡಿ 65 ಎಂಎನ್‌ಯು 2002, ದಿನಾಂಕ: 27–02–2004ರ ಮೂಲಕ "ಅಥವಾ ಅವರ ಗೈರುಹಾಜರಿಯಲ್ಲಿ ಕಂದಾಯ ಅಧಿಕಾರಿಯು" ಎಂಬ ಪದಗಳಿಗೆ 09–03–2004 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ನಗರಪಾಲಿಕೆಯು ಮುಂಚಿತವಾಗಿಯೇ ಲಿಖಿತದಲ್ಲಿ ಅಧಿಕಾರವನ್ನು ಕೊಟ್ಟಿದ್ದರೆ ಅಂಥ ಬ್ಯಾಂಕ್ ಅಥವಾ ಖಜಾನೆಯು, ನಗರಪಾಲಿಕೆಯ ಪರವಾಗಿ ಸರ್ಕಾರವು ವಹಿಸಿದ ಯಾವುದೇ ವೆಚ್ಚವನ್ನು ಅಂಥ ಆದೇಶಗಳು ಅಥವಾ ಚೆಕ್ಕುಗಳು ಇಲ್ಲದೆಯೇ ನಗರಪಾಲಿಕೆಯ ನಿಧಿಯಿಂದ ಕೂಡಲೇ ಸಂದಾಯ ಮಾಡಬಹುದು.

5. ನಗರಪಾಲಿಕೆಯ ನಿಧಿಯಿಂದ ಯಾವುದೇ ಮೊತ್ತವನ್ನು, ಅಂಥ ಮೊತ್ತವು ಬಜೆಟ್ ಅನುದಾನದಲ್ಲಿ ಸೇರಿದ್ದರೆ ಮತ್ತು ಬಜೆಟ್ ಅನುದಾನದಲ್ಲಿ ಸಾಕಷ್ಟು ಶಿಲ್ಕು ಇದ್ದರೆ ಆಯುಕ್ತರು ಸಂದಾಯ ಮಾಡಬಹುದು ಅಥವಾ ಸಂದಾಯ ಮಾಡಲು ಅಧಿಕೃತಗೊಳಿಸಬಹುದು.

6. ಆಯುಕ್ತರು,–

(ಎ) ಕಾನೂನು, ನಿಯಮ, ಉಪವಿಧಿ ಅಥವಾ ವಿನಿಯಮದ ಮೂಲಕ ಅಧಿಕೃತಗೊಳಿಸಿದ ತೆರಿಗೆಗಳ ಮತ್ತು ಇತರ ಹಣದ ಮರುಪಾವತಿಗಳಿಗೆ;

(ಬಿ) ಕಂಟ್ರಾಕ್ಟರುಗಳಿಗೆ ಅಥವಾ ಇತರ ವ್ಯಕ್ತಿಗಳಿಗೆ ಸೇರಿದ ಹಾಗೂ ಠೇವಣಿಯಲ್ಲಿಟ್ಟಿರುವ ಹಣದ ಮತ್ತು ಪ್ರಮಾದವಶಾತ್ ಸಂಗ್ರಹಿಸಿದ ಅಥವಾ ನಗರಪಾಲಿಕೆಯ ನಿಧಿಗೆ ಜಮೆ ಮಾಡಿದ ಹಣದ ಮರುಸಂದಾಯಗಳಿಗೆ;

(ಸಿ) 64ನೇ ಪ್ರಕರಣದ (1)ನೇ ಉಪ–ಪ್ರಕರಣದ (ಬಿ) ಖಂಡದ ಮೇರೆಗಿನ ತನ್ನ ಅಧಿಕಾರಗಳನ್ನು ಚಲಾಯಿಸುವಾಗ, ಆಯುಕ್ತರು ವಹಿಸಿದ ಖರ್ಚುಗಳಿಗೆ;

(ಡಿ) 97ನೇ ಹಾಗೂ 165ನೇ ಪ್ರಕರಣಗಳ ಮೇರೆಗೆ ಸಂದಾಯ ಮಾಡಬೇಕಾದ ಮೊತ್ತಗಳಿಗೆ;

(ಇ) ನಗರಪಾಲಿಕೆಯ ವಿರುದ್ಧ ಸಿವಿಲ್ ನ್ಯಾಯಾಲಯವು ಮಾಡಿದ ಡಿಕ್ರಿ ಅಥವಾ ಆದೇಶದ ಮೇರೆಗೆ ಅಥವಾ ಯಾವುದೇ ದಾವೆಯನ್ನು ಅಥವಾ ಕಾನೂನು ವ್ಯವಹರಣೆಯನ್ನು ಅಥವಾ ಕ್ಲೇಮನ್ನು ರಾಜಿ ಮಾಡಿಕೊಂಡ ಮೇರೆಗೆ ಸಂದಾಯ ಮಾಡಬೇಕಾದ ಮೊತ್ತಗಳಿಗೆ;

(ಎಫ್) ಯಾವ ಮೊತ್ತವನ್ನು ನಷ್ಟಪರಿಹಾರದ ಅಥವಾ ವೆಚ್ಚಗಳ ರೂಪದಲ್ಲಿ ಸಂದಾಯ ಮಾಡುವಂತೆ ಕಾನೂನು, ನಿಯಮ ಅಥವಾ ಉಪವಿಧಿಯ ಮೂಲಕ ಆಯುಕ್ತರನ್ನು ಅಗತ್ಯಪಡಿಸಲಾಗಿದೆಯೋ ಆ ಯಾವುದೇ ಮೊತ್ತಕ್ಕೆ;

(ಜಿ) 85ನೇ ಪ್ರಕರಣದ ಮೇರೆಗೆ ನೇಮಕಗೊಂಡ ವಿಶೇಷ ಆರೋಗ್ಯ ಅಧಿಕಾರಿಗೆ ಸಂದಾಯ ಮಾಡಬೇಕಾದ ಸಂಬಳಕ್ಕೆ;

(ಹೆಚ್) 406ನೇ ಪ್ರಕರಣದ ಮೇರೆಗೆ ಆಯುಕ್ತರು ವಹಿಸಿದ ವೆಚ್ಚಗಳಿಗೆ ಮತ್ತು ಕಾನೂನಿನ ಯಾವುದೇ ಉಪಬಂಧದ ಮೇರೆಗೆ ಹೊಣೆಗಾರನಾದ ವ್ಯಕ್ತಿಯಿಂದ ಮರುಭರ್ತಿಯ ನಿರೀಕ್ಷಣೆಯಲ್ಲಿ ಕಾನೂನುಸಮ್ಮತವಾಗಿ ವಹಿಸಿದ ವೆಚ್ಚಗಳಿಗೆ

– ಸಂಬಂಧಿಸಿದಂತೆ ಬಜೆಟ್‌ನಲ್ಲಿ ಏರ್ಪಾಟು ಮಾಡಿರದಿದ್ದಾಗ ನಗರಪಾಲಿಕೆಯ ನಿಧಿಯಿಂದ ಯಾವುದೇ ಮೊತ್ತವನ್ನು ಸಂದಾಯ ಮಾಡಬಹುದು ಅಥವಾ ಸಂದಾಯ ಮಾಡಲು ಅಧಿಕೃತಗೊಳಿಸಬಹುದು:

ಪರಂತು, ಆಯುಕ್ತರು ಅಂಥ ಸನ್ನಿವೇಶಗಳನ್ನು ಸ್ಥಾಯಿ ಸಮಿತಿಗೆ ತಕ್ಷಣವೇ ತಿಳಿಸತಕ್ಕದ್ದು, ಸ್ಥಾಯಿ ಸಮಿತಿಯು ಬಜೆಟ್ ಅನುದಾನದಲ್ಲಿ ಸೇರಿರದ ಯಾವುದೇ ವೆಚ್ಚವನ್ನು ಸೇರಿಸಲು ಆ ಸನ್ನಿವೇಶಗಳಲ್ಲಿ ಅವಶ್ಯವಾಗಬಹುದಾದ ಅಥವಾ ವಿಹಿತವಾಗಬಹುದಾದ ಯಾವುದೇ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

7. ಆಯುಕ್ತರು ಅಗತ್ಯ ಮೀರಿ ಹಣ ತೆಗೆಯತಕ್ಕದ್ದಲ್ಲ.

### ಭಾಗ – II

### ಲೆಕ್ಕಪರಿಶೋಧನೆ, ಅಧಿಭಾರ ಮತ್ತು ಅಂಗೀಕರಿಸದಿರುವುದು

8. 150ನೇ ಪ್ರಕರಣದ ಮೇರೆಗೆ ನೇಮಕಗೊಂಡ, ಇದರಲ್ಲಿ ಇನ್ನು ಮುಂದೆ ಲೆಕ್ಕ ಪರಿಶೋಧಕರು ಎಂದು ಉಲ್ಲೇಖಿಸಿರುವ ನಗರಪಾಲಿಕೆಯ ಮುಖ್ಯ ಲೆಕ್ಕ ಪರಿಶೋಧಕರು ನಗರಪಾಲಿಕೆಯ ಲೆಕ್ಕಪತ್ರಗಳನ್ನು ಇಡತಕ್ಕದ್ದು ಮತ್ತು ಅವುಗಳನ್ನು ನಿರಂತರವಾಗಿ ಲೆಕ್ಕಪರಿಶೋಧನೆ ಮಾಡುತ್ತಿರತಕ್ಕದ್ದು.

9. (1) ಆಯುಕ್ತರು, ಲೆಕ್ಕಪರಿಶೋಧಕರು ಅಗತ್ಯಪಡಿಸಿದ ಎಲ್ಲಾ ಲೆಕ್ಕಪತ್ರಗಳನ್ನು ಅವರಿಗೆ ಒಪ್ಪಿಸತಕ್ಕದ್ದು.

(2) ಆಯುಕ್ತರು ವಾರ್ಷಿಕ ಲೆಕ್ಕಪತ್ರಗಳನ್ನು ಮತ್ತು ರಿಜಿಸ್ಟರುಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಅಂಥ ಲೆಕ್ಕಪತ್ರಗಳು ಮತ್ತು ರಿಜಿಸ್ಟರುಗಳು ಯಾವ ವರ್ಷಕ್ಕೆ ಸಂಬಂಧಪಟ್ಟಿವೆಯೋ ಆ ವರ್ಷದ ತರುವಾಯದ ವರ್ಷದ ಅಕ್ಟೋಬರ್ ತಿಂಗಳ ಮೊದಲನೇ ದಿನಕ್ಕೆ ತಡವಾಗದಂತೆ ಅವುಗಳನ್ನು ಪರಿಶೀಲನೆಗಾಗಿ ಲೆಕ್ಕಪರಿಶೋಧಕರ ಮುಂದೆ ಹಾಜರುಪಡಿಸತಕ್ಕದ್ದು.

10. (1) ಲೆಕ್ಕಪರಿಶೋಧಕರು,–

(ಎ) ತಾವು ಸೂಕ್ತವೆಂದು ಭಾವಿಸಬಹುದಾದಂತೆ ಲೆಕ್ಕಪತ್ರಗಳಿಗೆ ಸಂಬಂಧಪಟ್ಟ ವೋಚರುಗಳನ್ನು, ವಿವರಣಾ ಪಟ್ಟಿಗಳನ್ನು, ವಿವರ ಪಟ್ಟಿಕೆಗಳನ್ನು, ಪತ್ರವ್ಯವಹಾರವನ್ನು, ಟಿಪ್ಪಣಿಗಳನ್ನು ಅಥವಾ ಇತರ ದಸ್ತಾವೇಜುಗಳನ್ನು ಹಾಜರುಪಡಿಸುವಂತೆ ಲಿಖಿತದಲ್ಲಿ ಅಗತ್ಯಪಡಿಸಬಹುದು;

(ಬಿ) ಅಂಥ ವೋಚರುಗಳಿಗೆ, ವಿವರಣಾ ಪಟ್ಟಿಗಳಿಗೆ, ವಿವರ ಪಟ್ಟಿಕೆಗಳಿಗೆ, ಪತ್ರವ್ಯವಹಾರಕ್ಕೆ, ಟಿಪ್ಪಣಿಗಳಿಗೆ ಅಥವಾ ಇತರ ದಸ್ತಾವೇಜುಗಳಿಗೆ ಅಥವಾ ನಗರಪಾಲಿಕೆಯ ಯಾವುದೇ ಸ್ವತ್ತಿಗೆ ಜವಾಬ್ದಾರನಾಗಬಹುದಾದ ಅಥವಾ ಅವುಗಳ ಅಭಿರಕ್ಷೆ ಅಥವಾ ನಿಯಂತ್ರಣವನ್ನು ಹೊಂದಿರುವ ನಗರಪಾಲಿಕೆಯ ಸಂಬಳ ಪಡೆಯುವ ಯಾರೇ ನೌಕರನನ್ನು ಅಥವಾ ನಗರಪಾಲಿಕೆಯೊಂದಿಗೆ ಅಥವಾ ನಗರಪಾಲಿಕೆಯ ಅಧೀನದಲ್ಲಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಯಾವುದೇ ಪಾಲು ಅಥವಾ ಹಿತಾಸಕ್ತಿಯನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಹೊಂದಿರುವ ಯಾರೇ ವ್ಯಕ್ತಿಯನ್ನು ಅಥವಾ ಅವನ ಪಾಲುದಾರನನ್ನು ತಮ್ಮ ಕಚೇರಿಯಲ್ಲಿ ತಮ್ಮ ಮುಂದೆ ಖುದ್ದಾಗಿ ಹಾಜರಾಗುವಂತೆ ಮತ್ತು ಯಾವುದೇ ಪ್ರಶ್ನೆಗೆ ಉತ್ತರಿಸುವಂತೆ ಲಿಖಿತದಲ್ಲಿ ಅಗತ್ಯಪಡಿಸಬಹುದು.

(ಸಿ) ನಗರಪಾಲಿಕೆಯ ಸದಸ್ಯರಿಂದ ಲಿಖಿತದಲ್ಲಿ ವಿವರಣೆಯು ಅಗತ್ಯವಾಗಿರುವ ಸಂದರ್ಭದಲ್ಲಿ ಅಂಥ ವ್ಯಕ್ತಿಯನ್ನು ತಮ್ಮ ಕಚೇರಿಯಲ್ಲಿ ತಮ್ಮನ್ನು ಭೇಟಿ ಮಾಡುವಂತೆ ಆಹ್ವಾನಿಸಬಹುದು ಮತ್ತು ಯಾವ ಅಂಶದ ಬಗ್ಗೆ ಅವರ ವಿವರಣೆಯು ಅಗತ್ಯವಿದೆಯೋ ಆ ಅಂಶವನ್ನು ಲಿಖಿತದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(2) ಲೆಕ್ಕಪರಿಶೋಧಕರು ಈ ನಿಯಮದ ಮೇರೆಗೆ ಮಾಡಿದ ಯಾವುದೇ ಕೋರಿಕೆಯಲ್ಲಿ ಅಥವಾ ನೀಡಿದ ಆಹ್ವಾನದಲ್ಲಿ ಮೂರು ದಿನಗಳಿಗೆ ಕಡಿಮೆಯಿಲ್ಲದ ಸೂಕ್ತ ಅವಧಿಯನ್ನು ನಿಗದಿಪಡಿಸಬಹುದು. ಆ ಅವಧಿಯೊಳಗೆ ಸದರಿ ಕೋರಿಕೆಯನ್ನು ಅಥವಾ ಆಹ್ವಾನವನ್ನು ಪಾಲಿಸತಕ್ಕದ್ದು.

(3) ಲೆಕ್ಕಪರಿಶೋಧಕರು, ಲೆಕ್ಕಪರಿಶೋಧನೆಯನ್ನು ಪ್ರಾರಂಭಿಸಲು ಅವರು ಉದ್ದೇಶಿಸಿರುವ ದಿನಾಂಕದ ಬಗ್ಗೆ ಎರಡು ವಾರಗಳಿಗೆ ಕಡಿಮೆಯಿಲ್ಲದ ಲಿಖಿತ ನೋಟೀಸನ್ನು ನಗರಪಾಲಿಕೆಗೆ ಕೊಡತಕ್ಕದ್ದು:

ಪರಂತು, ಈ ಉಪ–ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಲೆಕ್ಕಪರಿಶೋಧಕರು ವಿಶೇಷ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ ಎರಡು ವಾರಗಳಿಗಿಂತ ಕಡಿಮೆ ಅವಧಿಯ ನೋಟೀಸನ್ನು ಕೊಡಬಹುದು ಅಥವಾ ನೋಟೀಸನ್ನು ಕೊಡದೆಯೇ ವಿಶೇಷ ಅಥವಾ ಸವಿವರ ಲೆಕ್ಕಪರಿಶೋಧನೆಯನ್ನು ಪ್ರಾರಂಭಿಸಬಹುದು.

11. ಲೆಕ್ಕಪರಿಶೋಧಕರು ತಮ್ಮ ವರದಿಯಲ್ಲಿ,–

(ಎ) ಕಾನೂನಿಗೆ ತದ್ವಿರುದ್ಧವೆಂದು ತಮಗೆ ಕಂಡುಬರುವ ಪ್ರತಿಯೊಂದು ಸಂದಾಯದ;

(ಬಿ) ಯಾರೇ ವ್ಯಕ್ತಿಯ ಅತೀವ ನಿರ್ಲಕ್ಷ್ಯ ಅಥವಾ ದುರ್ನಡತೆಯಿಂದಾಗಿ ಉಂಟಾಗಿದೆ ಎಂದು ಕಂಡುಬರುವ ಯಾವುದೇ ಕೊರತೆ ಅಥವಾ ನಷ್ಟವಾದ ಮೊಬಲಗಿನ;

(ಸಿ) ಯಾರೇ ವ್ಯಕ್ತಿಯು ಸ್ವೀಕರಿಸಿದ ಮತ್ತು ಲೆಕ್ಕಕ್ಕೆ ತೆಗೆದುಕೊಳ್ಳಲೇಬೇಕಾದ ಆದರೆ ಲೆಕ್ಕಕ್ಕೆ ತೆಗೆದುಕೊಳ್ಳದಿರುವಂಥ ಯಾವುದೇ ಮೊತ್ತದ ಮೊಬಲಗಿನ; ಮತ್ತು

(ಡಿ) ಖಂಡಗಳು (ಎ) (ಬಿ) ಮತ್ತು (ಸಿ) ಯಲ್ಲಿ ತಿಳಿಸಿರುವಂಥವುಗಳನ್ನು ಹೊರತುಪಡಿಸಿ, ಲೆಕ್ಕಪತ್ರಗಳಲ್ಲಿ ತಮಗೆ ಕಂಡುಬರಬಹುದಾದಂಥ ಯಾವುದೇ ಮುಖ್ಯ ಅನೌಚಿತ್ಯತೆ ಅಥವಾ ಅಕ್ರಮದ

– ನಿರೂಪಣೆಯನ್ನು ಸೇರಿಸತಕ್ಕದ್ದು.

12. ಲೆಕ್ಕಪರಿಶೋಧಕರು, ಲೆಕ್ಕಪರಿಶೋಧನೆಯ ಅಂತಿಮ ವಿವರಣಾ ಪತ್ರವನ್ನು [1][ಲೆಕ್ಕಪತ್ರಗಳ] ಸ್ಥಾಯೀ ಸಮಿತಿಗೆ ಒಪ್ಪಿಸತಕ್ಕದ್ದು ಮತ್ತು ಅದರ ದ್ವಿಪ್ರತಿಯನ್ನು ಹಣಕಾಸು ವರ್ಷದ ಮುಕ್ತಾಯವಾದ ದಿನದಿಂದ ಮೂರು ತಿಂಗಳುಗಳ ಅವಧಿಯೊಳಗೆ ಅಥವಾ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಅವಧಿಯೊಳಗೆ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

1. ಅಧಿಸೂಚನೆ ಸಂಖ್ಯೆ ಯುಡಿಡಿ 65 ಎಂಎನ್‌ಯು 2002, ದಿನಾಂಕ 27.2.2004 ರ ಮೂಲಕ 9.3.2004 ರಿಂದ ಜಾರಿಗೆ ಬರುವಂತೆ "ತೆರಿಗೆ ಮತ್ತು ಹಣಕಾಸು" ಎಂಬ ಪದಗಳಿಗೆ ಬದಲಾಗಿ ಪ್ರತ್ಯಾಯೋಜಿಸಲಾಗಿದೆ.

13. (1) ಸ್ಥಾಯೀ ಸಮಿತಿಯು, ಲೆಕ್ಕಪರಿಶೋಧಕರು ಎತ್ತಿ ತೋರಿಸಬಹುದಾದಂಥ ಯಾವುದೇ ನ್ಯೂನತೆಗಳನ್ನು ಅಥವಾ ಅಕ್ರಮಗಳನ್ನು ತಕ್ಷಣವೇ ಸರಿಪಡಿಸತಕ್ಕದ್ದು ಮತ್ತು ಅದನ್ನು ನಗರಪಾಲಿಕೆಗೆ ವರದಿ ಮಾಡತಕ್ಕದ್ದು.

(2) ನಗರಪಾಲಿಕೆಯು ಲೆಕ್ಕಪರಿಶೋಧನಾ ವರದಿಯ ಬಗ್ಗೆ ತನ್ನ ಟೀಕೆಟಿಪ್ಪಣಿಗಳು ಯಾವುದಾದರೂ ಇದ್ದರೆ ಅವುಗಳನ್ನು ನಗರಪಾಲಿಕೆಯು ವರದಿಯನ್ನು ಸ್ವೀಕರಿಸಿದ ತರುವಾಯ ಆರು ತಿಂಗಳ ಒಳಗಾಗಿ ರಾಜ್ಯ ಲೆಕ್ಕಪತ್ರ ಇಲಾಖೆಯ ಕಂಟ್ರೋಲರ್ ಮೂಲಕ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

[1][(3) ರಾಜ್ಯ ಸರ್ಕಾರವು ಅಂಥ ಪ್ರತಿಯೊಂದು ವರದಿಯನ್ನು ಸ್ವೀಕರಿಸಿದ ತರುವಾಯ, ಸಾಧ್ಯವಾದಷ್ಟು ಬೇಗನೆ, ಅದನ್ನು ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.]

1. ಅಧಿಸೂಚನೆ ಸಂಖ್ಯೆ ಯುಡಿಡಿ 65 ಎಂಎನ್‌ಯು 2002, ದಿನಾಂಕ: 27-02-2004ರ ಮೂಲಕ ಉಪ-ನಿಯಮ (3) ಅನ್ನು 09-03-2004 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

14. (1) ಲೆಕ್ಕಪರಿಶೋಧಕರು ಕಾನೂನಿಗೆ ತದ್ವಿರುದ್ಧವಾದ ಪ್ರತಿಯೊಂದು ಬಾಬನ್ನು ಅಂಗೀಕರಿಸದಿರಬಹುದು ಮತ್ತು ಅದನ್ನು ಕಾನೂನುಸಮ್ಮತವಲ್ಲದ ಸಂದಾಯವನ್ನು ಮಾಡಿರುವ ಅಥವಾ ಸಂದಾಯ ಮಾಡಲು ಅಧಿಕಾರ ನೀಡಿರುವ ವ್ಯಕ್ತಿಯ ಮೇಲೆ ಅಧಿಭಾರ ಹೊರಿಸಬಹುದು ಹಾಗೂ ಯಾರೇ ವ್ಯಕ್ತಿಯ ಬುದ್ಧಿಪೂರ್ವಕ ನಿರ್ಲಕ್ಷತೆ ಅಥವಾ ದುರ್ನಡತೆಯಿಂದ ಉಂಟಾದ ಯಾವುದೇ ಕೊರತೆಯ ಅಥವಾ ನಷ್ಟದ ಮೊಬಲಗಿನ ಅಥವಾ ಯಾರೇ ವ್ಯಕ್ತಿಯು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ ಆದರೆ ಲೆಕ್ಕಕ್ಕೆ ತೆಗೆದುಕೊಂಡಿರದ ಯಾವುದೇ ಮೊತ್ತದ ಬಗ್ಗೆ ಅದಕ್ಕೆ ಜವಾಬ್ದಾರನಾದ ಆ ವ್ಯಕ್ತಿಯ ಮೇಲೆ ಹೊಣೆ ಹೊರಿಸಬಹುದು ಮತ್ತು ಅಂಥ ಪ್ರತಿಯೊಂದು ಸಂದರ್ಭದಲ್ಲಿ ಅಂಥ ವ್ಯಕ್ತಿಯಿಂದ ಬಾಕಿ ಇರುವ ಮೊಬಲಗಿನ ಬಗ್ಗೆ ಪ್ರಮಾಣೀಕರಿಸತಕ್ಕದ್ದು.

(2) ಲೆಕ್ಕಪರಿಶೋಧಕರು ಪ್ರತಿಯೊಂದು ಅಂಗೀಕರಿಸದಿರುವುದರ ಅಥವಾ ಅಧಿಭಾರ ಹೊರಿಸಿರುವುದರ ಅಥವಾ ಹೊಣೆ ಹೊರಿಸಿರುವುದರ ಬಗ್ಗೆ ತನ್ನ ತೀರ್ಮಾನಕ್ಕೆ ಕಾರಣಗಳನ್ನು ಲಿಖಿತದಲ್ಲಿ ತಿಳಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಯಾವ ವ್ಯಕ್ತಿಯ ವಿರುದ್ಧ ಅದನ್ನು ಮಾಡಲಾಗಿದೆಯೋ ಆ ವ್ಯಕ್ತಿಗೆ ನೋಂದಾಯಿತ ಅಂಚೆಯ ಮೂಲಕ ಒದಗಿಸತಕ್ಕದ್ದು.

(3) ಯಾವ ವ್ಯಕ್ತಿಗೆ ಲೆಕ್ಕಪರಿಶೋಧಕರ ತೀರ್ಮಾನದ ಪ್ರತಿಯನ್ನು ಒದಗಿಸಲಾಗಿದೆಯೋ ಆ ವ್ಯಕ್ತಿಯು, ಅದನ್ನು ತೆಗೆದುಕೊಳ್ಳಲು ನಿರಾಕರಿಸಿದ್ದಾಗ್ಯೂ (2)ನೇ ಉಪ-ನಿಯಮದ ಅರ್ಥವ್ಯಾಪ್ತಿಯೊಳಗೆ ಅಂಥ ತೀರ್ಮಾನದ ಪ್ರತಿಯನ್ನು ಕ್ರಮಬದ್ಧವಾಗಿ ಒದಗಿಸಲಾಗಿದೆ ಎಂದು ಭಾವಿಸತಕ್ಕದ್ದು. 15 ಮತ್ತು 16ನೇ ನಿಯಮಗಳಲ್ಲಿ ನಿಗದಿಪಡಿಸಿರುವ ಹದಿನಾಲ್ಕು ದಿನಗಳ ಅವಧಿಯನ್ನು ಹಾಗೆ ನಿರಾಕರಿಸಿದ ದಿನಾಂಕದಿಂದ ಲೆಕ್ಕಹಾಕತಕ್ಕದ್ದು.

15. ಅಂಗೀಕರಿಸದಿರುವುದರಿಂದ ಅಧಿಭಾರ ಹೊರಿಸದಿರುವುದರಿಂದ ಅಥವಾ ಹೊಣೆ ಹೊರಿಸದಿರುವುದರಿಂದ ಬಾಧಿತನಾದ ಯಾರೇ ವ್ಯಕ್ತಿಯು ಲೆಕ್ಕಪರಿಶೋಧಕರ ತೀರ್ಮಾನವನ್ನು ಅವನು ಸ್ವೀಕರಿಸಿದ ಅಥವಾ ಅವನಿಗೆ ಜಾರಿ ಮಾಡಿದ ತರುವಾಯ ಹದಿನಾಲ್ಕು ದಿನಗಳ ಒಳಗಾಗಿ,-

(ಎ) ಅಂಥ ಅಂಗೀಕರಿಸದಿರುವುದನ್ನು, ಅಧಿಭಾರ ಹೊರಿಸಿರುವುದನ್ನು ಅಥವಾ ಹೊಣೆ ಹೊರಿಸಿರುವುದನ್ನು ರದ್ದುಪಡಿಸಲು ಜಿಲ್ಲಾ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು ಮತ್ತು ಆ ನ್ಯಾಯಾಲಯವು ಅವಶ್ಯವಾದಂಥ ಸಾಕ್ಷ್ಯವನ್ನು ಪಡೆದುಕೊಂಡ ತರುವಾಯ ಆ ಖರ್ಚುಗಳ ಬಗ್ಗೆ ಅಂಥ ಸನ್ನಿವೇಶಗಳಲ್ಲಿ ತಾನು ಸರಿಯೆಂದು ಭಾವಿಸಬಹುದಾದಂಥ ಆದೇಶಗಳೊಂದಿಗೆ ಅಂಥ ಅಂಗೀಕರಿಸದಿರುವುದನ್ನು, ಅಧಿಭಾರ ಹೊರಿಸಿರುವುದನ್ನು ಅಥವಾ ಹೊಣೆ ಹೊರಿಸಿರುವುದನ್ನು ಸ್ಥಿರೀಕರಿಸಬಹುದು. ಮಾರ್ಪಾಡು ಮಾಡಬಹುದು ಅಥವಾ ಮಾಫಿ ಮಾಡಬಹುದು; ಅಥವಾ

(ಬಿ) ಅಂಥ ಅರ್ಜಿಗೆ ಬದಲಾಗಿ ಸರ್ಕಾರಕ್ಕೆ ಅಪೀಲು ಸಲ್ಲಿಸಬಹುದು, ಸರ್ಕಾರವು ತಾನು ಸೂಕ್ತವೆಂದು ಭಾವಿಸುವಂಥ ಆದೇಶಗಳನ್ನು ಮಾಡತಕ್ಕದ್ದು.

16. ಈ ಅಧಿನಿಯಮದ ಮೇರೆಗೆ, ಲೆಕ್ಕಪರಿಶೋಧಕರು, ಯಾರೇ ವ್ಯಕ್ತಿಯಿಂದ ಬಾಕಿ ಇರುವುದಾಗಿ ಪ್ರಮಾಣೀಕರಿಸಿದ ಪ್ರತಿಯೊಂದು ಮೊತ್ತವನ್ನು, ಅಂಥ ವ್ಯಕ್ತಿಯು, ನ್ಯಾಯಾಲಯಕ್ಕೆ ಅಥವಾ ಸರ್ಕಾರಕ್ಕೆ ಆ ತೀರ್ಮಾನದ ವಿರುದ್ಧ ಹದಿನಾಲ್ಕು ದಿನಗಳ ಒಳಗೆ ಅಪೀಲು ಸಲ್ಲಿಸಿದ ಹೊರತು, ಲೆಕ್ಕಪರಿಶೋಧಕರ ತೀರ್ಮಾನವನ್ನು ಅವನಿಗೆ ತಿಳಿಸಿದ ತರುವಾಯ ಸದರಿ ಅವಧಿಯೊಳಗಾಗಿ ಅಂಥ ವ್ಯಕ್ತಿಯು ಆಯುಕ್ತರಿಗೆ ಸಂದಾಯ ಮಾಡತಕ್ಕದ್ದು ಮತ್ತು ಅಂಥ ಮೊತ್ತವನ್ನು ಹಾಗೆ ಸಂದಾಯ ಮಾಡದಿದ್ದರೆ ಅದು ಅಥವಾ ನ್ಯಾಯಾಲಯವು ಅಥವಾ ಸರ್ಕಾರವು, ಬಾಕಿ ಇರುವುದೆಂದು ಘೋಷಿಸತಕ್ಕ ಅಂಥ ಮೊತ್ತವು, ಆಯುಕ್ತರು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯ ಮೇಲೆ, ನ್ಯಾಯಾಲಯವು ಡಿಕ್ರಿ ಮಾಡಿದ ಮೊಬಲಗನ್ನು ವಸೂಲಿಮಾಡುವ ರೀತಿಯಲ್ಲಿಯೇ ವಸೂಲಿ ಮಾಡುವಂಥದ್ದು ಆಗಿರತಕ್ಕದ್ದು.

## ಭಾಗ – III

## ಲೆಕ್ಕ ಪತ್ರಗಳ ನಮೂನೆ

17. ನಗರಪಾಲಿಕೆಯು,-

(ಎ) ನಗರಪಾಲಿಕೆಯ ಬಜೆಟ್ ಅಂದಾಜುಗಳನ್ನು, ಬಜೆಟ್ ವಿವರಣಾ ಪತ್ರಗಳನ್ನು ಮತ್ತು ವಿವರ ಪಟ್ಟಿಕೆಗಳನ್ನು ಯಾವ ನಮೂನೆಯಲ್ಲಿ ಇಡತಕ್ಕದ್ದೋ ಆ ನಮೂನೆಯ ಬಗ್ಗೆ; ಮತ್ತು

(ಬಿ) ನಗರಪಾಲಿಕೆಯ ಲೆಕ್ಕಪತ್ರಗಳನ್ನು ಯಾವ ನಮೂನೆಯಲ್ಲಿ ಇಡತಕ್ಕದ್ದೋ ಆ ನಮೂನೆಯ ಬಗ್ಗೆ

– ಉಪಬಂಧ ಕಲ್ಪಿಸುವುದಕ್ಕಾಗಿ ವಿನಿಮಯಗಳನ್ನು ರಚಿಸತಕ್ಕದ್ದು.

---

## ಅನುಸೂಚಿ – X

*[353ನೇ ಪ್ರಕರಣ ನೋಡಿ]*

**ಯಾವ ಉದ್ದೇಶಗಳಿಗಾಗಿ 353ನೇ ಪ್ರಕರಣದ ಮೇರೆಗೆ ಲೈಸೆನ್ಸ್ ಇಲ್ಲದೆ**

**ಆವರಣಗಳನ್ನು ಬಳಸಕೂಡದೋ ಆ ಉದ್ದೇಶಗಳು**

**ಸೋಡಾ:–** ತಯಾರಿಸುವುದು.

[1][**ಅಲ್ಯುಮಿನಿಯಂ:–** ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17-9-1997ರ ಮೂಲಕ 6-10-1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಮದ್ದುಗುಂಡು**:– ಯಾವುದೇ ಕಾರ್ಯ ವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಅಡಿಕೆಗಳು**:– ನೆನೆಸುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಹಿಟ್ಟಿನಿಂದ ಮಾಡಿದ ವಸ್ತುಗಳು**:– ಮನುಷ್ಯರ ಬಳಕೆಗಾಗಿ (ಗೃಹಬಳಕೆಯನ್ನು ಹೊರತುಪಡಿಸಿ) ಬೇಯಿಸುವುದು, ಸಿದ್ಧಪಡಿಸುವುದು, ಇಡುವುದು ಅಥವಾ ದಾಸ್ತಾನು ಮಾಡುವುದು.

**ಬೂದಿ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು, ರಾಶಿ ಹಾಕುವುದು, ಸ್ಥಳಾಂತರಿಸುವುದು.

[1][**ಆಡಿಯೋ ಕ್ಯಾಸೆಟ್**:– ರೆಕಾರ್ಡಿಂಗ್, ದಾಸ್ತಾನು ಮಾಡುವುದು, ಮಾರಾಟ ಮಾಡುವುದು.

**ಆಟೋಮೊಬೈಲ್ ಆಯಿಲ್ ಮತ್ತು ಲೂಬ್ರಿಕಂಟ್‌ಗಳು**:– ಮಿಶ್ರಣ ಮಾಡುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು

**ಆಟೋಮೊಬೈಲ್ ಬಿಡಿ ಭಾಗಗಳು**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು.

**ಆಟೋಮೊಬೈಲ್ ಟೈರ್ ಮತ್ತು ಟ್ಯೂಬ್**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು.

**ಬಿದಿರುಗಳು**:– ಬಾಡಿಗೆಗೆ ನೀಡಲು ದಾಸ್ತಾನು ಮಾಡುವುದು, ಮಾರಾಟ ಅಥವಾ ತಯಾರಿಸುವುದು.]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಬಿಸ್ಕತ್ತುಗಳು**:– ಮನುಷ್ಯರ ಬಳಕೆಗಾಗಿ (ಗೃಹಬಳಕೆಯನ್ನು ಹೊರತುಪಡಿಸಿ) ಬೇಯಿಸುವುದು, ಸಿದ್ಧಪಡಿಸುವುದು, ಇಡುವುದು ಅಥವಾ ದಾಸ್ತಾನು ಮಾಡುವುದು.

**ರಕ್ತ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಪುಸ್ತಕ**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು.]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಎಲುಬುಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು;

**ಬ್ರೆಡ್**:– ಮುನುಷ್ಯರ ಬಳಕೆಗಾಗಿ (ಗೃಹಬಳಕೆಯನ್ನು ಹೊರತುಪಡಿಸಿ) ಬೇಯಿಸುವುದು, ಸಿದ್ಧಪಡಿಸುವುದು, ಇಡುವುದು ಅಥವಾ ದಾಸ್ತಾನು ಮಾಡುವುದು.

**ಇಟ್ಟಿಗೆಗಳು**:– ತಯಾರಿಸುವುದು.

[1][**ಕಟ್ಟಡ ಸಾಮಗ್ರಿ**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಕರ್ಪೂರ**:– ಯಾವುದೇ ಕಾರ್ಯವಿಧಾನದ ಮೂಲಕ ಅಥವಾ ಕುದಿಸುವ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಮೇಣದ ಬತ್ತಿಗಳು**:– ಯಾವುದೇ ಕಾರ್ಯವಿಧಾನದ ಮೂಲಕ ಪ್ಯಾಕು ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಜಮಖಾನೆಗಳು**:– ತಯಾರಿಸುವುದು.

[1][**ಗೋಡಂಬಿ ಬೀಜಗಳು ಮತ್ತು ಅದರ ತಿರುಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಪಶು ಆಹಾರ**:– ತಯಾರಿಸುವುದು, ಮಿಶ್ರಣ ಮಾಡುವುದು, ಪ್ಯಾಕ್ ಮಾಡುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎನ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಕರುಳಿನ ಹುರಿ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು;

**ಸಿಮೆಂಟ್**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಇದ್ದಲು**:– ರಾಶಿ ಹಾಕುವುದು, ಸೋಸುವುದು ಅಥವಾ ದಾಸ್ತಾನು ಮಾಡುವುದು.

**ರಾಸಾಯನಿಕ ತಯಾರಿಕೆಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಮೆಣಸಿನಕಾಯಿ**:– ಯಂತ್ರೋಪಕರಣದಿಂದ ಅರೆಯುವುದು.

[1][**ಮೆಣಸಿನಕಾಯಿ (ಒಣಗಿಸಿದ್ದು)**:– ಸಗಟು ಅಥವಾ ಚಿಲ್ಲರೆಯಾಗಿ ಮಾರಾಟ ಮಾಡುವುದು ಅಥವಾ ಸಗಟು ವ್ಯಾಪಾರಕ್ಕಾಗಿ ದಾಸ್ತಾನು ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಕ್ಲೋರೇಟ್ ಮಿಶ್ರಣ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಕಿಟ್ಟಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಬಟ್ಟೆ**:– ಬಣ್ಣ ಹಾಕುವುದು.

**ಕಲ್ಲಿದ್ದಲು**:– ರಾಶಿ ಹಾಕುವುದು, ಸೋಸುವುದು, ಮಾರಾಟ ಮಾಡುವುದು ಅಥವಾ ದಾಸ್ತಾನು ಮಾಡುವುದು.

**ತೆಂಗಿನ ನಾರು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ತೆಂಗಿನಹೊಟ್ಟು ಮತ್ತು ತಾಳೆಗರಿ**:– ನೆನೆಸುವುದು

**ತೆಂಗಿನ ಚಿಪ್ಪು**:– ದಾಸ್ತಾನು ಮಾಡುವುದು

**ಕಾಫಿ**:– ಸಂಸ್ಕರಣೆ, ಪುಡಿ ಮಾಡುವುದು, ಪ್ಯಾಕ್ ಮಾಡುವುದು

**ನಾರಿನ ಹುರಿ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಚಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಕಾಂಡಿಮೆಂಟ್ಸ್** :– ತಯಾರಿಸುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ದಹ್ಯ ಸಾಮಗ್ರಿ**:– ದಾಸ್ತಾನು ಮಾಡುವುದು.

**ದಹ್ಯ ವಸ್ತುಗಳು**:– ಮನುಷ್ಯರ ಬಳಕೆಗಾಗಿ (ಗೃಹಬಳಕೆಯನ್ನು ಹೊರತುಪಡಿಸಿ) ಬೇಯಿಸುವುದು, ಸಿದ್ಧಪಡಿಸುವುದು, ಇಡುವುದು ಅಥವಾ ದಾಸ್ತಾನು ಮಾಡುವುದು.

**ಮಿಠಾಯಿ**:– ಮನುಷ್ಯರ ಬಳಕೆಗಾಗಿ (ಗೃಹ ಬಳಕೆಯನ್ನು ಹೊರತುಪಡಿಸಿ) ಬೇಯಿಸುವುದು, ಸಿದ್ಧಪಡಿಸುವುದು, ಇಡುವುದು ಅಥವಾ ದಾಸ್ತಾನು ಮಾಡುವುದು.

[1][**ಕೊಬ್ಬರಿ**:– ಸಿದ್ಧಪಡಿಸುವುದು ಅಥವಾ ದಾಸ್ತಾನು ಮಾಡುವುದು ಅಥವಾ ಸಗಟು ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಹತ್ತಿ, ಹತ್ತಿಕಸ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು ಅಥವಾ ತಯಾರಿಸುವುದು.

[1][**ಬೆರಣಿಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಚಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಪಿಂಗಾಣಿ ವಸ್ತುಗಳು**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು.

**ಕಟ್ಲರಿ**:– ತಯಾರಿಸುವುದು ದಾಸ್ತಾನು ಮಾಡುವುದು, ಮಾರಾಟ ಮಾಡುವುದು.

**ಸೈಕಲ್**:– ದಾಸ್ತಾನು ಮಾಡುವುದು, ಮಾರಾಟ ಮಾಡುವುದು, ಸಿದ್ಧಪಡಿಸುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಬಣ್ಣದ ಸಾಮಗ್ರಿಗಳು**:– ಯಾವುದೇ ಕಾರ್ಯವಿಧಾನದ ಮೂಲಕ ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಮೊಟ್ಟೆ**:– ದಾಸ್ತಾನು ಮಾಡುವುದು ಮತ್ತು ಮಾರಾಟ ಮಾಡುವುದು

**ವಿದ್ಯುತ್ ಸಲಕರಣೆಗಳು**:– ತಯಾರಿಸುವುದು, ದಾಸ್ತಾನು ಮಾಡುವುದು, ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಸ್ಫೋಟಕಗಳು**:– ದಾಸ್ತಾನು ಮಾಡುವುದು.

[1][**ಫಾಸ್ಟ್‌ಫುಡ್**:– ತಯಾರಿಸುವುದು, ಮಾರಾಟ ಮಾಡುವುದು

**ಫೈಬರ್**:– ಮಾರಾಟ ಮಾಡುವುದು ಅಥವಾ ದಾಸ್ತನು ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಕೊಬ್ಬು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಫಿನ್ನುಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಉರುವಲು ಸೌದೆ**:– ಮಾರುವುದು ಅಥವಾ ದಾಸ್ತಾನು ಮಾಡುವುದು.

**ಬಿರುಸು ಬಾಣಗಳು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಮೀನು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಮೀನೆಣ್ಣೆ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಅಗಸೆನಾರು**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಮಾಂಸ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

**ಹಿಟ್ಟು**:– ಯಾವುದೇ ಕಾರ್ಯವಿಧಾನದ ಮೂಲಕ ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಹೂವುಗಳು**:– ದಾಸ್ತಾನು ಮಾಡುವುದು, ಸಂಸ್ಕರಣೆ, ಮಾರಾಟ ಮಾಡುವುದು

**ಶೈತ್ಯೀಕರಿಸಿದ ಆಹಾರ**:– ದಾಸ್ತಾನು ಮಾಡುವುದು, ಮಾರಾಟ ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಇಂಧನ**:– ಯಾವುದೇ ಕೈಗಾರಿಕಾ ಉದ್ದೇಶಕ್ಕಾಗಿ ಬಳಸುವುದು.

**ಪಾದರಸದ ಸಿಡಿಲವಣ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ಹಣ್ಣುಗಳು**:– ದಾಸ್ತಾನು ಮಾಡುವುದು, ಮಾರಾಟ ಮಾಡುವುದು

**ಪೀಠೋಪಕರಣ**:– ಮಾರಾಟ ಅಥವಾ ಎರವಲು ನೀಡುವುದಕ್ಕಾಗಿ ಮಾಡುವುದು ಅಥವಾ ದಾಸ್ತಾನು ಮಾಡುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ಅನಿಲ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು.

[1][**ತುಪ್ಪ**:– ಯಾವುದೇ ಕಾರ್ಯವಿಧಾನದ ಮೂಲಕ ದಾಸ್ತಾನು ಮಾಡುವುದು, ಪ್ಯಾಕ್ ಮಾಡುವುದು, ಪ್ರೆಸ್ಸಿಂಗ್, ಸ್ವಚ್ಛಗೊಳಿಸುವುದು, ಸಿದ್ಧಪಡಿಸುವುದು ಅಥವಾ ತಯಾರಿಸುವುದು]

1. ಅಧಿಸೂಚನೆ ಸಂಖ್ಯೆ. ಯುಡಿಡಿ 5 ಎಂಎಸ್‌ವೈ 97 ದಿನಾಂಕ 17–9–1997ರ ಮೂಲಕ 6–10–1997ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

